ಕನ್ನಡ ವಿಶ್ವವಿದ್ಯಾಲಯ
ಚರಿತ್ರೆ ಸಂಪುಟ ೭

# ಆಫ್ರಿಕಾ

## ಚರಿತ್ರೆಯ ವಿವಿಧ ಆಯಾಮಗಳು



ಪ್ರಧಾನ ಸಂಪಾದಕ
ವಿಜಯ್ ಪೂಣಚ್ಚ ತಂಬಂಡ
ಸಂಪುಟ ಸಂಪಾದಕ
ಎನ್. ಚಿನ್ನಸ್ವಾಮಿ ಸೋಸಲೆ

ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಸಂಪುಟ ೭

# ಆಫ್ರಿಕಾ

## ಚರಿತ್ರೆಯ ವಿವಿಧ ಆಯಾಮಗಳು


ಪ್ರಧಾನ ಸಂಪಾದಕ

**ವಿಜಯ ಪೂಣಚ್ಚ ತಂಬಂಡ**

ಸಂಪುಟ ಸಂಪಾದಕ

**ಎನ್.ಚಿನ್ನಸ್ವಾಮಿ ಸೋಸಲೆ**





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

Kannada University History Volume VII

**AFRICA-CHARITREYA VIVIDHA AAYAAMAGALU**

AFRICA- Multi Dimensions of History

General Editor
**Dr. Vijay Poonacha Thambanda**
Professor of History
Kannada University, Hampi
Vidyaranya 538 276
e-mail: vijay.thambanda@gmail.com

Volume Editor
**Dr. N. Chinnaswamy Sosale**
Associate Professor
Depatment of History
Kannada University, Hampi
Vidyaranya 538 276

*Published by*
**Dr. Manjunatha Bevinakatti**
Director, Prasaranga
Kannada University, Hampi
Vidyaranya 583 276

Pp: xvi + 348, **Price: 200 /-**

First Impression 2010

www.kannadauniversity.org

ISBN 978-93-80994-17-8



ಬೆಲೆ : ರೂ.೨೦೦/-

ಮುಖಪುಟ : ಯು.ಟಿ.ಸುರೇಶ್

ಅಕ್ಷರ ಸಂಯೋಜನೆ
**ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್**
ಮೊಬೈಲ್ ೯೪೪೪೮೧ ೬೬೯೦

ಪುಸ್ತಕ ದೊರೆಯುವ ಸ್ಥಳ
**ಸರಸ್ವತಿ ಪುಸ್ತಕ ಮಾರಾಟ ಮಳಿಗೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
ದೂರವಾಣಿ ೦೮೩೯೪-೨೪೧೩೧೩

**ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ**
ನಂ.೧, ಕಾನೂನು ಕಾಲೇಜಿನ ಹಳೆಯ ಕಟ್ಟಡ
ಮೈಸೂರು ಬ್ಯಾಂಕ್ ವೃತ್ತ, ಅರಮನೆ ರಸ್ತೆ
ಬೆಂಗಳೂರು ೫೬೦ ೦೦೯
ದೂರವಾಣಿ ೦೮೦-೨೨೩೭೨೩೮೮

ಮುದ್ರಣ
**ಯಶವಂತ್ ಪ್ರಿಂಟರ್ಸ್, ಬೆಂಗಳೂರು**

# ಪರಿವಿಡಿ

# ಶಬ್ದಪಾರಮಾರ್ಗಮಶಕ್ಯಂ

ಡಾ. ಎ. ಮುರಿಗೆಪ್ಪ, ಕುಲಪತಿ

ಕರ್ನಾಟಕದ ಆಧುನಿಕ ಚರಿತ್ರೆಯಲ್ಲಿ ಕರ್ನಾಟಕ ಏಕೀಕರಣ ಒಂದು ಮಹತ್ವಪೂರ್ಣ ಐತಿಹಾಸಿಕ ಘಟನೆ. ಹಾಗೆಯೇ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಯೂ ಮತ್ತೊಂದು ಮಹತ್ವದ ಘಟನೆ. ಕನ್ನಡ-ಕನ್ನಡಿಗ-ಕರ್ನಾಟಕ ಸಂಸ್ಕೃತಿಯ ಕಲ್ಪನೆಯಡಿಯಲ್ಲಿ ಅಸ್ತಿತ್ವಕ್ಕೆ ಬಂದ ಕನ್ನಡ ವಿಶ್ವವಿದ್ಯಾಲಯದ ಹರವು ವಿಸ್ತಾರವಾದದ್ದು. ಈ ಕಾರಣದಿಂದ ಕನ್ನಡ ವಿಶ್ವವಿದ್ಯಾಲಯದ ಆಶಯ ಮತ್ತು ಗುರಿ ಇತರ ವಿಶ್ವವಿದ್ಯಾಲಯಗಳಿಗಿಂತ ಭಿನ್ನ ಹಾಗೂ ಪ್ರಗತಿಪರ. ಕನ್ನಡದ ಸಾಮರ್ಥ್ಯವನ್ನು ಎಚ್ಚರಿಸುವ ಕಾಯಕವನ್ನು ಉದ್ದಕ್ಕೂ ಅದು ನೋಂಪಿಯಿಂದ ಮಾಡಿಕೊಂಡು ಬಂದಿದೆ. ಕರ್ನಾಟಕತ್ವದ 'ವಿಕಾಸ' ಈ ವಿಶ್ವವಿದ್ಯಾಲಯದ ಮಹತ್ತರ ಆಶಯವಾಗಿದೆ.

ಕನ್ನಡ ಅಧ್ಯಯನ ಮೂಲತಃ ಶುದ್ಧ ಜ್ಞಾನದ, ಕಾಲ, ದೇಶ, ಜೀವನ ತತ್ವದ ಪರವಾಗಿರುವುದರ ಜೊತೆಗೆ ಅಧ್ಯಯನವನ್ನು ಒಂದು ವಾಗ್ವಾದದ ಭೂಮಿಕೆ ಎಂದು ನಾವು ಭಾವಿಸಬೇಕಾಗಿದೆ. ಕನ್ನಡ ಬದುಕಿನ ಚಿಂತನೆಯ ಭಾಗವೆಂದೇ ಅದನ್ನು ರೂಪಿಸಿ ವಿವರಿಸಬೇಕಾಗಿದೆ. ಅಂದರೆ : ದೇಸಿ ಬೇರುಗಳ ಗುರುತಿಸುವಿಕೆ ಕನ್ನಡ ಅಧ್ಯಯನದ ಮುಖ್ಯ ಭಿತ್ತಿಯಾಗಬೇಕಾಗಿದೆ. ಕನ್ನಡ ಸಂಸ್ಕೃತಿಯು ಬಹುತ್ವದ ನೆಲೆಗಳನ್ನು ಆಧರಿಸಿ ರೂಪುಗೊಂಡಿದೆ. ಸಮಾಜಮುಖಿ ಚಿಂತನೆಗಳ ವ್ಯಾಪಕ ಅಧ್ಯಯನ ಬದುಕಿನ ಸಂಕೀರ್ಣ ಲಕ್ಷಣಗಳ ಸ್ವರೂಪವನ್ನು ಇದು ಪರಿಚಯಿಸುತ್ತದೆ. ನಾವು ಇದನ್ನು ಎಲ್ಲ ವಲಯಗಳಲ್ಲಿ ಕನ್ನಡದ ಅನುಷ್ಠಾನದ ಮೂಲಕ ಉಳಿಸಿ, ಬೆಳೆಸಬೇಕಾಗಿದೆ. ಆಗ ಕನ್ನಡ ಸಂಸ್ಕೃತಿಯು ವಿಶ್ವಪ್ರಜ್ಞೆಯಾಗಿ ರೂಪುಗೊಳ್ಳಲು ಸಾಧ್ಯವಾಗುತ್ತದೆ. 'ಕನ್ನಡದ್ದೇ ಮಾದರಿ'ಯ ಶೋಧ ಇಂದಿನ ಮತ್ತು ಬರುವ ದಿನಗಳ ತೀವ್ರ ಅಗತ್ಯವಾಗಿದೆ.

ಕನ್ನಡ ಸಂಸ್ಕೃತಿಯ ಭಾಗವಾಗಿರುವ ಕನ್ನಡ ಅಧ್ಯಯನವು ಕಾಲದಿಂದ ಕಾಲಕ್ಕೆ ಹೊಸ ತಿಳಿವಳಿಕೆಯನ್ನು ತನ್ನ ತೆಕ್ಕೆಗೆ ಜೋಡಿಸಿಕೊಳ್ಳುತ್ತ ಬಂದಿದೆ. ಹೀಗಾಗಿ ವಿದೇಶಿ ಮತ್ತು ದೇಶಿ ವಿದ್ವಾಂಸರು ತೊಡಗಿಸಿಕೊಂಡ ಈ ವಿದ್ವತ್‌ಕ್ಷೇತ್ರದಲ್ಲಿ ಮುಂದಿನ ವಿದ್ವಾಂಸರು ಕಾಲದಿಂದ ಕಾಲಕ್ಕೆ ಹೊಸಬೆಳೆಯನ್ನು ತೆಗೆಯುತ್ತ ಬಂದಿದ್ದಾರೆ. ಕನ್ನಡ ಅಧ್ಯಯನ ಪಳೆಯುಳಿಕೆಯ

ಶಾಸ್ತ್ರವಾಗದೆ, ಬದಲಾಗುತ್ತಿರುವ ಕಾಲಮಾನದಲ್ಲಿ ಎದುರಾಗುತ್ತಿರುವ ಆಹ್ವಾನಕ್ಕೆ ತಕ್ಕಂತೆ ತನ್ನ ಗತಿಯನ್ನು ಬದಲಾಯಿಸಿಕೊಳ್ಳುತ್ತ ಬಂದಿರುವುದು ಗಮನಿಸತಕ್ಕ ಅಂಶ. ಸಾಂಪ್ರದಾಯಿಕ ಚಿಂತನೆಗಳು ಆಧುನೀಕರಣದ ಈ ಕಾಲಘಟ್ಟದಲ್ಲಿ ಸಕಾಲಿಕಗೊಳ್ಳುವುದು ಅನಿವಾರ್ಯವಾಗಿದೆ. ಮಾಹಿತಿ ತಂತ್ರಜ್ಞಾನದ ಮೂಲಕ ಜಗತ್ತಿನ ಜ್ಞಾನಪ್ರವಾಹವೇ ನಮ್ಮ ಅಂಗೈಯೊಳಗೆ ಚುಳುಕಾಗುವ ಈ ಸಂದರ್ಭದಲ್ಲಿ ಕನ್ನಡದ ಚಹರೆ ಮತ್ತು ಕನ್ನಡ ಭಾಷೆಯ ಚಲನಶೀಲತೆಯನ್ನು ಶೋಧಿಸಲು ಭಾಷಾ ಆಧುನೀಕರಣ ಮತ್ತು ಪ್ರಮಾಣೀಕರಣದ ಪ್ರಕ್ರಿಯೆಗಳ ನೆಲೆಯಲ್ಲಿ ಅಧ್ಯಯನದ ಹೊಸ ಸಾಧ್ಯತೆಗಳನ್ನು ಅನುಲಕ್ಷಿಸಿ, ಭಾಷಾನೀತಿ, ಭಾಷಾಯೋಜನೆ ರೂಪಿಸುವುದು ಅನಿವಾರ್ಯ ಹಾಗೂ ಅವಶ್ಯವಾಗಿದೆ. ಆಗ ಅಧ್ಯಯನದ ಸ್ವರೂಪ ಹಾಗೂ ಬಳಕೆಯ ವಿಧಾನದಲ್ಲಿ ಪರಿವರ್ತನೆ ಸಾಧ್ಯವಾಗುತ್ತದೆ.

ನಮ್ಮೆದುರು ನುಗ್ಗಿ ಬರುತ್ತಿರುವ ಜಾಗತೀಕರಣಕ್ಕೆ ಪ್ರತಿರೋಧವಾಗಿ ನಮ್ಮ ದೇಶೀಯ ಜ್ಞಾನಪರಂಪರೆಯನ್ನು ಮರುಶೋಧಿಸಿ ಆ ಮೂಲಕ ಕುಸಿಯುತ್ತಿರುವ ನಮ್ಮ ಬೇರುಗಳನ್ನು ಬಲಗೊಳಿಸಿಕೊಳ್ಳಬೇಕಾಗಿದೆ. ಭಾಷೆ, ಸಾಹಿತ್ಯ, ವ್ಯಾಕರಣ, ಛಂದಸ್ಸು, ಚರಿತ್ರೆ, ಕೃಷಿ, ವೈದ್ಯ, ಪರಿಸರ ಮುಂತಾದ ಅಧ್ಯಯನ ವಿಷಯಗಳನ್ನು ಹೊಸ ಆಲೋಚನೆಯ ನೆಲೆಯಲ್ಲಿ ವಿಶ್ಲೇಷಿಸಬೇಕಾಗಿದೆ. ಆಧುನಿಕ ವಿಜ್ಞಾನ, ತಂತ್ರಜ್ಞಾನವೇ 'ಜ್ಞಾನ' ಎಂದು ರೂಪಿಸಿರುವ ಇಂದಿನ ಆಲೋಚನೆಗೆ ಪ್ರತಿಯಾಗಿ ಈ ಜ್ಞಾನಶಾಖೆಗಳಲ್ಲಿ ಹುದುಗಿರುವ ದೇಶಿ ಪರಂಪರೆಯ ಜ್ಞಾನದ ಹುಡುಕಾಟ ನಡೆಯಬೇಕಾಗಿದೆ. ಅಂತಹ ಪ್ರಯತ್ನಗಳಿಗೆ ಬೇಕಾದ ಮಾರ್ಗದರ್ಶಕ ಸೂತ್ರಗಳ ಹಾಗೂ ಆಕರ ಪರಿಕರಗಳ ನಿರ್ಮಾಣದ ನೆಲೆ ತುಂಬ ಮುಖ್ಯವಾಗಿದೆ. ಕನ್ನಡ ವಿಶ್ವವಿದ್ಯಾಲಯವು ಕಳೆದ ಹದಿನಾರು ವರ್ಷಗಳಿಂದ ಈ ಕೆಲಸಗಳನ್ನು ಹಲವು ಯೋಜನೆಗಳ ಮೂಲಕ ರೂಪಿಸಿಕೊಂಡಿದೆ, ರೂಪಿಸಿಕೊಳ್ಳುತ್ತಿದೆ. ಇದೊಂದು ಚಲನಶೀಲ ಪ್ರಕ್ರಿಯೆಯಾಗಿದೆ. ಸಮಕಾಲೀನ ಭಾಷಿಕ, ಸಾಂಸ್ಕೃತಿಕ ಸಮಸ್ಯೆಗಳಿಗೆ ಮುಖಾಮುಖಿಯಾಗುತ್ತ ಕನ್ನಡ ನಾಡುನುಡಿಯನ್ನು ಹೊಸದಾಗಿ ಶೋಧಿಸುತ್ತ, ವಿವರಿಸುತ್ತ ಬಂದಿದೆ. ಅಂದರೆ : ಕನ್ನಡದ ಅರಿವಿನ ವಿಕೇಂದ್ರೀಕರಣವೇ ವರ್ತಮಾನದ ಹೊಸ ಬೆಳವಣಿಗೆ. ಇದು ಕನ್ನಡ ವಿಶ್ವವಿದ್ಯಾಲಯದ ಜೀವಧಾತುವಾಗಿದೆ.

ಪ್ರಮುಖ ಚರಿತ್ರೆ ಕೃತಿಗಳನ್ನು ಕೊಡುಗೆಯಾಗಿ ನೀಡಿರುವ ಚರಿತ್ರೆ ವಿಭಾಗವು ಸಂಘಟಿತ ಕೆಲಸಗಳನ್ನು ವಿಭಾಗದ ಯೋಜನೆಗಳನ್ನಾಗಿ ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿದೆ. ಕರ್ನಾಟಕದ ಮನೆಮಾತಾಗಿರುವ ಬಿ. ಷೇಕ್ ಅಲಿ ಅವರ ಸಂಪಾದಕತ್ವದ ಕರ್ನಾಟಕ ಚರಿತ್ರೆಯ ಏಳು ಸಂಪುಟಗಳು (೧೯೯೭), ವಿಜಯ್ ಪೂಣಚ್ಚ ತಂಬಂಡ ಅವರ ಸಂಪಾದಕತ್ವದ ಚರಿತ್ರೆ ವಿಶ್ವಕೋಶ (೨೦೦೧), ಚರಿತ್ರೆ ವಿಭಾಗವು ಹೊರತಂದಿರುವ ಏಕೀಕರಣೋತ್ತರ ಕರ್ನಾಟಕದ ಪ್ರಮುಖ ಚಳುವಳಿಗಳು (೨೦೦೦) ಮತ್ತು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಿಸಿದ ನಾಲ್ಕು ಗ್ರಂಥಗಳು (೨೦೦೪-೦೭) ಇವುಗಳಲ್ಲಿ ಪ್ರಮುಖವಾದವು. ಕಳೆದ ಐದು ವರ್ಷಗಳ

ಪರಿಶ್ರಮದಿಂದ ಚರಿತ್ರೆ ವಿಭಾಗದ ವಿದ್ವಾಂಸರು ಹೊರತಂದ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟಗಳು ಕನ್ನಡ ವಿಶ್ವವಿದ್ಯಾಲಯದ ಬೌದ್ಧಿಕ ಪರಂಪರೆಗೆ ಒಂದು ಹೊಸ ಸೇರ್ಪಡೆ.

ದೇಶದ ಪ್ರತಿಷ್ಠಿತ ವಿಶ್ವವಿದ್ಯಾಲಯಗಳ ವಿದ್ವಾಂಸರೊಂದಿಗೆ ನಾಡಿನ ಪ್ರಮುಖ ವಿದ್ವಾಂಸರ ಬರಹಗಳನ್ನು ಮತ್ತು ಅನುವಾದಗಳನ್ನು ಈ ಸಂಪುಟಗಳು ಒಳಗೊಂಡಿವೆ. ಚರಿತ್ರೆ ಅಥವಾ ಸಮಾಜವಿಜ್ಞಾನಗಳ ಜ್ಞಾನಶಿಸ್ತಿನಲ್ಲಿ ಕನ್ನಡದಲ್ಲಿ ಚರ್ಚೆಗಳು ಕಡಿಮೆ ಎನ್ನುವ ಮಿತಿಗಳನ್ನು ಈ ಸಂಪುಟಗಳು ಮೀರಿವೆ. ದೇಸೀ ಭಾಷೆಗಳಲ್ಲಿ ಜಗತ್ತಿನ ಜ್ಞಾನ ಪ್ರಕಾರಗಳನ್ನು ಸಮರ್ಥವಾಗಿ ನಿಭಾಯಿಸುವುದು ನಮ್ಮ ಭಾಷೆ, ಪರಂಪರೆ ಹಾಗೂ ಅನನ್ಯತೆಗಳನ್ನು ಕಾಪಾಡುವ ಬಗೆ ಈ ಪ್ರಯತ್ನದ ಒಂದು ಆಯಾಮವಾಗಿದೆ. ಹಾಗೆಯೇ ಕನ್ನಡದ ಸಂದರ್ಭದಲ್ಲಿ ಪಾಶ್ಚಾತ್ಯ ಜಗತ್ತು ಅಥವಾ ಕರ್ನಾಟಕೇತರ ಜಗತ್ತು ನಿರ್ಣಯಿಸುವ ಮತ್ತು ನಿಯಂತ್ರಿಸುವ ಬೌದ್ಧಿಕ ಆಕ್ರಮಣಗಳನ್ನು ಮತ್ತು ಸವಾಲುಗಳನ್ನು ಕನ್ನಡ ವಿಶ್ವವಿದ್ಯಾಲಯದ ಬೌದ್ಧಿಕ ಪರಂಪರೆ ಸಮರ್ಥವಾಗಿ ನಿಭಾಯಿಸುತ್ತಿದೆ. ಸಮಾಜವಿಜ್ಞಾನಗಳ ಬೌದ್ಧಿಕ ಪರಂಪರೆಗಳು ಕನ್ನಡದಲ್ಲಿ ಈ ಬಗೆಯಲ್ಲಿ ಮೂಡಿಬರುತ್ತಿರುವುದು ಈ ದಿಶೆಯಲ್ಲಿ ಒಂದು ಪ್ರಮುಖ ಹೆಜ್ಜೆ. ಚರಿತ್ರೆ ವಿಭಾಗವು ಈ ಹಿನ್ನೆಲೆಯಲ್ಲಿ ಹೊರತರುತ್ತಿರುವ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟಗಳು ಒಂದು ಮೈಲುಗಲ್ಲು. ಚರಿತ್ರೆ ಲೇಖನ ಮತ್ತು ವಿಧಾನ, ಭಾರತ ಉಪಖಂಡ ಆಧುನಿಕಪೂರ್ವ ಚರಿತ್ರೆ, ಭಾರತ ಉಪಖಂಡ ಆಧುನಿಕ ಚರಿತ್ರೆ, ಏಷ್ಯಾ, ಯುರೋಪ್, ಅಮೆರಿಕಾ, ಆಫ್ರಿಕಾ ಹಾಗೂ ಸಮಕಾಲೀನ ಕರ್ನಾಟಕಕ್ಕೆ ಸಂಬಂಧಿಸಿದ ವಿವಿಧ ಆಯಾಮಗಳನ್ನು ಈ ಎಂಟು ಸಂಪುಟಗಳು ಚರ್ಚಿಸಿವೆ. ಇವೆಲ್ಲವನ್ನು ಕನ್ನಡದಲ್ಲಿ ಪ್ರಕಟಿಸಿ ಕನ್ನಡ ಓದುಗರಿಗೆ ಕನ್ನಡ ವಿಶ್ವವಿದ್ಯಾಲಯವು ಅರ್ಪಿಸುತ್ತಿದೆ.

ಪ್ರಧಾನ ಸಂಪಾದಕರಾದ ಪ್ರೊ.ವಿಜಯ್ ಪೂಣಚ್ಚ ತಂಬಂಡ ಅವರು ಸಂಪುಟ ಸಂಪಾದಕರಾದ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರು **ಆಫ್ರಿಕಾ: ಚರಿತ್ರೆಯ ವಿವಿಧ ಆಯಾಮಗಳು** ಸಂಪುಟವನ್ನು ಸಮರ್ಥವಾಗಿ ಹೊರತಂದಿದ್ದಾರೆ. ಅವರಿಗೆ ನನ್ನ ಅಭಿನಂದನೆಗಳು.

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಹೊರತರುತ್ತಿರುವ ಪ್ರಸಾರಾಂಗದ ನಿರ್ದೇಶಕರಾದ ಡಾ.ಮಂಜುನಾಥ ಬೇವಿನಕಟ್ಟಿ ಮತ್ತು ಸಹಾಯಕ ನಿರ್ದೇಶಕರಾದ ಶ್ರೀ ಬಿ.ಸುಜ್ಞಾನಮೂರ್ತಿ ಅವರಿಗೆ ಆಭಾರಿಯಾಗಿದ್ದೇನೆ.

# ಪ್ರಧಾನ ಸಂಪಾದಕರ ಮಾತು

**ವಿಜಯ್ ಪೂಣಚ್ಚ ತಂಬಂಡ**

ಚರಿತ್ರೆ ಬರವಣಿಗೆ ಕ್ರಮದಲ್ಲಿ ಮಹತ್ತರ ಬದಲಾವಣೆಯನ್ನು ಕಳೆದ ಶತಮಾನದಲ್ಲಿ ಮತ್ತು ಈ ಶತಮಾನದ ಮೊದಲ ದಶಕದಲ್ಲಿ ನೋಡಬಹುದು. ನಮ್ಮ ದೇಶದ ಅಥವಾ ನಮ್ಮ ಪ್ರದೇಶದ ಚರಿತ್ರೆ ಬರೆಯುವ ಸಂದರ್ಭದಲ್ಲಿ ನಮಗೆ ನಮ್ಮನ್ನು ಅರ್ಥ ಮಾಡಿಕೊಳ್ಳುವ ಚರಿತ್ರೆಯನ್ನು ರೂಪಿಸಲು ಸಾಧ್ಯವಾಗಲಿಲ್ಲವಲ್ಲ ಎಂಬ ವಿಚಾರ ಗಮನಾರ್ಹವಾದುದು. ವಸಾಹತುಶಾಹಿ ಚರಿತ್ರೆಕಾರರು ಹಾಕಿಕೊಟ್ಟ ಚೌಕಟ್ಟಿನೊಳಗೆ ನಮ್ಮ ಬಹುತೇಕ ಚರಿತ್ರೆ ಬರವಣಿಗೆಗಳು ರೂಪಿಸಲ್ಪಟ್ಟಿವೆ. ವಸಾಹತುಶಾಹಿ ಚರಿತ್ರೆ ಬರವಣಿಗೆಯನ್ನು ಉಗ್ರವಾಗಿ ಟೀಕಿಸಿದ ರಾಷ್ಟ್ರೀಯವಾದಿಗಳಾಗಲಿ ಅಥವಾ ಈ ಎರಡೂ ಕ್ರಮಗಳನ್ನು ತೀವ್ರವಾಗಿ ವಿಶ್ಲೇಷಣೆಗೆ ಒಳಪಡಿಸಿದ ಮಾರ್ಕ್ಸ್‌ವಾದಿ ಬರವಣಿಗೆ ಕ್ರಮವಾಗಲಿ ಇದಕ್ಕೆ ಹೊರತಲ್ಲ. ವಸಾಹತೋತ್ತರ ದಿನಗಳಲ್ಲಿ ಹೊರಬಂದ ರಾಷ್ಟ್ರೀಯವಾದಿ ಮತ್ತು ಮಾರ್ಕ್ಸ್‌ವಾದಿ ಹಿನ್ನೆಲೆಯ ಅತ್ಯದ್ಭುತ ಕೃತಿಗಳೆಲ್ಲ ಇದಕ್ಕೆ ಸಾಕ್ಷಿಯಾಗಿವೆ. ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳುವ ಸಂದರ್ಭದಲ್ಲಾಗಲಿ, ವಸಾಹತು ವಿರೋಧಿ ಹೋರಾಟದ ಸಂದರ್ಭದಲ್ಲಾಗಲಿ, ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಾಗಲಿ ಅಥವಾ ಹೊಸ ರಾಷ್ಟ್ರದ ನಿರ್ಮಾಣದ ಸಂದರ್ಭದಲ್ಲಾಗಲಿ ಈ ಕ್ರಮಗಳೆಲ್ಲ ಭಾರತದ ನೆಲದಲ್ಲಿ ಅಥವಾ ಹೊರಗೆ ದೊರೆತ ಎಲ್ಲ ಬಗೆಯ ಲಭ್ಯ ಆಕರಗಳನ್ನು ಆಧರಿಸಿ ಚರಿತ್ರೆಯನ್ನು ಬರೆಯುವ ಪ್ರಯತ್ನವನ್ನು ಮಾಡಿದವು. ಸೈದ್ಧಾಂತಿಕವಾಗಿ ವಿರೋಧಾಭಾಸಗಳಿದ್ದರೂ ರಾಷ್ಟ್ರೀಯವಾದಿ ಹಾಗೂ ಮಾರ್ಕ್ಸ್‌ವಾದಿ ಬರಹಗಳು ಆಯಾ ವಿದ್ವಾಂಸರು ಆಶಿಸಿದ ಭವಿಷ್ಯದ ಭಾರತವನ್ನು ಕಟ್ಟಲು ಚರಿತ್ರೆಯ ಬರವಣಿಗೆಗೆ ಮಾರು ಹೋದದ್ದನ್ನು ಗಮನಿಸಬಹುದು.

ಚರಿತ್ರೆಯನ್ನು ತಳದಿಂದ ನೋಡಬೇಕು ಎನ್ನುವ ಸಬಾಲ್ಟರ್ನ್ ಚರಿತ್ರೆಕಾರರೂ ಇದಕ್ಕೆ ಹೊರತಾಗಿಲ್ಲ. ಸಬಾಲ್ಟರ್ನ್ ಚರಿತ್ರೆ ಬಿಟ್ಟು ಉಳಿದೆಲ್ಲ ಚರಿತ್ರೆಗಳು 'ಎಲೈಟ್' ಚರಿತ್ರೆ ಎಂದು ಬಲವಾಗಿ ನಂಬಿದ ಸಬಾಲ್ಟರ್ನ್ ಚರಿತ್ರೆಕಾರರು ಕೂಡ ಈ ನಿಟ್ಟಿನಲ್ಲಿ ಮಾರ್ಕ್ಸ್‌ವಾದಿ ಚರಿತ್ರೆಕಾರರಂತೆ 'ಒಪ್ಪಿತ ಚರಿತ್ರೆಗೆ' ಸವಾಲುಗಳನ್ನು ಹಾಕಿದರು ಮತ್ತು ಸವಾಲುಗಳನ್ನು ಹಾಕಿಸಿಕೊಂಡರು. ಚರಿತ್ರೆ ಬರವಣಿಗೆ ಪರಂಪರೆಯಲ್ಲಿ ಇದೊಂದು ನಿರಂತರ ಪ್ರಕ್ರಿಯೆ.

ಭಾರತದ ಚರಿತ್ರೆಯನ್ನೇ ಪುನಾರಚಿಸಬೇಕೆಂಬ ಪುನರುತ್ಥಾನವಾದಿಗಳಿಗಿಂತ ಭಿನ್ನ ಸೈದ್ಧಾಂತಿಕತೆಯಿರುವ ಅನೇಕ ವಿದ್ವಾಂಸರು ಈ ದಿಸೆಯಲ್ಲಿ ಚರಿತ್ರೆಯ ಘಟನೆಗಳನ್ನು ಮತ್ತು ಚರಿತ್ರಕಾರರನ್ನು ತೀವ್ರವಾಗಿ ವಿಶ್ಲೇಷಿಸುತ್ತಾ ಅವರವರ ಬದುಕಿಗೆ ಹತ್ತಿರವಿರುವ ಸತ್ಯಗಳನ್ನು ಹುಡುಕುತ್ತಿರುವುದು ಸರಿಯಷ್ಟೆ. ಭಾರತ ಉಪಖಂಡದ ಚರಿತ್ರೆಯನ್ನು ರೂಪಿಸಲು ಪಡುತ್ತಿರುವ ಸಂಕೀರ್ಣ ಸಂದರ್ಭದಲ್ಲಿ ವಿಶ್ವದ ವಿವಿಧೆಡೆಯ ಚರಿತ್ರೆಯನ್ನು ಕನ್ನಡದಲ್ಲಿ ಚರ್ಚಿಸುವುದರ ಸವಾಲು ಭಿನ್ನ ರೀತಿಯದು. ಪಾಶ್ಚಾತ್ಯರು ಭಾರತವನ್ನು ನೋಡಿದ ರೀತಿಯಲ್ಲಿ ಭಾರತೀಯರು ತಮ್ಮ ಅನುಭವದ ಮೂಲಕ ಪಾಶ್ಚಾತ್ಯರನ್ನು, ಆಫ್ರಿಕಾದವರನ್ನು ನೋಡಬೇಕೆಂಬ ತವಕ ನಮಗಿದ್ದರೂ ಬರವಣಿಗೆ ಕ್ರಮದ ಅನೇಕ ಮಿತಿಗಳು ನಮ್ಮನ್ನು ಬಿಡಲಿಲ್ಲ. ಕನ್ನಡ ವಿಶ್ವವಿದ್ಯಾಲಯದಲ್ಲಿ ಇಂತಹ ಪ್ರಶ್ನೆಗಳು ಎದುರಾದಾಗಲೆಲ್ಲ ಅವುಗಳನ್ನು ಬಗೆಹರಿಸುವುದು ಹೇಗೆ ಎಂಬ ಚಿಂತನೆಯೂ ಆರಂಭವಾಗುತ್ತದೆ. ಇಂತಹ ಚಿಂತನೆಯ ಹಿನ್ನೆಲೆಯಲ್ಲಿ ನಾವು 'ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟಗಳನ್ನು' ಹೊರತರುತ್ತಿದ್ದೇವೆ.

ಚರಿತ್ರೆಯು ಪ್ರತಿಯೊಬ್ಬರ ಜೀವನದ ಭಾಗವಾಗಿ ಕೆಲಸ ಮಾಡುತ್ತಿರುವ ಪ್ರತಿ ಸಮುದಾಯ/ವರ್ಗದ ನೆರಳಾಗಿ ಕಾಡುತ್ತಾ, ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುತ್ತಿರುವ ಜ್ಞಾನಶಿಸ್ತಾಗಿ ರೂಪುಗೊಂಡ ಬಗೆಗಳನ್ನು ಪ್ರಸ್ತುತ ಸಂಪುಟಗಳು ಅನಾವರಣಗೊಳಿಸಲು ಯತ್ನಿಸಿವೆ. ಜನರಲ್ ನಾಲೆಡ್ಜ್‌ನ ಭಾಗವಾಗಿ ಚರಿತ್ರೆಯನ್ನು ನೋಡುವ ಕ್ರಮಕ್ಕಿಂತ ಭಿನ್ನವಾದ ಕ್ರಮ ಇದು. ನಮ್ಮದಲ್ಲದ ಸಂಸ್ಕೃತಿ, ನಾಗರಿಕತೆ, ರಾಜಕೀಯ ಬೆಳವಣಿಗೆಗಳು, ರಾಜ್ಯಗಳ ರೂಪುಗೊಳ್ಳುವಿಕೆ, ವ್ಯವಸ್ಥೆಯ ವಿವಿಧ ಮಜಲುಗಳು, ಸಂಘರ್ಷ, ಹೋರಾಟ ಮುಂತಾದ ಪ್ರಕ್ರಿಯೆಗಳನ್ನು ಏಷ್ಯಾ, ಯುರೋಪ್, ಆಫ್ರಿಕಾಗಳ ಸಂದರ್ಭದಲ್ಲಿ ದಾಖಲಿಸಲು ಪ್ರಸ್ತುತ ಸಂಪುಟಗಳು ಪ್ರಯತ್ನಿಸಿವೆ. ಭಾರತ ಉಪಖಂಡ ಸಂಪುಟಗಳು ಹಾಗೂ ಸಮಕಾಲೀನ ಸಂಪುಟವು ನಮ್ಮೊಳಗಿನ ಸಂಕೀರ್ಣ ವ್ಯವಸ್ಥೆ, ಸಂಘರ್ಷ, ಸೌಹಾರ್ದತೆ ಮತ್ತು ವೈರುಧ್ಯಗಳ ವಿವಿಧ ಆಯಾಮಗಳನ್ನು ಒಳಗೊಳ್ಳುವ ಪ್ರಯತ್ನಗಳನ್ನು ಮಾಡಿವೆ. ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಧಾನದ ಸಂಪುಟವು ಜಗತ್ತಿನ ಬೇರೆ ಬೇರೆ ಪರಂಪರೆಗಳ ಬೌದ್ಧಿಕ ವಾಙ್ಮಯಗಳನ್ನು ಕನ್ನಡದಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಿದೆ.

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ. ಎಚ್.ಜೆ.ಲಕ್ಕಪ್ಪಗೌಡ ಅವರ ಸಂದರ್ಭದಲ್ಲಿ (೨೦೦೧ರಲ್ಲಿ) ಬಿಡುಗಡೆಯಾದ 'ಚರಿತ್ರೆ ವಿಶ್ವಕೋಶ'ಕ್ಕೆ ನಂತರದ ದಿನಗಳಲ್ಲಿ ಅಷ್ಟೊಂದು ಬೇಡಿಕೆ ಇರುತ್ತದೆ ಎಂದು ನಾನಾಗಲಿ ಅಥವಾ ನಮ್ಮ ಸಂಪಾದಕ ಬಳಗದ ಸದಸ್ಯರಾಗಲಿ ಅಂದುಕೊಂಡಿರಲಿಲ್ಲ. ೧೯೯೬ರಲ್ಲಿ ನಮ್ಮ ಆರಂಭಿಕ ಕುಲಪತಿ ಗಳಾಗಿದ್ದ ಡಾ. ಚಂದ್ರಶೇಖರ ಕಂಬಾರ ಹಾಗೂ ಆಗಿನ ಕುಲಸಚಿವರಾಗಿದ್ದ ಡಾ. ಕೆ.ವಿ.ನಾರಾಯಣ ಅವರ ಒತ್ತಾಸೆಯ ಫಲವೇ ಚರಿತ್ರೆ ವಿಶ್ವಕೋಶ ಎಂದರೆ ಅತಿಶಯೋಕ್ತಿಯೇನಲ್ಲ. ನಂತರದ ಕುಲಪತಿಗಳಾಗಿದ್ದ ಡಾ. ಬಿ.ಎ.ವಿವೇಕ ರೈ ಅವರ ಮಾರ್ಗದರ್ಶನದಲ್ಲಿ ಮತ್ತು ಚರಿತ್ರೆ

ವಿಭಾಗದ ಮುಖ್ಯಸ್ಥರಾಗಿದ್ದ ಡಾ. ಕೆ.ಮೋಹನ್‌ಕೃಷ್ಣ ರೈ ಅವರ ಸಹಕಾರದಿಂದ ವಿಭಾಗದ ಯೋಜನೆಯಾಗಿ ಬಲು ಬೇಡಿಕೆಯಿದ್ದ ಚರಿತ್ರೆ ವಿಶ್ವಕೋಶವನ್ನು ಬಿಡಿ ಬಿಡಿ ಪುಸ್ತಕಗಳನ್ನಾಗಿ ತರುವ ಯೋಜನೆಯನ್ನು ೨೦೦೫ರಲ್ಲಿ ಕೈಗೆತ್ತಿಕೊಳ್ಳಲಾಯಿತು. ಈ ಸಂದರ್ಭದಲ್ಲಿ ಸಂಶೋಧಕರಿಗೆ, ಅಧ್ಯಾಪಕರಿಗೆ ಮತ್ತು ಬಹಳ ಮುಖ್ಯವಾಗಿ ವಿದ್ಯಾರ್ಥಿಗಳಿಗೆ ಸುಲಭ ಬೆಲೆಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಸಂಪುಟಗಳು ಸಿಗುವಂತೆ ಯೋಜನೆಯನ್ನು ಕಾರ್ಯಗತಗೊಳಿಸಲಾಯಿತು. ಹೀಗಾಗಿ ಚರಿತ್ರೆ ವಿಶ್ವಕೋಶದ ಪ್ರತಿ ಬಿಡಿ ಭಾಗಗಳನ್ನು ಪರಿಷ್ಕಾರಕ್ಕೆ ಒಳಪಡಿಸಬೇಕೆಂದು ತೀರ್ಮಾನಿಸಿ ಅದಕ್ಕೆ ಸಂಬಂಧಿಸಿದ ಕೆಲಸಗಳನ್ನು ಆರಂಭಿಸಲಾಯಿತು. ಹಾಗೆಯೇ ಅನೇಕ ಬಿಡಿ ಭಾಗಗಳಲ್ಲಿ ತೀರಾ ಅಗತ್ಯವಾಗಿ ಬೇಕಾಗಿದ್ದ ಇನ್ನೂ ಕೆಲವು ಲೇಖನಗಳನ್ನು ಸಿದ್ಧಪಡಿಸಿ ಪ್ರತಿ ಸಂಪುಟವು ಓದುಗರ ಅಪೇಕ್ಷೆಯನ್ನು ಪೂರ್ಣಗೊಳಿಸುವಂತೆ ಅವಿರತ ಶ್ರಮವನ್ನು ಹಾಕಲಾಯಿತು. ಚರಿತ್ರೆ ವಿಶ್ವಕೋಶದ ಸಂಪಾದಕೀಯ ಸಮಿತಿಯಲ್ಲಿದ್ದ ಡಾ. ಕೆ.ಮೋಹನ್‌ಕೃಷ್ಣ ರೈ ಹಾಗೂ ಡಾ. ಎನ್.ಚಿನ್ನಸ್ವಾಮಿ ಸೋಸಲೆ ಅವರೊಂದಿಗೆ ಈ ಯೋಜನೆಯಲ್ಲಿ ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರು ಪಾಲ್ಗೊಂಡು ಪರಿಷ್ಕೃತ ಆವೃತ್ತಿಗಳನ್ನು ಯಶಸ್ವಿಯಾಗಿ ಹೊರತರಲು ಶ್ರಮ ವಹಿಸಿದರು. ಈ ಹಿನ್ನೆಲೆಯಲ್ಲಿ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಧಾನ, ಭಾರತ ಉಪಖಂಡದ ವಸಾಹತುಪೂರ್ವ ಚರಿತ್ರೆ, ಭಾರತ ಉಪಖಂಡದ ಆಧುನಿಕ ಚರಿತ್ರೆ, ಏಷ್ಯಾ, ಯುರೋಪ್, ಆಫ್ರಿಕಾ, ಅಮೆರಿಕ ಹಾಗೂ ಸಮಕಾಲೀನ ಕರ್ನಾಟಕದ ಮೇಲೆ ವಿವಿಧ ಸಂಪುಟಗಳನ್ನು ಸಿದ್ಧಪಡಿಸಲಾಗಿದೆ. ಏಷ್ಯಾ ಮತ್ತು ಯುರೋಪ್‌ನ ಸಂಪುಟಗಳ ಸಂಪಾದಕರಾಗಿ ಡಾ. ಕೆ.ಮೋಹನ್‌ಕೃಷ್ಣ ರೈ ಅವರು, ಆಫ್ರಿಕಾ ಹಾಗೂ ಸಮಕಾಲೀನ ಕರ್ನಾಟಕ ಸಂಪುಟಗಳ ಸಂಪಾದಕರಾಗಿ ಡಾ. ಎನ್.ಚಿನ್ನಸ್ವಾಮಿ ಸೋಸಲೆ ಅವರು, ಅಮೆರಿಕ ಸಂಪುಟದ ಸಂಪಾದಕರಾಗಿ ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರು, ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಧಾನ ಸಂಪುಟದ ಸಂಪಾದಕರಾಗಿ ಡಾ. ವಿಜಯ್ ಪೂಣಚ್ಚ ತಂಬಂಡ ಮತ್ತು ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರು ಹಾಗೂ ಡಾ. ವಿಜಯ್ ಪೂಣಚ್ಚ ತಂಬಂಡ ಸಂಪಾದಕತ್ವದಲ್ಲಿ 'ಭಾರತ ಉಪಖಂಡ ವಸಾಹತುಪೂರ್ವ ಮತ್ತು ಆಧುನಿಕ ಚರಿತ್ರೆ' ಎಂಬ ಸಂಪುಟಗಳು ಹೊರಬಂದಿವೆ. ಪ್ರಧಾನ ಸಂಪಾದಕನಾಗಿ ಈ ಎಂಟು ಸಂಪುಟಗಳನ್ನು ಹೊರತರಬೇಕೆಂದು ಹಾಕಿಕೊಂಡ ಯೋಜನೆಯ ಸಫಲತೆಗೆ ಕಾರಣರಾದ ಸಂಪಾದಕ ಮಂಡಳಿಯ ನನ್ನ ಸಹೋದ್ಯೋಗಿಗಳಿಗೆ, ಸಂಪುಟಗಳಲ್ಲಿ ಲೇಖನಗಳನ್ನು ಬರೆದ ಎಲ್ಲ ಲೇಖಕರಿಗೆ ಹಾಗೂ ಅನುವಾದಕರಿಗೆ ನಾನು ಆಭಾರಿಯಾಗಿದ್ದೇನೆ.

ಏಕೀಕರಣಪೂರ್ವ ಕರ್ನಾಟಕ ಚರಿತ್ರೆಯನ್ನು ಕನ್ನಡ ವಿಶ್ವವಿದ್ಯಾಲಯವು ಈಗಾಗಲೇ ಏಳು ಸಂಪುಟಗಳಲ್ಲಿ ಪ್ರಕಟಿಸಿರುವುದರಿಂದ ಅವುಗಳನ್ನು ಇಲ್ಲಿ ಪೂರ್ಣ ಪ್ರಮಾಣದಲ್ಲಿ ಚರ್ಚಿಸಿಲ್ಲ. ಪ್ರಸ್ತುತ ಎಂಟು ಕೃತಿಗಳಲ್ಲಿ ಪ್ರಾಚೀನ ಹಾಗೂ ಮಧ್ಯಯುಗೀನ ಚರಿತ್ರೆಗಳಿಗೆ ಸಂಬಂಧಿಸಿದಂತೆ ಇರುವ ಅನೇಕ ವಿವರಗಳನ್ನು ಮತ್ತು ಚರಿತ್ರೆ ಬರವಣಿಗೆ ಕ್ರಮದಲ್ಲಿನ

ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಭಾರತ ಉಪಖಂಡದ ವಸಾಹತುಪೂರ್ವ ಸಂಪುಟ ಬಿಟ್ಟರೆ ಉಳಿದ ಸಂಪುಟಗಳು ಆಧುನಿಕ ಚರಿತ್ರೆಯನ್ನು ಪ್ರಮುಖವಾಗಿ ವಿಶ್ಲೇಷಿಸಿವೆ. ಸಾಮ್ರಾಜ್ಯಶಾಹಿ ಶಕ್ತಿಗಳು ಬೇರೆ ಬೇರೆ ಖಂಡಗಳ ಅನೇಕ ದೇಶಗಳನ್ನು ವಸಾಹತುಗಳನ್ನಾಗಿ ಮಾಡಿದ ಹಾಗೂ ಆ ವಸಾಹತುಶಾಹಿ ಸರಕಾರಗಳಿಗೆ ವಿರೋಧವಾಗಿ ಜನಾಂದೋಲನಗಳನ್ನು ಸಂಘಟಿಸಿದ ಸ್ಥಳೀಯ ರಾಷ್ಟ್ರೀಯ ಹೋರಾಟಗಳನ್ನು ಇವು ಒಳಗೊಂಡಿವೆ. ಹೋರಾಟದ ಪ್ರತಿಕ್ರಿಯೆಗಳ ಪ್ರಕ್ರಿಯೆಗಳನ್ನು ಈ ಸಂಪುಟಗಳು ವಿವರವಾಗಿ ಚರ್ಚಿಸಲು ಪ್ರಯತ್ನಿಸಿವೆ. ಆಫ್ರಿಕಾ ಮತ್ತು ಅಮೆರಿಕಾಗಳಲ್ಲಿನ ಮೂಲನಿವಾಸಿ ಬುಡಕಟ್ಟುಗಳು ಸಾಮ್ರಾಜ್ಯಶಾಹಿಗಳ ತುಳಿತಕ್ಕೆ ನೇರವಾಗಿ ಬಲಿಯಾದ ಚರಿತ್ರೆಯ ವಿವಿಧ ಘಟ್ಟಗಳನ್ನು ದಾಖಲು ಮಾಡಲು ಪ್ರಯತ್ನಿಸಲಾಗಿದೆ. ಈ ಮೂಲನಿವಾಸಿಗಳ ಪ್ರತಿಭಟನೆಯನ್ನು ಅವರ ಸಾಂಸ್ಕೃತಿಕ ಗುರುತೇ ಇಲ್ಲದ ರೀತಿಯಲ್ಲಿ ಮಟ್ಟ ಹಾಕಿ ವಸಾಹತುಶಾಹಿಗಳು ಭದ್ರವಾಗಿ ಬೇರುಬಿಟ್ಟ ಬಗೆಗಳನ್ನು ಅರಿಯಲು ಈ ಸಂಪುಟಗಳು ಪ್ರಯತ್ನಿಸಿವೆ.

ವಸಾಹತುಶಾಹಿಗಳು ಇದೇ ರೀತಿಯಲ್ಲಿ ಏಷ್ಯಾದ ದೇಶಗಳನ್ನೂ ಸುಲಿಗೆ ಮಾಡಿ ಜನರ ಹೋರಾಟಗಳನ್ನು ಸುಮಾರು ಒಂದೂವರೆ ಶತಮಾನಗಳ ಕಾಲ ದಮನಿಸಿದವು. ಆದರೂ, ದ್ವಿತೀಯ ಮಹಾಯುದ್ಧದ ನಂತರ ಮುಖ್ಯವಾಗಿ ಏಷ್ಯಾದಲ್ಲಿ ತಮ್ಮದೇ ಗುರುತನ್ನು ಸ್ಥಾಪಿಸಲು ಈ ರಾಷ್ಟ್ರೀಯ ಹೋರಾಟಗಳಿಗೆ ಸಾಧ್ಯವಾಯಿತು. ವಸಾಹತುಶಾಹಿ ಚರಿತ್ರೆಯನ್ನು ವಿಶ್ಲೇಷಿಸುವುದರೊಂದಿಗೆ ಪ್ರಸಕ್ತ ವಿದ್ಯಮಾನಗಳನ್ನು ಸಂದರ್ಭೋಚಿತವಾಗಿ ನಮ್ಮ ಸಂಪುಟಗಳಲ್ಲಿ ವಿದ್ವಾಂಸರು ಚರ್ಚಿಸಿದ್ದಾರೆ. ಭಿನ್ನ ಭಿನ್ನ ಬೌದ್ಧಿಕ ಸಿದ್ಧಾಂತಗಳು, ಸಾಮಾಜಿಕ ಹಾಗೂ ರಾಷ್ಟ್ರೀಯ ಪ್ರಜ್ಞೆಗಳು ಧ್ರುವೀಕರಣಗೊಳ್ಳುವ ಭಿನ್ನ ಭಿನ್ನ ಬಗೆಗಳನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನಗಳನ್ನು ಪ್ರಸ್ತುತ ಸಂಪುಟಗಳು ಮಾಡಲು ಪ್ರಯತ್ನಿಸಿವೆ. ಇದರೊಂದಿಗೆ ಪ್ರಥಮ ಮತ್ತು ದ್ವಿತೀಯ ಮಹಾಯುದ್ಧಗಳು, ಶೀತಲಯುದ್ಧ, ಸೋವಿಯತ್ ರಷ್ಯಾದ ವಿಘಟನೆ ಹಾಗೂ ಜಾಗತೀಕರಣ ಪ್ರಕ್ರಿಯೆಗಳ ರಾಜಕೀಯ-ಸಾಮಾಜಿಕ-ಸಾಂಸ್ಕೃತಿಕ ಸಂಘರ್ಷಗಳನ್ನು ದಾಖಲಿಸುವ ಯತ್ನವನ್ನು ಮಾಡಲು ನಮ್ಮ ಸಂಪುಟಗಳು ಪ್ರಯತ್ನಿಸಿವೆ. ಹಾಗೆಯೇ ಬೇರೆ ಬೇರೆ ದೇಶಗಳ ಮತ್ತು ಜನರ ಸಾಮಾಜಿಕ, ಆರ್ಥಿಕ ಸಾಮ್ಯತೆಗಳನ್ನು, ಭಿನ್ನತೆಗಳನ್ನು, ಸಾಮರಸ್ಯಗಳನ್ನು, ಸಂಘರ್ಷಗಳನ್ನು ಮತ್ತು ಸಂಕೀರ್ಣ ಸಂಬಂಧಗಳನ್ನು ಪ್ರಸ್ತುತ ಸಂಪುಟಗಳು ವಿಶ್ಲೇಷಿಸುವ ಪ್ರಯತ್ನಗಳನ್ನು ಮಾಡಿವೆ.

ಕನ್ನಡ ಭಾಷೆಯಲ್ಲಿ ಆಫ್ರಿಕಾದ ಬಗ್ಗೆ ಸಂಪುಟ ಹೊಂದಿರುವುದು ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟಗಳಲ್ಲಿ ಮಾತ್ರ ಎಂದರೆ ಉತ್ಪ್ರೇಕ್ಷೆಯೇನಲ್ಲ. ಆಫ್ರಿಕಾದ ಹೊರ ಜಗತ್ತು ಅದರಲ್ಲಿಯೂ ಯುರೋಪ್ ಮತ್ತು ಅಮೆರಿಕಾಗಳು ಆಫ್ರಿಕಾದ ಮೂಲನಿವಾಸಿಗಳನ್ನು ಅತ್ಯಂತ ಕ್ರೂರವಾಗಿ ನಡೆಸಿಕೊಂಡಿತು. ಅವರನ್ನು ಅವಮಾನಿಸಿ, ಶೋಷಣೆಗೆ ಒಳಪಡಿಸಿ, ಗುಲಾಮಗಿರಿಗೆ ತಳ್ಳಿ ಶತಶತಮಾನಗಳ ಕಾಲ ತಮ್ಮ ತಮ್ಮ ದೇಶಗಳ ಐಲಾಟಗಳಿಗೆ ಬಲಿಪಶು ಮಾಡಿದ

ದಾರುಣ ಚರಿತ್ರೆ ಬಗ್ಗೆ ಅಲ್ಲಲ್ಲಿ ಉಲ್ಲೇಖಗಳಿದ್ದರೂ ಕನ್ನಡದಲ್ಲಿ ಈ ಬಗೆಯ ಪ್ರಯತ್ನಗಳು ಬಹಳ ಅಪರೂಪ. ರಕ್ತಸಿಕ್ತ ಚರಿತ್ರೆಯ ಪುಟಪುಟಗಳಲ್ಲಿಯೂ ನೊಂದ ಕರಿಯರ ಮೇಲಿನ ದೌರ್ಜನ್ಯಗಳ ಕಥನಗಳು ಹಾಗೂ ಆ ದೌರ್ಜನ್ಯಗಳಿಗೆ ಎದುರೇಟು ನೀಡಿ ತಮ್ಮತನವನ್ನು ತಮ್ಮ ರಾಷ್ಟ್ರೀಯ ಹೋರಾಟಗಳ ಮೂಲಕ ತೋರಿಸಲು ಯತ್ನಿಸಿದ ಆಫ್ರಿಕಾದ ಚರಿತ್ರೆಯ ವಿವಿಧ ಮಗ್ಗಲುಗಳನ್ನು ಪ್ರಸ್ತುತ ಸಂಪುಟ "ಆಫ್ರಿಕಾ- ಚರಿತ್ರೆಯ ವಿವಿಧ ಆಯಾಮಗಳು" ದಾಖಲಿಸಲು ಯತ್ನಿಸಿದೆ. ಪ್ರಸ್ತುತ ಸಂಪುಟದ ಸಂಪಾದಕರಾದ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರಿಗೆ ಅಭಿನಂದನೆಗಳು.

ಡಾ. ಎಸ್.ಎ.ಬಾರಿ ಹಾಗೂ ಡಾ. ರಾಜಾರಾಮ ಹೆಗಡೆ ಅವರ ಮಾರ್ಗದರ್ಶನದಲ್ಲಿ ಚರಿತ್ರೆ ವಿಶ್ವಕೋಶವನ್ನು ಸಮರ್ಥವಾಗಿ ರಚಿಸಲು ಸಾಧ್ಯವಾದದ್ದನ್ನು ನಾನು ನೆನಪಿಸಿ ಕೊಳ್ಳಲೇಬೇಕು. ಪ್ರಸ್ತುತ ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಡಾ. ಎಸ್.ಎ.ಬಾರಿ ಹಾಗೂ ಚರಿತ್ರೆ ವಿಭಾಗದ ಪ್ರಾಧ್ಯಾಪಕರಾದ ಡಾ. ರಾಜಾರಾಮ ಹೆಗಡೆ ಅವರು ನಮ್ಮ ಸಂಪುಟಗಳ ವಿಷಯತಜ್ಞರಾಗಿ ಸಾಕಷ್ಟು ಸಲಹೆ-ಸೂಚನೆ ನೀಡಿದ ಹಿನ್ನೆಲೆಯಲ್ಲಿ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟಗಳನ್ನು ಯಶಸ್ವಿಯಾಗಿ ಹೊರತರಲು ಸಾಧ್ಯವಾಯಿತು. ಈ ಇಬ್ಬರು ವಿದ್ವಾಂಸರಿಗೆ ಸಂಪಾದಕ ಮಂಡಳಿಯು ಆಭಾರಿಯಾಗಿದೆ.

ಪ್ರಸ್ತುತ ಸಂಪುಟಗಳನ್ನು ಹೊರತರಲು ನಮಗೆ ಎಲ್ಲ ಬಗೆಗಳಿಂದಲೂ ಪ್ರೋತ್ಸಾಹ ನೀಡಿದ ಮಾನ್ಯ ಕುಲಪತಿಗಳಾದ ಡಾ. ಎ.ಮುರಿಗೆಪ್ಪ ಅವರಿಗೆ, ಕುಲಸಚಿವರಾದ ಹಾಗೂ ಪ್ರಸಾರಾಂಗದ ನಿರ್ದೇಶಕರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ, ಹಿಂದಿನ ಕುಲಸಚಿವರಾದ ಡಾ. ಹಿ.ಚಿ.ಬೋರಲಿಂಗಯ್ಯ ಅವರಿಗೆ, ಪ್ರಸಾರಾಂಗದ ಹಿಂದಿನ ನಿರ್ದೇಶಕ ರಾದ ಡಾ. ಮೋಹನ ಕುಂಟಾರ್ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ನಾನು ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇನೆ. ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಸಹಕಾರಕ್ಕಾಗಿ ನಾನು ಆಭಾರಿ ಯಾಗಿದ್ದೇನೆ. ಪ್ರಸ್ತುತ ಸಂಪುಟ ಹೊರಬರಲು ನಿರಂತರವಾಗಿ ನಮಗೆ ಸಹಕರಿಸಿದ ಚರಿತ್ರೆ ವಿಭಾಗದ ಸಹೋದ್ಯೋಗಿ ಡಾ. ಸಿ.ಆರ್.ಗೋವಿಂದ ರಾಜು ಹಾಗೂ ಪ್ರೊ. ಲಕ್ಷ್ಮಣ್ ತೆಲಗಾವಿ ಇವರಿಗೆ ಸಂಪಾದಕ ಮಂಡಳಿ ಆಭಾರಿಯಾಗಿದೆ.

ಪ್ರಸ್ತುತ ಸಂಪುಟಗಳ ಪುಟವಿನ್ಯಾಸ ಮಾಡಿದ ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ಶ್ರೀ ಸುಜ್ಞಾನಮೂರ್ತಿ ಅವರಿಗೆ, ಮುಖಪುಟ ವಿನ್ಯಾಸ ಮಾಡಿದ ಶ್ರೀ ಯು.ಟಿ.ಸುರೇಶ್ ಅವರಿಗೆ, ಅಕ್ಷರ ಜೋಡಣೆ ಮಾಡಿದ ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್‌ನ ಶ್ರೀಮತಿ ರಶ್ಮಿ ಕೃಪಾಶಂಕರ್ ಅವರಿಗೆ ಹಾಗೂ ಸಂಪುಟಗಳನ್ನು ಮುದ್ರಿಸಿದ ಯಶವಂತ್ ಪ್ರಿಂಟರ್ಸ್ ಅವರಿಗೆಲ್ಲ ನನ್ನ ಕೃತಜ್ಞತೆಗಳು.

# ಸಂಪುಟ ಸಂಪಾದಕರ ಮಾತು

## ಡಾ. ಎಸ್. ಚಿನ್ನಸ್ವಾಮಿ ಸೋಸಲೆ

ಕನ್ನಡ ವಿಶ್ವವಿದ್ಯಾಲಯದ ಮುಖ್ಯ ಉದ್ದೇಶ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವುದೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ ಎನ್ನುವ ಸಂಸ್ಥಾಪನ ಕುಲಪತಿಗಳಾದ ಡಾ.ಚಂದ್ರಶೇಖರ ಕಂಬಾರ ಆಶಯದಂತೆ ಸಂಸ್ಥೆಯು ಇದುವರೆಗೆ ಕನ್ನಡದ ಜೊತೆ ಅಂತಾರಾಷ್ಟ್ರೀಯ ಸಂಸ್ಕೃತಿಯ ಬಹುತ್ವದ ನೆಲೆಗಳನ್ನು ಹುಡುಕುವ ಗಟ್ಟಿಗೊಳಿಸುವ ಹರಡುವ ಕಾರ್ಯವನ್ನು ಕಳೆದ ಹತ್ತೊಂಬತ್ತು ವರ್ಷಗಳಿಂದ ಕೈಗೊಳ್ಳುತ್ತ ಬರುತ್ತಿದೆ. ಈ ಕಾರ್ಯದಲ್ಲಿ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗ ತನ್ನದೆಯಾದ ಛಾಪು ಮೂಡಿಸಿದೆ. ವಿಭಾಗದ ಪ್ರಾಧ್ಯಾಪಕರಾದ ಪ್ರೊ.ತಂಬಂಡ ವಿಜಯ್ ಪೂಣ್ಣಚ್ಚ ಅವರ ಸಂಪಾದಕತ್ವದಲ್ಲಿ ಹಾಗೂ ಡಾ.ಸಿ.ಆರ್.ಗೋವಿಂದರಾಜು, ಡಾ.ಕೆ.ಮೋಹನ್‌ಕೃಷ್ಣ ರೈ ಹಾಗೂ ಡಾ.ಎಸ್. ಚಿನ್ನಸ್ವಾಮಿ ಸೋಸಲೆ ಅವರ ಸಹ ಸಂಪಾದಕತ್ವದಲ್ಲಿ ಹೊರಬಂದ ಚರಿತ್ರೆ ವಿಶ್ವಕೋಶ ಈ ದೃಷ್ಟಿಯಲ್ಲಿ ಒಂದು ಮಹತ್ವದ ಕೃತಿ. ಈ ಕೃತಿ ಕರ್ನಾಟಕದ ವಿವಿಧ ಸಂಶೋಧಕರು ಹಾಗೂ ಅಧ್ಯಯನ, ಅಧ್ಯಾಪಕರಿಗೆ ಒಂದು ಮಹತ್ವದ ಸಂಶೋಧನಾ ಕೃತಿಯಾಗಿ ಮೂಡಿತು. ಮುಖ್ಯವಾಗಿ ಈ ಕೃತಿ ಚರಿತ್ರೆ ಎಂದರೆ ಕೇವಲ ಮಾಹಿತಿಯನ್ನು ಸಂಗ್ರಹಿಸುವುದೇ ಅಲ್ಲ, ಸಂಗ್ರಹಿಸಿದ ಮಾಹಿತಿಯನ್ನು ಲೋಕಾರ್ಪಣೆ ಮಾಡಿ ಆ ಮೂಲಕ ಜನಮುಖಿ ಚರಿತ್ರೆಯನ್ನು ಬಹು ವಿಸ್ತೃತವಾಗಿ ನೋಡುವ ವಿಧಾನವನ್ನು ಮನಗಾಣಿಸಿತು.

ಇಂದು ಚರಿತ್ರೆಯು ಮನುಷ್ಯನ ಮೂಲಕ ಹುಟ್ಟಿ ಅವನ ಮೂಲಕವೇ ಎಲ್ಲ ಸ್ಥಿತಿ ಸತ್ಯಗಳ ವಿವರಗಳ ಗ್ರಹಿಕೆಯಿಂದ ನಿರಂತರ ವಿಕಾಸವಾಗುತ್ತಲೇ ನಾಳಿನ ಎಚ್ಚರಗಳನ್ನೂ, ನಿನ್ನೆಯ ನೆನಪುಗಳನ್ನು ಸದ್ಯದ ಸಾಮಾಜಿಕ ಸತ್ಯಗಳನ್ನು ನಿರೂಪಿಸುವ ಸಮಷ್ಟಿಯಾದ ಕಾಲ ದೇಶ ಸಮುದಾಯಗಳ ಒಂದು ವಿಸ್ತಾರ ಕಥನವೆನ್ನಿಸಿಕೊಳ್ಳುತ್ತದೆ. ಏಕೆಂದರೆ ಈ ನಿರ್ವಚನ ಕಥನವು ತನ್ನ ಕಾಲಕ್ಕನುಗುಣವಾಗಿ ಮನುಷ್ಯನ ಎಲ್ಲ ಜೀವಂತ ಮಾಹಿತಿಯನ್ನು ನೆನೆಯುವುದರ ಜೊತೆಗೆ ಸಂಯೋಜಿಸುತ್ತ ತನ್ನ ಅಗತ್ಯಗಳನ್ನು ಚರಿತ್ರೆಯಲ್ಲಿ ಪುನರ್ ಸೃಷ್ಟಿಸಿಕೊಳ್ಳುತ್ತದೆ. ಒಂದರ್ಥದಲ್ಲಿ ಆಧುನಿಕ ಜಗತ್ತಿನ ಇತಿಹಾಸವೆಂದರೆ ಇದೇ. ಆಫ್ರಿಕಾದ ಚರಿತ್ರೆಯ ವಿವಿಧ ಆಯಾಮಗಳ ಸಂದರ್ಭದಲ್ಲಿ ಇಂಥ ಅಧ್ಯಯನಗಳು ಹೆಚ್ಚಾಗಿ

ನಡೆಯಬೇಕಾಗಿದೆ. ಈ ದೃಷ್ಟಿಯಿಂದ ಕೆಲವು ಆಯ್ದ ಮಹತ್ವದ ವಿಷಯಗಳನ್ನು ಕೇಂದ್ರೀಕರಿಸಿ ಈ ಕೃತಿಯನ್ನು ಹೊರತರಲಾಗಿದೆ. ಆಫ್ರಿಕಾದ ಚರಿತ್ರೆ ಬಗ್ಗೆ ತಿಳಿಯ ಬಯಸುವ ಕನ್ನಡ ಓದುಗರಿಗೆ ಅದರಲ್ಲಿಯೂ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲವಾಗ ಬಹುದೆಂದು ಭಾವಿಸಲಾಗಿದೆ.

ಪ್ರಸ್ತುತ ಸಂಪುಟವು ಈ ಸಂಕಲನ ಕೃತಿಯು ಚರಿತ್ರೆ ಹಾಗೂ ಸಮಕಾಲೀನ ಆಯಾಮಗಳ ಕುರಿತು ಒಂದು ಮಹದ್ದರ್ಶನವನ್ನು ಕಟ್ಟಿಕೊಡುತ್ತದೆ. ಇಲ್ಲಿಯ ಈಜಿಪ್ಪಿನ ನಾಗರಿಕತೆ, ಪ್ರಾಚೀನ ಕಾಲದಿಂದ ಯುರೋಪಿಯನ್ನರ ಆಗಮನದ ವರೆಗೆ ಸಂಸ್ಕೃತಿ ಮತ್ತು ನಾಗರಿಕತೆ, ಆಫ್ರಿಕಾ ಸಾಂಸ್ಕೃತಿಕ ದ್ವಂದ್ವ, ಆಫ್ರಿಕಕ್ಕಾಗಿ ಕಿತ್ತಾಟ, ವಸಹಾತುಶಾಹಿತ್ವ ಮತ್ತು ರಾಷ್ಟ್ರೀಯ ಚಳವಳಿ, ಎರಡನೇ ಮಹಾಯುದ್ಧದ ನಂತರ ಆಫ್ರಿಕಾ ಹಾಗೂ ಸಮಕಾಲೀನ ಆಫ್ರಿಕಾ ಎಂಬ ಮಹತ್ವದ ವಿಷಯಗಳಿಗೆ ಸಂಬಂಧಿಸಿದ ಐತಿಹಾಸಿಕ ಹಾಗೂ ಚಾರಿತ್ರಿಕ ಅಂಶಗಳನ್ನು ಹೊರಚೆಲ್ಲುವ ಲೇಖನಗಳು ಓದುಗರ ಹಾಗೂ ಸಂಶೋಧಕರ ಕುತೂಹಲ ಹಾಗೂ ಆಫ್ರಿಕಾದ ಸಮಾಜವನ್ನು ಪರಿಭಾವಿಸುವ ಕ್ರಮಗಳ ಜೊತೆಗೆ, ಸಂಭ್ರಮ ಆಶ್ಚರ್ಯಗಳನ್ನು ನೀಡುತ್ತವೆ. ಈ ದೃಷ್ಟಿಯಿಂದ ಇವು ಮಹತ್ವದ ಲೇಖನಗಳಾಗಿವೆ.

ಜಗತ್ತಿನ ಏಳು ಖಂಡಗಳಲ್ಲಿ ಆಫ್ರಿಕಾ ಅತ್ಯಂತ ದೊಡ್ಡದಾದ ಎರಡನೆಯ ಖಂಡ. ಭೌಗೋಳಿಕ ಹಾಗೂ ಜನಾಂಗೀಯ ವೈವಿಧ್ಯತೆ ಇಲ್ಲಿನ ಇತಿಹಾಸದ ಮೇಲೆ ಪ್ರಭಾವ ಬೀರಿದೆ. ಇಲ್ಲಿನ ಜನರು ಬಹಳಷ್ಟು ನೀಗ್ರೋಯಿಡ್ ಮಾದರಿಯವರಾಗಿದ್ದಾರೆ. ಆಫ್ರಿಕಾ ಖಂಡದ ಬಗ್ಗೆ ಅಲ್ಪಸ್ವಲ್ಪ ತಿಳಿದಿದ್ದ ಕಾರಣ ಇದನ್ನು ಕಗ್ಗತ್ತಲೆಯ ಭೂಭಾಗವೆಂದು ಚರಿತ್ರೆಯಲ್ಲಿ ಕರೆಯಲಾಗಿತ್ತು. ಆದರೆ ಆಫ್ರಿಕಾ ಖಂಡವು ತನ್ನದೇ ಆದ ದೀರ್ಘವಾದ ಹಾಗೂ ಕುತೂಹಲಕರವಾದ ಇತಿಹಾಸವನ್ನು ಹೊಂದಿರುವುದು ನಂತರದ ದಿನಗಳಲ್ಲಿ ತಿಳಿಯಿತು. ಇಲ್ಲಿನ ಇತಿಹಾಸವು ಈಜಿಪ್ಪಿನ ಪ್ರೌಢನಾಗರಿಕತೆಯ ಉಗಮದೊಂದಿಗೆ ಆರಂಭವಾಗುತ್ತದೆ. ಕ್ರಿ.ಪೂ.೪೦೦೦ ವರ್ಷಗಳಷ್ಟು ಹಿಂದಿನದು. ಇತಿಹಾಸಪೂರ್ವ ಮಾನವನ ಎಲುಬುಗಳು ಪಳೆಯುಳಿಕೆಗಳಾಗಿ ಕಾಣಿಸುವುದು ದಕ್ಷಿಣ ಹಾಗೂ ಪೂರ್ವ ಆಫ್ರಿಕಾದಲ್ಲಿಯೇ. ಆಫ್ರಿಕಾ ಖಂಡದ ಉಳಿದೆಡೆಯಲ್ಲೂ ವೈವಿಧ್ಯಮಯವಾದ ಇತಿಹಾಸದ ಬೆಳವಣಿಗೆಗಳನ್ನು ಕಾಣಬಹುದು. ಆಫ್ರಿಕಾ ಖಂಡದಲ್ಲಿ ವಿವಿಧ ಬಗೆಯ ಜನರು, ಭಾಷೆಗಳು ಮತ್ತು ಸಂಸ್ಕೃತಿಗಳು ಕಾಣಸಿಗುತ್ತವೆ. ಹೊಮಿನಿಡೆಯ ಅಂದರೆ ಮಾನವ ಕಾಲದ ತೊಟ್ಟಿಲು ಆಫ್ರಿಕಾ ಎಂಬುದು ಈಗ ಎಲ್ಲೆಡೆ ಮಾನ್ಯವಾಗಿದೆ. ಇಂಥ ನೈಸರ್ಗಿಕವಾಗಿ ಸಂಪತ್ ಭರಿತವಾದ ಖಂಡದಲ್ಲಿ ಬಂಡವಾಳ ಹೂಡಿಕೆಯ ಅವಕಾಶವಿರುವ ಪ್ರದೇಶಗಳಲ್ಲಿ ನಿಯಂತ್ರಣ ಸಾಧಿಸಲು ಮತ್ತು ಅವುಗಳ ಏಕಸ್ವಾಮ್ಯಕ್ಕಾಗಿ ಯೂರೋಪಿನ ಬಲಿಷ್ಠ ದೇಶಗಳು ಸ್ಪರ್ಧೆ ನಡೆಸಿದವು. ಆಫ್ರಿಕಾದಲ್ಲಿ ಯಥೇಚ್ಛವಾಗಿ ದೊರೆಯುತ್ತಿದ್ದ ಚಿನ್ನ, ದಂತ, ವಜ್ರ, ಗುಲಾಮರು ಮುಂತಾದ ಕಣ್ಣು ಕೋರೈಸುವ ಸಂಪತ್ತನ್ನು ದೋಚಲು ವ್ಯಾಪಾರದ ಸೋಗು ಹಾಕಿಕೊಂಡು ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರು ಈ ಭೂಖಂಡಕ್ಕೆ

ಬಂದಿಳಿದರು. ಆಫ್ರಿಕಾದ ವಿವಿಧ ಜನಾಂಗದ ಮತ್ತು ಬುಡಕಟ್ಟುಗಳ ನಡುವಿನ ವೈರುಧ್ಯ, ವೈಮನಸ್ಸುಗಳನ್ನು ಬಳಸಿಕೊಂಡು ಮಿಲಿಟರಿ ಬಲದಿಂದ ತಮ್ಮ ಯಜಮಾನಿಕೆಯನ್ನು ಹೇರುವಲ್ಲಿ ಯಶಸ್ವಿಯಾದರು. ಕಾಲಕ್ರಮೇಣ ವಸಾಹತುಗಳಾಗಿ ಪರಿವರ್ತಿತಗೊಂಡ ಈ ಭೂಭಾಗದಲ್ಲಿ ಪೋರ್ಚುಗೀಸರು ಪಶ್ಚಿಮ ಆಫ್ರಿಕಾದ ಕರಾವಳಿ ಪ್ರದೇಶದಲ್ಲಿ, ಫ್ರೆಂಚರು ವಾಯುವ್ಯ ಪ್ರದೇಶದಲ್ಲಿ ಬ್ರಿಟೀಷರು, ಪೂರ್ವದಲ್ಲಿ ಡಚ್ಚರು, ದಕ್ಷಿಣದಲ್ಲಿ ಬೆಲ್ಜಿಯನ್ನರು, ಮಧ್ಯ ಆಫ್ರಿಕಾದಲ್ಲಿ ಇಟಾಲಿಯನ್ನರು, ಉತ್ತರ ಆಫ್ರಿಕಾ ಪ್ರದೇಶಗಳನ್ನು ತಮ್ಮ ತೆಕ್ಕೆಯಲ್ಲಿ ಹಿಡಿದುಕೊಂಡು ಶತಶತಮಾನಗಳ ಕಾಲ ಆಳ್ವಿಕೆ ಮಾಡಿದರು.  ಈ ಸಂದರ್ಭದಲ್ಲಿ ಆಫ್ರಿಕಾದ ಜನತೆಯು ತನ್ನ ರಾಷ್ಟ್ರದೊಂದಿಗೆ ತನಗಿರುವ ಪರಂಪರೆಯ ಸಮಾನಾಂಶಗಳನ್ನು ಯುಗಯುಗದ ತನ್ನದೆಯಾದ ಪರಂಪರೆಗೆ ತನ್ನ ವಿನಮ್ರವಾದ ಕಾಣಿಕೆ ಏನೆಂಬುದನ್ನೂ ಅವಶ್ಯಕವಾಗಿ ತಿಳಿದುಕೊಳ್ಳಬೇಕಾಗಿದೆ. ಆಫ್ರಿಕಾವು ಕಳೆದ ದಶಕಗಳಿಂದ ರಾಜಕೀಯ ಭಾಗ್ಯ, ದೌರ್ಭಾಗ್ಯ ಹಾಗೂ ಏಳು ಬೀಳುಗಳನ್ನು ಕಂಡಿದೆ. ಆದರೂ ಈ ಎಲ್ಲ ಏಳು ಬೀಳಿನ ನಡುವೆಯೂ ನಿರಂತರವಾದ ಸಾಂಸ್ಕೃತಿಕ ಪಂರಪರೆಯನ್ನು, ಭಾಷೆ, ಸಾಹಿತ್ಯ ಹಾಗೂ ಜನಮುಖಿಯಾದ ಹೋರಾಟದ ಬೆಳವಣಿಗೆಯನ್ನು ಪ್ರಪಂಚದೊಂದಿಗೆ ಹೊಂದಾಣಿಕೆ ಯಿರುವಂತ ವ್ಯಕ್ತಿತ್ವದ ನೆಲೆಯಲ್ಲಿ ಬೆಳೆಸಿಕೊಂಡು ಬಂದಿದೆ.

ಪ್ರಸ್ತುತ ಕೃತಿಯ ಲೇಖನಗಳು ಆಫ್ರಿಕಾ ಖಂಡದ ವಿವಿಧ ರಾಷ್ಟ್ರಗಳು ಆಧುನಿಕ ರಾಜ್ಯದ ಚೌಕಟ್ಟಿನೊಳಗಿನ ಸಂದರ್ಭದಲ್ಲಿ ಎದುರಿಸಿದ ಸವಾಲುಗಳ ಸ್ಥೂಲವಾದ ನಿರೂಪಣೆಯನ್ನು ನೀಡುತ್ತದೆ. ರಾಜಕೀಯ ಚರಿತ್ರೆಯಂತೂ ಬಹುಮುಖ್ಯವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅದಕ್ಕಿಂತ ಮಿಗಿಲಾದದ್ದು ಇಲ್ಲಿನ ಜನಜೀವನ, ಧಾರ್ಮಿಕ ಶ್ರದ್ಧೆಗಳು, ಅವರ ತಾತ್ವಿಕ ನೆಲೆಗಟ್ಟು, ನೈತಿಕ ನಿಯಮಗಳು, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು, ಅವರ ಸಂಸ್ಕೃತಿ ಮತ್ತು ಕಲೆಗಳು. ಆದಕಾರಣ ಈ ಕೃತಿಯಲ್ಲಿ ಈ ವಿಷಯಗಳಿಗೆ ತಕ್ಕಷ್ಟು ವಿಷಯ ಸಂಗ್ರಹಮಾಡಿ ನಿರೂಪಿಸಲು ವಿಶೇಷ ಪ್ರಯತ್ನ ಮಾಡಲಾಗಿದೆ. ಅಂತರರಾಷ್ಟ್ರೀಯ ಮಹತ್ವವನ್ನುಳ್ಳ ಈ ವಿಚಾರದ ಬಗ್ಗೆ ವಿಶೇಷ ಗಮನ ಕೊಡಬೇಕಾದ ಸಂದರ್ಭ ಈಗ ಬಂದಿದೆ.

ಇಂಥದೊಂದು ಮಹತ್ವದ ಕೃತಿ ಪ್ರಕಟವಾಗುವಾಗ ಸಂಪಾದಕ ಸಮಿತಿಯ ಸದಸ್ಯರ ಬಗ್ಗೆ ನೆನೆದುಕೊಳ್ಳುವುದು ಸಂತೋಷದ ಸಂಗತಿ. ಚರಿತ್ರೆ ವಿಶ್ವಕೋಶದಂತಹ ಮಹತ್ವದ ಕೃತಿಯನ್ನು ಪ್ರಕಟಿಸುವಾಗಿನಿಂದ ಇಂದಿನ ಸಂದರ್ಭದವರೆಗೂ ಬೌದ್ಧಿಕ ಶಿಸ್ತಿನೊಂದಿಗೆ ಕಾರ್ಯನಿರ್ವಹಿಸಿ, ನಮ್ಮನ್ನು  ಈ ದಿಸೆಯಲ್ಲಿ ಕಾರ್ಯಮಗ್ನರಾಗಲು ತೊಡಗಿಸಿದ ಪ್ರಾಧ್ಯಾಪಕರಾದ ಡಾ.ತಂಬಂಡ ವಿಜಯ್ ಪೂಣಚ್ಚ ಅವರನ್ನು ಕೃತಜ್ಞತೆಯಿಂದ ನೆನೆಯಲೇಬೇಕು.  ಈ ಕೆಲಸದ ಪ್ರತಿ ಹಂತದಲ್ಲಿಯೂ ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ ವಿಷಯ ತಜ್ಞರಾದ ಹಾಗೂ ಕುವೆಂಪು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಎಸ್.ಎ.ಬಾರಿ ಅವರಿಗೆ ಹಾಗೂ ಪ್ರಾಧ್ಯಾಪಕರಾದ ಡಾ.ರಾಜಾರಾಮ ಹೆಗಡೆ ಅವರಿಗೆ

ವಂದನೆಗಳು. ಸಹೋದ್ಯೋಗಿ ಮಿತ್ರರಾದ ಡಾ.ಸಿ.ಆರ್.ಗೋವಿಂದರಾಜು, ಡಾ.ಕೆ. ಮೋಹನ್‌ಕೃಷ್ಣ ರೈ, ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ನೆರವು ಗಣನೀಯವಾದದ್ದು. ಈ ಕೃತಿಗೆ ವಿಶ್ವವಿದ್ಯಾಲಯದ ಒಳಗಿನ ಹಾಗೂ ಹೊರಗಿನ ವಿದ್ವಾಂಸರು ಮಹತ್ವದ ಲೇಖನಗಳನ್ನು ಒದಗಿಸಿದ್ದಾರೆ ಇವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಈ ಕೃತಿಯು ಹೊರಬರಲು ಒಪ್ಪಿಗೆ ನೀಡಿದ ನಮ್ಮ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರಿಗೆ, ಕುಲಸಚಿವರಾದ ಹಾಗೂ ಪ್ರಸಾರಾಂಗದ ನಿರ್ದೇಶಕರಾದ ಡಾ.ಮಂಜುನಾಥ ಬೇವಿನಕಟ್ಟಿ ಹಾಗೂ ಪ್ರಸಾರಾಂಗದ ಹಿಂದಿನ ನಿರ್ದೇಶಕರಾದ ಡಾ.ಮೋಹನ ಕುಂಟಾರ್ ಅವರಿಗೆ ಕೃತಜ್ಞತೆಗಳು.

ಈ ಕೃತಿಯ ವಿಷಯ ಸೂಚಿಯನ್ನು ಸಿದ್ಧಪಡಿಸಲು ನೆರವಾದ ವಿಭಾಗದ ಸಂಶೋಧನಾ ವಿದ್ಯಾರ್ಥಿಗಳಾದ ಹಿರಿಬೀದ್ರಿ ಹೋಳಿಬಸಪ್ಪ, ಎಸ್.ಮುನಿರಾಜು, ಅಮರೇಶ ಆಲ್ಕೋಡ್, ಕೆ.ವೆಂಕಟೇಶ್, ಬಿ.ಎಚ್.ಸಂತೋಷಕುಮಾರ್ ಹಾಗೂ ಜಿ.ವಿಜಯಲಕ್ಷ್ಮಮ್ಮ ಅವರನ್ನು ಆತ್ಮೀಯವಾಗಿ ನೆನೆಯುತ್ತೇನೆ.

ಸಂಪುಟದ ಪುಟ ವಿನ್ಯಾಸ ಮಾಡಿದ ಶ್ರೀ ಬಿ.ಸುಜ್ಞಾನಮೂರ್ತಿ ಅವರಿಗೆ, ಮುಖಪುಟ ವಿನ್ಯಾಸವನ್ನು ಮಾಡಿದ ಶ್ರೀ ಯು.ಟಿ.ಸುರೇಶ ಅವರಿಗೆ ಹಾಗೂ ಅಕ್ಷರ ಸಂಯೋಜನೆ ಮಾಡಿದ ಶ್ರೀಮತಿ ಬಿ.ರಶ್ಮಿ ಕೃಪಾಶಂಕರ್ ಅವರಿಗೆ ಕೃತಜ್ಞತೆಗಳು.

೧

# ಈಜಿಪ್ಟಿನ ನಾಗರಿಕತೆ
# ಕೆಲವು ಟಿಪ್ಪಣಿಗಳು

**ಎಸ್.ಎನ್. ಶಿವರುದ್ರಸ್ವಾಮಿ**

ಜಗತ್ತಿನ ಏಳು ಖಂಡಗಳಲ್ಲಿ ಆಫ್ರಿಕಾ ಅತ್ಯಂತ ದೊಡ್ಡದಾದ ಎರಡನೆಯ ಖಂಡ. ಭೌಗೋಳಿಕ ಹಾಗೂ ಜನಾಂಗೀಯ ವೈವಿಧ್ಯತೆ ಇಲ್ಲಿನ ಇತಿಹಾಸದ ಮೇಲೆ ಪ್ರಭಾವ ಬೀರಿದೆ. ಇಲ್ಲಿನ ಜನರು ಬಹಳಷ್ಟು ನೀಗ್ರೋಯಿಡ್ ಮಾದರಿಯವರು. ಆಫ್ರಿಕಾ ಖಂಡದ ಬಗ್ಗೆ ಅತ್ಯಲ್ಪ ತಿಳಿದಿದ್ದ ಕಾರಣ ಅದನ್ನು ಕಗ್ಗತ್ತಲೆಯ ಭೂಭಾಗವೆಂದು ಕರೆಯಲಾಗುತ್ತಿತ್ತು. ಆದರೆ ಆಫ್ರಿಕಾಖಂಡವು ತನ್ನದೇ ಆದ ದೀರ್ಘವಾದ ಹಾಗೂ ಕುತೂಹಲವಾದ ಇತಿಹಾಸವನ್ನು ಹೊಂದಿದೆ. ಇಲ್ಲಿನ ಇತಿಹಾಸವು ಈಜಿಪ್ಟ್‌ನ ಪ್ರೌಢನಾಗರಿಕತೆಯ ಉಗಮದೊಂದಿಗೆ ಆರಂಭವಾಗುತ್ತದೆ. ಈಜಿಪ್ಟಿನ ನಾಗರೀಕತೆಯು ಪ್ರಾಚೀನವಾದುದು ಹಾಗೂ ಉನ್ನತವಾದುದು. ಇದು ಕ್ರಿ.ಪೂ.೪೦೦೦ ವರ್ಷಗಳಷ್ಟು ಹಿಂದಿನದು. ಇತಿಹಾಸಪೂರ್ವ ಮಾನವನ ಎಲುಬುಗಳು ಪಳೆಯುಳಿಕೆಗಳಾಗಿ ಕಾಣಸಿಗುವುದು ದಕ್ಷಿಣ ಹಾಗೂ ಪೂರ್ವ ಆಫ್ರಿಕಾದಲ್ಲೇ. ಆಫ್ರಿಕಾದ ಉಳಿದೆಡೆಯಲ್ಲೂ ವೈವಿಧ್ಯಮಯವಾದ ಇತಿಹಾಸದ ಬೆಳವಣಿಗೆಗಳನ್ನು ಕಾಣಬಹುದು.

ಈಜಿಪ್ಟಿನ ಮಧ್ಯದಲ್ಲಿ ಹರಿಯುವ ನೈಲ್ ನದಿ ಅದರ ನಾಗರಿಕತೆಯ ಜೀವಾಳ. ಈ ನದಿಯು ಪ್ರತಿವರ್ಷವೂ ನಿಯಮಿತವಾಗಿ ತರುವ ಮೆಕ್ಕಲು ಮಣ್ಣಿನಿಂದ ಕೃಷಿ ಸಮೃದ್ಧವಾಯಿತು. ಕೃಷಿಯೊಂದಿಗೆ ಇಲ್ಲಿನ ನಾಗರಿಕತೆ ಹಂತಹಂತವಾಗಿ ಬೆಳವಣಿಗೆಯನ್ನು ಸಾಧಿಸಿತು. ಇತಿಹಾಸದ ಪಿತಾಮಹ ಹೆರಡೋಟಸ್ ಹೇಳುವಂತೆ ಈಜಿಪ್ಟ್ ನಾಗರಿಕತೆ ನೈಲ್ ನದಿಯ ಕೊಡುಗೆ.

ಈಜಿಪ್ಟಿನ ನಾಗರಿಕತೆಯ ಇತಿಹಾಸವನ್ನು ಸಾಮಾನ್ಯವಾಗಿ ಆರು ಕಾಲಗಳಲ್ಲಿ ವಿಂಗಡಿಸಬಹುದು. ೧. ಆರಂಭಿಕ ಯುಗ, ೨. ಪುರಾತನ ಅರಸೊತ್ತಿಗೆಯ ಯುಗ, ೩. ಮೊದಲ ಮಧ್ಯಂತರ ಯುಗ, ೪. ಮಧ್ಯಮ ಅರಸೊತ್ತಿಗೆಯ ಯುಗ, ೫. ಎರಡನೆಯ

ಮಧ್ಯಂತರ ಯುಗ, ೬. ನೂತನ ಅರಸೊತ್ತಿಗೆಯ ಯುಗ. ಆರಂಭಿಕ ಯುಗ ಪ್ರಾರಂಭವಾಗುವ ಮೊದಲೇ ಈಜಿಪ್ಟರು ನಾಗರಿಕತೆಯ ನಿರ್ಮಾಣಕ್ಕೆ ಪ್ರಯತ್ನಗಳನ್ನು ಕೈಗೊಂಡಿದ್ದರು. ನೀರಾವರಿ ಮತ್ತು ನಾಲೆ ವ್ಯವಸ್ಥೆ ನಿರೂಪಣೆಯಲ್ಲಿ ನಿರತರಾಗಿದ್ದರು. ಇಲ್ಲಿನ ಸಾಧನೋಪಕರಣಗಳ ಬದಲು ತಾಮ್ರದಿಂದ ಮಾಡಿದ ಉಪಕರಣಗಳನ್ನು ಪ್ರಯೋಗ ಮಾಡಲು ಕಲಿತಿದ್ದರು.

ಈಜಿಪ್ಟಿನ ಇತಿಹಾಸದಲ್ಲಿ ಎರಡು ಮಹತ್ತರವಾದ ಸಾಧನೆಗಳನ್ನು ಕ್ರಿ.ಪೂ.೩೧೦೦ರ ವೇಳೆಗೆ ರೂಪಿಸಲಾಯಿತು. ಒಂದು-ಈಜಿಪ್ಟನ್ನು ಒಂದುಗೂಡಿಸಿದ್ದು, ಎರಡು- ಬರವಣಿಗೆಯನ್ನು ಕಲಿತಿದ್ದು. ಮೊದಲಿಗೆ ಮೇಲಣ ಈಜಿಪ್ಟ್(ದಕ್ಷಿಣ) ಮತ್ತು ಕೆಳಗಣ ಈಜಿಪ್ಟ್ (ಉತ್ತರ) ಪ್ರಾಂತ್ಯಗಳಲ್ಲಿ ಪ್ರತ್ಯೇಕ ಆಳ್ವಿಕೆಗಳಿದ್ದವು. ನೈಲ್ ನದಿಯ ಉದ್ದಕ್ಕೂ ಏಕೀಕೃತ ನೀರಾವರಿ ಯೋಜನೆಗಳನ್ನು ಜಾರಿಗೆ ತರಲು ಹಾಗೂ ನಾಡಿನ ಸಮಗ್ರ ಅಭಿವೃದ್ಧಿಗೆ ಒಂದೇ ಆಡಳಿತ ವ್ಯವಸ್ಥೆ ಅಗತ್ಯವಾಗಿತ್ತು. ಸಾಂಪ್ರದಾಯಿಕ ನಂಬಿಕೆಯಂತೆ ಈ ರಾಜ್ಯಗಳನ್ನು ಒಂದುಗೂಡಿಸಿದವನು(ಗ್ರೀಕರು ಹೇಳುವಂತೆ) ಮೀನ್ಸ್ ಅಥವಾ (ಈಜಿಪ್ಟರು ಹೇಳುವಂತೆ) ನಾರ್ಮರ್. ಆದರೆ ಈ ಪ್ರಗತಿಯು ಹಲವಾರು ತಲೆಮಾರುಗಳ ಸಂಯುಕ್ತ ಸಾಧನೆಯ ಫಲ-ಎನ್ನುವುದು ಆಧುನಿಕ ಇತಿಹಾಸಕಾರರ ಅಭಿಪ್ರಾಯ. ಅದೇನೇ ಇರಲಿ, ಈಜಿಪ್ಟಿನ ಮೊದಲ ರಾಜವಂಶದ ಅರಸರ ಕಾಲದ್ದು ಈಜಿಪ್ಟ್ ಒಂದುಗೂಡಿತು. ಇದೇ ವೇಳೆಗೆ ಬರವಣಿಗೆಯನ್ನು ಕಂಡುಹಿಡಿಯಲಾಯಿತು. ಇದು ಕಾಕತಾಳೀಯವೆನಿಸಿದರೂ ಹೊಸ ಸರ್ಕಾರದ ಲೆಕ್ಕಪತ್ರಗಳನ್ನು ಇಡಲು ಅಗತ್ಯವೂ ಆಗಿತ್ತು.

ಏಕೀಕೃತ ಈಜಿಪ್ಟಿನ ಮೊದಲ ಎರಡು ರಾಜವಂಶಗಳ ಆಳ್ವಿಕೆ ಕ್ರಿ.ಪೂ.೨೭೭೦ರಲ್ಲಿ ಕೊನೆಗೊಂಡು ಮೂರನೇ ರಾಜವಂಶ ಅಧಿಕಾರಕ್ಕೆ ಬಂದಿತು. ಜ್ಯೂಸರ್ ಅದರ ಮೊದಲ ಅರಸ. ಪುರಾತನ ಅರಸೊತ್ತಿಗೆಯ ಯುಗವನ್ನು ಆರಂಭಿಸಿದ ಜ್ಯೂಸರ್‌ನು ನಿರಂಕುಶ ಪ್ರಭುತ್ವವನ್ನು ಜಾರಿಗೆ ತಂದ. ಅದರ ಸಂಕೇತವಾಗಿ ಮೊದಲ ಪಿರಮಿಡ್‌ನ ನಿರ್ಮಾಣವನ್ನು ಆರಂಭಿಸಿದ. ಈಜಿಪ್ಟಿನ ಅರಸರನ್ನು ಫೆರೋವರೆಂದು ಕರೆಯಲಾಗುತ್ತಿತ್ತು. ಈ ಕಾಲದಲ್ಲಿ ಫೆರೋವರ ಅಧಿಕಾರ ಅಪರಿಮಿತವಾಯಿತು. ಇವನನ್ನು ಸೂರ್ಯದೇವನ ಮಗನೆಂದು ತಿಳಿಯಲಾಯಿತು. ರಾಜವಂಶದ ಧರ್ಮಗಳಲ್ಲಿ ಹರಿಯುವ ನೆತ್ತರವನ್ನು ಅಪವಿತ್ರಗೊಳಿಸಲಿಚ್ಛಿಸದೆ, ಫೆರೋವನು ತನ್ನ ಸೋದರಿಯಲ್ಲಿ ಒಬ್ಬಳನ್ನು ಅಥವಾ ಹಲವರನ್ನು ಮದುವೆಯಾಗುತ್ತಿದ್ದನು. ಪುರೋಹಿತರು ಅರಸರ ಅಧೀನ ಅಧಿಕಾರಿಗಳಾಗಿರುತ್ತಿದ್ದರು. ಅರಸನೇ ಪ್ರಧಾನ ಪುರೋಹಿತನಾಗಿರುತ್ತಿದ್ದ. ಪುರಾತನ ಅರಸೊತ್ತಿಗೆಯ ಆಳ್ವಿಕೆಯು ಶಾಂತಿ ಅನಾಕ್ರಮಣಕಾರಿ ನೀತಿಗಳಿಂದ ಕೂಡಿತ್ತು. ಈ ಸೃಷ್ಟಿಯಿಂದ ಈ ಕಾಲದ ಆಡಳಿತ ವ್ಯವಸ್ಥೆ ಉನ್ನತವಾದುದೇ. ಫೆರೋವನು ತನ್ನದೇ ಆದ ಸೈನ್ಯ ಅಥವಾ ಸೈನ್ಯಿಕ ವ್ಯವಸ್ಥೆಯನ್ನು ಹೊಂದಿರಲಿಲ್ಲ. ಪ್ರತಿಯೊಂದು ಸ್ಥಳೀಯ ಆಡಳಿತ ಘಟಕವು ಸೈನ್ಯವನ್ನು ಹೊಂದಿತ್ತು. ಸ್ಥಳೀಯ ಆಡಳಿತಾಧಿಕಾರಿಗಳು ಸೇನಾಧಿಕಾರಿಗಳೇ ಆಗಿದ್ದರು. ಸಾರ್ವಜನಿಕ ಕೆಲಸ

ನಿರ್ವಹಣೆಗಾಗಲಿ ಅಥವಾ ಹೊರಗಿನ ದಾಳಿಯ ಕಾಲದಲ್ಲಾಗಲಿ ಈ ಸೇನೆಗಳು ಫೆರೋವನ ನೆರವಿಗೆ ಧಾವಿಸುತ್ತಿದ್ದವು. ಅವರಲ್ಲೊಬ್ಬ ಅಧಿಕಾರಿ ಸಮಗ್ರ ಸೇನೆಯ ನೇತಾರನಾಗುತ್ತಿದ್ದ. ಸರ್ಕಾರಕ್ಕೆ ತನ್ನದೇ ಆದ ರಾಷ್ಟ್ರೀಯ ಸೇನೆ ಎಂಬುದಿರಲಿಲ್ಲ. ಇದಕ್ಕೆ ನೈಸರ್ಗಿಕ ಪರಿಸರವೇ ಕಾರಣವಿರಬೇಕು. ಪೂರ್ವ ಮತ್ತು ಉತ್ತರದಲ್ಲಿ ಕಡಲು, ಪಶ್ಚಿಮದಲ್ಲಿ ದುರ್ಗಮವಾದ ವಿಶಾಲವಾದ ಮರುಳುಗಾಡು ನಾಡನ್ನು ಸುತ್ತುವರೆದು ಅಂತಹ ರಕ್ಷಣೆಯನ್ನು ಒದಗಿಸಿದ್ದವು. ನಾಡಿನ ಬತ್ತದ ಫಲವತ್ತತೆ, ಉತ್ಪಾದನೆ ಶೋಷಣೆಯಿಂದ ನಡೆಯದೆ ಪರಸ್ಪರ ಸಹಕಾರದಿಂದ ಅವಲಂಬಿತವಾದದ್ದು ಕಾರಣವಿರಬೇಕು. ಇದರಿಂದ ರಾಷ್ಟ್ರರಕ್ಷಣೆಯ ಬಗ್ಗೆ ನಿರ್ಲಿಪ್ತತೆ ಬೆಳೆಯಿತು.

ಪುರಾತನ ಅರಸೊತ್ತಿಗೆಯ ಹಲವು ಶತಕಗಳು ಸೌಹಾರ್ದತೆ ಮತ್ತು ಸಮೃದ್ಧತೆಯಿಂದ ಕೂಡಿತ್ತು. ಕ್ರಿ.ಪೂ.೨೨೦೦ರ ವೇಳೆಗೆ ಆರನೇ ರಾಜವಂಶರೊಂದಿಗೆ ಇದು ಕೊನೆಗೊಂಡಿತು. ಇದಕ್ಕೆ ಕಾರಣಗಳು ಹಲವಾರು. ಅಪಾರ ಹಣ ವೆಚ್ಚವಾಗುವ ಪಿರಮಿಡ್‌ನಂತಹ ಬೃಹತ್ ಯೋಜನೆಯ ನಿರ್ಮಿತಿಯಲ್ಲಿ ತೊಡಗಿದರು. ಇದರಿಂದ ಸರ್ಕಾರದ ಬೊಕ್ಕಸ ಬರಿದಾಯಿತು. ನೈಸರ್ಗಿಕ ವಿಕೋಪ ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಿತು. ಹವಾಮಾನದ ವೈಪರೀತ್ಯದಿಂದಾಗಿ ಕೃಷಿ ಬೆಳೆ ನಿರಂತರವಾಗಿ ವಿಫಲವಾಯಿತು. ಈ ನಡುವೆ ಪ್ರಾಂತೀಯ ಉನ್ನತಾಧಿಕಾರಿಗಳು ಪ್ರಬಲರಾದರು. ಕೇಂದ್ರೀಯ ಆಡಳಿತ ವ್ಯವಸ್ಥೆ ದುರ್ಬಲವಾಯಿತು. ಈ ಕಾಲದಲ್ಲೇ ಮೊದಲ ಮಧ್ಯಾಂತರ ಯುಗ ಪ್ರಾರಂಭವಾಯಿತು. ಎಲ್ಲೆಲ್ಲೂ ಅರಾಜಕತೆ ಹಬ್ಬಿತು. ಪ್ರಾಂತೀಯ ಸರದಾರರು ತಮ್ಮದೇ ಆದ ರಾಜ್ಯಗಳನ್ನು ಸ್ಥಾಪಿಸಿ ಪರಸ್ಪರ ಕಿತ್ತಾಟದಲ್ಲಿ ತೊಡಗಿದ್ದುಂಟು. ಆಂತರಿಕ ದರೋಡೆಕೋರರ ದಾಳಿಗಳು, ಮರುಗಾಡಿನ ಬುಡಕಟ್ಟು ಜನಾಂಗದವರ ಆಕ್ರಮಣಗಳು ಹದಗೆಟ್ಟ ರಾಜಕೀಯ ಪರಿಸ್ಥಿತಿಯನ್ನು ಮತ್ತಷ್ಟು ಅತಂತ್ರಗೊಳಿಸಿದವು. ಕ್ರಿ.ಪೂ.೨೦೫೦ರ ವೇಳೆಗೆ ಅಧಿಕಾರಕ್ಕೆ ಬಂದ ಹನ್ನೊಂದನೇ ರಾಜವಂಶ ಈ ಅರಾಜಕತೆಯನ್ನು ಕೊನೆಗೊಳಿಸಿತು. ಇದನ್ನೇ ಈಜಿಪ್ಟಿನ ಇತಿಹಾಸದಲ್ಲಿ 'ಮಧ್ಯಮ ಅರಸೊತ್ತಿಗೆಯ ಯುಗ' ಎಂದು ಕರೆಯಲಾಗುತ್ತದೆ.

ಮಧ್ಯಮ ಅರಸೊತ್ತಿಗೆಯ ಕಾಲಾವಧಿಯಲ್ಲಿ ಸರ್ಕಾರವು ಪುರಾತನ ಅರಸೊತ್ತಿಗೆಯ ಯುಗಕ್ಕಿಂತಲೂ ಹೆಚ್ಚಿನ ಬದ್ಧತೆಯನ್ನು ಹೊಂದಿತ್ತು. ಪ್ರಾಂತೀಯ ಸರ್ಕಾರದ ಉಪಟಳವನ್ನು ಎದುರಿಸುವುದು ಹನ್ನೊಂದನೇ ರಾಜವಂಶಕ್ಕೆ ಕಷ್ಟವೇ ಆಯಿತು. ಕ್ರಿ.ಪೂ.೧೭೮೬ರ ಅವಧಿಯಲ್ಲಿ ಆಳಿದ ಹನ್ನೆರಡನೇ ರಾಜವಂಶ ಮಧ್ಯಮ ವರ್ಗದವರ ನೆರವು ಸಹಕಾರಗಳಿಂದ ಸಮಸ್ಯೆಗಳನ್ನು ಎದುರಿಸಿ, ಸಮರ್ಥವಾದ ಆಡಳಿತವನ್ನು ನೀಡಿತು. ಈ ಮಧ್ಯಮ ವರ್ಗದಲ್ಲಿ ಅಧಿಕಾರಿಗಳು, ವರ್ತಕರು, ಕಲಾಕಾರರು ಮತ್ತು ಕುಶಲಕರ್ಮಿಗಳು ಹಾಗೂ ರೈತರು ಸೇರ್ಪಡೆಯಾಗಿದ್ದರು. ಇದರಿಂದ ಸರಕಾರದ ಪ್ರಾಬಲ್ಯ ತಗ್ಗಿ, ನಾಡಿನ ಅಗಾಧ ಅಭಿವೃದ್ಧಿಗೆ ಚಾಲನೆ ದೊರೆಯಿತು. ಸಾಮಾಜಿಕ ನ್ಯಾಯವಿತರಣೆ ಮತ್ತು ಬೌದ್ಧಿಕ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಲಾಯಿತು. ಸಾರ್ವತ್ರಿಕವಾಗಿ ಉಪಯೋಗವಿಲ್ಲದ

ಪಿರಮಿಡ್ಡುಗಳ ನಿರ್ಮಾಣವನ್ನು ಕೈಬಿಟ್ಟು ಜನಸಮೂಹಕ್ಕೆ ಅನುಕೂಲವಾದ ನೀರಾವರಿ ಮತ್ತು ಕಾಲುವೆಗಳ ನಿರ್ಮಾಣ ಕಾರ್ಯವನ್ನೂ ಕೈಗೆತ್ತಿಕೊಳ್ಳಲಾಯಿತು. ಧಾರ್ಮಿಕವಾಗಿ ಜನರಿಗೆ ಸ್ವಾತಂತ್ರ್ಯವನ್ನು ನೀಡಲಾಯಿತು. ಹಣದ ಅಗತ್ಯಕ್ಕೆ ಒಳಗಾಗಿದ್ದ ಧಾರ್ಮಿಕ ವಿಧಿ ಆಚರಣೆಗಳನ್ನು ಕೈಬಿಟ್ಟು ಧರ್ಮವೆಂದರೆ ಸನ್ನಡತೆಯ ಸನ್ಮಾರ್ಗವೆಂಬ ಭಾವನೆಯನ್ನು ಎಲ್ಲೆಡೆಯೂ ರೂಪಿಸಲಾಯಿತು. ಈಗ ಎಲ್ಲ ಕಾರಣಗಳಿಂದ ಹನ್ನೆರಡನೇ ರಾಜವಂಶದ ಆಳ್ವಿಕೆಯನ್ನು ಈಜಿಪ್ಟಿನ ಚಿನ್ನದ ಕಾಲವೆಂದು ಕರೆಯಬಹುದು.

ಹನ್ನೆರಡನೆಯ ರಾಜವಂಶದ ಆಳ್ವಿಕೆಯ ನಂತರ ಈಜಿಪ್ಟಿನಲ್ಲಿ ಎರಡನೇ ಮಧ್ಯಾಂತರ ಯುಗ ಪ್ರಾರಂಭವಾಯಿತು. ಇದು ಆಂತರಿಕ ಗುದ್ದಾಟ ಮತ್ತು ವಿದೇಶಿಯರ ದಾಳಿಗಳ ಕಾಲ. ಈ ಪ್ರಕ್ಷುಬ್ಧ ಪರಿಸ್ಥಿತಿ ಕ್ರಿ.ಪೂ.೧೭೮೬ರಿಂದ ಕ್ರಿ.ಪೂ.೧೫೬೦ರವರೆಗೆ ಎರಡು ಶತಕಗಳ ಕಾಲ ಮುಂದುವರೆಯಿತು. ಇದರ ಬಗ್ಗೆ ದೊರೆಯುವ ಬರವಣಿಗೆಗಳು ಅತ್ಯಲ್ಪ. ಇವು ಪ್ರತಿಗಾಮಿ ಸರದಾರರ ದಂಗೆಗಳೇ ಕಾರಣವೆನ್ನುವುದನ್ನು ತಿಳಿಸುತ್ತವೆ. ಫೆರೋವರು ತಮಗಿದ್ದ ಅಗಾಧ ಅಧಿಕಾರದಿಂದ ವಂಚಿತರಾದರು. ಹನ್ನೆರಡನೇ ರಾಜವಂಶದ ಸಾಮಾಜಿಕ ಹಾಗೂ ಜನಹಿತ ಸಾಧನೆಗಳು ಮಣ್ಣುಪಾಲಾದವು. ಕ್ರಿ.ಪೂ.೧೭೫೦ರ ಸುಮಾರಿಗೆ ಹೈಕ್ಸೋಸರ ದಾಳಿಗಳಿಗೆ ಈಜಿಪ್ಟ್ ಗುರಿಯಾಯಿತು. ಹೈಕ್ಸೋಸ್ ಎಂದರೆ ವಿದೇಶಿ ಅರಸನೆಂದರ್ಥ. ಇವರು ಏಷ್ಯಾ ಮೈನರ್ ಪ್ರಾಂತ್ಯದ ಮಿಶ್ರಿತ ಬುಡಕಟ್ಟು ಜನಾಂಗದವರು. ಇವರ ಸೇನೆಯಲ್ಲಿ ಕುದುರೆಗಳು ಮತ್ತು ರಥಗಳಿದ್ದುದರಿಂದ ಇವರು ಸುಲಭವಾಗಿ ಜಯ ಗಳಿಸಿ ಈಜಿಪ್ಟನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಇವರ ಆಳ್ವಿಕೆ ಈಜಿಪ್ಟಿನ ಇತಿಹಾಸದ ಮೇಲೆ ಅಪಾರವಾದ ಪ್ರಭಾವವನ್ನು ಬೀರಿದ್ದುಂಟು. ಇವರ ಸಂಪರ್ಕದಿಂದ ಈಜಿಪ್ಟಿನವರಿಗೆ ಹೊಸ ಯುದ್ಧತಂತ್ರಗಳ ಪರಿಚಯವಾಯಿತು.

ಕ್ರಿ.ಪೂ.ಹದಿನೇಳನೆಯ ಶತಮಾನದ ಅಂಚಿನಲ್ಲಿ ಮೇಲಣ ಈಜಿಪ್ಟ್(ದಕ್ಷಿಣ) ಜನರು ಹೈಕ್ಸೋಸರ ವಿರುದ್ಧ ಬಂಡಾಯವೆದ್ದರು. ಇದು ತಕ್ಷಣವೇ ಈಜಿಪ್ಟಿನ ಉದ್ದಗಲಕ್ಕೂ ಹರಡಿ, ದಾಳಿಕೋರರ ವಿರುದ್ಧ ಜನ ಒಂದಾದರು. ಹೋರಾಟ ಮುಂದುವರೆದು ನಾಡು ದಾಳಿಕೋರರಿಂದ ಮುಕ್ತವಾಯಿತು. ಈ ಜಯದ ನಾಯಕನಾದ ಅಹ್ಮೋಸನು ಹದಿನೆಂಟನೇ ರಾಜವಂಶವನ್ನು ಸ್ಥಾಪಿಸಿದ. ಇವನ ಆಳ್ವಿಕೆಯಲ್ಲಿ ಪ್ರಬಲವಾದ ಕೇಂದ್ರೀಯ ಆಡಳಿತ ವ್ಯವಸ್ಥೆಯನ್ನು ಹೈಕ್ಸೋಸರ ವಿರುದ್ಧ ಹೋರಾಡಿದ್ದರಿಂದ ಸರದಾರರು ಹಾಗೂ ಸ್ಥಳೀಯರ ಮುಖಾಂತರ ಪ್ರಾಬಲ್ಯ ಕಣ್ಮರೆಯಾಯಿತು.

ಅಹ್ಮೋಸ್‌ನ-ಆಗಮನದಿಂದ ಆರಂಭವಾದ ಕಾಲವನ್ನು ಈಜಿಪ್ಟಿನ ಸಾಮ್ರಾಜ್ಯದ 'ನೂತನ ಅರಸೊತ್ತಿಗೆಯ ಯುಗ' ಎಂದು ಕರೆಯುತ್ತೇವೆ. ಇದು ಕ್ರಿ.ಪೂ.೧೫೬೦ರಲ್ಲಿ ಪ್ರಾರಂಭವಾಗಿ ಕ್ರಿ.ಪೂ.೧೯೮೭ರಲ್ಲಿ ಕೊನೆಗೊಂಡಿತು. ಈ ಕಾಲದಲ್ಲಿ ಹದಿನೆಂಟು, ಹತ್ತೊಂಬತ್ತು ಮತ್ತು ಇಪ್ಪತ್ತನೇ ರಾಜವಂಶಗಳು ಆಳಿದವು. ಈ ಸಮಯದಲ್ಲಿ ಸೌಹಾರ್ದ ಆಡಳಿತ ನೀತಿಯನ್ನು ಕಡೆಗಣಿಸಿ, ಆಕ್ರಮಣಶೀಲ ಹಾಗೂ ಸಾಮ್ರಾಜ್ಯಶಾಹಿ ನೀತಿ ರಾಷ್ಟ್ರದ ಧ್ಯೇಯವಾಯಿತು. ಸೈನ್ಯವನ್ನು ನೂತನವಾಗಿ ಸಂಘಟಿಸಲಾಯಿತು. ಹೈಕ್ಸೋಸ್‌ರನ್ನು

ಹೊರಹಾಕಿದ ವಿಜಯದ ಗುಂಗಿನಲ್ಲೇ ಈಜಿಪ್ತರು ಮತ್ತಷ್ಟು ಹೋರಾಟ ನಡೆಸಿ ಗೆಲುವು ಪಡೆಯಲು ಮುಂದಾದರು. ಅಹ್ಮೋಲನ ಉತ್ತರಾಧಿಕಾರಿಗಳು ಪೆಲೆಸ್ತೈನ್ ಮೇಲೆ ದಾಳಿ ನಡೆಸಿ ಸಿರಿಯವನ್ನು ಗೆದ್ದುಕೊಂಡರು. ಹೊಸ ಫರೋವರು ದಾಳಿ ನಡೆಸಿದ ರಾಜ್ಯಗಳ ಪ್ರತಿರೋಧವನ್ನು ಭೀಕರವಾಗಿ ದಮನ ಮಾಡಿ, ರಾಜ್ಯವನ್ನು ನೈಲ್ ನದಿಯಿಂದ ಯೂಫ್ರಟಿಸ್ ನದಿಯವರೆಗೂ ವಿಸ್ತರಿಸಿದರು. ಇದರಿಂದ ಗೆದ್ದ ಪ್ರದೇಶಗಳ ಜನರ ಪ್ರೀತಿಯನ್ನು ಗಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸಿರಿಯನ್ನರೂ ಕೂಡ ನಿರಂತರವಾಗಿ ದಂಗೆಯೆದ್ದರು. ಗೆದ್ದ ಪ್ರದೇಶಗಳ ಪ್ರತಿರೋಧವನ್ನು ಅಡಗಿಸುತ್ತ ಫರೋವರು ಆಳಿದರೂ, ಅಂತಿಮ ದುರಂತವನ್ನು ಅವರು ತಡೆಯಲಾಗಲಿಲ್ಲ. ಅಕ್ರಮಿಸಿದ ನಾಡುಗಳ ಸಂಪತ್ತು ಈಜಿಪ್ಟಿಗೆ ಅವ್ಯಾಹತವಾಗಿ ಹರಿದು ಬಂದಿದ್ದುಂಟು. ಇದರಿಂದ ಭ್ರಷ್ಟತೆ ಹೆಚ್ಚಿತು ಹಾಗೂ ಭೋಗ ಜೀವನಕ್ಕೆ ಜನತೆ ಜೋತು ಬಿದ್ದರು. ರಾಷ್ಟ್ರದ ಅಂತಃಸತ್ವದಲ್ಲಿ ಟಾಳಿಯುಂಟಾಯಿತು. ಅಧೀನ ರಾಜ್ಯಗಳ ನಿರಂತರ ದಂಗೆಗಳಿಂದ ರಾಷ್ಟ್ರದ ಶಕ್ತಿ ಉಡುಗಿ ಹೋಯಿತು. ಕ್ರಿ.ಪೂ.ಹನ್ನೆರಡನೇ ಶತಮಾನದ ಸುಮಾರಿಗೆ ಗೆದ್ದ ರಾಜ್ಯಗಳು ಶಾಶ್ವತವಾಗಿ ಕೈಬಿಟ್ಟು ಹೋದುವು.

ನೂತನ ಅರಸೊತ್ತಿಗೆಯ ಕಾಲದ ಸರ್ಕಾರವು ಪುರಾತನ ರಾಜ್ಯಾಡಳಿತ ವ್ಯವಸ್ಥೆಯನ್ನು ಎಲ್ಲ ರೀತಿಯಲ್ಲೂ ಹೋಲುತ್ತಿತ್ತು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಹೊಸ ಸರ್ಕಾರವು ಹೆಚ್ಚಾಗಿ ನಿರಂಕುಶ ಮನೋಭಾವವನ್ನು ಮೈಗೂಡಿಸಿಕೊಂಡಿತ್ತು. ಸೈನ್ಯಶಕ್ತಿಯು ಫರೋವರ ಆಡಳಿತದ ಮೂಲ ಸೆಲೆಯಾಗಿತ್ತು. ಈಜಿಪ್ಟಿನ ಜನರನ್ನು ಭಯಗೊಳಿಸಿ, ಬಲಾತ್ಕಾರದ ಬೆಂಬಲ ಪಡೆಯಲು ಫರೋವರ ಪ್ರಬಲ ಪಡೆ ಸದಾ ಸನ್ನದ್ಧಾಗಿತ್ತು. ಬಂಡಾಯದ ಪ್ರವೃತ್ತಿಯ ಬಹುತೇಕ ಪ್ರಾಂತೀಯ ಸರದಾರರು ಅರಸನ ವಿಧೇಯ ಅಸ್ಥಾನಿಕರಾದರು. ಹೀಗೆ ಫರೋವನೇ ಸರ್ವೋಚ್ಚ ವ್ಯಕ್ತಿಯಾದ.

ಕಟ್ಟಕಡೆಯ ಫರೋವರಲ್ಲಿ ಪ್ರಸಿದ್ಧನಾದವನು ಮೂರನೇ ರಾಮ್‌ಸೇಸನು (ಕ್ರಿ.ಪೂ.೧೧೮೨-೧೧೫೧). ಅವನ ನಂತರ ಅನೇಕ ಅರಸರು ಅವನ ಹೆಸರಿನಲ್ಲೇ ಬಂದರೂ ಅವನ ದಕ್ಷತೆಯನ್ನು ಮೈಗೂಡಿಸಿಕೊಂಡಿರಲಿಲ್ಲ. ಕ್ರಿ.ಪೂ.ಹನ್ನೆರಡನೇ ಶತಮಾನದ ವೇಳೆಗೆ ಈಜಿಪ್ಟ್ ಅನಾಗರಿಕ ಬುಡಕಟ್ಟು ಜನರ ದಾಳಿಗೆ ಗುರಿಯಾಯಿತು. ಸಾಮಾಜಿಕವಾಗಿ ಪತನದ ಹಾದಿನ್ನಿಡಿಯಿತು. ಇದೇ ವೇಳೆಗೆ ಈಜಿಪ್ತರು ತಮ್ಮ ಸೃಜನಾತ್ಮಕ ಪ್ರತಿಭೆಯನ್ನು ಕಳೆದುಕೊಂಡಿದ್ದರು. ಅಮರತ್ವವನ್ನು ಗಳಿಸಲು ಸಮಾಜದ ಎಲ್ಲ ವರ್ಗಗಳ ಜನತೆ ವಾಮಾಚಾರದ ಮಾರ್ಗವನ್ನು ಹಿಡಿದಿದ್ದುಂಟು. ಪುರೋಹಿತ ವರ್ಗದ ಅಧಿಕಾರ ಅಧಿಕವಾದಂತೆ, ರಾಷ್ಟ್ರದ ಪತನ ಸನ್ನಿಹಿತವಾಯಿತು. ಪುರೋಹಿತವರ್ಗವು ಸಮಾಜದಲ್ಲಿ ವಿಶೇಷಾಧಿಕಾರವನ್ನು ಪಡೆದು, ಫರೋವರ ಮೇಲೂ ತಮ್ಮ ಔನ್ನತ್ಯವನ್ನು ಛಾಪಿಸತೊಡಗಿದರು.

ಕ್ರಿ.ಪೂ.ಹತ್ತನೆಯ ಶತಮಾನದ ಮಧ್ಯಭಾಗದಿಂದ ಎಂಟನೇ ಶತಮಾನದ ಕೊನೆಯವರೆಗೂ ಲಿಬಿಯಾದ ಅನಾಗರಿಕ ರಾಜವಂಶವು ಫರೋವರ ಸಿಂಹಾಸನವನ್ನು ಆಕ್ರಮಿಸಿತು. ಲಿಬಿಯನ್ನರ ನಂತರ ಪಶ್ಚಿಮದ ಮರುಳುಗಾಡಿನ ನುಬಿಯ(ಇಥಿಯೋಪಿಯನ್ನರು)

ಮೇಲಣ ಈಜಿಪ್ಟನ್ನು ಆಕ್ರಮಿಸಿದರು. ಕ್ರಿ.ಪೂ.೬೭೦ರಲ್ಲಿ ಈಜಿಪ್ಟ್ ಅಸ್ಸೀರಿಯನ್ನರ ಆಕ್ರಮಣಕ್ಕೆ ಗುರಿಯಾದರೂ, ಅವರ ಆಳ್ವಿಕೆ ಎಂಟೇ ವರ್ಷಗಳಲ್ಲಿ ಕೊನೆಗೊಂಡಿತು. ಅನಂತರ ರಾಷ್ಟ್ರ ಸ್ವಾತಂತ್ರವನ್ನು ಪಡೆದು ಪ್ರತಿಭಾಪೂರ್ಣ, ಸಾಂಸ್ಕೃತಿಕ ಪುನರುಜ್ಜೀವನವನ್ನು ಆರಂಭಿಸಿದರೂ, ಅದು ಕ್ಷಣಿಕವಾಗಿತ್ತು. ಕ್ರಿ.ಪೂ.೫೨೫ರಲ್ಲಿ ಈಜಿಪ್ಟ್ ಪರ್ಶಿಯನ್ನರ ದಾಳಿಗೆ ಗುರಿಯಾಯಿತು. ಈಜಿಪ್ಟಿನ ಮಹತ್ತರವಾದ ನಾಗರಿಕತೆ ಮತ್ತೆಂದೂ ಚೇತರಿಸಿಕೊಳ್ಳಲೇ ಇಲ್ಲ. ಇತಿಹಾಸದ ಕಾಲಗರ್ಭದಲ್ಲಿ ಅದರ ವೈಭವ ಅಡಗಿ ಹೋಯಿತು.

## ಧರ್ಮ

ಧರ್ಮ ಪ್ರಾಚೀನ ಈಜಿಪ್ಟಿನ ಬದುಕಿನ, ಎಲ್ಲ ಸ್ತರಗಳ ಮೇಲೂ ಮಹತ್ತರವಾದ ಪಾತ್ರವನ್ನು ವಹಿಸಿತ್ತು. ಕಲೆ ಧರ್ಮದ ಮಾಧ್ಯಮವಾಗಿ ಅಭಿವ್ಯಕ್ತಿ ಪಡೆದುಕೊಂಡಿತ್ತು. ಧಾರ್ಮಿಕ ಬೋಧನೆಗಳಿಂದ ಸಾಹಿತ್ಯ ಮತ್ತು ದರ್ಶನಶಾಸ್ತ್ರಗಳು ಸಮೃದ್ಧವಾದವು. ಪುರಾತನ ಅರಸೊತ್ತಿಗೆಯ ಕಾಲದಲ್ಲಿ ಸರ್ಕಾರವು ದೇವರ ಪ್ರತಿನಿಧಿ ಎನಿಸಿದ ಪುರೋಹಿತನ ಪಾತ್ರವನ್ನು ವಹಿಸಿತ್ತು. ಮುಂದಿನ ಫೆರೋವರು ದೇವರ ಹೆಸರಿನಲ್ಲಿ ಆಳಿದರು. ನಾಡಿನ ಅಪಾರ ಸಂಪತ್ತು ಭವ್ಯವಾದ ಸಮಾಧಿಮಂದಿರಗಳ ನಿರ್ಮಾಣಕ್ಕೆ ಹಾಗೂ ಪುರೋಹಿತರ ಬಲವರ್ಧನೆಗೆ ಅವಕಾಶಗಳನ್ನು ಕಲ್ಪಿಸಿದವು. ಈಜಿಪ್ಟರ ಧರ್ಮವು ಬಹುದೇವತಾರಾಧನೆಯಿಂದ ಏಕದೇವತಾರಾಧನೆಯ ವಿವಿಧ ಹಂತಗಳಲ್ಲಿ ರೂಪಾಂತರ ಹೊಂದುತ್ತು ಹೋಯಿತು. ಪ್ರತಿಯೊಂದು ಊರು ಅಥವಾ ಜಿಲ್ಲೆ ತನ್ನದೇ ಆದ ಸ್ಥಳೀಯ ದೇವರನ್ನು ಹೊಂದಿತ್ತು. ಇವು ಆ ಊರಿನ ಪ್ರೇಕ್ಷಕರಾಗಿ ಇಲ್ಲವೇ ನಿಸರ್ಗದ ಪ್ರತಿನಿಧಿಯಾಗಿದ್ದವು. ಸಮಗ್ರ ಈಜಿಪ್ಟನ್ನು ಒಂದುಗೂಡಿಸಿದ್ದರಿಂದ ಬಹುದೇವತಾರಾಧನೆಯ ಬದಲು ಏಕದೇವತಾರಾಧನೆ ಜಾರಿಗೆ ಬಂದಿತು. ವ್ಯಾಪಕವಾಗಿ ಸೂರ್ಯಾರಾಧನೆಯೂ ಬಳಕೆಗೆ ಬಂದಿತು. ಸೂರ್ಯನನ್ನು 'ರಾ' ಎಂದು ಕರೆಯಲಾಗುತ್ತಿತ್ತು. ಮಧ್ಯಮ ಅರಸೊತ್ತಿಗೆಯ ಥೇಬ್ಸ್ ರಾಜವಂಶದ ಕಾಲದಲ್ಲಿ ಸೂರ್ಯಪೂಜೆ ಮತ್ತಷ್ಟು ಪ್ರಾಮುಖ್ಯ ಪಡೆದುಕೊಂಡಿತು. ಸೂರ್ಯದೇವ ಥೇಬ್ಸ್ ಪ್ರಮುಖ ದೇವರಾಗಿ ಅಮೋನ್ ಅಥವಾ ಅಮೋನ್ 'ರಾ' ಎಂಬ ಹೆಸರಿನಲ್ಲಿ ಪ್ರಸಿದ್ಧನಾದ. ನೈಲ್ ನದಿಯನ್ನು ಔಸಿರಿಸ್ ಹೆಸರಿನಲ್ಲಿ ಪೂಜಿಸಲಾಯಿತು. ಈ ಎರಡು ದೇವರು ವಿಶ್ವವನ್ನು ನಿಯಂತ್ರಿಸುತ್ತಿದ್ದಾರೆಂದು ಈಜಿಪ್ಟಿನ ಜನರು ತಿಳಿದಿದ್ದರು. ಇವರಲ್ಲದೆ ಇನ್ನೂ ಹಲವು ದೇವರಿದ್ದರೂ ಅವು ಕಿರಿಯ ಸ್ಥಾನವನ್ನು ಪಡೆದಿದ್ದವು. ಪುರಾತನ ಅರಸೊತ್ತಿಗೆಯ ಸೌರವ್ಯವಸ್ಥೆಯನ್ನು ಅದರಲ್ಲಿ ವಿಶೇಷವಾಗಿ ರಾನನ್ನು ಪೂಜಿಸುತ್ತಿದ್ದರು. ಇದರಿಂದ ಈಜಿಪ್ಟಿನ ಜನರಿಗೆ ಅಮರತ್ವ ಪ್ರಾಪ್ತವಾಗುವುದೆಂದು ಅವರ ನಂಬಿಕೆ. ಫೆರೋವ 'ರಾ'ನ ಪ್ರತಿನಿಧಿಯಾಗಿ ಈಜಿಪ್ಟನ್ನು ಆಳುತ್ತಿದ್ದ. 'ರಾ' ಈಜಿಪ್ಟನ್ನು ರಕ್ಷಿಸುವವನಲ್ಲದೆ, ಸನ್ನಡತೆ, ನ್ಯಾಯಪಾಲನೆ ಮತ್ತು ಸತ್ಯಾಚಾರವನ್ನು ನೋಡಿಕೊಳ್ಳುವ ದೇವರಾಗಿದ್ದು, ಜಗತ್ತಿನ ನೈತಿಕಮಟ್ಟವನ್ನು ನಿರೂಪಿಸುವವನೂ ಆಗಿದ್ದ. ಜನರಿಗೆ ಸುಖವನ್ನು ನೀಡುವವನೂ ಹೌದು, ಸನ್ಮಾರ್ಗ ಪ್ರೇಕ್ಷಕನೂ ಹೌದು.

ಓಸಿರಿಸ್ ದೇವತಾರಾಧನೆ ಆರಂಭದಲ್ಲಿ ನಿಸರ್ಗಧರ್ಮವಾಗಿ ತಲೆಯೆತ್ತಿತ್ತು. ಕೃಷಿಯ ಬೆಳವಣಿಗೆ ಹಾಗು ಬದುಕಿಗೆ ನೆರವಾಗುವ ನೈಲ್ ನದಿಯನ್ನು ಪೂಜಿಸುವ ವ್ಯವಸ್ಥೆಯೇ ಇದು. ಓಸಿರಿಸ್‌ನ ಬದುಕು ವಿಸ್ತೃತವಾದ ಕಥಾನಕವನ್ನು ಒಳಗೊಂಡಿದೆ. ಐತಿಹ್ಯದ ಪ್ರಕಾರ, ಅತಿ ಪೂರ್ವದಲ್ಲಿ ಓಸಿರಿಸ್ ದೇವನು ಜನಹಿತ ರಾಜನಾಗಿದ್ದು ಜನರಿಗೆ ಕೃಷಿ ಮಾಡುವುದನ್ನು, ಕಲಾವಸ್ತುಗಳನ್ನು ನಿರ್ಮಾಣ ಮಾಡುವುದನ್ನು ಕಲಿಸಿದ ಹಾಗೂ ಅವರಿಗೆ ಕಾನೂನು ಕಟ್ಟಳೆಗಳನ್ನು ನೀಡಿದ. ಕೆಲಕಾಲದ ನಂತರ ಅವನ ತಮ್ಮ ಕ್ರೂರಿಯಾದ ಸೆಟ್‌ನು ಅವನನ್ನು ಕೊಲೆ ಮಾಡಿ, ಅವನ ದೇಹವನ್ನು ಛಿದ್ರಛಿದ್ರಗೊಳಿಸಿದ. ಅವನ ಸೋದರಿಯೇ ಆಗಿದ್ದ ಅವನ ಹೆಂಡತಿ ಐಸಿಸ್‌ಳು ಛಿದ್ರವಾದ ತನ್ನ ಗಂಡನ ದೇಹದ ತುಣುಕುಗಳನ್ನು ಒಂದುಗೂಡಿಸಿದಾಗ ಪವಾಡ ಸದೃಶ ರೀತಿಯಲ್ಲಿ ಜೀವ ಮರು ಸ್ಥಾಪನೆಯಾಯಿತು. ದೇಹಧಾರಣೆ ಮಾಡಿದ ಓಸಿರಿಸ್‌ನು ರಾಜ್ಯವನ್ನು ತಮ್ಮನಿಂದ ಪಡೆದು ಪ್ರಜಾಹಿತ ಆಡಳಿತವನ್ನು ಮುಂದುವರಿಸಿದ. ಅನಂತರ ಮೇಲುಲೋಕಕ್ಕೆ ಹೋಗಿ ಗತಿಸಿದವರ ಪಾಪ ಪುಣ್ಯಗಳ ತುಲನೆ ಮಾಡುವ ನ್ಯಾಯದೇವತೆಯಾದ ಅನಂತರ ಹುಟ್ಟಿದ ಅವನ ಮಗ ಹೋರಸ್‌ನು ತನ್ನ ತಂದೆಯ ಸಾವಿಗೆ ಕಾರಣವಾದ ಸೆಟ್‌ನನ್ನು ಕೊಂದು ಹಗೆ ತೀರಿಸಿಕೊಂಡ. ಮೂಲತಃ ಈ ಕಥೆ ನಿಸರ್ಗದ ರಹಸ್ಯವನ್ನು ಒಳಗೊಂಡಂತೆ ಕಾಣಿಸಿದರೂ, ನೈಲ್ ನದಿಯ ಏರಿಳಿತಗಳನ್ನು ಸೂಚಿಸುತ್ತದೆ. ಓಸಿರಿಸ್‌ನ ಸಾವು ಮತ್ತು ಮರುಜೀವ ಧಾರಣೆ ನೈಲ್ ನದಿಯು ಚಳಿಗಾಲದಲ್ಲಿ ಸೊರಗುವುದನ್ನು, ವಸಂತಕಾಲದಲ್ಲಿ ಪ್ರವಾಹ ಪಡೆಯುದನ್ನು ಸಂಕೇತಿಸುತ್ತದೆ. ಅವನ ಸಾವು ಮತ್ತು ಪುನಶ್ಚೇತನ ಈಜಿಪ್ಟಿನ ಜನತೆಗೆ ವೈಯಕ್ತಿಕವಾಗಿ ಅಮರತ್ವ ಸಾರುವ ಸಂದೇಶ. ಸಾವನ್ನು ಗೆದ್ದ ಈ ದೇವನನ್ನು ಆರಾಧಿಸುವವರು ಶಾಶ್ವತವಾದ ಬದುಕನ್ನು ಪಡೆಯುವರೆನ್ನುವುದು ಜನರ ನಂಬಿಕೆ. ಅಂತಿಮವಾಗಿ ಹೋರಸ್‌ನು ಸೆಟ್‌ನನ್ನು ಜಯಿಸುವುದು ಕೆಡುಕಿನ ಮೇಲೆ ಒಳಿತು ಸಾಧಿಸಿದ ಗೆಲವು ಆಗಿದೆ.

ಈಜಿಪ್ಟಿನ ನಾಕ-ನರಕಗಳ ಭಾವನೆಗಳು ಪೂರ್ಣವಾಗಿ ಬೆಳವಣಿಗೆ ಆದದ್ದು ಮಧ್ಯಮ ಅರಸೊತ್ತಿಗೆಯ ಅನಂತರದ ಕಾಲದಲ್ಲಿ. ಈ ಕಾಲದಲ್ಲೇ ಬೌದ್ಧಿಕ ದೇಹವನ್ನು ಕಾಯ್ದಿಡುವ ಪರಿಪಾಟ ಹೆಚ್ಚಾಯಿತು. ಕಳೇಬರವನ್ನು ಮಮ್ಮಿಕೃತಗೊಳಿಸಲಾಯಿತು. ಇದಲ್ಲದೆ ಮಮ್ಮಿಗಳಿಗೆ ಬೇಕಾದ ಆಹಾರ ಮತ್ತು ವಸ್ತುಗಳಿಗಾಗಿ ಶ್ರೀಮಂತರು ಅಪಾರ ಹಣವನ್ನು ತೆತ್ತರು. ಈಜಿಪ್ಟಿನ ಜನರ ಧರ್ಮ ಪ್ರೌಢತೆ ಗಳಿಸಿದಂತೆ ಅನಂತರ ಬದುಕಿನ ಭಾವನೆಗಳು ಜಟಿಲವಾದವು. ಗತಿಸಿದವರು ಮೇಲುಲೋಕದಲ್ಲಿ ಓಸಿರಿಸ್‌ನ ಮುಂದೆ ಅನುಸಾರವಾಗಿ ಅವನು ಅವರ ಮರಣೋತ್ತರ ಬದುಕನ್ನು ನಿರ್ಧರಿಸುತ್ತಿದ್ದ. ಅನಂತರ ಅವರು ಸಂತೋಷವನ್ನೊ, ಭೋಗವನ್ನೊ, ನರಕವನ್ನೊ, ಪಡೆಯುವರೆನ್ನುವುದು ಜನರ ನಂಬಿಕೆಯಾಗಿತ್ತು. ದೇವರು ವಾಸಮಾಡುವ ಸ್ಥಳ ಅಮೊನ್ ಆಗಿತ್ತು. ಪುಣ್ಯಶಾಲಿಗಳು ಅಲ್ಲಿ ಓಸಿರಿಸ್‌ನ ಜೊತೆಯಲ್ಲಿ ಬದುಕಬಹುದಿತ್ತು.

ಈಜಿಪ್ಟಿನ ಸಾಮ್ರಾಜ್ಯ ಬೆಳೆದಂತೆ ಅವರ ಧಾರ್ಮಿಕ ಆಚಾರದಲ್ಲೂ ಮಾರ್ಪಾಡಾಯಿತು. ಇದರಲ್ಲಿ ನೈತಿಕ ಅಂಶ ಮರವೇ ಆಗಿ ಕೇವಲ ಅಂಧ ನಂಬಿಕೆ ಮತ್ತು ಮಾಟಮಂತ್ರಗಳು ಮೇಲ್ಮೈ ಆದವು. ಇದೇ ಕಾಲದಲ್ಲಿ ನಡೆದ ಹೈಕ್ಸೋಸರ ದಾಳಿಗಳು ಮತ್ತು ಅವರನ್ನು ಹೊರಹಾಕಲು ಈಜಿಪ್ಟಿನ ಜನರು ನಡೆಸಿದ ಪ್ರತಿ ಹೋರಾಟಗಳು ಕಾರಣ. ಈ ಬೆಳವಣಿಗೆಗಳಿಂದ ಇವರ ಬೌದ್ಧಿಕಶಕ್ತಿ ಕುಗ್ಗಿತ್ತು. ಪುರೋಹಿತರ ಅಧಿಕಾರ ಹೆಚ್ಚಿತು. ಅವರು ತಮ್ಮ ಉತ್ಕರ್ಷಣೆಯನ್ನು ಸಾಧಿಸುವುದಕ್ಕೆ ಜನರಲ್ಲಿ ಭಯವನ್ನು ಬಿತ್ತಿದರು ಹಾಗೂ ಶೋಷಣೆಯನ್ನು ಆರಂಭಿಸಿದರು. ಇವರು ಸತ್ತವರ ಜೀವವನ್ನು ಮಾಟ ಮಂತ್ರಗಳಿಂದ ರಕ್ಷಿಸಲು ಪ್ರಾರಂಭಿಸಿದರು. ಇದಕ್ಕಾಗಿ ಹಣದ ಶೋಷಣೆ ನಡೆಯಿತು. ಹಣ ಪಡೆದು ಸತ್ತವರನ್ನು ಸ್ವರ್ಗಕ್ಕೆ ಕಳುಹಿಸಲು ಪುರೋಹಿತರು ಮುಂದಾದರು. ಈ ವಿವರಣೆಗಳನ್ನು ಸಮಾಧಿ ಭವನದ ಪೆಪಿರಸ್‌ನ ಸುರುಳಿಗಳ ಮೇಲೆ ಬರೆಯಲಾಗಿದೆ. ಇದಕ್ಕೆ ಸಂಬಂಧಿಸಿದ ವಿಧಿವಿಧಾನಗಳು ಹುಟ್ಟಿಕೊಂಡವು. ಇವೆಲ್ಲವನ್ನು 'ಗತಿಸಿದವರ ಪುಸ್ತಕ'ದಲ್ಲಿ ವಿವರಿಸಲಾಗಿದೆ. ಇವು ಈಜಿಪ್ಟಿನ ಧರ್ಮಗ್ರಂಥಗಳಲ್ಲ, ಶವಸಂಸ್ಕಾರದ ವಿಧಿ ವಿಧಾನಗಳ ಸಂಗ್ರಹಗಳು.

ಪುರೋಹಿತ ವಾಮಾಚಾರಿಗಳ ಅಟ್ಟಹಾಸ ಅಧಿಕವಾದಾಗ, ಧರ್ಮ ಅವನತಿಯ ಹಾದಿಯನ್ನು ಹಿಡಿಯಿತು. ಆಗ ಧಾರ್ಮಿಕ ಉತ್ಕ್ರಾಂತಿಯ ಅಗತ್ಯವಾಯಿತು. ಈ ಕ್ರಿಯೆಯ ದ್ರಷ್ಟಾರ ಫೆರೋವ ನಾಲ್ಕನೇ ಅಮೆನ್ ಹೊಟೆಪ್. ಇವನು ಕ್ರಿ.ಪೂ.೧೩೭೫ರ ಸುಮಾರಿಗೆ ಅಧಿಕಾರಕ್ಕೆ ಬಂದು ಹದಿನೈದು ವರ್ಷಗಳು ರಾಜ್ಯವಾಳಿದ. ಕೊನೆಯಲ್ಲಿ ಕೊಲೆಗೀಡಾಗಿರ ಬೇಕು. ಸುಧಾರಣೆಯ ಪ್ರಥಮ ಪ್ರಯತ್ನಗಳು ವಿಫಲವಾದಾಗ ನಿರ್ದಾಕ್ಷಿಣ್ಯ ಕ್ರಮಗಳನ್ನು ತೆಗೆದುಕೊಳ್ಳುವುದು ಅನಿವಾರ್ಯವಾಯಿತು. ದೇವಾಲಯಗಳಿಂದ ಪುರೋಹಿತರನ್ನು ಓಡಿಸಿದ ಹಾಗು ಅಲ್ಲಿದ್ದ ಸಾಂಪ್ರದಾಯಕ ದೇವರುಗಳನ್ನು ಕಿತ್ತು ಹಾಕಿದ. ಸಾರ್ವಜನಿಕ ಕಟ್ಟಡಗಳಲ್ಲಿದ್ದ ದೇವರ ಹೆಸರುಗಳನ್ನು ತೆಗೆದು ಹಾಕಿದ. ಹೊಸ ದೇವರಾದ ಅಟೋನ್‌ನ ಪೂಜೆಯನ್ನು ಜಾರಿಗೆ ತಂದ. ಆಕಾಶದಲ್ಲಿ ನಿರಂತರವಾಗಿ ಬೆಳಗುವವನೇ ಹೊಸದೇವರಾದ ಅಟೋನ್. ಇವನು ಸೂರ್ಯದೇವ. ಇವನು ತನ್ನ ಹೆಸರನ್ನು ಅಮೆನ್ ಹೊಟೆಪ್‌ನಿಂದ ಅಖೆನಟನ್ ಎಂದು ಬದಲಾಯಿಸಿಕೊಂಡ. ಇವರರ್ಥ ಅಟೋನ್ ತೃಪ್ತನಾದ ಎಂದು. ಅವನ ರಾಣಿ ನೆಫಿರ್‌ಟೇಟಿ ತನ್ನನ್ನು ನೆಪಿರ್ ನೆಫ್ರು ಅಟೋನ್ ಎಂದು ಕರೆದುಕೊಂಡಳು. ಲಾವಣ್ಯವು ಸೊಗಸಾದ ಅಟೋನ್ ಎಂದು ಆಕೆಯ ಹೆಸರಿನ ಅರ್ಥ. ಅಖೆನಟನ್ ಎಲ್ ಅಮರ್ನ ಎಂಬ ಹೊಸರಾಜಧಾನಿಯನ್ನು ಕಟ್ಟಿಸಿ, ತನ್ನ ನೂತನ ದೇವರಿಗೆ ಅರ್ಪಿಸಿದ.

ಅರಸರು ಹೊಸಧರ್ಮವನ್ನು ವಿಧಿವಿಧಾನಗಳನ್ನೂ ಸಿದ್ಧಾಂತವನ್ನೂ ರೂಪಿಸಿದ. ಏಕದೇವತಾ ಉಪಾಸನೆಯನ್ನು ಜಾರಿಗೆ ತಂದಿದ್ದು ಅವನ ಮಹತ್ತರ ಸಾಧನೆ. ಅಟೋನ್ ಮತ್ತು ಅಖೆನಟನ್ ಇಬ್ಬರೇ ಎದುರಿಗಿರುವ ದೇವತೆಗಳು. ಹಿಂದಿನ ದೇವತೆಗಳಂತೆ ಅಟೋನ್‌ನನ್ನು ಮಾನವ ಅಥವಾ ಪ್ರಾಣಿಗಳ ರೂಪದಲ್ಲಿ ಚಿತ್ರಿಸಲಿಲ್ಲ. ಅದರ ಬದಲು

ಪ್ರಾಣದಾಯಕ ಉಲ್ಲಾಸಿತ ಬೆಳಕಿನ ಕಿರಣಗಳನ್ನು ಕೊಡುವ ಪ್ರಾಣೋಜ್ಜೀವಕ ಹಾಗೂ ಚೈತನ್ಯದಾಯಕ ಸೂರ್ಯನಂತೆ ಚಿತ್ರಿಸಲಾಯಿತು. ಸೃಷ್ಟಿಕರ್ತನಾದ ಇವನು ಕೇವಲ ಈಜಿಪ್ಟಿಗಷ್ಟೇ ಅಲ್ಲ ಸಮಗ್ರ ವಿಶ್ವಕ್ಕೆ ದೇವನಾಗಿದ್ದ. ಅಖೆನಟನ್ ತನ್ನನ್ನು ಅಟೋನ್‌ನ ಪ್ರತಿನಿಧಿಯೆಂದು ಘೋಷಿಸಿಕೊಂಡನು. ಅಟೋನ್‌ನನ್ನು ಅರಸ, ಅವನ ಪತ್ನಿ ಮತ್ತು ಮಕ್ಕಳು ಪೂಜಿಸಿದರೆ, ಜನರು ಅವನನ್ನು ಆರಾಧಿಸಬೇಕಿತ್ತು. ಅಟೋನನು ಜಗತ್ತಿನ ಜನರ ನೈತಿಕತೆಯನ್ನು ರೂಪಿಸುವ, ಹೃದಯ ಪರಿಶುದ್ಧತೆಗೆ ಪ್ರಾಮುಖ್ಯ ನೀಡುವವನೆಂದು ಸಾರಿದ ಅರಸನು ಈಜಿಪ್ಟಿನ ಧಾರ್ಮಿಕ ಬದುಕಿನಲ್ಲಿ ನೈತಿಕ ಮೌಲ್ಯಗಳನ್ನು ಯಶಸ್ವಿಯಾಗಿ ಜಾರಿಗೆ ತಂದ.

## ಬೌದ್ಧಿಕ ಸಾಧನೆಗಳು

ಪ್ರಾಚೀನ ಈಜಿಪ್ಟಿನ ಪಾರಮಾರ್ಥಿಕ ಬದುಕು ನೈತಿಕ ಹಾಗೂ ರಾಜಕೀಯ ಅಂಶಗಳಿಂದ ಆಧರಿತವಾಗಿತ್ತು. ಮನಸು ಅಥವಾ ಜ್ಞಾನ ವಿಶ್ವವನ್ನು ನಿಯಂತ್ರಿಸುತ್ತದೆ ಎಂಬ ಭಾವನೆ ಕಾಲದಿಂದ ಕಾಲಕ್ಕೆ ಮುಂದುವರೆಯುತ್ತ ಬಂದಿತು. ಅದರ ಉಲ್ಲೇಖವನ್ನು ಪುರೋಹಿತರ ಬರವಣಿಗೆಗಳಲ್ಲಿ ಕಾಣುತ್ತೇವೆ. ನಿರಂತರವಾಗಿರುವ ವಿಶ್ವ, ನಿರಂತರವಾಗಿ ಸಂಭವಿಸುವ ಘಟನೆಗಳು, ನೈಸರ್ಗಿಕ ಕಾರಣ ಮತ್ತು ಪರಿಣಾಮಗಳಿಗೆ ಸಿದ್ಧಾಂತ. ಇವೇ ವಿಷಯಗಳು ಅವರ ಅಲೌಕಿಕ ವಿವರಣೆಗಳಲ್ಲಿ ಅಡಕವಾಗಿವೆ. ಶುದ್ಧದಾರ್ಶನಿಕ ಅಂಶಗಳನ್ನು ಅವರ ಬರವಣಿಗೆಗಳಲ್ಲಿ ಕಾಣಲಾಗುವುದಿಲ್ಲ. ಅವು ಮೂಲಭೂತವಾಗಿ ಮತಾಚರಣೆ, ವೈಯಕ್ತಿಕವಾಗಿ ಕಾಡುವ ಸಮಸ್ಯೆಗಳು ಮತ್ತು ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿದೆ.

ಈಜಿಪ್ಟರ ಪ್ರಾರಂಭದ ಧಾರ್ಮಿಕ ವಿಧಿವಿಧಾನಗಳು ಓಲ್ಡ್‌ಟೆಸ್ಟ್‌ಮೆಂಟ್‌ನಲ್ಲಿರುವ ಗಾಥೆಗಳ ಪುಸ್ತಕದಂತಿದೆ. ಇವು ನಿತ್ಯಾವಶ್ಯಕ ಜ್ಞಾನಕ್ಕಿಂತ ಭಿನ್ನವಾಗಿದ್ದರೂ ಸಹಿಷ್ಣುತೆಯನ್ನೂ, ಚಿಕಿತ್ಸಕ ಮನೋಭಾವವನ್ನು, ನ್ಯಾಯವನ್ನೂ ಒಳಗೊಂಡಿತ್ತು. ರಾಜಕೀಯ ಚಿಂತನೆಯಲ್ಲಿ ಇವರು ಸುಖೀರಾಜ್ಯದ ಭಾವನೆಯನ್ನು ಹಾಗೂ ವ್ಯವಸ್ಥೆಯನ್ನು ರೂಪಿಸಿದ್ದರು. ಈ ವ್ಯವಸ್ಥೆಯಲ್ಲಿ ಅರಸರು ಪ್ರಜೆಗಳ ಮುಖಂಡನಾಗಿದ್ದನು. ಜನತೆಯ ಕ್ಷೇಮ ಮತ್ತು ಅಭಿವೃದ್ಧಿಗಾಗಿ ದುಡಿಯಲು ಬದ್ಧನಾಗಿದ್ದನು. ಅವನು ತಬ್ಬಲಿಗಳಿಗೆ ತಂದೆಯಂತೆ, ವಿಧವೆಯರಿಗೆ ರಕ್ಷಕನಂತೆ, ವರ್ಜಿತರಾದವರಿಗೆ ಸೋದರನಂತೆ ದುಡಿಯಬೇಕೆಂದು ಈಜಿಪ್ಟನ ಬರಹಗಳು ತಿಳಿಸುತ್ತವೆ. ಅವನು ನ್ಯಾಯಪಕ್ಷಪಾತಿಯಾಗಿ ತಪ್ಪಿತಸ್ಥರನ್ನು ದುಡಿಸಬೇಕಾಗಿತ್ತು. ಸಾಮರಸ್ಯ ಮತ್ತು ಅಭಿವೃದ್ಧಿಗಾಗಿ ದುಡಿದು ಮಾನವನ ಮೂಲಭೂತ ಅವಶ್ಯಗಳಿಂದ ತಮ್ಮ ಪ್ರಜೆಗಳು ವಂಚಿತರಾಗದಂತೆ ನೋಡಿಕೊಳ್ಳುವುದು ಅವನ ಉದ್ದೇಶ.

ಖಗೋಳಶಾಸ್ತ್ರ, ಗಣಿತ ಮತ್ತು ಔಷಧ ವಿಜ್ಞಾನ ಇವೇ ಮೊದಲಾದ ವೈಜ್ಞಾನಿಕ ವಿಷಯಗಳು ಅವರ ಆಸಕ್ತಿಯನ್ನು ಕೆರಳಿಸಿದ್ದವು ಹಾಗು ಇವುಗಳಲ್ಲಿ ವ್ಯಾವಹಾರಿಕ

ಉದ್ದೇಶದಿಂದ ಬೆಳವಣಿಗೆಗಳನ್ನು ಸಾಧಿಸಲಾಗಿತ್ತು. ನೈಲ್ ನದಿಯ ಪ್ರವಾಹಗಳನ್ನು ನಿರ್ಧರಿಸುವುದಕ್ಕೆ ಖಗೋಳ ಶಾಸ್ತ್ರವನ್ನೂ, ಕಟ್ಟಡ ನಿರ್ಮಾಣಕ್ಕೆ ಗಣಿತವನ್ನೂ, ರೋಗ ನಿವಾರಣೆಗಾಗಿ ಔಷಧಶಾಸ್ತ್ರವನ್ನೂ ಅಭಿವೃದ್ಧಿಪಡಿಸಿದರು. ನೈಲ್ ನದಿಯ ಪ್ರವಾಹವು ಲುಬ್ಧಿಕ ನಕ್ಷತ್ರದ ವಾರ್ಷಿಕ ಉದಯದೊಂದಿಗೆ ಸಮ್ಮಿಳಿತವಾಗಿತ್ತು. ಧಾರ್ಮಿಕ, ಆಚರಣೆಗಳಿಗಾಗಿ ಚಾಂದ್ರಮಾನ ಪಂಚಾಂಗವನ್ನು ಅವರು ಜಾರಿಗೆ ತಂದಿದ್ದರು. ಗಣಿತಶಾಸ್ತ್ರ ಉನ್ನತವಾಗಿ ಬೆಳೆದಿತ್ತು. ಅಂಕಗಣಿತ ಮತ್ತು ಜ್ಯಾಮಿತಿ ಶಾಸ್ತ್ರಗಳ ಬೆಳವಣಿಗೆಗೆ ಈಜಿಪ್ಟರು ಅಡಿಪಾಯವನ್ನು ಹಾಕಿದ್ದರು. ಅಂಕಗಣಿತದಲ್ಲಿ ಕೂಡುವುದು, ಕಳೆಯುವುದು ಮತ್ತು ಭಾಗಿಸುವುದನ್ನು ಅವರು ಕಲಿತಿದ್ದರು. ಆದರೆ ಅವರಿಗೆ ಗುಣಾಕಾರದ ಮೊತ್ತವನ್ನು ಪಡೆಯುತ್ತಿದ್ದರು. ಅವರು ದಶಾಂಶ ಪದ್ಧತಿಯನ್ನೂ ತಿಳಿದಿದ್ದರು. ಈಜಿಪ್ಟರಿಗೆ ಶೂನ್ಯದ ಚಿಹ್ನೆ ಗೊತ್ತಿರಲಿಲ್ಲ. ತ್ರಿಕೋನ, ಚತುಷ್ಕೋನ ಮತ್ತು ಷಟ್ಕೋನಗಳನ್ನು ಅಂಕಗಣಿತದಲ್ಲಿ ನಿಖರವಾಗಿ ಲೆಕ್ಕ ಹಾಕುತ್ತಿದ್ದರು. ವೃತ್ತದ ಪರಿಧಿ ಮತ್ತು ಅದರ ವ್ಯಾಸ ಪ್ರಮಾಣವನ್ನು ಅವರು ಲೆಕ್ಕ ಹಾಕುತ್ತಿದ್ದರು. ಪಿರಮಿಡ್, ಅರ್ಧಗೋಳ, ಉರುಳೆ ಆಕಾರಗಳನ್ನು ಲೆಕ್ಕ ಹಾಕಲು ಕಲಿತಿದ್ದರು.

ಔಷಧಿ ಕ್ಷೇತ್ರದಲ್ಲೂ ಈಜಿಪ್ಟರು ಅಗಾಧ ಸಾಧನೆಗಳನ್ನು ಮಾಡಿದ್ದರು. ಆರಂಭಿಕ ವೈದ್ಯಕೀಯ ಅಭ್ಯಾಸ ಸಾಂಪ್ರದಾಯಿಕವಾಗಿದ್ದು, ಈಜಿಪ್ಟಿನ ಮೂಢನಂಬಿಕೆಗಳಿಂದ ತುಂಬಿಹೋಗಿತ್ತು. ಕ್ರಿ.ಪೂ.೧೭೦೦ರಿಂದೀಚೆಗೆ ವೈದ್ಯಕೀಯ ಪದ್ಧತಿಯು ವೈಜ್ಞಾನಿಕ ವಿಶ್ಲೇಷಣೆ ಮತ್ತು ಚಿಕಿತ್ಸೆಯಿಂದ ಕೂಡಿದ್ದನ್ನು ಅಂದಿನ ಬರಹಗಳು ತಿಳಿಸುತ್ತವೆ. ಈಜಿಪ್ಟಿನ ವೈದ್ಯರು ಕಣ್ಣು ದಂತ ಮತ್ತು ಹೊಟ್ಟೆಯ ಕಾಯಿಲೆಗಳ ನಿವಾರಣೆ ಹಾಗೂ ಶಸ್ತ್ರಚಿಕಿತ್ಸೆ ಮುಂತಾದ ವಿಭಾಗಗಳಲ್ಲಿ ಪರಿಣತರಾಗಿದ್ದರು. ಅವರು ತಮ್ಮ ವೈದ್ಯಪದ್ಧತಿಯ ನಿರ್ವಹಣೆಯ ದೀರ್ಘಕಾಲದಲ್ಲಿ ಅದ್ಭುತವಾದ ಶೋಧನೆಗಳನ್ನು ನಡೆಸಿದ್ದುಂಟು. ಅವರು ಹೃದಯ ಹಾಗೂ ನಾಡಿಬಡಿತದ ಪ್ರಾಮುಖ್ಯವನ್ನು ಮನಗಂಡಿದ್ದರು. ಮೂಳೆ ಮುರಿತದ ಚಿಕಿತ್ಸೆಯಲ್ಲೂ ಅವರು ಪ್ರಗತಿ ಸಾಧಿಸಿದ್ದುಂಟು. ಔಷಧಿಗಳ ಗುಣಮಟ್ಟವನ್ನು ವಿವರಿಸಿ ಪಟ್ಟಿ ಮಾಡಿದ್ದರು. ಅವರ ಹಲವು ಚಿಕಿತ್ಸಾ ವಿಧಾನಗಳನ್ನು ಗ್ರೀಕರು ಮುಂದೆ ಯುರೋಪಿನಲ್ಲಿ ಪ್ರಚಾರ ಮಾಡಿದರು. ಈಗಲೂ ಆಫ್ರಿಕಾದ ದೂರದ ವಿವಿಧ ಪ್ರದೇಶಗಳ ರೈತರು ಆ ವಿಧಾನಗಳನ್ನೇ ಅನುಸರಿಸುತ್ತಿರುವುದುಂಟು. ಭೌತಶಾಸ್ತ್ರದ ಬಗ್ಗೆ ಅವರು ಗಳಿಸಿದ ಜ್ಞಾನ ಅತ್ಯಲ್ಪವೇ. ಲೋಹಗಾರಿಕೆಯಲ್ಲಿ ಸಾಕಷ್ಟು ಜ್ಞಾನವನ್ನು ಸಂಪಾದಿಸಿದ್ದರು. ಸೂರ್ಯಗಡಿಯಾರ, ಪ್ಯಾಪಿರಸ್ ಕಾಗದ ಮತ್ತು ಗಾಜುಗಳ ತಯಾರಿಕೆಯನ್ನು ಕಲಿತಿದ್ದರು. ಅವರ ಕೆಲ ಕೊರತೆಗಳೇನೇ ಇರಲಿ, ಅಂದಿನ ಆ ಕಾಲಕ್ಕೆ ವೈಜ್ಞಾನಿಕವಾಗಿ ಅವರು ಅಪಾರವಾದ ಸಾಧನೆಗಳನ್ನು ಮಾಡಿದ್ದರು.

ಕ್ರಿ.ಪೂ.೩೧೦೦ರ ಸುಮಾರಿಗೆ ಈಜಿಪ್ಟ್ ಒಂದುಗೂಡಿದ ಕಾಲಕ್ಕೆ ಬರವಣಿಗೆಯನ್ನು ಅಭಿವೃದ್ಧಿಪಡಿಸಲಾಗಿತ್ತು. ಈ ಬರವಣಿಗೆಯನ್ನು ಹೈಅರಗ್ಲಿಫ್ ಎಂದು ಕರೆಯಲಾಗುವ

ಗ್ರೀಕ್ ಪದಗಳ ಜೋಡಣೆ. ಅವುಗಳ ಅರ್ಥ ಪವಿತ್ರ ಕೆತ್ತನೆ ಎಂದು. ಇದರ ಕೆಲ ಚಿಹ್ನೆಗಳನ್ನು ರೂಢೀಕರಿಸಿ ಅಮೂರ್ತ ಭಾವನೆಗಳನ್ನು ಅಭಿವ್ಯಕ್ತಿಸಲಾಯಿತು. ಅಕ್ಷರಮಾಲೆಯ ಅದು ಚಿತ್ರಕಾರವೇ ಇರಲಿ, ವ್ಯವಸ್ಥೆಯನ್ನು ಮೊದಲಿಗೆ ರೂಪಿಸಿದ ಕೀರ್ತಿ ಇವರದು. ಸಾವಿರಾರು ವರುಷಗಳ ನಂತರ ಫಿನೀಷಿಯನ್ನರು ಅವರನ್ನು ಅನುಸರಿಸಿ ತಮ್ಮದೇ ಅದ ಬರವಣಿಗೆ ವ್ಯವಸ್ಥೆಯನ್ನು ಜಾರಿಗೆ ತಂದರು ಹಾಗೂ ಸುತ್ತಮುತ್ತಣ ರಾಜ್ಯಗಳಿಗೆ ಪ್ರಚಾರ ಮಾಡಿದರು. ಪಾಶ್ಚಾತ್ಯ ಜಗತ್ತಿನಲ್ಲಿ ವಿಕಾಸವಾದ ಅಕ್ಷರ ವ್ಯವಸ್ಥೆಗೆ ಮೂಲ ಈಜಿಪ್ಟಿನ ಅಕ್ಷರ ನಿರೂಪಣೆಯೇ ಎಂಬುದು ಅಚ್ಚರಿಯಲ್ಲದ ವಿಷಯ.

## ಸಾಮಾಜಿಕ ಮತ್ತು ಆರ್ಥಿಕ ಬದುಕು

ಈಜಿಪ್ಟಿನ ಜನಸಮುದಾಯವನ್ನು ಸಾಮಾಜಿಕವಾಗಿ ಐದು ಶ್ರೇಣೀಕೃತ ವರ್ಗಗಳನ್ನಾಗಿ ಮಾಡಲಾಗಿತ್ತು. ರಾಜಮನೆತನದವರು, ಶ್ರೀಮಂತರು, ಮಧ್ಯಮವರ್ಗ(ಲೇಖಕರು, ವರ್ಣಿಕರು, ಕುಶಲಕರ್ಣಿಗಳು)ದವರು ಮತ್ತು ಶ್ರೀಮಂತ ಕೃಷಿಕರು ಇವೇ ಆ ಐದು ವರ್ಗಗಳು. ನೂತನ ಅರಸೊತ್ತಿಗೆಯ ಕಾಲದಲ್ಲಿ ವೃತ್ತಿನಿರತ ಸೈನಿಕರನ್ನು ಒಳಗೊಂಡ ಅರನೇ ವರ್ಗ ಅಸ್ತಿತ್ವಕ್ಕೆ ಬಂದಿತು. ಇವರು ಸಾಮಾಜಿಕ ಶ್ರೇಣಿಯಲ್ಲಿ ಶ್ರೀಮಂತರ ನಂತರದ ಸ್ಥಾನವನ್ನು ಪಡೆದಿದ್ದರು. ಸಾವಿರಾರು ಗುಲಾಮರನ್ನು ಈ ಕಾಲದಲ್ಲಿ ಸೆರೆ ಹಿಡಿಯಲಾಯಿತು. ಇವರನ್ನು ಏಳನೇ ವರ್ಗವಾಗಿ ಪರಿಗಣಿಸಲಾಯಿತು. ಎಲ್ಲರಿಂದಲೂ ನಿಕೃಷ್ಟಕ್ಕೆ ಗುರಿಯಾದ ಇವರು ಸರ್ಕಾರಿ ಕಾಮಗಾರಿಗಳಿಂದ ಬಂಡೆಗಳನ್ನು ಕೊರೆಯುವಲ್ಲಿ ಹಾಗೂ ದೇಗುಲಗಳ ನಿರ್ಮಾಣದಲ್ಲಿ ಕಡ್ಡಾಯವಾಗಿ ದುಡಿಯಬೇಕಿತ್ತು. ಕಾಲಾನಂತರದಲ್ಲಿ ಸೈನದಲ್ಲಿ ದುಡಿಯಲು ಅವರನ್ನು ಸೇರಿಸಿಕೊಳ್ಳಲಾಗುತ್ತಿತ್ತು ಹಾಗೂ ಫೆರೋವರ ವೈಯಕ್ತಿಕ ಸೇವೆಗೆ ಅವಕಾಶ ಕೊಡಲಾಗುತ್ತಿತ್ತು. ಇದರಿಂದ ಅವರು ಸಮಾಜದಲ್ಲಿ ತಮ್ಮ ವರ್ಗದಿಂದ ಉನ್ನತವರ್ಗಕ್ಕೆ ಮುಂಬಡ್ತಿ ಪಡೆಯುತ್ತಿದ್ದುದುಂಟು. ವಿವಿಧ ವರ್ಗಗಳ ಸ್ಥಾನಮಾನಗಳು ದೀರ್ಘಕಾಲಾವಧಿ ಯಲ್ಲಿ ಬದಲಾವಣೆ ಆಗಿರುವುದು ಕಂಡುಬರುತ್ತದೆ. ಪುರಾತನ ಅರಸೊತ್ತಿಗೆಯ ಕಾಲದಲ್ಲಿ ಶ್ರೀಮಂತರು ಮತ್ತು ಪುರೋಹಿತರು ಸಮಾಜದಲ್ಲಿ ಅತ್ಯುನ್ನತ ವರ್ಗದಲ್ಲಿದ್ದರು. ಮಧ್ಯಮ ರಾಜ್ಯದ ಕಾಲದಲ್ಲಿ ವರ್ಣಿಕರು ಮತ್ತು ಕುಶಲ ಕರ್ಮಿಗಳು ಸರ್ಕಾರದಿಂದ ಹಲವು ರಿಯಾಯಿತಿಗಳನ್ನು ಪಡೆದಿದ್ದರು ಹಾಗೂ ಜನಸಮೂಹದ ಬದುಕಿನಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದರು. ಈಜಪ್ಟಿನ ಸಾಮ್ರಾಜ್ಯ ಸ್ಥಾಪನೆಯಾದಂತೆ ಅಧಿಕಾರಿಗಳನ್ನು ಒಳಗೊಂಡ ಹೊಸ ಶ್ರೀಮಂತವರ್ಗ ಹುಟ್ಟಿಕೊಂಡಿತು. ಮಂತ್ರತಂತ್ರಗಳು ಮತ್ತು ಮತಕ್ರಿಯೆಗಳು ಬೆಳವಣಿಗೆ ಆದಂತೆ ಪುರೋಹಿತ ವರ್ಗವು ಪ್ರಾಮುಖ್ಯ ಗಳಿಸಿಕೊಂಡಿತು.

ವರ್ಗಗಳ ನಡುವೆ ಶ್ರೀಮಂತಿಕೆಯ ಅಂತರ ಅಗಾಧವಾಗಿತ್ತು. ಶ್ರೀಮಂತರು ಸುವಾಸನೆಯಿಂದ ಕೂಡಿದ ಉದ್ಯಾನವನಗಳ ನಡುವೆ ವೈಭವಪೂರ್ಣವಾದ ಮನೆಗಳಲ್ಲಿ ವಾಸ ಮಾಡುತ್ತಿದ್ದರು. ಅವರು ಸಮೃದ್ಧವಾದ ಆಹಾರಗಳನ್ನು ಸೇವಿಸುತ್ತಿದ್ದರು. ಅವರ ಆಹಾರವು ವಿವಿಧ ಬಗೆಯ ಮಾಂಸಭಕ್ಷ್ಯಗಳು, ಹಣ್ಣುಗಳು, ಸಿಹಿತಿಂಡಿಗಳು ಮತ್ತು

ಮಧುರಸವನ್ನು ಒಳಗೊಂಡಿತ್ತು. ಚಿನ್ನ ಬೆಳ್ಳಿ ಹಾಲುಗಲ್ಲು ಅಥವಾ ಪಾರದರ್ಶಕ ಕಲ್ಲುಗಳ ಪಾತ್ರೆಗಳಲ್ಲಿ ಊಟ ಮಾಡುತ್ತಿದ್ದರು. ಶ್ರೀಮಂತರು ದುಬಾರಿ ಉಡುಪುಗಳನ್ನು ಹಾಗೂ ಆಭರಣಗಳನ್ನು ಧರಿಸುತ್ತಿದ್ದರು. ಇವಕ್ಕೆ ಪ್ರತಿಯಾಗಿ ಬಡವರ ಬದುಕು ದುಸ್ತರವಾಗಿತ್ತು. ಮಣ್ಣಿನ ಗೋಡೆಗಳಲ್ಲಿ ಕಟ್ಟಿದ ಚಿಕ್ಕಚಿಕ್ಕ ಮನೆಗಳಲ್ಲಿ ನಿರ್ಲಕ್ಷ್ಯಕ್ಕೆ ಗುರಿಯಾದ ಜಾಗದಲ್ಲಿ ವಾಸಿಸುತ್ತಿದ್ದರು. ಸ್ಟೂಲ್, ಸಣ್ಣಸಣ್ಣ ಪೆಟ್ಟಿಗೆ ಮತ್ತು ಮಣ್ಣಿನ ಕುಡಿಕೆಗಳೇ ಅವರ ಮನೆಯಲ್ಲಿದ್ದ ಪರಿಕರಗಳು. ರೈತರು ವಿಶಾಲವಾದ ಜಮೀನಿನ ನಡುವೆ ವಾಸಿಸುತ್ತಿದ್ದರೂ, ಅವರದು ಸಮೃದ್ಧ ಬದುಕಾಗಿರಲಿಲ್ಲ.

ಸಮಾಜದಲ್ಲಿ ಬಹುಪತ್ನಿತ್ವಕ್ಕೆ ಅವಕಾಶವಿದ್ದರೂ, ಏಕಪತ್ನಿ ಕುಟುಂಬ ಸಮಾಜದ ಮೂಲ ಘಟಕವಾಗಿತ್ತು. ಫೆರೋವನು ಉಪಪತ್ನಿಯರ ಜಾಲವನ್ನೇ ಇಟ್ಟುಕೊಂಡಿದ್ದರೂ, ಒಬ್ಬಳೇ ಒಬ್ಬಳು ಪ್ರಮುಖ ರಾಣಿ ಇರುತ್ತಿದ್ದಳು. ಉಳಿದ ಪ್ರಾಚೀನ ಸಮಾಜದ ಸ್ತ್ರೀಯರಿಗೆ ಹೋಲಿಸಿದರೆ, ಈಜಿಪ್ಟಿನ ಸ್ತ್ರೀಯರು ಪೂರ್ಣವಾಗಿ ಪುರುಷರಿಗೆ ಅಧೀನವಾಗಿರ ಲಿಲ್ಲ. ಪತ್ನಿಯರು ತೆರೆಯ ಹಿಂದೆ ಇರಬೇಕಿರಲಿಲ್ಲ. ಪೂರ್ವಿಕರ ಆಸ್ತಿಯನ್ನು ಪಡೆದು ಸಿಂಹಾಸನಕ್ಕೆ ಬಂದಿದ್ದು ಕೇವಲ ಈಜಿಪ್ಟ್ ರಾಷ್ಟ್ರ ಒಂದರಲ್ಲೇ. ಹನ್ನೆರಡನೇ ವಂಶದ ರಾಣಿ ಸೊಬೆಕ್ನೊಪ್ರು, ಹದಿನೆಂಟನೇ ವಂಶದ ರಾಣಿ ಹಟ್‌ಷೆಪುಟ್ ಆಡಳಿತ ನಡೆಸಿದ್ದರು.

ಈಜಿಪ್ಟಿನ ಆರ್ಥಿಕ ವ್ಯವಸ್ಥೆ ಮೂಲತಃ ಕೃಷಿ ಆಧರಿತವಾಗಿತ್ತು. ಕೃಷಿ ವೈವಿಧ್ಯಮಯ ವಾಗಿತ್ತು ಹಾಗೂ ಅತ್ಯಂತ ಪ್ರಗತಿದಾಯಕವಾಗಿತ್ತು. ಗೋಧಿ, ಜವೆ, ಕಾಳುಕಡ್ಡಿಗಳು, ತರಕಾರಿಗಳು, ಹಣ್ಣುಗಳು, ಅಗಸೆನಾರು ಮತ್ತು ಹತ್ತಿಯನ್ನು ಬೆಳೆಯುತ್ತಿದ್ದರು. ನಾಡಿನ ಎಲ್ಲ ಭೂಮಿಗೂ ಫೆರೋವನೇ ಒಡೆಯನಾಗಿದ್ದರೂ, ಅವನು ಬಹು ಹಿಂದೆಯೇ ತನ್ನ ಪ್ರಜೆಗಳಿಗೆ ಹಂಚಿದ್ದರಿಂದ ಅವರು ವೈಯಕ್ತಿಕವಾಗಿ ತಮ್ಮ ಅಧೀನದಲ್ಲೇ ಭೂಮಿಯನ್ನು ಇಟ್ಟುಕೊಂಡಿದ್ದರು. ವ್ಯಾಪಾರ ಕ್ರಿ.ಪೂ.೨೦೦೦ರ ವೇಳೆಗೆ ಪ್ರಾಮುಖ್ಯ ಗಳಿಸಿಕೊಂಡಿತು. ಈಜಿಪ್ಟ್ ದೇಶವು ಕ್ರೀಟ್ ದ್ವೀಪ, ಫಿನಿಷೀಯ, ಪ್ಯಾಲೆಸ್ಟೈನ್ ಮತ್ತು ಸಿರಿಯ ದೇಶಗಳೊಂದಿಗೆ ಸಮೃದ್ಧವಾಗಿ ವ್ಯಾಪಾರ ನಡೆಸುತ್ತಿತ್ತು. ಇಲ್ಲಿನ ವರ್ತಕರು ಚಿನ್ನ, ಗೋಧಿ ಮತ್ತು ಹತ್ತಿ ಬಟ್ಟೆಗಳನ್ನು ರಫ್ತು ಮಾಡುತ್ತಿದ್ದರು ಹಾಗೂ ಬೆಳ್ಳಿ, ದಂತ ಮತ್ತು ಮರದ ದಿಮ್ಮಿಗಳನ್ನು ತರಿಸಿಕೊಳ್ಳುತ್ತಿದ್ದರು. ಕೈಗಾರಿಕಾ ಉತ್ಪನ್ನಗಳು ವ್ಯಾಪಾರದ ಪ್ರಮುಖ ವಹಿವಾಟು ಸರಕುಗಳಾಗಿದ್ದವು. ಕ್ರಿ.ಪೂ.೩೦೦೦ರ ವೇಳೆಗೆ ಹೆಚ್ಚಿನ ಸಂಖ್ಯೆಯ ಜನರು ಕುಶಲ ಕೈಗಾರಿಕೆಯಲ್ಲಿ ನಿರತರಾಗಿದ್ದರು. ಅನಂತರದ ಕಾಲದಲ್ಲಿ ಕಾರ್ಖಾನೆಗಳು ಸ್ಥಾಪನೆಯಾದವು. ಒಂದೇ ಘಟಕದಲ್ಲಿ ಇಪ್ಪತ್ತಕ್ಕೂ ಹೆಚ್ಚು ಜನರು ದುಡಿಯುತ್ತಿದ್ದರು. ಕಲ್ಲು ಒಡೆಯುವುದು, ಹಡಗು ನಿರ್ಮಾಣ, ಕುಂಭ, ಗಾಜು ಮತ್ತು ಹತ್ತಿಬಟ್ಟೆಗಳ ತಯಾರಿಕೆಗಳು ಆ ಕಾಲದ ಪ್ರಮುಖ ಕೈಗಾರಿಕೆಗಳಾಗಿದ್ದವು. ವ್ಯಾಪಾರದ ಲೆಕ್ಕ ಪತ್ರ ಮತ್ತು ಜಮಾ ಖರ್ಚಿನ ವ್ಯವಹಾರವನ್ನು ಇಡುವುದರಲ್ಲಿ ಈಜಿಪ್ಟಿನ ಜನರು ಪ್ರಗತಿಯನ್ನು ಸಾಧಿಸಿದ್ದರು. ವರ್ತಕರು ಕ್ರಯ ಮತ್ತು ವಿಕ್ರಯಕ್ಕೆ ರಸೀದಿಯನ್ನು ಇಡುತ್ತಿದ್ದರು. ಕರಾರುಪತ್ರ, ಲಿಖಿತ ಒಪ್ಪಂದ, ಉಯಿಲು ಪತ್ರಗಳನ್ನು ಈಜಿಪ್ಟರು ಕಂಡುಕೊಂಡಿದ್ದರು.

ಅವರಲ್ಲಿ ನಾಣ್ಯವ್ಯವಸ್ಥೆ ಇಲ್ಲದಿದ್ದರೂ ಹಣವ್ಯವಸ್ಥೆ ಇತ್ತು. ನಿಗದಿತ ತೂಕದ ಚಿನ್ನ ಮತ್ತು ತಾಮ್ರದ ಉಂಗುರಗಳನ್ನು ವಿನಿಮಯದ ಮಾಧ್ಯಮವಾಗಿ ಉಪಯೋಗಿಸಲಾಗು ತ್ತಿತ್ತು. ನಾಗರಿಕತೆಯ ಇತಿಹಾಸದಲ್ಲಿ ಈಜಿಪ್ಟಿನ ಉಂಗುರ ಹಣವು ಅತ್ಯಂತ ಪ್ರಾಚೀನತಮ ನಾಣ್ಯಚಲಾವಣೆ ವ್ಯವಸ್ಥೆಯಾಗಿತ್ತು ಎನ್ನುವುದನ್ನು ಮರೆಯುವಂತಿಲ್ಲ. ರೈತರು ಮತ್ತು ಬಡವರ್ಗದವರು ವಸ್ತುವಿನಿಮಯ ಪದ್ಧತಿಯನ್ನೇ ಮುಂದುವರೆಸುತ್ತಿದ್ದರು.

ಈಜಿಪ್ಟಿನ ಅರ್ಥವ್ಯವಸ್ಥೆ ಸಾಮೂಹಿಕ ಸಾಧನೆಯಾಗಿ ಪ್ರಾರಂಭದಿಂದಲೂ ಜನರ ಸಾಮರ್ಥ್ಯವು ಅವರನ್ನು ಸಮಾಜದ ವಿವಿಧ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಿತ್ತು. ವ್ಯಕ್ತಿಯ ಅಭಿರುಚಿ ಮತ್ತು ಸಮಾಜದ ಸದಾಶಯಗಳನ್ನು ಸಮವೆಂದು ಪರಿಗಣಿಸಲಾಗಿತ್ತು. ರಾಷ್ಟ್ರದ ಪೂರ್ಣ ಉತ್ಪಾದನಾ ಚಟುವಟಿಕೆಗಳು ರಾಜ್ಯದ ಬೃಹತ್ ಉದ್ಯಮವಾಗಿತ್ತು. ಈ ಸಮಷ್ಟಿತ್ವವು ಎಲ್ಲ ಉತ್ಪಾದನೆಗಳನ್ನು ಒಳಗೊಂಡಿರಲಿಲ್ಲ. ಖಾಸಗಿ ಉತ್ಪಾದನೆಗೂ ಅವಕಾಶವಿತ್ತು. ವರ್ತಕರು ತಮ್ಮದೇ ಆದ ವ್ಯಾಪಾರವನ್ನು ಮಾಡುತ್ತಿದ್ದರು. ಕುಶಲಕರ್ಮಿಗಳು ತಮ್ಮದೇ ಅಂಗಡಿಗಳನ್ನು ಇಟ್ಟಿದ್ದರು. ಪಿರಮಿಡ್ ಮತ್ತು ದೇವಾಲಯಗಳ ನಿರ್ಮಾಣ, ರಾಜಪರಿವಾರದವರ ತೋಟಗಳಲ್ಲಿ ದುಡಿಯಲು ಸರ್ಕಾರ ಸಾಮೂಹಿಕವಾಗಿ ಕಾರ್ಮಿಕರನ್ನು ನೇಮಿಸಿಕೊಳ್ಳುತ್ತಿತ್ತು.

ಸಮಾಜದಲ್ಲಿ ಸರ್ಕಾರದ ಅತಿಯಾದ ನಿಯಂತ್ರಣ ಪ್ರಾರಂಭವಾದುದು ನೂತನ ಅರಸೊತ್ತಿಗೆಯು ಅಸ್ತಿತ್ವಕ್ಕೆ ಬಂದ ನಂತರ. ಅರಸರ ನಿರಂಕುಶಾಧಿಕಾರದ ಬೆಳವಣಿಗೆ, ಅನ್ಯರಾಷ್ಟ್ರಗಳ ಆಕ್ರಮಣ ಸರ್ಕಾರದ ಆದಾಯವನ್ನು ಗಳಿಸಿದವು ಹಾಗೂ ಅಗಾಧ ಸಂಖ್ಯೆಯಲ್ಲಿ ವಸ್ತುಗಳ ಉತ್ಪಾದನೆಯು ಆಗಬೇಕಾಯಿತು. ಈ ಅಗತ್ಯಗಳನ್ನು ಪೂರೈಸುವುದಕ್ಕಾಗಿ ಸರ್ಕಾರವು ಆರ್ಥಿಕ ಕ್ಷೇತ್ರದ ಮೇಲೆ ಹತೋಟಿಯನ್ನು ಸ್ಥಾಪಿಸಿತು. ವೈಭವಪೂರ್ಣವಾದ ದೇವಾಲಯಗಳನ್ನು ನಿರ್ಮಿಸಲು ಹಾಗು ಯುದ್ಧೋಪಕರಣಗಳನ್ನು ತಯಾರುಮಾಡಲು ಜನರು ಒತ್ತಾಯದ ಸೇವೆಯನ್ನು ಸಲ್ಲಿಸಬೇಕಾಗಿತ್ತು. ವಿದೇಶಿ ವ್ಯಾಪಾರ ಸರ್ಕಾರದ ಸ್ವಾಮ್ಯತೆಗೆ ಒಳಪಟ್ಟಿತ್ತು. ನೂತನ ಅರಸೊತ್ತಿಗೆಯು ಪತನದ ಹಾದಿ ಹಿಡಿದಂತೆ ಸರ್ಕಾರವು ಜನರ ಆರ್ಥಿಕ ಚಟುವಟಿಕೆಗಳನ್ನು ಮತ್ತಷ್ಟು ನಿಯಂತ್ರಿಸ ತೊಡಗಿತ್ತು.

### ಕಲಾ ಸಾಧನೆ

ಈಜಿಪ್ಟಿನ ಕಲೆಯ ಅಂತರಾರ್ಥವನ್ನು ವಿವರಿಸುವುದು ಕಷ್ಟ. ಇದು ರಾಷ್ಟ್ರೀಯ ಬದುಕಿನ ಸಮೂಹದ ಆಸೆ ಆಕಾಂಕ್ಷೆಯ ಅಭಿವ್ಯಕ್ತಿಯಾಗಿದೆ. ಇದು ಕಲೆಗಾಗಿ ಹುಟ್ಟಿಕೊಂಡ ಕಲೆಯಲ್ಲ. ನಿಸರ್ಗದ ವ್ಯಾಪಾರದ ನೈಜಚಿತ್ರವನ್ನೂ ಅಲ್ಲಿ ಕಾಣಲಾಗುವುದಿಲ್ಲ. ಸರ್ಕಾರಿ ಬಿಗಿ ಸೂತ್ರಗಳ ನಿರೂಪಣೆಯಲ್ಲಿ ನೈಸರ್ಗಿಕ ಅಂಶ ಅಲ್ಲಲ್ಲಿ ಮೈದಳೆದಿರುವುದುಂಟು. ಸ್ತಂಭಗಳನ್ನು ತಾಳೇಮರದ ಕಾಂಡದಂತೆ, ಶೀರ್ಷಿಕೆಗಳನ್ನು ಅರಳಿದ ಕಮಲದಂತೆ ನಿರ್ಮಿಸಿರುವುದರಲ್ಲಿ ಆ ಅಂಶಗಳು ಗೋಚರಿಸುತ್ತವೆ. ಫೆರೋವರ ಪ್ರತಿಮೆಗಳು ಶೈಲೀಕೃತ ಮಾದರಿಗಳಾಗಿರದೆ ವೈಯಕ್ತಿಕ ನೈಜಚಿತ್ರಣವೇ ಆಗಿವೆ.

ಎಲ್ಲ ನಾಗರಿಕತೆಗಳಲ್ಲೂ ವಾಸ್ತು ಅತ್ಯಂತ ಪ್ರಗತಿದಾಯಕ ಹಾಗೂ ಆಕರ್ಷಕ ಕಲೆಯೆನಿಸಿದೆ. ಈಜಿಪ್ಟಿನ ನಾಗರಿಕತೆಯಲ್ಲಿ ಈ ಅಂಶವನ್ನು ಪೂರ್ಣ ಪ್ರಮಾಣದಲ್ಲಿ ಕಾಣಬಹುದು. ಈ ಕಾಲಾವದಿಯಲ್ಲಿ ಮಾಡಿದ ಕಟ್ಟಡ ನಿರ್ಮಾಣವು ಅಂದಿನ ಸಮಾಜದ ಭಾವನೆಗಳೂ ಜನರ ಆಸೆ ಆಕಾಂಕ್ಷೆಗಳ ಮತ್ತು ಪ್ರತಿಭಾಪೂರ್ಣ ಕಲಾವಿದರ ಮೂರ್ತ ಸ್ವರೂಪದ ಮಾಧ್ಯಮವಾಗಿದೆ. ಶಿಲ್ಪ ಮತ್ತು ಚಿತ್ರಕಲೆಗಳನ್ನು ಕಡೆಗಣಿಸಿರಲಿಲ್ಲ. ಅವು ದೇವಾಲಯಗಳ ಸುಂದರ ವಿನ್ಯಾಸಕ್ಕೆ ಅವಕಾಶಗಳನ್ನು ಕಲ್ಪಿಸಿದವು. ಇವು ಕೆಲಕಾಲ ಸ್ವತಂತ್ರ ಹಾಗೂ ಪರಿಪೂರ್ಣ ಕಲೆಯಾಗಿ ಹೊರಹೊಮ್ಮಿದ್ದುಂಟು.

ಪುರಾತನ ಅರಸೊತ್ತಿಗೆಯ ಕಾಲದ ಪ್ರಮುಖ ವಾಸ್ತುಕೃತಿಯೆಂದರೆ ಪಿರಮಿಡ್‌ಗಳು. ಈ ಕಾಲದ ಮೊದಲ ಪಿರಮಿಡ್ಡನ್ನು ಕ್ರಿ.ಪೂ. ೨೭೭೦ರಲ್ಲಿ ಕಟ್ಟಲಾಯಿತು. ಅಪಾರವಾದ ಮಾನವ ಶ್ರಮ ಮತ್ತು ಕೌಶಲ್ಯವನ್ನು ಆಶ್ಚರ್ಯಕರವಾದ ರೀತಿಯಲ್ಲಿ ಅದರಲ್ಲಿ ಬಳಸಿಕೊಳ್ಳಲಾಗಿದೆ. ಗ್ರೀಕ್ ಇತಿಹಾಸಕಾರ ಹೆರೊಡೋಟಸ್‌ನ ಗಿಜೆಯಲ್ಲಿರುವ ಖಿಫು ಅಥವಾ ಸಿಯೋಪ್ಸ್ ಪಿರಮಿಡ್‌ವೊಂದರ ನಿರ್ಮಾಣಕ್ಕೆ ಒಂದು ಲಕ್ಷ ಕಾರ್ಮಿಕರು ಇಪ್ಪತ್ತು ವರ್ಷಗಳ ಕಾಲ ದುಡಿದಿದ್ದಾರೆಂದು ಅಂದಾಜು ಮಾಡಿದ್ದಾನೆ. ೪೮೧ ಅಡಿ ಎತ್ತರವಿರುವ ಈ ದೈತ್ಯಕಟ್ಟಡದಲ್ಲಿ ಎರಡು ದಶಲಕ್ಷ ದೊಡ್ಡದೊಡ್ಡದಾದ ಸೈಜುಗಲ್ಲುಗಳನ್ನು ಉಪಯೋಗಿ ಸಲಾಗಿದೆ. ಪ್ರತಿಯೊಂದು ಕಲ್ಲು ೨.೫ರಿಂದ ೧೫ ಟನ್ ತೂಗುತ್ತದೆ. ಅವುಗಳ ಏಣು ಬಹು ನಿಖರವಾಗಿದ್ದು ಆಧುನಿಕ ಕೆಲಸಗಾರರು ಅವುಗಳನ್ನು ಪ್ರತಿಕರಿಸಲಾರರು. ಚಕ್ರಗಳ ಉಪಯೋಗ ತಿಳಿಯದಿದ್ದ ಕಾಲದಲ್ಲಿ ಪೂರ್ವದ ಕಡೆಯಿಂದ ಅವುಗಳನ್ನು ಎಳೆದುತಂದು ಪಿರಮಿಡ್‌ನಲ್ಲಿ ಜೋಡಿಸಲಾಗಿದೆ.

ಪಿರಮಿಡ್‌ಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಹಲವಾರು ವಿವರಣೆಗಳನ್ನು ಪ್ರತಿಪಾದಿಸಲಾಗಿದೆ. ಜನಸಂಖ್ಯೆ ಮಿತಿಮೀರಿದಂತೆ ಕೃಷಿ, ಗಣಿಗಾರಿಕೆ, ಕೈಗಾರಿಕೆ ಮತ್ತು ವಾಣಿಜ್ಯ ಇವುಗಳಿಂದ ಬರುವ ಆದಾಯದಿಂದ ಜನರ ಬದುಕು ನಡೆಸುವುದು ದುಸ್ತರವಾದಂತೆ, ಅವರಿಗೆ ಉದ್ಯೋಗ ನೀಡುವ ಆರ್ಥಿಕ ದೃಷ್ಟಿಯಿಂದ ಅವುಗಳ ನಿರ್ಮಾಣ ಕಾರ್ಯ ಆರಂಭವಾಗಿರಬೇಕು. ಈ ವಿವರಣೆಯಲ್ಲಿ ಸ್ವಲ್ಪ ಸತ್ಯಾಂಶವಿರುವಂತೆ ಕಂಡರೂ, ಅವು ಧಾರ್ಮಿಕ ಮತ್ತು ಸಾಮಾಜಿಕ ಪ್ರಾಮುಖ್ಯವನ್ನು ಈಜಿಪ್ಟಿನ ಅರಸರಿಗೆ ನೀಡಿದ್ದನ್ನು ಕಡೆಗಣಿಸುವಂತಿಲ್ಲ. ಪಿರಮಿಡ್‌ಗಳು ಫರೋವರ ಸಮಾಧಿ ವಾಸ್ತುಗಳಾಗಿದ್ದವು. ಪಿರಮಿಡ್‌ಗಳು ಈಜಿಪ್ಟಿನ ರಾಜಕೀಯ ವೈಭವದ ಹಾಗೂ ಅಲ್ಲಿನ ಅರಸರ ಮರಣಾತೀತ ಶಕ್ತಿಯ ಸಾಕ್ಷಿಗಳಾಗಿವೆ. ಸುಮಾರು ಎಂಬತ್ತು ಪಿರಮಿಡ್‌ಗಳನ್ನು ಈಜಿಪ್ಟಿನಲ್ಲಿ ಇಂದಿಗೂ ಕಾಣಬಹುದು.

ವೈಯಕ್ತಿಕ ಆತ್ಮ ವಿಮೋಚನೆಯ ಗೀಳು ಈಜಿಪ್ಟಿನ ಅರಸರಲ್ಲಿ ಪ್ರಾಧಾನ್ಯ ಗಳಿಸಿದಾಗ ಪಿರಮಿಡ್‌ಗಳ ಬದಲು ದೇಗುಲಗಳು ಪ್ರಮುಖ ವಾಸ್ತು ಪ್ರಕಾರಗಳಾದವು. ಕಾರ್ನಾಕ್,

ಲಕ್ಸೋರ್‌ಗಳಲ್ಲಿ ಬಹುದೊಡ್ಡದಾದ ಹಾಗು ಪ್ರಸಿದ್ಧವಾದ ದೇಗುಲಗಳು ನೂತನ ಅರಸೊತ್ತಿಗೆಯ ಕಾಲಾವಧಿಯಲ್ಲಿ ನಿರ್ಮಾಣವಾದುವು. ಅವುಗಳ ಬೃಹದಾಕಾರದ ಸುಂದರ ವಿನ್ಯಾಸಗಳ ಕೆತ್ತನೆಯಿಂದ ಕೂಡಿದ ಸ್ತಂಭಗಳು ಅಪೂರ್ವ ಹಾಗೂ ಸಮೃದ್ಧ ವಾಸ್ತು ಪ್ರತಿಭೆಯ ಮೂಕಸಾಕ್ಷಿಗಳಾಗಿ ನಿಂತಿವೆ. ಈಜಿಪ್ಟಿನ ದೇವಾಲಯಗಳು ಬೃಹದಾಕೃತಿಗೆ ಹೆಸರಾದವು. ಕಾರ್ನಾಕಿನ ದೇವಾಲಯವು ೧೩೦ ಅಡಿ ಉದ್ದವಿದ್ದು, ಜಗತ್ತಿನ ಯಾವುದೇ ದೊಡ್ಡ ಧಾರ್ಮಿಕ ಕಟ್ಟಡಕ್ಕಿಂತ ವಿಶಾಲವಾಗಿದೆ. ಅದರ ನಡುವಣ ಅಂಗಳವೇ ನಮ್ಮ ನಾಡಿನ ಯಾವುದೇ ದೊಡ್ಡ ದೇವಾಲಯಕ್ಕಿಂತ ವಿಶಾಲವಾಗಿದೆ. ಇದರ ಸ್ತಂಭಗಳು ಬಹು ಎತ್ತರವಾಗಿವೆ. ಇವು ಎಪ್ಪತ್ತಡಿ ಎತ್ತರ ಹಾಗೂ ಇಪ್ಪತ್ತಡಿಗೂ ಹೆಚ್ಚಿನ ವ್ಯಾಸವನ್ನು ಹೊಂದಿವೆ. ಇದರ ಮೇಲಿನ ಬೋದಿಗೆ ಸುಮಾರು ಮೂರು ಜನರು ನಿಲ್ಲುವಷ್ಟು ಕೊಠಡಿಗೆ ಅವಕಾಶವನ್ನು ಒದಗಿಸಬಲ್ಲದು.

ಈಜಿಪ್ಟಿನ ಶಿಲ್ಪ ಮತ್ತು ಚಿತ್ರಕಲೆಗಳು ವಾಸ್ತುವಿನ ಚೆಲುವನ್ನು ಹೆಚ್ಚಿಸಲು ಪೂರಕವಾಗಿದ್ದವು. ಫೆರೋವರ ಪ್ರತಿಮೆಗಳು ಸಾಮಾನ್ಯವಾಗಿ ಬೃಹದಾಕಾರವಾಗಿದ್ದವು. ನೂತನ ರಾಜ್ಯಾಡಳಿತದ ಕಾಲದಲ್ಲಿ ನಿರ್ಮಾಣವಾದ ಶಿಲ್ಪಗಳು ಎಪ್ಪತ್ತೈದು ಅಡಿಗಳಿಂದ ತೊಂಬತ್ತು ಅಡಿಗಳವರೆಗೂ ಎತ್ತರವಾಗಿದ್ದವು. ಕೆಲವೊಮ್ಮೆ ಅವುಗಳಿಗೆ ಬಣ್ಣವನ್ನು ತುಂಬಿ ನೈಜತೆಯನ್ನು ತೋರಿಸಲಾಗುತ್ತಿತ್ತು. ಬಣ್ಣದ ಶಿಲಾಸ್ಫಟಿಕಗಳಿಂದ ಕಣ್ಣುಗಳ ಆಕೃತಿಗಳನ್ನು ಮಾಡಿ, ಶಿಲ್ಪಗಳ ಕಣ್ಣಿನ ಭಾಗಗಳಲ್ಲಿ ಹುದುಗಿಸಿದ್ದಾರೆ. ಇದರಿಂದ ನೈಜವೆನ್ನುವ ಭ್ರಮೆ ತುಂಬಿಬರುತ್ತವೆ. ಮುಖಭಾವವನ್ನು ನಿರ್ವಿಕಾರವಾಗಿ ಹಾಗೂ ಭಾವೋದ್ವೇಗರಹಿತವಾಗಿ ರೂಪಿಸಲಾಗಿದೆ. ಶರೀರ ರಚನಾಭಾಗವನ್ನು ಯಥಾರ್ಥವಾಗಿ ಮಾಡಿಲ್ಲದಿರುವುದನ್ನೂ ಕಾಣಬಹುದು. ತೊಡೆಯ ಉದ್ದವನ್ನು ಇರಬೇಕಾಗಿದ್ದಕ್ಕಿಂತ ಹೆಚ್ಚು ಉದ್ದವಾಗಿ ತೋರಿಸಿರುವುದುಂಟು. ಹೆಗಲಿನ ಚೌಕವನ್ನು ಹೆಚ್ಚು ಮಾಡಿರುವುದು ಹಾಗೂ ಬೆರಳುಗಳನ್ನು ಸಮಾನ ಉದ್ದವಾಗಿ ರೂಪಿಸಿರುವುದನ್ನು ಕಾಣಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ನೈಜರಹಿತವಾದ ಸ್ಫಿಂಕ್ಸ್ ಶಿಲ್ಪ. ಈ ಶಿಲ್ಪ ಈಜಿಪ್ಟಿನಲ್ಲಿ ಸಾವಿರಾರು ಸಂಖ್ಯೆಯಲ್ಲಿ ದೊರೆಯುತ್ತವೆ. ಗಿಜೆಯಲ್ಲಿರುವ ಸ್ಫಿಂಕ್ಸ್‌ನ ಮಹಾನ್ ಶಿಲ್ಪ ಪ್ರಸಿದ್ಧವಾದುದು. ಇದರಲ್ಲಿ ಫೆರೋವನ ಶಿರವನ್ನು ಸಿಂಹದ ದೇಹಕ್ಕೆ ಜೋಡಿಸಲಾಗಿದೆ. ಫೆರೋವ ಸಿಂಹದ ಧೈರ್ಯ ಮತ್ತು ಬಲವನ್ನು ಪಡೆದಿದ್ದಾನೆಂದು ಸಾಂಕೇತಿಕವಾಗಿ ತೋರಿಸುವುದೇ ಈ ಶಿಲ್ಪದ ಉದ್ದೇಶ.

ಈಜಿಪ್ಟಿನ ಶಿಲ್ಪಗಳ ಅರ್ಥವನ್ನು ಗ್ರಹಿಸುವುದು ಕಷ್ಟವೇನಲ್ಲ. ಫೆರೋವರ ಬೃಹತ್‌ಶಿಲ್ಪಗಳು ಅವರ ಮತ್ತು ಅವರ ರಾಜ್ಯದ ಬಲವನ್ನು ಪ್ರತಿನಿಧಿಸುತ್ತದೆ. ಅವರ ಸಾಮ್ರಾಜ್ಯ ವಿಸ್ತರಣೆ ಆದಂತೆ ಹಾಗೂ ನಿರಂಕುಶಾಧಿಕಾರ ಬಲವಾದಂತೆ ಶಿಲ್ಪಗಳ ಗಾತ್ರದಲ್ಲಿ ಹೆಚ್ಚಳ ಉಂಟಾಯಿತು. ಸಂಪ್ರದಾಯಬದ್ಧ ಮತ್ತು ನಿರುದ್ವಿಗ್ನ ನಿರೂಪಣೆಯನ್ನು

ರಾಷ್ಟ್ರೀಯ ಬದುಕಿನ ಭದ್ರತೆಯನ್ನು ಮತ್ತು ಕಾಲಾತೀತತೆಯನ್ನು ಧ್ವನಿಸುತ್ತವೆ. ಯಾವುದೇ ಅದೃಷ್ಟದ ಏರಿಳಿತದಲ್ಲಿ ಛಿದ್ರವಾಗದ ಹಾಗೂ ನಾಶವಾಗದ ನಂಬಿಕೆಯನ್ನು ಈ ಶಿಲ್ಪಗಳು ತಿಳಿಸುತ್ತವೆ. ಗಣ್ಯ ವ್ಯಕ್ತಿಗಳ ಪ್ರತಿಕೃತಿಗಳೂ ಕೂಡ ಕಾತುರ, ಭಯ ಮತ್ತು ವಿಜಯೋತ್ಸವದ ಸಂಭ್ರಮವನ್ನು ಚಿತ್ರಿಸದೆ ನಿರಂತರ ಪ್ರಶಾಂತತೆಯನ್ನು ಉಳಿಸಿಕೊಂಡಿವೆ. ಕೆಲರಾಷ್ಟ್ರೀಯ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವ ಉದ್ದೇಶದಿಂದಲೇ ಶಾರೀರಿಕ ಅಂಗ ಗಳನ್ನು ವರ್ಗೀಕರಿಸಿರುವುದು ಕಂಡುಬರುತ್ತದೆ.

ಈಜಿಪ್ಟಿನ ಕಲಾಪರಂಪರೆಯ ಪ್ರಗತಿಯ ಪ್ರಮುಖ ಮಜಲನ್ನು ಕಾಣುವುದು ಅಖೆನಾಟನ್‌ನ ಆಳ್ವಿಕೆಯ ಕಾಲದಲ್ಲಿ. ಕಲೆಯನ್ನೂ ಒಳಗೊಂಡಂತೆ ಈಜಿಪ್ಟಿನ ಧಾರ್ಮಿಕ ಪರಂಪರೆಯನ್ನು ತೊರೆದು ಭಿನ್ನವಾಗಿ ನಡೆದ ಇವನು ಅಂದಿನ ಕಲಾಕ್ರಾಂತಿಗೆ ಮೂಲಪುರುಷನಾದ. ಹೊಸ ಕಲಾಶೈಲಿಯು ನೈಜಾತ್ಮಕವಾಗಿತ್ತು. ಈ ಹೊಸ ಫೆರೋವ ನಿಸರ್ಗವನ್ನು ಪ್ರೀತಿಸಿದ್ದರಿಂದ ಅಂತಹ ವ್ಯವಸ್ಥೆ ಜಾರಿಗೆ ಬರಲು ಕಾರಣವಾಯಿತು. ಅವನ ಮತ್ತು ಅವನ ಮಡದಿಯ ನೆಫರ್‌ಟಿಟಿಯರ ವ್ಯಕ್ತಿಶಿಲ್ಪಗಳಲ್ಲಿ ಹಿಂದಿನ ನಿರುದ್ವಿಗ್ನ ಬೃಹದಾಕಾರವನ್ನು ಕೈಬಿಟ್ಟು, ನೈಜ ವಿವರಣೆಗಳಿಗೆ ಆದ್ಯತೆ ಕೊಡಲಾಯಿತು. ತದೇಕ ಚಿತ್ತದಿಂದ ನೋಡುವ ಹಾಗೂ ಸ್ತ್ರೀ ಸಹಜ ಲಾವಣ್ಯದಿಂದ ಕೂಡಿದ ನೆಫರ್‌ಟಿಟಿಯರ ಮೂರ್ತಿ ಕಲಾ ಇತಿಹಾಸದಲ್ಲೇ ಅಪೂರ್ವ ಸಾಧನೆ. ಇವೇ ಕಾರಣದಿಂದ ಅಖೆನಾಟನ್‌ನ ಆಶ್ರಯದಲ್ಲಿ ರೂಪಗೊಂಡ ಚಿತ್ರಗಳೂ ಕೂಡ ಅತ್ಯುನ್ನತ, ಭಾವಗರ್ಭಿತ ಕಲಾ ಮಾಧ್ಯಮಗಳಾಗಿವೆ ಈ ಕಾಲದ ಭಿತ್ತಿಚಿತ್ರಗಳು ಕ್ರಿಯಾಶೀಲತೆಗೆ ಹೆಸರಾಗಿವೆ. ಅಖೆನಾಟನ್‌ನ ಧರ್ಮ ಸುಧಾರಣೆಗಳು ದೀರ್ಘಕಾಲ ಹೇಗೆ ಉಳಿಯಲಿಲ್ಲವೋ, ಅದೇ ರೀತಿ ಕಲೆಯೂ ಉಳಿಯಲಿಲ್ಲ.

### ಉಪಸಂಹಾರ

ನಾಗರಿಕ ಔನ್ನತ್ಯದಲ್ಲಿ ಈಜಿಪ್ಟಿನ ಸಾಧನೆಗಳನ್ನು ಸರಿಗಟ್ಟುವ ರಾಷ್ಟ್ರ ಮತ್ತೊಂದಿಲ್ಲ. ವಿಜ್ಞಾನ ಮತ್ತು ಗಣಿತದ ಕೆಲವೊಂದು ಪ್ರಮುಖ ಅಂಶಗಳು ಹುಟ್ಟಿಕೊಂಡಿದ್ದು ನೈಲ್ ನದಿಯ ಬಯಲಿನಲ್ಲಿ. ನೀರಾವರಿ, ಮಡಿಕೆ ಮತ್ತು ಗಾಜನ್ನು ತಯಾರು ಮಾಡುವಿಕೆ ಮುಂತಾದ ವಿಷಯಗಳಲ್ಲಿ ಕರಾರುವಕ್ಕಾದ ತಂತ್ರವನ್ನು ಅವರು ಅರಿತಿದ್ದರು. ಕಲೆಯ ಬಗ್ಗೆ ಸ್ಪಷ್ಟವಾದ ಜ್ಞಾನವನ್ನು ಜಗತ್ತಿನ ಇತಿಹಾಸದಲ್ಲಿ ಮೊದಲಿಗೆ ಪಡೆದಿದ್ದರು. ಈಜಿಪ್ಟರು ವಾಸ್ತುವಿದ್ಯೆಯ ತತ್ವಗಳನ್ನು ನಿಖರವಾಗಿ ಅರಿತಿದ್ದರು.

ಧಾರ್ಮಿಕ ಮತ್ತು ನೈತಿಕ ಭಾವನೆಗಳ ಬಗ್ಗೆಯೂ ಖಚಿತವಾದ ತಿಳುವಳಿಕೆಯನ್ನು ಪಡೆದಿದ್ದರು. ಪರ್ಶಿಯನ್ನರನ್ನು ಹೊರತು ಪಡಿಸಿದರೆ, ರಾಷ್ಟ್ರೀಯ ಧರ್ಮವನ್ನು ರೂಪಿಸಿದ್ದವರು ಇವರೇ. ವೈಯಕ್ತಿಕ ಅಮರತ್ವದ ನೆಲೆಯಲ್ಲಿ ಸಾವಿನ ನಂತರ ನಾಕ ನರಕಗಳ ಭಾವನೆಯನ್ನು ಈಜಿಪ್ಟರು ನಿರೂಪಿಸಿದ್ದರು. ಏಕದೈವೋಪಾಸನೆಯನ್ನು ಅಟೋನ್‌ನ ಆರಾಧನೆಯಲ್ಲಿ ಈಜಿಪ್ಟಿನ ನೈತಿಕ ವಿಧಿವಿಧಾನಗಳಲ್ಲಿ ಕಳವು ಕೊಲೆ ಮುಂತಾದ

ಅಪರಾಧಗಳು ನಿಷಿದ್ಧವೆಂದು ಪರಿಗಣಿಸಲಾಗಿತ್ತು ಹಾಗೂ ಉದಾತ್ತ ಭಾವನೆಗಳೆನಿಸಿದ್ದ ನ್ಯಾಯ, ಪ್ರಗತಿಪರತೆ, ಸಮಾನಹಕ್ಕು ಮುಂತಾದ ತತ್ವಗಳು ಸೇರ್ಪಡೆಯಾಗಿದ್ದವು. ಈಜಿಪ್ಟಿನ ನಾಗರಿಕತೆಯು ಮಹತ್ತರ ಸಾಧನೆಯ ಆಗರವೆನಿಸಿದೆ.

## ಪರಾಮರ್ಶನ ಗ್ರಂಥ


೧. ಆಫ್ರಿಕಾ ಇನ್ ದಿ ಟ್ವೆಂಟಿ ಫಸ್ಟ್ ಸೆಂಚುರಿ ಎ ಫ್ಯೂಚರಿಸ್ಟಿಕ್ ಎಕ್ಸರ್‌ಸೈಜ್

೨. ಬೆಸಿಲ್ ಡೇವಿಡ್ಸನ್, ೧೯೭೩. ವಿಚ್ ವೇ ಆಫ್ರಿಕಾ?, ಮೂರನೆಯ ಮುದ್ರಣ, ಲಂಡನ್: ಪೆಂಗ್ವಿನ್ ಬುಕ್ಸ್.

೩. ಡಾರ್ಲಿನ್ ಮಿಲ್ಲರ್ ಮತ್ತು ಗ್ರೆಗ್, ೨೦೦೧. ದಿ ಸೌತ್ ಆಫ್ರಿಕನ್ ವರ್ಕಿಂಗ್ ಕ್ಲಾಸ್ ಪ್ರೊಡಕ್ಷನ್, ರಿಪ್ರೊಡಕ್ಷನ್ ಅಂಡ್ ಪಾಲಿಟಿಕ್ಸ್ ಪ್ಯಾಬ್ರಿಕ್ ಬಾಂಡ್, ರಾಯಟರ್ಸ್ ಸೋಷಿಯಲಿಸ್ಟ್ ರಿಜಿಸ್ಟರ್.

೨

# ಯುರೋಪಿಯನ್ನರ ಆಗಮನದವರೆಗಿನ ಆಫ್ರಿಕಾ

ಡಿ. ಸರಿತಾ
ಅನುವಾದ: ಎಂ. ಜೈಕುಮಾರ್

ಮಾನವ ಮತ್ತು ಮಾನವ ಸ್ವರೂಪದ ಪ್ರಾಣಿಗಳ ಆದಿರೂಪವು ಉಗಮವಾದದ್ದು ಆಫ್ರಿಕಾದಲ್ಲಿ ಎಂಬುದು ಪುರಾತತ್ವ ಶೋಧನೆಗಳಿಂದ ತಿಳಿದುಬಂದಿದೆ. ೧೯೬೦ ಹಾಗೂ ೧೯೭೦ರ ದಶಕಗಳಲ್ಲಿ ಇಥಿಯೋಪಿಯಾ, ಕೀನ್ಯಾ ಮತ್ತು ಟಾಂಜೇನಿಯಾಗಳಲ್ಲಿ ಕೆಲಸ ಮಾಡುತ್ತಿದ್ದ ವಿಜ್ಞಾನಿಗಳು, ೩೭,೫೦,೦೦೦ ವರ್ಷಗಳಷ್ಟು ಹಿಂದಿನ ಪ್ರಾಗೈತಿಹಾಸಿಕ ಮಾನವರ ಅಸ್ಥಿಪಂಜರಗಳನ್ನು ಪತ್ತೆ ಹಚ್ಚಿದ್ದಾರೆ. ನಮಗೆ ಕರಾರುವಾಕ್ಕಾಗಿ ತಿಳಿದಿರುವಂತೆ ಅತಿ ಪ್ರಾಚೀನ ಆಫ್ರಿಕಾ ಜನತೆ ಸುಮಾರು ಹತ್ತು ಸಾವಿರ ವರ್ಷಗಳ ಹಿಂದೆ, ಚೆನ್ನಾಗಿ ಮಳೆಬಿದ್ದು ಸಸ್ಯರಾಶಿಗಳಿಂದ ನಳನಳಿಸುತ್ತಿದ್ದ ಸಹಾರಾ ಪ್ರದೇಶದಲ್ಲಿ ವಾಸಿಸುತ್ತಿದ್ದರು. ತಮ್ಮ ಸಂಸ್ಕೃತಿಯ ದಾಖಲೆಗಳಾಗಿ ಅವರು ಅನೇಕ ಗುಹಾ ವರ್ಣಚಿತ್ರಗಳನ್ನು ಬಿಟ್ಟು ಹೋಗಿದ್ದಾರೆ. ಈ ಪೂರ್ವಮಾನವರು ಮೀನು ಹಿಡಿದು ಜೀವಿಸುತ್ತಿದ್ದರು. ಆದರೆ ಬಹುಶಃ ಕ್ರಿ.ಪೂ.೫೦೦೦ದ ಸುಮಾರಿಗೆ ಹವಾಮಾನ ಶುಷ್ಕವಾಗುತ್ತ ಬಂದು ಮರುಭೂಮಿ ಉಂಟಾಗಲು ಪ್ರಾರಂಭವಾದಾಗ, ಈ ಸಹರಾದ ಜನತೆ ಎಲ್ಲೆಡೆ ಚದುರಿ ಹೋಗಿ ಅವರ ಸಂಸ್ಕೃತಿ ನಾಶಗೊಂಡಂತೆ ಕಂಡುಬರುತ್ತದೆ. ಮನುಷ್ಯ ಕಾಡಿನೊಳಕ್ಕೆ ವಲಸೆ ಹೋದ ಮೇಲೆ ಒಂದು ಸ್ಪಷ್ಟವಾದ ನಿಗ್ರಾಯ್ಡ್ ಬುಡಕಟ್ಟು, ಹೋಮೊಸೆಪಿಯನ್ ಆಗಿ ವಿಕಾಸ ಹೊಂದಿ ಉತ್ತರ ಹಾಗು ಪೂರ್ವದಲ್ಲಿ ಹೆಚ್ಚು ಪ್ರಬಲಗೊಂಡಿತು. ತನ್ನ ಅತಿಪೂರ್ವ ಉಗಮದಲ್ಲಿ ಒಂದು ಬುಷ್ ಬುಡಕಟ್ಟು ರೂಪುಗೊಂಡು ಆಧುನಿಕ ಬುಷ್‌ಮನ್ ಜನಾಂಗದ ಪೂರ್ವಿಕರು ರೂಪುಗೊಂಡರು. ಪ್ರಾಚೀನ ಶಿಲಾಯುಗದ ಮೇಲು ಅವಧಿಯ ಕಾಲಕ್ಕೆ ಅಂದರೆ ೧೦,೦೦೦ ವರ್ಷಗಳ ಹಿಂದೆ ಆಫ್ರಿಕಾದಲ್ಲಿ ಇನ್ನೂ ಎರಡು ಜನಾಂಗಗಳು ರೂಪುಗೊಂಡವು. ನೀಗ್ರೋಗಳು ಮತ್ತು ಬುಷ್ ಜನಾಂಗದವರ ಜೊತೆಗೆ ಪಿಗ್ಮಿ ಜನಾಂಗ ಸೇರಿಕೊಂಡಿತು.

ಬಹುಶಃ ಇದು ನೀಗ್ರೋ ಮತ್ತು ಬುಷ್ ಬುಡಕಟ್ಟುಗಳಿಂದ ಬಂದ ಪೀಳಿಗೆಯೇ ಇರಬೇಕು. ಉತ್ತರ ಮತ್ತು ಪೂರ್ವ ಆಫ್ರಿಕಾದಲ್ಲಿ ನೈರುತ್ಯ ಏಷ್ಯಾದ ಜನರ ಸಂಸರ್ಗದಿಂದಾಗಿ ಅವರ ಗುಣಲಕ್ಷಣವುಳ್ಳ ನಸುಗಪ್ಪು ಬಣ್ಣದ ಚರ್ಮದ ಪ್ರೋಟೋಹ್ಯಾಮೈಟ್ ಜನರು ಹುಟ್ಟಿಕೊಂಡರು.

ಆಫ್ರಿಕಾದ ಇತಿಹಾಸವು ಈಜಿಪ್ಟಿನ ನಾಗರಿಕತೆಯೊಂದಿಗೆ ಪ್ರಾರಂಭವಾಗುತ್ತದೆ. ಹೀಗಿದ್ದರೂ ಈಜಿಪ್ಟಿನ ಈ ವಿಶಿಷ್ಟ ಚರಿತ್ರೆಯನ್ನು ಪುಸ್ತಕ ಸಮೀಕ್ಷೆಯಲ್ಲಿ ಇನ್ನುಳಿದ ಆಫ್ರಿಕಾದ ಭಾಗಗಳಿಗಿಂತ ಮೆಡಿಟರೇನಿಯನ್ ಜಗತ್ತಿಗೆ ಸೇರಿರುವ ಕಾರಣ ಕೈಬಿಡಲಾಗಿದೆ. ಕ್ರಿ.ಪೂ.೪೦೦೦ದ ಸುಮಾರಿಗೆ ಈಜಿಪ್ಟರು ಮರಳು ಗುಡ್ಡಗಾಡು ಪ್ರದೇಶದಿಂದ ಫಲವತ್ತಾದ ನೈಲ್ ನದಿಯ ತೀರಕ್ಕೆ ಇಳಿದುಬಂದರು. ಇದಾದ ತರುವಾಯ ಜನಸಂಖ್ಯೆ ಹೆಚ್ಚಿತು ಮತ್ತು ಬೌದ್ಧಿಕ ವಾಗಿ, ಸಾಂಸ್ಕೃತಿಕವಾಗಿ ಮತ್ತು ಯುದ್ಧತಂತ್ರದಲ್ಲಿ ನಿಪುಣರಾದ ಒಂದು ಪ್ರಜ್ವಲ ನಾಗರಿಕತೆ ಬೆಳೆದು ಈಜಿಪ್ಟ್ ಕ್ರಿ.ಪೂ.೩೦೦೦ರಿಂದ ೧೦೦೦ದವರೆಗೆ ವಿಜೃಂಭಿಸಿತು. ಚಿನ್ನ, ದಂತ ಮತ್ತು ಗುಲಾಮರ ಮೂಲಸ್ಥಾನವಾದ ನೈಲ್‌ನ ದಕ್ಷಿಣ ಪ್ರದೇಶವನ್ನು ಸೇರಿಸಿ ಕೊಳ್ಳ ಲಾಯಿತು. ಸಮುದ್ರ ವ್ಯಾಪಾರವನ್ನು ಅರೇಬಿಯ, ಮೆಸಪೊಟೋಮಿಯಾ, ಫಿನೇಷಿಯಾ ಮತ್ತು ಗ್ರೀಕ್(ಏಜಿಯನ್) ಸಮುದ್ರದ ದ್ವೀಪಗಳೊಂದಿಗೆ ಪ್ರಾರಂಭಿಸಲಾಯಿತು. ಹಸಿರಾದ ಮತ್ತು ಸಂಪತ್ ಸಮೃದ್ಧವಾದ ಈಜಿಪ್ಟ್ ಪಶ್ಚಿಮದ ಲಿಬಿಯಾದ ಅಲೆಮಾರಿ (ಮುಂದೆ ಅವರನ್ನು ಬರ್ಬರರು ಎಂದು ಕರೆಯಲಾಗಿದೆ) ಜನರನ್ನು ಆಕರ್ಷಿಸಿತು. ಕ್ರಿ.ಪೂ.೧೩ನೇ ಶತಮಾನದಲ್ಲಿ ನಡೆಸಿದ ದಾಳಿಯಲ್ಲಿ ಅವರನ್ನು ಸೋಲಿಸಲಾಯಿತು. ಆದರೆ ಕ್ರಿ.ಪೂ.೧೦ನೇ ಶತಮಾನದಲ್ಲಿ ಅವರು ವಿಜೇತರಾದರು ಮತ್ತು ಈಜಿಪ್ಟನ್ನು ನೂರು ವರ್ಷಕ್ಕೂ ಹೆಚ್ಚು ಕಾಲ ಆಳಿದರು. ಲಿಬಿಯಾದ ರಾಜರುಗಳ ತರುವಾಯ ಕ್ರಿ.ಪೂ. ೭ನೇ ಶತಮಾನದಲ್ಲಿ ಈಜಿಪ್ಟಿನ ದಕ್ಷಿಣ ಭಾಗದ ಒಂದು ರಾಜ್ಯವಾದ ಕುಷ್‌ನ ಒಂದು ರಾಜವಂಶ ಆಳ್ವಿಕೆ ನಡೆಸಿತು. ಈ ರಾಜ್ಯ ಒಂದಾದ ನಂತರ ಒಂದರಂತೆ, ಪರ್ಷಿಯನ್ನರು, ಗ್ರೀಕರು ಮತ್ತು ಬೈಜಾಂಟಿಯನ್ನರ ಆಳ್ವಿಕೆಗೆ ಒಳಗಾಯಿತು.

## ಫಿನೀಷಿಯನ್ನರು ಮತ್ತು ಗ್ರೀಕರು

ಮೆಡಿಟರೇನಿಯನ್ ಪ್ರದೇಶದ ಪ್ರಪ್ರಥಮ ನೌಕಾಯಾತ್ರಿ ಜನಾಂಗವಾದ ಫಿನೀಷಿಯನ್ನರು ಟುನಿಷಿಯಾದ ಕಡಲ ತೀರದಲ್ಲಿ ವಸಾಹತು ನಿರ್ಮಾಣವನ್ನು ಕ್ರಿ.ಪೂ. ೯ನೆಯ ಶತಮಾನದಲ್ಲಿ ಪ್ರಾರಂಭಿಸಿ, ಯುಟಿಕಾದಲ್ಲಿ ಮೊದಲು ನೆಲಸಿದರು. ತರುವಾಯ ಅನೇಕ ನೈಸರ್ಗಿಕ ಅನುಕೂಲಗಳಿದ್ದಂತಹ ಕಾರ್ಥೇಜಿನಲ್ಲಿ ಪ್ರಸಿದ್ಧ ನಗರ ರಾಜ್ಯವನ್ನು ಸ್ಥಾಪಿಸಲಾಯಿತು. ಕಾರ್ಥೇಜ್ ಮೊರಾಕ್ಕೋದ ಪಶ್ಚಿಮಭಾಗದಿಂದ ಹಿಡಿದು ಮೆಡಿಟರೇನಿಯನ್ ಸಮುದ್ರವನ್ನೂ ಹಾಯ್ದು ಸ್ಪೈನ್ ಮತ್ತು ಸಿಸಿಲಿಗಳವರೆಗೆ ಹಬ್ಬಿದ್ದ ಒಂದು ಸಾಮ್ರಾಜ್ಯದ ಕೇಂದ್ರಸ್ಥಾನವಾಯಿತು. ಕಾರ್ಥೇಜಿಯನ್ನರು ಪ್ರಮುಖವಾಗಿ ನೌಕಾ ವ್ಯಾಪಾರದಲ್ಲಿ ಆಸಕ್ತರಾಗಿದ್ದರು. ಮತ್ತು ತಮ್ಮ ತೀರದಿಂದ ಬಲುದೂರಕ್ಕೆ ಹೋಗುವ ಪ್ರಯತ್ನಕ್ಕೆ

ತೊಡಗಲಿಲ್ಲ. ಅವರ ಚಟುವಟಿಕೆಗಳು ಮೆಡಿಟರೇನಿಯನ್ ಮತ್ತು ಅಟ್ಲಾಂಟಿಕ್ ಹಾಗೂ ದಕ್ಷಿಣ ಮೊರಾಕ್ಕೊದ ಸಮುದ್ರದವರೆಗೆ ಹಬ್ಬಿದ್ದ ಮರುಭೂಮಿ ಕ್ಷೇತ್ರಗಳ ಒಂದು ಮಾರಾಟ ಕೇಂದ್ರಗಳ ಸರಣಿಗೆ ಹೋಗುವುದಕ್ಕೆ ಮಾತ್ರ ಕೇಂದ್ರೀಕೃತವಾಗಿತ್ತು. ಕ್ರಿ.ಪೂ.೫ನೆಯ ಶತಮಾನದಲ್ಲಿ ಹನ್ನೋ ಆಧುನಿಕ ಸಿಯಾರಾಲಿಯೋನ್ ಪ್ರದೇಶದವರೆಗೂ ಯಾತ್ರೆ ಕೈಗೊಂಡಿದ್ದನು. ಕಾರ್ಥೇಜಿನ ಉಚ್ಛ್ರಾಯ ಕಾಲದಲ್ಲಿ ಗ್ರೀಕ್‌ನ ಶಕ್ತಿ ವರ್ಧಿಸಲಾರಂಭಿಸಿತು. ಗ್ರೀಕ್ ದೇಶದ ತೀರದ ಎದುರಿನ ಸಿರಿನೇಷಿಯಾದಲ್ಲಿ ಒಂದು ಗ್ರೀಕ್ ವಸಾಹತು ನೆಲಸಿತು. ಇದರ ಪರಿಣಾಮವಾಗಿ ಸಿರೋನೇಷಿಯಾದ ಗ್ರೀಕ್ ವಸಾಹತು ಮತ್ತು ಪಶ್ಚಿಮದ ಕಾರ್ಥೇಜಿನ ನಡುವೆ ಸೀಮಾರೇಖೆಯ ಇತ್ಯರ್ಥದ ವಿಷಯದಲ್ಲಿ ಗ್ರೀಕರು ಮತ್ತು ಕಾರ್ಥೇಜಿಯನ್ನರ ನಡುವೆ ಮೊದಲ ವಿವಾದ ಪ್ರಾರಂಭವಾಯಿತು. ಉತ್ತರ ಆಫ್ರಿಕಾ ಹಾಗೂ ಗ್ರೀಕರು ಇಬ್ಬರಿಗೂ ಪ್ಯೂನಿಕ್ ಸಾಮಾನ್ಯ ವ್ಯಾಪಾರ ಭಾಷೆಯಾಯಿತು. ಗ್ರೀಕರೊಂದಿಗೆ ಯುದ್ಧವು ಮೆಡಿಟರೇನಿಯನ್ ಸುತ್ತಲೆಲ್ಲ ಅದರಲ್ಲೂ ಸಿಸಿಲಿ ಮತ್ತು ದಕ್ಷಿಣ ಇಟಲಿ ಭಾಗಗಳಲ್ಲಿ ಶತಮಾನಗಳಿಂದ ಮುಂದುವರಿಯಿತು. ಕ್ರಿ.ಪೂ.೩೦೦ರ ಹೊತ್ತಿಗೆ ಕಾರ್ಥೇಜಿಯನ್ನರು ಟಿರ್ಹೇನಿಯನ್ ಸಮುದ್ರ ಹಾಗೂ ಸಿಸಿಲಿಗಳಲ್ಲಿ ಸರ್ವಶ್ರೇಷ್ಠರಾದರು. ಆದರೆ ರೋಮ್‌ನ ಪ್ರಾಬಲ್ಯ ಬೆಳೆದಂತೆ ಅದು ಅವರಿಗೆ ಬೆದರಿಕೆ ಒಡ್ಡಿತು.

ರೋಮ್‌ನಲ್ಲಿ ಕ್ರಿ.ಪೂ.೨೬೪ರಿಂದ ೧೪೬ರ ನಡುವೆ ನಡೆದ ಮೂರು ಪ್ಯೂನಿಕ್ ಯುದ್ಧಗಳು ಕಾರ್ಥೇಜಿನ ಶಕ್ತಿಯನ್ನು ಪೂರ್ಣವಾಗಿ ನಿರ್ನಾಮ ಮಾಡಿದವು. ಕಾರ್ಥೇಜ್ ಪ್ರದೇಶ 'ಆಫ್ರಿಕಾ' ಎಂಬ ಹೆಸರಿನ ಪ್ರಾಂತವಾಯಿತು. ರೋಂ ತನ್ನ ಉತ್ತರ ಆಫ್ರಿಕಾದ ಪ್ರಾಂತ್ಯಗಳನ್ನು ಕ್ರಮೇಣ ಪೂರ್ವ ಪಶ್ಚಿಮಕ್ಕೆ ವಿಸ್ತರಿಸುತ್ತ ಬಂದಿತು. ಅದು ಸಿರ್ರೆನೇಷಿಯಾವನ್ನು ಕ್ರಿ.ಪೂ.೯೬ರಲ್ಲಿ ತನ್ನೊಳಗೆ ಸೇರಿಸಿಕೊಂಡಿತು. ನುಮಿಡಿಯಾವನ್ನು (ಆಧುನಿಕ ಅಲ್ಜೀರಿಯಾ ತೀರಪ್ರದೇಶವೆಂದು ಸ್ಥೂಲವಾಗಿ ಹೇಳಬಹುದು) ಕ್ರಿ.ಪೂ.೪೬ರಲ್ಲಿ ಈಜಿಪ್ಟರು ವಶಪಡಿಸಿಕೊಂಡರು. ಲಿಬಿಯಾದ ಅಲೆಮಾರಿಗಳಲ್ಲಿ ಬರ್ಬರರಲ್ಲಿ ಕೆಲವರನ್ನು ಪರಿವರ್ತಿಸಿ ಬೇಸಾಯಗಾರರನ್ನು ನೆಲಸುಜೀವನಕ್ಕೆ ತೊಡಗುವಂತೆ ಮಾಡಿದರು. ಈಜಿಪ್ಟಿನ ಪಶ್ಚಿಮ ಭಾಗದ ಆಫ್ರಿಕಾದಲ್ಲಿನ ರೋಮನ್ನರು ಮೆಡಿಟರೇನಿಯನ್ ತೀರದ ಪಶ್ಚಿಮ ಭಾಗದುದ್ದಕ್ಕೂ, ಅಲ್ಲಿ ಸಾಕಷ್ಟು ಮಳೆಯಾಗಿ ಚೆನ್ನಾಗಿ ಬೆಳೆ ಬರುತ್ತಿದ್ದ ಕಾರಣ ನೆಲಸಿದರು. ಕ್ರೈಸ್ತ ಯುಗ ಪ್ರಾರಂಭ ವಾಗುವುದಕ್ಕೆ ಮೊದಲೇ ಸೈರಿನ್ ಗತಾವಶೇಷವಾಯಿತು. ಪ್ರಮುಖ ನಗರಗಳೆಂದರೆ ಲೆಪ್ಟಿಸ್ ಮ್ಯಾಗ್ನಾ(ಈಗಿನ ಟ್ರಿಪೋಲಿಯಾ ಹತ್ತಿರ), ಕಾರ್ಥೇಜ್ (ಜ್ಯೂಲಿಯಸ್ ಸೀಸರ್ ಮತ್ತು ಅಗಸ್ಟಸ್ ಅವರು ಪುನಃ ನಿರ್ಮಾಣ ಮಾಡಿದ್ದು), ಹಿಪ್ಪ್ಯೂರೇಜಿಸ್ (ಬೋನ್), ಸಿರ್ಟಾ(ಕಾನ್‌ಸ್ಟೈಂಟೈನ್), ಸಿಜೇರಿಯಾ (ಶರ್ಚೆಲ್) ಮತ್ತು ಟೆಂಗಿಲ್(ಟ್ಯಾಂಜೈರಿಸ್) ಬೇಸಾಯ ಪ್ರದೇಶದಿಂದ ದೂರಕ್ಕೆ ವಾಸಿಸುತ್ತಿದ್ದ ಲಿಬಿಯಾದ ಅಲೆಮಾರಿಗಳು ರೋಮನ್ನರ ಆಡಳಿತವನ್ನು ದ್ವೇಷಿಸ ತೊಡಗಿದರು ಮತ್ತು ಕ್ರಿ.ಪೂ.೪ನೆಯ ಶತಮನದ ಉತ್ತರಾರ್ಧದಲ್ಲಿ ನೆಲೆದಾಣಗಳ ಮೇಲೆ ದಾಳಿ ನಡೆಸಿದರು. ರೋಮನ್ನರ ಕಾಲದಲ್ಲಿ ಒಂಟೆ ಉತ್ತರ ಆಫ್ರಿಕಾದ

ಬಲು ಸಾಮಾನ್ಯ ಸಾಕುಪ್ರಾಣಿಯಾಯಿತು. ಇದರಿಂದ ಲಿಬಿಯಾದವರು ಮರುಭೂಮಿಯೊಳಕ್ಕೆ ನುಗ್ಗಿ ಹೋಗಿ ಮೂಲನಿವಾಸಿ ನೀಗ್ರೋಗಳ ಮೇಲೆ ದಬ್ಬಾಳಿಕೆ ಮಾಡುವುದು ಸಾಧ್ಯ ವಾಯಿತು. ಒಂಟೆ ಪೂರ್ವದ ವ್ಯಾಪಾರ ವಾಣಿಜ್ಯದಲ್ಲಿ ಕತ್ತೆಗಳನ್ನು ಮತ್ತು ಎತ್ತುಗಳನ್ನು ಬಹುಶಃ ಹೇರು ಹೊರುವ ಪ್ರಾಣಿಗಳಾಗಿ ಬಳಸುತ್ತಿದ್ದರು. ಕಾರವಾನ್ ಆಗಿ ಒಂಟೆ ಉತ್ತಮ ಪ್ರಾಣಿ ಎಂದು ಅದರ ಬಳಕೆ ಪ್ರಾರಂಭವಾದ ಮೇಲೆ ವ್ಯಾಪಾರದ ಪ್ರಮಾಣ ನಿಸ್ಸಂದೇಹವಾಗಿ ಹೆಚ್ಚಾಯಿತು (ಆದರೆ ಈ ಬದಲಾವಣೆಯ ಜೊತೆಜೊತೆಗೆ ಕಾರವಾನ್ ಮಾರ್ಗಗಳಲ್ಲಿ ಯುದ್ಧಕೋರ ಬುಡಕಟ್ಟುಗಳ ಹಾವಳಿಯೂ ಜಾಸ್ತಿಯಾಯಿತು).

### ವಂಡಾಲರು

ಕ್ರಿ.ಶ.೪೨೯ರಲ್ಲಿ ಸ್ಪೇನಿನ ಒಂದು ಜರ್ಮನ್ ಬುಡಕಟ್ಟು ಜನಾಂಗವಾದ ವಂಡಾಲರು ಗ್ರಿಬ್ರಾಲ್ಟರ್ ಸ್ಟ್ರೈಟ್ ಅನ್ನು ದಾಟಿ ಮಾರೆಟೇನಿಯಾಕ್ಕೆ ಬಂದರು. ಹಾಗೆ ಬಂದಿಳಿದ ಅವರನ್ನು ರೋಮನ್ನರಾಗಲೀ ಲಿಬಿಯಾದ ಅಲೆಮಾರಿಗಳಾಗಲಿ ವಿರೋಧಿಸಲಿಲ್ಲ. ವಂಡಾಲರ ನಾಯಕ ಜೆನ್‌ಸೆರಿಕ್ ಅನೇಕ ರಾಜ್ಯಗಳಲ್ಲಿ ಕಗ್ಗೊಲೆ ಎಸಗಿ ಧೂಳಿಪಟ ಮಾಡಿ ಪೂರ್ವದತ್ತ ಸಾಗಿದ. ನುಮಿಡಿಯಾ ಅಧಿಕ್ರಾಂತವಾಯಿತು. ಕ್ರಿ.ಶ.೪೩೯ರಲ್ಲಿ ಕಾರ್ಥೇಜ್ ಲಿಬಿಯಾದವರ ವಶವಾಯಿತು. ಕ್ರಿ.ಶ.೪೫೦ರಲ್ಲಿ ದಕ್ಷಿಣ ಇಟಲಿ ಹಾಗೂ ರೋಂ ಅಧೀನವಾದವು. ಮತ್ತೆ ಆಫ್ರಿಕಾಕ್ಕೆ ಬಂದ ಆತ ಕ್ರಿ.ಶ.೪೬೮ರಲ್ಲಿ ರೋಮನ್ನರ ದಾಳಿಯನ್ನು ಬಹುಸುಲಭವಾಗಿ ಎದುರಿಸಿ ಹಿಮ್ಮೆಟ್ಟಿಸಿದ. ಜೆನ್ಸರಿಕ್‌ನ ಉತ್ತರಾಧಿಕಾರಿಗಳು ಬಲು ದುರ್ಬಲರಾಗಿದ್ದರು. ೫ನೇ ಶತಮಾನದ ಕೊನೆಯ ಹೊತ್ತಿಗೆ ಅವರು ಮರುಭೂಮಿ ಲಿಬಿಯಾದವರು ದಾಳಿಯನ್ನು ತಡೆಯಲು ಸಾಧ್ಯವಾಗಲಿಲ್ಲ.

### ಬೈಜಾಂಟೈನ್‌ಗಳು

ಕ್ರಿ.ಶ.ಆರನೇ ಶತಮಾನದ ಹೊತ್ತಿಗೆ ರೋಮನ್ ಚಕ್ರಾಧಿಪತ್ಯದ ಕೇಂದ್ರ ರಾಜಧಾನಿ ರೋಂನಿಂದ ಕಾನ್‌ಸ್ಟಾಂಟಿನೋಪಲ್‌ಗೆ ವರ್ಗವಾಗಿತ್ತು. ಕ್ರಿ.ಪೂ.೫೩೩ರಲ್ಲಿ ಚಕ್ರವರ್ತಿ ಜಸ್ಟಿನಿಯನ್ ತನ್ನ ಸೇನಾಧಿಪತಿ ಬೆಲಿಸಾರಿಯಸ್ ನನ್ನು ಆಫ್ರಿಕಾಕ್ಕೆ ಕಳುಹಿಸಿಕೊಟ್ಟನು. ವಂಡಾಲರ ಪ್ರಾಬಲ್ಯವನ್ನು ಪೂರ್ಣವಾಗಿ ನಿರ್ನಾಮಗೊಳಿಸಲಾಯಿತು. ಆದರೆ ಲಿಬಿಯಾದವರು ಮಾತ್ರ ತಮ್ಮ ದಂಗೆಯನ್ನು ಮುಂದುವರಿಸಿದರು ಮತ್ತು ಐರೋಪ್ಯರ ಪ್ರಭಾವ ತೀರ ಪ್ರದೇಶಗಳಿಗೆ ಮಾತ್ರ ಸೀಮಿತವಾಯಿತು. ಕ್ರಿ.ಶ.೬೦೦ರ ಪ್ರಾರಂಭದಲ್ಲಿ ಪರ್ಷಿಯಾ ಈಜಿಪ್ಟನ್ನು ಮುತ್ತಿಗೆ ಹಾಕಿತು. ಆದರೆ ಬೈಜಾಂಡಿಯನ್ ಚಕ್ರವರ್ತಿ ಹೆರಾಸಿಲಸ್ ಅವರನ್ನು ಒದ್ದೋಡಿಸಿದನು. ಬೈಜಾಂಡಿಯಾದ ಆಡಳಿತ ದಮನ ರೂಪದ್ದಾಗಿದ್ದರೂ ಪ್ರಾಗೈತಿಹಾಸಿಕ ಉಳಿಕೆಗಳು. ಅವರು ಈ ನಾಡಿಗೆ ಆರ್ಥಿಕ ಮತ್ತು ಕಲಾತ್ಮಕ ಪುನರುಜ್ಜೀವನ ಮಾಡಿದರು ಎಂಬುದನ್ನು ತೋರಿಸುತ್ತವೆ.

## ಮುಸ್ಲಿಂರ ದಾಳಿ

ಕ್ರಿ.ಶ.೬೪೫ರಲ್ಲಿ ಅರಬ್ ಪ್ರವಾಸಿ ಮೊಹಮ್ಮದನ ಮುಸ್ಲಿಂ ಅನುಯಾಯಿಗಳು ಮತ್ತು ಆತ ಬೋಧಿಸಿದ ಧರ್ಮವಾದ ಇಸ್ಲಾಂ ಧರ್ಮ ಈಜಿಪ್ಟನ್ನು ಆಕ್ರಮಿಸಿದವು. ಅವರ ಮೊದಲ ಯುದ್ಧಯಾತ್ರೆಗಳು ಈಜಿಪ್ಟಿನ ನೆಲೆಗಳಿಂದ ಹೊರಟು ದಾಳಿ ಮಾಡುವುದು ಮಾತ್ರವಾಗಿದ್ದವು. ಬೈಜಾಂಡಿಯಸ್ ಚರ್ಚ್‌ನಿಂದ ಬೇರ್ಪಟ್ಟಿದ್ದ ಕೋಪ್ಟಿಸ್(ಈಜಿಪ್ತ) ಚರ್ಚ್‌ನ ಸದಸ್ಯರು ತಮಗೆ ಧಾರ್ಮಿಕ ಸ್ವಾತಂತ್ರ್ಯ ಕೊಡುವುದಾದರೆ ತಾವು ಅವರಿಗೆ ಬೆಂಬಲ ನೀಡುವುದಾಗಿ ಒಪ್ಪಿಕೊಂಡರು. ಕ್ರಿ.ಶ.೬೪೨ರಲ್ಲಿ ಆ ದೇಶದಿಂದ ಬೈಜಾಂಡ್ಯೆನರನ್ನು ಹೊರಗೋಡಿಸಲಾಯಿತು ಮತ್ತು ಈಜಿಪ್ಟ್ ಮುಸ್ಲಿಂ ಜಗತ್ತಿನ ಅಂಗಭಾಗವಾಗಿ ಹೋಯಿತು. ಅರ್ ಕ್ವಾಯರವಾನ್‌ನ ಆರಂಭದ(ಆಧುನಿಕ ಟುನೇಷಿಯಾದ ಕೈರುಆನ್) ದಿನಾಂಕದಿಂದ ಮುಸ್ಲಿಂನ ಸ್ಥಾಪನೆಯನ್ನು ಕರಾರುವಾಕ್ಕಾಗಿ ಗುರುತಿಸಬಹುದು. ಅಂದರೆ ಕ್ರಿ.ಶ.೬೭೦ರ ಸುಮಾರಿನ "ಉಕ್ಬಾ ಇಬ್ನ್ ನಫಿ"ಯಿಂದ ಗುರುತಿಸಬಹುದು. ಈ ನಗರವು ತರುವಾಯ ಒಂದು ಪ್ರಮುಖ ಧಾರ್ಮಿಕ ಮತ್ತು ಬೌದ್ಧಿಕ ಕೇಂದ್ರವಾಗಿ ಬೆಳೆಯಿತು. ಅರಬ್ ದಾಳಿಕೋರರ ಮೊದಲ ಆಗಮನ ತೀರ ಚಿಕ್ಕದಾಗಿದ್ದು ಅದು ಜನಾಂಗೀಯವಾಗಿ ಯಾಗಲೀ, ಭಾಷಾವಾರಾಗಲಿ ಯಾವುದೇ ಪರಿಣಾಮ ಬೀರಲಿಲ್ಲ. ಬಾರ್ದೆ ೧೧ನೆಯ ಶತಮಾನದ ಬೆಡೇಯಿನ್ ಆಕ್ರಮಣವಾಗುವವರೆಗೆ ಬಲುಪ್ರಧಾನವಾಗಿ ಒಂದು ಬರ್ಬರ ರಾಷ್ಟ್ರವಾಗಿತ್ತು. ಕ್ರಿ.ಶ.೬೯೮ರಲ್ಲಿ ಕಾರ್ಥೇಜ್ ಅರಬರ ವಶವಾಯಿತು. ಮುಸ್ಲಿಂ ಆಡಳಿತ ಅಲ್-ಕ್ವಯರ್‌ಖಾನ್‌ನನ್ನು ಆಧರಿಸಿತ್ತು ಮತ್ತು ಮೊದಲು ಡಮಾಸ್ಕಸ್ ಅಥವಾ ಬಾಗ್ದಾದ್‌ನ ಖಲೀಫನ ಪ್ರಜೆಗಳಾಗಿದ್ದ ಅಮೀರರ ಆಡಳಿತದಲ್ಲಿತ್ತು. ಆದರೆ ತರುವಾಯ ಅವರ ಸ್ಥಾನಕ್ಕೆ ಕ್ರಿ.ಶ.೮೦೦ರಲ್ಲಿ ಅಗ್ಲಾಬಿಡ್ಡರ ಸ್ವತಂತ್ರ ರಾಜವಂಶ ಬಂದಿತು. ಅಗ್ಲಾಬಿಡ್ಡರ ಆಡಳಿತ ಈಗಿನ ಟ್ಯೂನಿಷಿಯಾ ಮತ್ತು ಪೂರ್ವದ ಅಲ್ಜೀರಿಯಾವನ್ನು ವ್ಯಾಪಿಸಿತು. ಕ್ರಿ.ಶ.೭೮೮ರಲ್ಲಿ ಪ್ರವಾದಿ ಮಹಮ್ಮದನ ವಂಶಜನಾದ ಹಿರಿಯ ಇಡ್ರಿಸ್ ಎಂಬಾತನು ಇಡ್ರಿನಡ್ ರಾಜವಂಶವನ್ನು ಸ್ಥಾಪಿಸಿದನು. ಆತನ ಮಗ ಅದರ ರಾಜಧಾನಿ ಫೆಸ್‌ನನ್ನು ಸ್ಥಾಪಿಸಿದನು. ಮಧ್ಯ ಮಘರಿಬ್‌ನಲ್ಲಿ ರುಸ್ತಮೀರ್‌ಗಳು, ಒಂದು ಖರೀಜಿ ರಾಜ್ಯ ಆಧಾರಿತ ಟಹಾರತ್ ಸ್ಥಾಪಿಸಿದರು. ಹೀಗೆ ಕ್ರಿ.ಶ.೯೦೦ರ ಹೊತ್ತಿಗೆ ಬಾದ್ ಬರಿ ಹೆಚ್ಚು ಕಡಿಮೆ ಸಂಪೂರ್ಣವಾಗಿ ಮುಸ್ಲಿಂರ ಆಡಳಿತಕ್ಕೆ ಒಳಪಟ್ಟಿತ್ತು. ಮುಸ್ಲಿಂ ರಾಜ್ಯಗಳು ಹೀಗಿದ್ದರೂ ಶಾಂತವಾಗಿಯೇನೂ ಇರಲಿಲ್ಲ. ದಾರ್‌ಬರಿಯ ಇತಿಹಾಸ ಎಂದರೆ ಯುದ್ಧ, ದಂಗೆ, ದುರಾಡಳಿತ ಹಾಗೂ ಅರಾಜಕತೆಯು ತುಂಬಿದ ಜುಗುಪ್ಸಾಕಾರಿ ಇತಿಹಾಸ. ಅಗ್ಲಾವಿಡ್ಸ್‌ರ ತರುವಾಯ ಕ್ರಿ.ಶ.೯೦೯ರಲ್ಲಿ ಫಾತಿಮಿಡ್ಸ್ ಬಂದನು. ಫಾತಿಮಿಡ್ಡರು ಮಗಾರಿಬ್‌ನಲ್ಲಿ ರಾಜಕೀಯವಾಗಿ ಮತ್ತು ಸೈನಿಕ ಶಕ್ತಿಯಾಗಿ ಬಹಳ ಯಶಸ್ವಿಯಾಗಿದ್ದರು. ಅವರು ತಮ್ಮ ಪ್ರಜೆಗಳನ್ನು ಯಶಸ್ವಿಯಾಗಿ ತಮ್ಮ ಧರ್ಮಕ್ಕೆ ಪರಿವರ್ತಿಸುವುದು ಸಾಧ್ಯವಾಗಲಿಲ್ಲ. ಕ್ರಿ.ಶ.೯೭೨ರಲ್ಲಿ ಅವರು ತಮ್ಮ ರಾಜಧಾನಿಯನ್ನು ಕೈರೋಗೆ ಬದಲಾಯಿಸಿದರು ಮತ್ತು

ಟುನೀಷಿಯಾದಲ್ಲಿ ಜಿರ್ದೆಗಳನ್ನು ತಮ್ಮ ಸಾಮಂತರಾಗಿ ಬಿಟ್ಟು ಹೋದರು. ತರುವಾಯ ಬೆದೂಯಿನ್‌ಗಳು (ಫಾತಿಮಿಡ್‌ಗಳು ಕಳುಹಿಸಿದ ಅರಬ್ಬ ಅಲೆಮಾರಿ ಬುಡಕಟ್ಟು ಜನರು) ಮಿಘಂಟ್ ಮೇಲೆ ದಾಳಿ ಮಾಡಿದರು. ಇದರಿಂದ ಜನವಸತಿ ಪ್ರದೇಶಗಳು ಅಗಾಧವಾಗಿ ಕುಗ್ಗಿ ಹೋದವು ಮತ್ತು ಸಾಂಸ್ಕೃತಿಕ ಬದುಕು ಹಾಗೂ ಸಮೃದ್ಧಿ ತೀರ ಇಳಿಮುಖವಾಯಿತು ಹಾಗೂ ವಿನಾಶಕಾರಿ ಬೆಡೂಯಿನ್‌ಗಳ ದಾಳಿಯಿಂದಾಗಿ ರಾಜ್ಯಾಡಳಿತ ಮಾಡುವುದು ದುಸ್ತರವಾಯಿತು. ಇಂದಿನ ಅಲ್ಜೀರಿಯಾ ಪ್ರದೇಶವು ಕ್ರಿ.ಶ.೧೯ನೆಯ ಶತಮಾನದಲ್ಲಿ ಫ್ರೆಂಚರ ಆಗಮನದವರೆವಿಗೂ ವಾಸ್ತವವಾಗಿ ಯಾವುದೇ ಕೇಂದ್ರ ಸರ್ಕಾರವಿಲ್ಲದೇ ಉಳಿಯಿತು.

ಲಿಬಿಯಾದ ಅಲೆಮಾರಿಗಳು ಮತ್ತು ಅವರ ಭಾಷೆಯನ್ನು ಬಹಳ ದೂರದ ಜನಸಂಪರ್ಕ ಕಡಿಮೆ ಇರುವ ಪ್ರದೇಶಗಳಿಗೆ ಓಡಿಸಲಾಯಿತು ಮತ್ತು ವಿಶಾಲ ಜನಸಂಪರ್ಕವುಳ್ಳ ನಾಡು ಅರಬ್ಬರ ಮತ್ತು ಅರಾಬಿಕ್ ಭಾಷೆಯ ನೆಲವೀಡಾಯಿತು. ೧೧ನೆಯ ಶತಮಾನದ ಹೊತ್ತಿಗೆ ಸಹರಾ ಮರುಭೂಮಿಯ ಪಶ್ಚಿಮಭಾಗದ ಅಲ್ಮೊರಾವಿಡ್‌ಗಳೆಂಬ ಇನ್ನೊಂದು ರಾಜವಂಶ ಪ್ರಬಲವಾಗುತ್ತ ಬಂದಿತು. ಒರಟು ಸಹರಾ ಸಂಸ್ಕೃತಿಯ ಅಲ್ಮೊರಾವಿಡರು, ಸ್ಪ್ಯಾನಿಷ್ ಮುಸ್ಲಿಂ ಕ್ಷೀಣಿಸುವ ವಿಧಾನಗಳು ಒಮ್ಮೆಲೆ ಪ್ರವೇಶಗೊಂಡದ್ದರಿಂದ ಕೃಶವಾಗುತ್ತಾ ಬಂದು ಒಂದು ಶತಮಾನಕ್ಕೂ ಕಡಿಮೆ ಕಾಲಾವಧಿಯಲ್ಲಿ ಆಲ್ಮೊಹಡ್‌ಗಳಿಗೆ ದಾರಿಮಾಡಿಕೊಟ್ಟರು. ಈ ಲಿಬಿಯಾದ ಅಲೆಮಾರಿಗಳ ರಾಜವಂಶಸ್ಥರು ಮೂಲತಃ ಉನ್ನತ ಅಡ್ಲಾಸ್ ಗಿರಿ ಶ್ರೇಣಿಗಳಿಂದ ಬಂದವರು. ಅಲ್ಮೊಹಾಡ್ ರಾಜವಂಶದವರು ಬಲಪ್ರಯೋಗ ಮತ್ತು ಸ್ನೇಹಸಂಧಾನಗಳ ಚತುರ ಕಾರ್ಯನೀತಿಯನ್ನು ಅರಬ್ಬರೊಂದಿಗೆ ಅನುಸರಿಸುತ್ತ, ನೂರ್‌ನಿಂದ ಟ್ರಿಪೋಲಿವರೆಗಿನ ಎಲ್ಲ ಮಘಾರಿಬ್ ಪ್ರದೇಶವನ್ನು ಏಕೈಕ ಹಾಗೂ ಬಹಳ ಪರಿಣಾಮಕಾರಿಯಾದ ಆಡಳಿತದ ಅಡಿಗೆ ತಂದರು(೧೧೫೯). ಕಾಲ ಸರಿದಂತೆ ಆಲ್ಮೊಹಾಡ್ ಸಾಮ್ರಾಜ್ಯವು ಶಿಥಿಲವಾಗುತ್ತಾ ಬಂತು. ಮೊರಕ್ಕೊದಲ್ಲಿ ಅವರ ಸ್ಥಾನಕ್ಕೆ ಮಾರಿನಿಡ್ ಜನಾಂಗ ಬಂದರು ಮತ್ತು ಟುನೀಷಿಯಾದಲ್ಲಿ ಹಫ್ ಸಿಡ್ ವಂಶಸ್ಥರು ಬಂದರು. ಇವರು ಇದೇ ಕಾರ್ಯನೀತಿ ಮತ್ತು ಇದೇ ಆಡಳಿತ ಯಂತ್ರವನ್ನು ಅನುಸರಿಸುತ್ತಾ ಬಂದರು. ಅರಬ್ಬರನ್ನು ದೂರದಲ್ಲಿರಿಸಿ ರಾಷ್ಟ್ರವನ್ನು ಸಾಕಷ್ಟು ಸಮೃದ್ಧವಾಗಿ ಇರಿಸಿಕೊಂಡು ಬರುವಲ್ಲಿ ಯಶಸ್ವಿಯಾದರು. ತುರುಕರ ಆಗಮನದವರೆಗೂ ಇದು ಸಾಗಿತು.

ಆಲ್ಮೊಹಾಡ್‌ರು ಕಣ್ಮರೆಯಾದ ತರುವಾಯ ಹೊರಜಗತ್ತಿನಲ್ಲಿ ಕ್ರಮೇಣ ಇಳಿಮುಖ ಕಂಡುಬಂತು. ಇದಕ್ಕೆ ಸರಿಯಾಗಿ ಹೊರಗಿನಿಂದ ಸ್ಪೈನಿಯಾರ್ಡ್‌ಗಳು ಮತ್ತು ಪೋರ್ಚುಗೀಸ್‌ಗಳ ಬೆಳವಣಿಗೆ ಕಂಡುಬರುತ್ತದೆ. ೧೨ನೆಯ ಶತಮಾನದಲ್ಲಿ ಸಿಸಿಲಿಯಿಂದ ಸಾರ್ಸನ್‌ಗಳನ್ನು ಹೊರದೂಡಿದ್ದ ನಾರ್ಮನ್ನರು ಟುನೀಷಿಯಾದ ಕರಾವಳಿ ಪ್ರದೇಶವನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡರು ಮತ್ತು ಎರಡು ದಶಕಗಳ ಕಾಲ ಆಳಿದರು. ಪವಿತ್ರ ಭೂಮಿಯಲ್ಲಿ ಮುಸ್ಲಿಂರ ವಿರುದ್ಧ ಕ್ರೈಸ್ತರು ನಡೆಸಿದ ಕ್ರುಸೇಡ್ ಯುದ್ಧದಲ್ಲಿ ಉತ್ತರ ಆಫ್ರಿಕಾದ ಮೇಲೂ ದಾಳಿ ಮಾಡಲಾಯಿತು. ೫ನೆಯ ಮತ್ತು ೭ನೆಯ ಕ್ರುಸೇಡ್

ಯುದ್ಧದಲ್ಲಿ ಈಜಿಪ್ಟಿನ ಮೇಲೆ ದಾಳಿ ಮಾಡಲಾಯಿತು. ೮ನೆಯ ಕ್ರುಸೇಡ್ ಯುದ್ಧದಲ್ಲಿ ಟುನೇಶಿಯಾದ ಮೇಲೆ ದಾಳಿ ಮಾಡಲಾಯಿತು. ೧೨೧೨ರಲ್ಲಿ ಸ್ಪೈನ್‌ನ ಲಾಸ್-ನವಾಗ್-ದ ಕೊಲೋಸಾದಲ್ಲಿ ಕ್ರೈಸ್ತರ ಜಯವಾದಾಗ ಐಬೀರಿಯನ್ ಜಂಬೂ ದ್ವೀಪದಿಂದ ಮೂರ್ ಜನಾಂಗವನ್ನು (ಸ್ಪೈನ್‌ನಲ್ಲಿನ ಆಫ್ರಿಕನ್ನರು) ಹೊರದೂಡಲಾಯಿತು.

## ಆಟೊಮನ್ ಟರ್ಕರು

ಬಾರ್ಬರಿಯಲ್ಲಿ ಟರ್ಕರು ಮೊದಲು ಸ್ಥಾಪಿತವಾದದ್ದು ೧೫೧೧ರಲ್ಲಿ. ಅಲ್ಜೀರಿಯಾದ ಬಿಜ್ಜಿಲ್ಲಿಯಲ್ಲಿ ಖಾಸಗಿ ವ್ಯಾಪಾರಸ್ಥನಾದ ಕಾರ್ಸೈನ್ ಅರುಬ್ ೧೫೧೧ರಲ್ಲಿ ನೆಲೆಯೂರಿದನು ಇಸ್ತಾನ್‌ಬುಲ್‌ನ ಆಟೊಮನ್ ಸರ್ಕಾರ ಅವನಿಗೆ ಅಧಿಕೃತ ಮನ್ನಣೆ ನೀಡಿತು. ೧೫೫೧ರಲ್ಲಿ ಇನ್ನಿಬ್ಬರು ಕಾರ್ಸೈನ್‌ಗಳು ಟ್ರಿಪೋಲಿಯಲ್ಲಿ ನೆಲೆಯೂರಿದರು. ಆಗ ಟರ್ಕರ ನೆಲೆಗಳು ನಾಮ ಮಾತ್ರಕ್ಕೆ ಆಟೊಮನ್ ಸರ್ಕಾರದ ಅಡಿಯಲ್ಲಿತ್ತು. ಟರ್ಕರು ಏನಿದ್ದರೂ ಕಡಲ್ಗಳ್ಳತನದ ಬಗ್ಗೆ ಆಸಕ್ತರಾಗಿದ್ದರು ಮತ್ತು ಚಿಂತಿತರಾಗಿದ್ದರು.

ತಮ್ಮ ವ್ಯಾಪಾರ ವ್ಯವಹಾರಕ್ಕೆ ಅವಶ್ಯವಾದ ಕನಿಷ್ಠ ಸಹಕಾರ ನೀಡುತ್ತಿರುವವರೆಗೆ ಅವರು ದೇಶಿಯವಾಸಿಗಳ ಗೊಡವೆಗೆ ಹೋಗದೆ ಇರುತ್ತಿದ್ದರು. ಹೀಗಾಗಿ ಕಡಲ್ಗಳ್ಳತನವನ್ನು ೧೯ನೆಯ ಶತಮಾನದವರೆಗೆ ಯಶಸ್ವಿಯಾಗಿ ನಡೆಸಿಕೊಂಡು ಬರಬಹುದಾಯಿತು. ಮೆರಿನಾಡ್‌ಗಳು ಇಳಿಮುಖವಾದಂತೆ ಸೈಯದ್ದಿ ಎಂಬ ಹೆಸರಿನ ಮೊದಲ ಶೆರಿಫ್ ರಾಜವಂಶ ಮೊರಾಕ್ಕೋದಲ್ಲಿ ನೆಲೆಯೂರಿತು. ಅವರ ಸಂಪ್ರದಾಯದಲ್ಲಿ ಹೇಳಲಾದ ಜಿಹಾದ್ ಎಂಬುದು ವಾಸ್ತವವಾಗಿ ಆತ್ಮರಕ್ಷಣೆ ಯುದ್ಧವಾಗಿತ್ತು. ೧೫೭೮ರಲ್ಲಿ ನಡೆದ ಆ ಯುದ್ಧದಲ್ಲಿ ಮೂವರು ರಾಜರು ಮಡಿದರು. ಅಂತಿಮವಾಗಿ ಮುಸ್ಲಿಮರು ವಿಜೇತರಾದರು. ಈ ಯುದ್ಧ ಮೊರಾಕ್ಕೋದ ನೆಲದಲ್ಲೇ ನಡೆಯಿತು. ಮುಸ್ಲಿಂ ಟರ್ಕರ ವಿರುದ್ಧ ಅವರು ಸ್ಪೈನಿಯಾರ್ಡರ ಜೊತೆ ಒಂದು ಒಪ್ಪಂದವನ್ನೂ ಮಾಡಿಕೊಂಡರು. ಅವರ ವೈಭವವೇನಿದ್ದರೂ ಪ್ರಜೆಗಳ ಹಣದ ಬಲದಿಂದ ಮತ್ತು ಅಧಿಕಾರಿ ಹಾಗೂ ಕೂಲಿ ಸಿಪಾಯಿಗಳ ದಬ್ಬಾಳಿಕೆಯಿಂದ ವೈಭವೋಪೇತ ದರ್ಬಾರು ನಡೆಸುವುದಾಗಿತ್ತು. ೧೭ನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ಎರಡನೇ ಶರೀಫ ರಾಜವಂಶ ಆಳ್ವಿಕೆಗೆ ಬಂತು. ಆದರೆ ಕಾಲಕ್ರಮೇಣ ಅದು ಅವನತಿಗೀಡಾಯಿತು. ಸುಲ್ತಾನ ಬಲು ಶಕ್ತಿ, ಉತ್ಸಾಹವುಳ್ಳವನಾದರೂ ಆಂತರಿಕ ಅರಾಜಕತೆ ಹೆಚ್ಚಾಯಿತು. ಕೇಂದ್ರ ಸರ್ಕಾರ ಮೊರಾಕ್ಕೋ ಮೇಲೆ ಕೇವಲ ನಾಮಮಾತ್ರದ ನಿಯಂತ್ರಣ ಹೊಂದಿತ್ತು. ಮೊರಾಕ್ಕೋವನ್ನು ಬುಡಕಟ್ಟು ಮತ್ತು ಧಾರ್ಮಿಕ ನಾಯಕರು ಆಳುತ್ತಿದ್ದರು. ಅಂತಿಮವಾಗಿ ೧೮೩೦ರಲ್ಲಿ ಫ್ರಾನ್ಸ್ ಅಲ್ಜೀರ್ಸ್ ಅನ್ನು ಅಕ್ರಮಿಸಿತು ಮತ್ತು ಕಡಲ್ಗಳ್ಳತನವನ್ನು ಅಂತ್ಯಗೊಳಿಸಲು ಇಚ್ಛಿಸಿತು.

## ಸಹರಾ ಕೆಳಭಾಗದ ಆಫ್ರಿಕಾ

ಸಹರಾ ಎಂಬ ಹೆಸರು ಆರೇಬಿಯನ್ ಪದವಾದ 'ಸೆಹ್ರಾ' ಎಂಬುದರಿಂದ ಬಂದದ್ದು. 'ಸೆಹ್ರಾ' ಎಂದರೆ ಮರುಭೂಮಿ. ಆದರೂ ಸಹರಾ ೧೦,೦೦,೦೦೦ ವರ್ಷಗಳ ಹಿಂದೆ

ಅಂದರೆ ಸಿನೋಚೋಯರ್ ಯುಗದ ಉತ್ತರ ಭಾಗದಲ್ಲಿ ಮರುಭೂಮಿಯಾಯಿತು. ಅದಕ್ಕಿಂತ ಮುಂಚೆ ಅದು ಚೆನ್ನಾಗಿ ನೀರು ವಸತಿ ಇದ್ದ ಹುಲ್ಲುಗಾವಲಾಗಿತ್ತು. ವಿವಿಧ ಬಗೆಯ ಪ್ರಾಣಿಸಂಕುಲ ಅಲ್ಲಿ ಮನೆ ಮಾಡಿದ್ದವು. ನೀಗ್ರೋ ಮತ್ತು ಮೆಡಿಟರೇನಿಯನ್ ಜನಾಂಗ ಇಬ್ಬರೂ ಅಲ್ಲಿ ಬೇಟೆಯಾಡುತ್ತಿದ್ದರು. ತರುವಾಯ ಆ ಪ್ರದೇಶ ಒಣಗಿ ಮರುಭೂಮಿ ವಿಸ್ತಾರವಾದಂತೆ, ಅಲ್ಲಿ ವಾಸಿಸುತ್ತಿದ್ದ ಪ್ರಾಣಿಗಳು ಹಾಗೂ ಜನರು ಸೂಡಾನ್ ಮೆಡಿಟರೇನಿಯನ್ ಕರಾವಳಿ ಪ್ರದೇಶ ಮತ್ತು ನೈಲ್ ಕಣಿವೆಗೆ ವಲಸೆ ಹೋದರು. ಈ ರೀತಿ ಕಪ್ಪು ಜನರು ಮೆಡಿಟರೇನಿಯನ್ ಜನಾಂಗದಿಂದ ಬೇರ್ಪಟ್ಟರು. ನೈಲ್ ಕಣಿವೆಯಲ್ಲಿ ನವಶಿಲಾಯುಗದ ಸಂಸ್ಕೃತಿ ಬಲುಬೇಗ ಪ್ರಗತಿ ಹೊಂದಿತು ಮತ್ತು ಕ್ರಿ.ಪೂ.೪೦೦೦ದ ಅಂತ್ಯದ ಹೊತ್ತಿಗೆ ಐಗುಪ್ತ ಸಂಸ್ಕೃತಿ ಒಡಮೂಡಿತು. ಸಹರಾದ ದಕ್ಷಿಣದ ಸುಡಾನ್‌ನಲ್ಲಿ ಪ್ರತ್ಯೇಕಗೊಂಡ ಕಪ್ಪು ಜನಾಂಗದವರ ಬೆಳವಣಿಗೆ ನಿಧಾನ ಗತಿಯಲ್ಲಿ ಆಯಿತು. ಹೀಗಿದ್ದರೂ, ಕ್ರಿ.ಪೂ.೯೦೦ರಷ್ಟು ಮುಂಚೆಯೇ ಉತ್ತರ ನೈಜೀರಿಯಾದಲ್ಲಿ ನೋಕ್ ಸಂಸ್ಕೃತಿಯೆಂದು ಕರೆಯುವ ಒಂದು ಕೃಷಿಕ ನಾಗರಿಕತೆ ಬೆಳೆದದ್ದು ತಿಳಿದುಬಂದಿದೆ. ಕ್ರಿ.ಪೂ.೧೮೦೦ರಲ್ಲಿ ಈಜಿಪ್ಟಿನ ದಕ್ಷಿಣ ಭಾಗದಲ್ಲಿ ತರುವಾಯದಲ್ಲಿ ನುಬಿಯಾ ಎಂದು ಹೆಸರು ಪಡೆದ ಮತ್ತು ಅಲ್ಲಿನ ಚಿನ್ನಕ್ಕಾಗಿ ಈಜಿಪ್ಟರು ಬಹುಮಾನ್ಯ ಮಾಡುತ್ತಿದ್ದ ಒಂದು ಪ್ರದೇಶದಲ್ಲಿ ಮತ್ತೊಂದು ನಾಗರಿಕತೆ ಬೆಳೆಯಿತು. ಐಗುಪ್ತರು ಆಗಾಗ್ಗೆ ನುಬಿಯಾದ ಮೇಲೆ ದಾಳಿ ಮಾಡುತ್ತಿದ್ದರು ಮತ್ತು ೧೫೦೦ರಲ್ಲಿ ಅಂತಿಮವಾಗಿ ಅದನ್ನು ಗೆದ್ದು ತಮ್ಮ ಒಂದು ಪ್ರಾಂತ್ಯವನ್ನಾಗಿಸಿಕೊಂಡರು.

**ಕುಶ್**

ಕ್ರಿ.ಶ.೧೦೦೦ದ ಯಾವುದೋ ಒಂದು ಕಾಲಾವಧಿಯಲ್ಲಿ ಕುಶೈಟ್ಸ್ ಎಂಬ ಹೆಸರಿನ ನುಬಿಯನ್ ಜನಾಂಗದವರು ಐಗುಪ್ತರ ಆಳ್ವಿಕೆಯಿಂದ ಬಿಡಿಸಿಕೊಂಡು ಹೊರಬಂದು ತಮ್ಮದೇ ಆದ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದರು. ಮುಂದೆ ಈ ಕುಶೈಟರು ಎಷ್ಟು ಪ್ರಬಲರಾದರೆಂದರೆ ಅವರು ಈಜಿಪ್ಟನ್ನೇ ಗೆಲ್ಲುವಂತಾದರು. ಒಂದು ಶತಮಾನದ ತರುವಾಯ ಅಸ್ಸಿರಿಯನ್ನರು ಕುಶೈಟರನ್ನು ಉತ್ತರ ನುಬಿಯಾದಲ್ಲಿನ ಅವರ ಮಾತೃಭೂಮಿಗೆ ಹೊಡೆದಟ್ಟಿದರು. ತರುವಾಯ ಕುಶ್‌ರ ಆಡಳಿತ ಮೆರೋ ನಗರದ ಸುತ್ತಲಿನ ಮಧ್ಯ ನುಬಿಯಾದಲ್ಲಿ ಕೇಂದ್ರೀಕೃತವಾಯಿತು. ಮೂಲ ಕುಶೈಟರು ಕಕೇಶಿಯನ್ ಜನಾಂಗದವರು. ಆದರೆ ಮೇರೋ ಕಪ್ಪು ವರ್ಣದ ಜನರ ಪ್ರದೇಶವಾಗಿತ್ತು. ಕುಶೈಟರು ಈ ಜನಾಂಗದವರೊಂದಿಗೆ ವಿವಾಹ ಸಂಬಂಧ ಬೆಳೆಸಿದರು. ಕುಶ್ ದಕ್ಷಿಣ ಸಂತರಾದ ಅತ್ಯಂತ ಪ್ರಬಲ ರಾಜ್ಯಗಳಲ್ಲಿ ಒಂದಾಯಿತು. ಬಹುಶಃ ಅಸ್ಸಿರಿಯನ್ನರಿಂದ ಕಬ್ಬಿಣದ ಕೆಲಸಗಾರಿಕೆಯನ್ನು ಕಲಿತಿದ್ದರಿಂದ ಸಹರಾ ಕೆಳಗಿನ ಆಫ್ರಿಕಾದಲ್ಲಿ ಕಬ್ಬಿಣದ ಪ್ರಾಯೋಗಿಕ ಬಳಕೆ ತಂದ ಮೊದಲಿಗರು ಕುಶೈಟರು ಎಂದು ನಂಬಲಾಗಿದೆ. ಹೀಗೆ ಈ ಕಪ್ಪುಬಣ್ಣದ ಜನರು ಶಿಲಾಯುಧಗಳ ಬಳಕೆಯಿಂದ ತಾಮ್ರ ಮತ್ತು ಕಂಚಿನ ಬಳಕೆಯ ಹಂತವನ್ನು ಹಾಯ್ದು

ಹೋಗದೆ, ನೇರವಾಗಿ ಕಬ್ಬಿಣದ ಬಳಕೆಗೆ ತೊಡಗಿದರು. ಕ್ರಿ.ಶ.೧ನೆಯ ಶತಮಾನದ ಮಧ್ಯಭಾಗದಲ್ಲಿ ಈ ಮಿರೋಯಿಟಿಕ್ ನಾಗರಿಕತೆ ಇಳಿಮುಖವಾಯಿತು. ಇಥಿಯೋಪಿಯನ್ ಉತ್ತರದ ನಾಡಿನ ಅಕ್ಸಂನ ಮೂಲದ ಒಂದು ಎದುರಾಳಿ ವಾಣಿಜ್ಯ ಸಾಮ್ರಾಜ್ಯ ಇದರ ಪ್ರಭೆಯನ್ನು ಮಸುಕುಗೊಳಿಸಿತು. ಅಕ್ಸಂ ಸಾಮ್ರಾಜ್ಯವು ಕುಶ್ ಅನ್ನು ೪ನೇ ಶತಮಾನದಲ್ಲಿ ಧೂಳಿಪಟ ಮಾಡಿ ಮೆರೋ ನಗರಗಳನ್ನು ಸುಟ್ಟು ಹಾಕಿತು ಮತ್ತು ಕುಶ್ ಅಳರಸರನ್ನು ಪಶ್ಚಿಮಕ್ಕೆ ಕೊರ್ಡೊಫಾನ್ ಮತ್ತು ದಾರ್ ಫುರ್ ಗೆ ಓಡಿಸಿತು. ಅಲ್ಲಿ ಅವರು ತಮ್ಮ ನಾಗರಿಕತೆಯ ಅಂಶಗಳನ್ನು ಪುನರ್ ಸೃಷ್ಟಿಮಾಡಿ ತರುವಾಯ ಚಾಡ್ ಸರೋವರದವರೆಗಿನ ಜನಜೀವನ ವಿಧಾನದ ಮೇಲೆ ಪ್ರಭಾವ ಬೀರಲು ಸಮರ್ಥರಾದರು. ಕುಶ್‌ರ ತರುವಾಯ ಅಷ್ಟೊಂದು ಪ್ರಗತಿ ಹೊಂದಿರದ ಮೂರು ಸಾಮ್ರಾಜ್ಯಗಳು ಅಂದರೆ ಉತ್ತರ ನುಬಿಯಾದ ನೋಬೇಟಿಯಾ, ಮಧ್ಯ ನುಬಿಯಾದ ಮಕೂರಿಯಾ ಮತ್ತು ದಕ್ಷಿಣ ನುಬಿಯಾದ ಅಲ್ವ ಸಾಮ್ರಾಜ್ಯಗಳು ಬಂದವು. ಆರನೇ ಶತಮಾನದಲ್ಲಿ ಕ್ರೈಸ್ತ ಮಿಷನರಿಗಳು ಈ ಸಾಮ್ರಾಜ್ಯ ಗಳನ್ನು ಕ್ರೈಸ್ತಧರ್ಮಕ್ಕೆ ಮತಾಂತರಗೊಳಿಸಿದರು. ೭ನೆಯ ಶತಮಾನದಲ್ಲಿ ಮಕೂರಿಯಾ ನೊಬೇಶಿಯಾವನ್ನು ವಿಲೀನಗೊಳಿಸಿಕೊಂಡಿತು. ಮಕೂನಿಯಾವನ್ನು ಅದರ ರಾಜಧಾನಿ ಹೆಸರಿನಿಂದ ಡೊಂಗೋಲಾ ಎಂದು ಕರೆಯಲಾಗುತ್ತಿತ್ತು.

೮ನೆಯ ಶತಮಾನದಲ್ಲಿ ಇಸ್ಲಾಂ ಧರ್ಮದ ಪ್ರವರ್ಧಮಾನದಿಂದಾಗಿ ಕ್ರೈಸ್ತ ರಾಜ್ಯಗಳ ಸುತ್ತ ವಿರೋಧಿ ಮುಸ್ಲಿಂ ಶಕ್ತಿಗಳು ಬೆಳೆದುಕೊಂಡವು. ಮಕೂನಿಯಾ ೧೪ನೆಯ ಶತಮಾನದ ವರೆಗೂ ತನ್ನ ಕ್ರೈಸ್ತತನವನ್ನು ಹೇಗೋ ಉಳಿಸಿಕೊಂಡು ಬಂದಿತು ಮತ್ತು ಅಲ್ವಾ ಹದಿನಾರನೇ ಶತಮಾನದವರೆಗೆ ಉಳಿದುಬಂದಿತು. ತರುವಾಯ ಅದನ್ನು ನಾಶಗೊಳಿಸಿ ಮುಸ್ಲಿಂ ಸೆನ್ನಾರ್ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂತು. ಅಷ್ಟರಲ್ಲಿ ಅಕ್ಸಂ ೪ನೇ ಶತಮಾನದಲ್ಲಿ ಕ್ರೈಸ್ತಧರ್ಮವನ್ನು ಅಳವಡಿಸಿಕೊಂಡಿತ್ತು. ೮ನೇ ಶತಮಾನದ ತರುವಾಯ ಮುಸ್ಲಿಂರ ಒತ್ತಡ ತಾಳಲಾರದೆ ಅಕ್ಸಂಮ್ಯೆಟರು ಇಥಿಯೋಪಿಯನ್ ಎತ್ತರದ ನಾಡುಗಳಿಗೆ ಮತ್ತೆ ವಾಪಸಾಗಬೇಕಾಯಿತು. ಅಲ್ಲಿಂದ ಇಥಿಯೋಪಿಯನ್ ಸಾಮ್ರಾಜ್ಯ ಒಡಮೂಡಿ ೧೩ನೆಯ ಶತಮಾನದ ಹೊತ್ತಿಗೆ ವಿಸ್ತಾರವಾಯಿತು. ಮಧ್ಯಯುಗದ ಉತ್ತರ ಭಾಗದಲ್ಲಿ ಇಥಿಯೋಪಿ ಯಾದ ಜೊತೆ ಯುರೋಪಿಯನ್ನರ ಸಂಸರ್ಗ ಬೆಳೆಯಿತು. ಪವಿತ್ರಭೂಮಿಗೆ ಬಂದ ಇಥಿಯೋಪಿಯಾದ ಯಾಂತ್ರಿಕರಿಂದ ಮುಸ್ಲಿಂ ಮಧ್ಯೆ ಉಳಿದಿರುವ ಏಕೈಕ ಕ್ರೈಸ್ತ ರಾಜ್ಯ ಇಥಿಯೋಪಿಯಾ ಎಂಬುದನ್ನು ಅರಿತು ಡೊಮಿನಿಕನ್ನರು ಇಥಿಯೋಪಿಯಾಕ್ಕೆ ಪ್ರತಿನಿಧಿಗಳನ್ನು ೧೪ನೆಯ ಶತಮಾನದ ಆರಂಭದಲ್ಲಿ ಕಳುಹಿಸಿಕೊಟ್ಟರು. ಇದರಿಂದಾಗಿ ೧೫ ಮತ್ತು ೧೬ನೆಯ ಶತಮಾನದಲ್ಲಿ ಪೋರ್ಚುಗಲ್‌ನ ಜೊತೆಯಲ್ಲಿ ಬಲವಾದ ಮಿಲಿಟರಿ ಮತ್ತು ರಾಯಭಾರಿ ಸಂಬಂಧ ಏರ್ಪಟ್ಟಿತು.

## ಮಧ್ಯ ಮತ್ತು ಪಶ್ಚಿಮ ಸುಡಾನ್ ರಾಜ್ಯಗಳು

ಅನಾದಿ ಕಾಲದಿಂದಲೂ ಸೂಡಾನ್ ಮತ್ತು ಸಹರಾದ ಪಶ್ಚಿಮ ಭಾಗಗಳು ಕರಾವಳಿ ಮೈದಾನ ಭೂಮಿಯ ಫಿನೇಷಿಯನ್ನರು, ಗ್ರೀಕರು ಮತ್ತು ರೋಮ್ ನಾಗರಿಕತೆಗಳ

ಪ್ರಭಾವಕ್ಕೆ ಒಳಗಾದರು. ಈ ಪ್ರಭಾವ ಗೋವಳಲಿ ಬಿಯನ್ ಅಲೆಮಾರಿ ಬುಡಕಟ್ಟುಗಳ ಮೂಲಕ ಪರೋಕ್ಷವಾಗಿ ಅವರನ್ನು ತಲುಪಿತ್ತು. ಈ ಬುಡಕಟ್ಟು ಜನಾಂಗದವರು ಕುದುರೆ ರಥಗಳ ಮೇಲೆ ಮರುಭೂಮಿಯನ್ನು ದಾಟಿ ಚಿನ್ನದ ಹುಡಿ, ಉಷ್ಟ್ರಪಕ್ಷಿ ಪುಕ್ಕಗಳು ಮತ್ತು ಗುಲಾಮರನ್ನು ಕರಾವಳಿ ಪ್ರದೇಶದಲ್ಲಿ ಮಾರುವುದಕ್ಕಾಗಿ ಸಂಗ್ರಹಿಸುವ ಅಭ್ಯಾಸ ಬೆಳಸಿಕೊಂಡಿದ್ದರು. ಈಜಿಪ್ಟಿನ ಮೂಲಕವಾಗಿ ಒಂಟೆ ಸಹರಾಕ್ಕೆ ಪರಿಚಯವಾಗಿದ್ದ ಕಾರಣ ಒಂಟೆಯು ಕಾರವಾನ್ ಸಾರಿಗೆಯ ಸಾಧನವಾಯಿತು. ಮರುಭೂಮಿಯಲ್ಲಿ ಕಲ್ಲಿನ ಮೇಲಿನ ರೇಖಾಚಿತ್ರಗಳು ದೊರೆತಿರುವುದರಿಂದ ನೈಜರ್ ಮತ್ತು ಸೆನೆಗಲ್ ನದಿಗಳ ಕಡೆಗೆ ಎರಡು ಸಹರಾ ಹಾದುಹೋಗುವ ಮಾರ್ಗಗಳು ಬೆಳೆದುಬಂದಿದ್ದವು ಎಂಬುದು ಅರ್ಥವಾಗುತ್ತದೆ. ನೈಜರ್ ಮತ್ತು ಸೆನೆಗಲ್ ನದಿಪ್ರದೇಶ ಮೆಕ್ಕಲುಮಣ್ಣಿನ ಚಿನ್ನಕ್ಕೆ ಪ್ರಸಿದ್ಧವಾಗಿತ್ತು. ತರುವಾಯ ಅರಬ್ಬರು ಅದನ್ನು 'ವಂಗಾರ' ಎಂದು ಕರೆಯುತ್ತಿದ್ದರು. ವ್ಯಾಪಾರ ವಾಣಿಜ್ಯಗಳ ಕಾರಣದಿಂದ ಸುಡಾನ್ ಪ್ರದೇಶದಲ್ಲಿ ನಗರಗಳು ಬೆಳೆದವು. ಬೃಹತ್ ಸಹಾರ ಕೆಳಗಿನ ವ್ಯಾಪಾರ ಕೇಂದ್ರಗಳ ಸುತ್ತಮುತ್ತ ಬಲವಾದ ಮತ್ತು ವ್ಯಾಪಕವಾದ ರಾಜ್ಯಗಳು ಬೆಳೆದುಬಂದವು. ಈ ರಾಜ್ಯಗಳಲ್ಲಿನ ಜನರು ಕಡೇಶಿಯನ್ ಸಮ್ಮಿಶ್ರವಾದ ಕಪ್ಪುಜನಾಂಗವಾಗಿದ್ದರು. ನಗರ ಪ್ರದೇಶದ ಬಹುಪಾಲು ಜನರು ಮುಸ್ಲಿಮರಾಗಿದ್ದರು ಅಥವಾ ತರುವಾಯ ಇಸ್ಲಾಂ ಅನುಯಾಯಿಗಳಾದರು. ಆದರೆ ಹಳ್ಳಿಗಾಡಿನ ಜನರ ಧಾರ್ಮಿಕ ನಂಬಿಕೆ ಪ್ರಕೃತಿ ಆರಾಧನೆ ಆಗಿತ್ತು. ಇಲ್ಲಿನ ಬಹಳಷ್ಟು ರಾಜ್ಯಗಳು ನಗರ ರಾಜ್ಯಗಳಾಗಿದ್ದವು ಮತ್ತು ಸಂಕೀರ್ಣ ರಾಜಕೀಯ ವ್ಯವಸ್ಥೆ ಹಾಗೂ ಚೆನ್ನಾಗಿ ತರಬೇತಿ ಹೊಂದಿದ ಅಶ್ವದಳವನ್ನು ಹೊಂದಿದ್ದವು. ಕಾಲಕ್ರಮದಲ್ಲಿ ಪಶ್ಚಿಮ ಆಫ್ರಿಕಾದ ಘಾನದ ಸುಡಾನ್ ನಾಗರಿಕತೆಗೆ ಸೇರಿದ ಪ್ರಮುಖ ರಾಜ್ಯಗಳು ಮತ್ತು ಚಾಡ್ ಸರೋವರದ ಈಶಾನ್ಯ ಭಾಗದಲ್ಲಿದ್ದ ಕಾನೆಮ್ ರಾಜ್ಯ ಮತ್ತು ಮೊಜಾಂಬಿಕ್‌ನ ಒಳನಾಡಿನಲ್ಲಿ ಇದ್ದ ಪ್ರಮುಖ ರಾಜ್ಯಗಳ ಪೈಕಿ ಸೇನೆಗೆ ಕಡ್ಡಾಯ ಭರ್ತಿ ಮೂಲಕ ಈ ಅಶ್ವದಳಗಳ ಬದಲು ದೊಡ್ಡ ಸೇನೆಗಳು ಬೆಳೆದವು.

## ಘಾನಾ ಸಾಮ್ರಾಜ್ಯ

ಕ್ರಿ.ಶ.೫ನೆಯ ಶತಮಾನದ ಹೊತ್ತಿಗೆ ವಂಗಾರದ ಉತ್ತರಕ್ಕೆ ಸೆನೆಗಲ್ ಮತ್ತು ನೈಲ್ ನದಿಗಳ ನಡುವೆ ಘಾನ ಸಾಮ್ರಾಜ್ಯ ಮೂಡಿತು. ಸ್ವಲ್ಪಮಟ್ಟಿಗೆ ನೆಮಿಡಿಕ್ ಅಂಶವನ್ನೂ ಹೊಂದಿದ್ದ ಲಿಬಿಯಾದ ಅಲೆಮಾರಿ ವಲಸೆಗಾರರು ಈ ರಾಜ್ಯವನ್ನು ಕಟ್ಟಿರುವ ಸಾಧ್ಯತೆ ಇಲ್ಲ. ಆದರೆ ಘಾನಾದ ತರುವಾಯದ ರಾಜರು ನಿಸ್ಸಂದೇಹವಾಗಿ ಕರಿಯರೇ ಆಗಿದ್ದರು ಮತ್ತು ಘಾನಾದ ಪ್ರಾರಂಭದಲ್ಲಿದ್ದ ಪರಕೀಯರನ್ನು ಸೆನೆಗಲ್‌ನ ಕೆಳಭಾಗದ ಟಕರೂಸ್ ಮತ್ತು ಘಾಟಾಲ-ಟೌರೋಗಳಿಗೆ ಓಡಿಸಲಾಯಿತು ಎಂದು ಹೇಳಲಾಗಿದೆ. ಅಲ್ಲಿ ಸ್ಥಳೀಯ ಕುಕುಲಾರ್ ಜನಾಂಗದವರೊಂದಿಗೆ ಅಂತರ್ ವಿವಾಹದಿಂದ ಫುಲಾನಿ ಎಂಬ ಗೋವಳ

ಜನಾಂಗದ ಉಗಮವಾಯಿತು. ತರುವಾಯ ಇವರು ಪೂರ್ವ ಪ್ರದೇಶಗಳತ್ತ ವಲಸೆ ಹೋಗಿ ಸೂಡಾನ್ ಮತ್ತು ಕಮರೂನ್ ಪ್ರದೇಶಗಳಲ್ಲಿ ಹರಡಿಹೋದರು. ಅಲ್ಲಿನ ಜನಾಂಗಗಳೊಂದಿಗೆ ಸೇರಿಹೋದರೂ ಪ್ರಮುಖವಾಗಿ ಬೇಸಾಯಗಾರರಾದ ಸ್ಥಳೀಯ ಕರಿಯರಿಂದ ಬೇರೆಯಾಗಿಯೇ ಉಳಿದರು. ೭ನೆಯ ಶತಮಾನದಲ್ಲಿ ಮಘರಿಬ್‌ಗೆ ಅರಬ್ಬರು ಬಂದಾಗ ಘಾನ ಆಗಲೇ 'ಚಿನ್ನದ ಬೀಡು' ಎಂದು ಹೆಸರುವಾಸಿಯಾಗಿತ್ತು. ಹೀಗಿದ್ದರೂ, ಚಿನ್ನದ ಗಣಿಗಳನ್ನು ವಾಸ್ತವವಾಗಿ ಹೊಂದಿರುವುದಕ್ಕಿಂತಲೂ ಹೆಚ್ಚಾಗಿ ಇದು ಚಿನ್ನವೂ ಸೇರಿ ಪಶ್ಚಿಮ ಸುಡಾನ್‌ನ ಉತ್ಪನ್ನಗಳನ್ನು, ಉತ್ತರ ಆಫ್ರಿಕಾದಿಂದ ರಫ್ತು ಮಾಡುವುದಕ್ಕೆ ಸಂಗ್ರಹಿಸುವ ಕೇಂದ್ರವಾಗಿದ್ದುದು ಇದರ ಐಶ್ವರ್ಯ ಹಾಗೂ ಮಹತ್ವಕ್ಕೆ ಕಾರಣವಾಗಿತ್ತು. ಮರುಭೂಮಿಯ ವ್ಯಾಪಾರ ನಿಯಮಗಳನ್ನು ನಿಯಂತ್ರಿಸುತ್ತಿದ್ದ ಲಿಬಿಯಾದ ಅಲೆಮಾರಿ ಬುಡಕಟ್ಟು ಜನಾಂಗದವರು ಘಾನ ಮಾರುಕಟ್ಟೆಗೆ ಸಹರಾದಿಂದ ಉಪ್ಪನ್ನು ತರುತ್ತಿದ್ದರು.

## ಮುಸ್ಲಿಂ ಪ್ರಭಾವದ ವಿಸ್ತಾರ

ಒಂಟೆ, ಅರಬ್ಬರ ಆಗಮನ ಮತ್ತು ಇಸ್ಲಾಂ ಸಹರಾ ಉದ್ದಗಲದ ಪ್ರದೇಶದ ಸಂಬಂಧಗಳ ಸ್ವರೂಪವನ್ನು ನಿರ್ಧರಿಸಿತು. ರೋಮನ್ ಕಾಲಾವಧಿಯ ಅಂತ್ಯಕ್ಕಿಂತ ಮುಂಚೆ ಮಘರಿಬ್‌ನಲ್ಲಿ ಒಂಟೆ ನೆಲೆಯೂರಿದ್ದರಿಂದ ಬುಡಕಟ್ಟು ಅಲೆಮಾರಿ ಜನ ಮರುಭೂಮಿಯ ಜೀವನದ ನಿಷ್ಣಾತರಾದರು. ಇದು ಅವರ ಸಂಚಾರ ಸಾಧ್ಯತೆಯನ್ನು ಹೆಚ್ಚಿಸಿತು ಮತ್ತು ಒಯಸಿಸ್‌ಗಳನ್ನೇ ನಂಬಿಕೊಂಡು ಜೀವಿಸುವುದನ್ನು ಕಡಿಮೆ ಮಾಡಿಸಿತು. ಅರಬ್ಬರು ಮಘರಿಬ್‌ಗೆ ನುಗ್ಗಿ ಬಂದದ್ದರಿಂದ ಬುಡಕಟ್ಟು ಜನಾಂಗದವರು ದಕ್ಷಿಣದೆಡೆಗೆ ಓಡಬೇಕಾಯಿತು. ಅವರಲ್ಲಿ ಕೆಲವರು ಇಸ್ಲಾಂಧರ್ಮಕ್ಕೆ ಮತಾಂತರ ಹೊಂದಿದ್ದರಿಂದ ದಕ್ಷಿಣಕ್ಕೆ ದಂಡಯಾತ್ರೆ ಹೊರಡಲೂ ಹೊಸ ಸ್ಫೂರ್ತಿ ದೊರೆತಿರಬಹುದು. ೫ನೆಯ ಶತಮಾನದಿಂದ ೧೩ನೆಯ ಶತಮಾನದ ಸಹರಾ ಮತ್ತು ಸುಡಾನ್‌ಗಳ ಇತಿಹಾಸವನ್ನು ನೋಡಿದಾಗ ಜನರ ಬಹಳಷ್ಟು ಓಡಾಟಗಳನ್ನು ಕಾಣುತ್ತೇವೆ. ಆದರೆ ನುಬಿಯಾದಲ್ಲಿ ಈ ವಲಸೆ ಪ್ರವೃತ್ತಿ ಕಾಣಬರುವುದಿಲ್ಲ. ಇಲ್ಲಿ ೫ನೆಯ ಶತಮಾನದಿಂದ ೧೩ನೆಯ ಶತಮಾನದ ಸಹರಾ ಮತ್ತು ಸುಡಾನ್‌ಗಳ ಇತಿಹಾಸವನ್ನು ನೋಡಿದಾಗ ಜನರ ಬಹಳಷ್ಟು ಓಡಾಟಗಳನ್ನು ಕಾಣುತ್ತೇವೆ. ಆದರೆ ನುಬಿಯಾದಲ್ಲಿ ಈ ವಲಸೆ ಪ್ರವೃತ್ತಿ ಕಾಣಬರುವುದಿಲ್ಲ. ಇಲ್ಲಿ ೫ನೆಯ ಶತಮಾನದ ಹೊತ್ತಿಗೆ ಕ್ರೈಸ್ತ ಮತವನ್ನು ಅವಲಂಬಿಸಲಾಯಿತು ಮತ್ತು ವಾಸ್ತವವಾಗಿ ಇದು ಕುಶ್ ಜನರಿಂದ ಪರಂಪರಾಗತವಾಗಿ ಬಂದ ಸಂಸ್ಕೃತಿಗೆ ಹೊಸತನವನ್ನು ನೀಡಿತು. ಹೀಗಿದ್ದರೂ ಈ ರಾಜ್ಯಗಳು, ಮುಸ್ಲಿಂ ವ್ಯಾಪಾರಿಗಳು ಮತ್ತು ಬೆಡೊಯಿನ್ ಜನಾಂಗದವರ ಆಗಮನದಿಂದಾಗಿ ನಿಧಾನವಾಗಿ ಮಾಯವಾದವು. ಬೆಡೊಯಿನ್ ಜನಾಂಗದವರ ಆಗಮನದಿಂದ ಪೂರ್ವ ಸೂಡಾನ್ ಅರಬ್ಬೀಕರಣಕ್ಕೆ ಒಳಗಾಯಿತು. ದಕ್ಷಿಣವನ್ನು ಬಿಟ್ಟರೆ ಉಳಿದೆಡೆ ಕೇಂದ್ರೀಕೃತ ಸರ್ಕಾರದ ಬದಲಾಗಿ ಬುಡಕಟ್ಟು ಆಳ್ವಿಕೆ ಜಾರಿಗೆ ಬಂತು.

ಸೂಡಾನ್‌ನ ಕೆಲವು ಭಾಗಗಳಲ್ಲಿ ಮರುಭೂಮಿಯ ವಲಸೆಗಾರರು ಅಶ್ವದಳ ಮತ್ತು ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಸಂಘಟಿಸಿದ್ದರೂ ಸ್ಥಳೀಯ ಕಪ್ಪು ಬಂಧು ಗುಂಪುಗಳನ್ನು ಕಪ್ಪ ನೀಡುವಂತಹ ರಾಜ್ಯಕ್ಷೇತ್ರಗಳನ್ನಾಗಿಸಿದರು. ಅವರು ಸೂಡಾನ್‌ಗೆ ಬಂದದ್ದು ಎಲ್ಲೆಡೆ ಇಸ್ಲಾಂ ಆಗಮಿಸಿದುದರ ಒಂದು ಪ್ರತಿಕ್ರಿಯೆಯಾಗಿರಬೇಕು. ಈ ವಲಸೆಗಾರ ಬುಡಕಟ್ಟು ಜನಾಂಗ ಬಹುಶಃ ಸಹರಾದ ಲಿಬಿಯಾದ ಅಲೆಮಾರಿ ಬುಡಕಟ್ಟು ಜನಾಂಗದವರಿರಬೇಕು. ಉದಾಹರಣೆಗೆ ಪಶ್ಚಿಮದಲ್ಲಿ ಸನ್‌ಹಜಾ ಎಂದು, ಮಧ್ಯದಲ್ಲಿ ಲೆಮ್ತಾ ಮತ್ತು ಅಹಗ್ಗರ್ ಎಂದು, ಇನ್ನೂ ಪೂರ್ವಕ್ಕೆ ಜಗಾವಾ ಎಂದು ಇವರು ಪರಿಚಿತರಾಗಿದ್ದರು. ಈ ಬುಡಕಟ್ಟು ಜನರು ತರುವಾಯ ತುಅರೆಗ್ ಎಂದು ಹೆಸರಾಂತ ಜನಾಂಗವಾದರು. ಸೂಡಾನ್‌ನ ಇತಿಹಾಸದ ಪ್ರಾರಂಭದ ದಿನಗಳಲ್ಲಿ ಮಧ್ಯ ಮತ್ತ ಪಶ್ಚಿಮ ಸೂಡಾನ್ ಮೇಲೆ ಪರಕೀಯ ಪ್ರಭಾವ ಬೀರಿದ ಎರಡು ಮುಖ್ಯ ಧಾರೆಗಳಿದ್ದಂತೆ ಕಾಣಬರುತ್ತದೆ. ಒಂದು ಮೆಘರಿಬ್‌ನಿಂದ ಬಂದದ್ದು, ಮತ್ತೊಂದು ನೈಲ್ ಕಣಿವೆ ಮತ್ತು ಕೆಂಪು ಸಮುದ್ರದಿಂದ ಬಂದದ್ದು. ಈಗ ನೈಜೀರಿಯಾ ಎಂದು ಕರೆಯುವ ಪ್ರದೇಶದಲ್ಲಿ ಈ ಎರಡೂ ಧಾರೆಗಳು ಒಂದುಗೂಡಿ ಎಷ್ಟೊಂದು ಪದರಗಳಲ್ಲಿ ಸಮ್ಮಿಶ್ರವಾದವೆಂದರೆ ಅವನ್ನು ಬಿಡಿಸುವುದು ದುಸ್ಸಾಧ್ಯ. ಚಾಡ್ ಸರೋವರದ ಉತ್ತರ ಮತ್ತು ಪಶ್ಚಿಮದ ಭಾಗಗಳಲ್ಲಿ ಇದ್ದ ಕನೇಂ ಮತ್ತು ಅದರ ಉತ್ತರಾಧಿಕಾರಿ ಬೋರ್ನಾ ರಾಜ್ಯಗಳು ೧೪ನೇ ಶತಮಾನದಲ್ಲಿ ಪ್ರಬಲ ರಾಜ್ಯಗಳಾಗಿ ಒಡಮೂಡಿದವು. ಕರ್ಪಾಸ ಹೊದಿಕೆ ಸರಪಳಿರಕ್ಷೆ ಕವಚಗಳುಳ್ಳ ಅವರ ಸಮವಸ್ತ್ರಧಾರಿ ಸೇನೆ, ಅಶ್ವಸೇನೆ ಹಾಗೂ ಪದಾತಿದಳವುಳ್ಳ ಬಲು ಕಾಲ ಚಾಲ್ತಿಯಲ್ಲಿದ್ದ ಅದರ ಸೇನೆ ತುಂಬ ಪ್ರಸಿದ್ಧವಾಗಿತ್ತು. ಉತ್ತರ ಮತ್ತು ಪೂರ್ವ ಪ್ರದೇಶಗಳಿಗೆ ಗುಲಾಮರನ್ನು ರಫ್ತು ಮಾಡಿ ಇದು ಸಮೃದ್ಧ ರಾಜ್ಯವಾಯಿತು. ಅದು ಇಸ್ಲಾಂಗೆ ಪರಿವರ್ತನೆಯಾದ ಮೇಲೆ ೧೧ನೆಯ ಶತಮಾನದಲ್ಲಿ ಪೂರ್ವದಿಂದ ಬಂದಂತಹ ಸೆಫ್ ಜನರಿಂದ ಸ್ಥಾಪಿತವಾಯಿತು ಎಂದು ಹೇಳಲಾಗುತ್ತದೆ. ಇನ್ನೊಂದು ಕಡೆ ಸೊಂಗೈ ಪರಂಪರೆ ಉತ್ತರದ ಮತ್ತು ೮ನೆಯ ಶತಮಾನದಲ್ಲಿ ಪೂರ್ವ ನೈಜರ್ ಮುಡುಕಿನಲ್ಲಿ ನೆಲಸಿದ್ದ ಲೆಮ್ಟಾ ಬರ್ಬರದಿಂದ ಇವರಿಗೆ ಪೂರ್ವದ ಪ್ರಾರಂಭಿಕ ಪ್ರಭಾವ ಉಂಟಾಯಿತು. ಹಸ್ಸಾ ರಾಜ್ಯವು ೭ನೆಯ ಶತಮಾನ ಮತ್ತು ೧೧ನೆಯ ಶತಮಾನದ ಕಡೇ ಪಕ್ಷ ಎರಡು ಪ್ರಮುಖ ವಲಸೆ ಪ್ರವಾಹಗಳಿಂದ ಉಂಟಾದದ್ದು ಎಂದು ಕಂಡುಬರುತ್ತದೆ. ಇನ್ನೂ ಪೂರ್ವಕ್ಕೆ ದರ್ ಫುರ್ ನಂತಹ ರಾಜ್ಯಗಳ ಆರಂಭವನ್ನು ಜಗ್ವಾಗಳೊಂದಿಗೆ ತೋರಿಸ ಬಹುದು ಮತ್ತು ಇದು ಮಿರಾಯಿಟಿಕ್ ಸಂಸ್ಕೃತಿಯ ಪ್ರತಿರೂಪ.

### ಮಾಲಿ ಮತ್ತು ಗಾವೂ ಸಾಮ್ರಾಜ್ಯಗಳು

ಪಶ್ಚಿಮ ರಾಜ್ಯವಾಗಿದ್ದ ಘಾನ ಮುಖ್ಯವಾಗಿ ಒಂದು ಕಪ್ಪು ಜನಾಂಗದವರ ರಾಜ್ಯ. ಇವರು ಸನ್ ಹಜಾ ಬರ್ಬರ ಬುಡಕಟ್ಟಿನವರೊಂದಿಗೆ ವಿರೋಧ ಬೆಳಸಿಕೊಂಡರು.

ಅಲ್ಮೊರಾವಿಡ್ ಮುಸ್ಲಿಮರು ಅಪ್ಪಟ ಇಸ್ಲಾಮಿಕ್ ಕಟ್ಟಳೆಗಳನ್ನು ಹೇರಿ ಒಂದು ತಾತ್ಕಾಲಿಕ ಐಕಮತ್ಯವನ್ನು ಸಾಧಿಸಿದರು. ಇದರಿಂದ ಅವರಿಗೆ ಮರುಭೂಮಿಯ "ವ್ಯಾಪಾರ ಮಾರ್ಗದ" ಎರಡೂ ತುದಿಗಳಲ್ಲಿನ ಐಶ್ವರ್ಯ ಲಭಿಸಿತು. ಆದರೆ ಮುಂದೆ ಕ್ರಿ.ಶ.೧೦೭೬ರಲ್ಲಿ ಘಾನವನ್ನು ಅಂತಿಮವಾಗಿ ಗೆಲ್ಲಲಾಯಿತು. ಅದಕ್ಕೆ ಮತ್ತೆ ಸ್ವಾತಂತ್ರ್ಯ ದೊರೆತರೂ ಮೊದಲಿದ್ದ ವಾಣಿಜ್ಯ ವ್ಯವಸ್ಥೆಯನ್ನು ಅಲ್ಲೋಲ ಕಲ್ಲೋಲಗೊಳಿಸಿದರು. ಅವರ ಕುರಿ ಮಂದೆ ಮತ್ತು ದನಗಳು ಬೇಸಾಯ ಭೂಮಿಯನ್ನು ಬೀಳುಗೈದವು. ಅಲ್ಲದೆ ಇದು ಚಿಕ್ಕಪುಟ್ಟ ರಾಜ್ಯಗಳಾಗಿ ಒಡೆದು ಹೋಯಿತು. ಕಾಲಾಂತರದಲ್ಲಿ ಪಶ್ಚಿಮ ಸೂಡಾನ್‌ನ ರಾಜಕೀಯ ಶಕ್ತಿ ಇನ್ನೂ ದಕ್ಷಿಣ ಪ್ರದೇಶದಲ್ಲಿದ್ದ ಮಾಂಡಿಂಗೋ ಗುಂಪಿಗೆ ಸೇರಿತು. ಇವರ ಮುಖಂಡನಾದ ಸುಂಡಿಯೂತ ೧೨೪೦ರ ಹೊತ್ತಿಗೆ ಘಾನವನ್ನು ಸೂರೆಗೈದನು ಮತ್ತು ಹೊಸದಾದ ಹಾಗೂ ವಿಶಾಲವಾದ ಮಾಲಿಂಕೆ ಸಾಮ್ರಾಜ್ಯಕ್ಕೆ ತಳಹದಿ ಹಾಕಿದನು. ಮಾಲಿಮನ್ಸ ಮುಗಾ(೧೩೦೭/೧೨-೧೩೩೨) ಆಶಿವರುಗಳ ಸಮಯದಲ್ಲಿ ಉಚ್ಛ್ರಾಯ ಸ್ಥಿತಿಗೇರಿತು. ಇವರ ಸಾಮ್ರಾಜ್ಯ ಪೂರ್ವದ ತೆಕರೂರ್‌ನಿಂದ ಪೂರ್ವ ಕರಾವಳಿಯು ಬೆಳೆಯುತ್ತಿದ್ದ ವಾಣಿಜ್ಯ ಸಾಮ್ರಾಜ್ಯಗಳಾದ ಗಾವೊ ಮತ್ತು ಟಿಂಬಿಕ್ಟು, ನೈರುತ್ಯದಲ್ಲಿ ವಂಗಾರ ಹಾಗೂ ಉತ್ತರದ ಮರುಭೂಮಿ ಗಡಿಗಳಿಂದ ಕಪ್ಪ ಪಡೆಯುತ್ತಿತ್ತು. ೧೪ನೆಯ ಶತಮಾನದಲ್ಲಿ ಮಾಲಿಯ ಆಳರಸರು ಇಸ್ಲಾಂಧರ್ಮದ ಅನುಯಾಯಿಗಳಾದರು. ಹೀಗೆ ಅವರು, ಮಾಲಿಯ ವರ್ತಕರು ದಕ್ಷಿಣ ಅರಣ್ಯದ ಚಿನ್ನ ಮತ್ತು ಕೋಲ ಉತ್ಪಾದಿಸುವ ಪ್ರದೇಶಗಳಿಗೆ ಹಾಗೂ ಪೂರ್ವಕ್ಕೆ ಹೌಸಾಲ್ಯಾಂಡ್‌ವರೆಗೆ ವಿಸ್ತರಿಸುವ ಸಮಯದಲ್ಲಿ ಉತ್ತರ ಆಫ್ರಿಕಾ ರಾಜ್ಯಗಳಿಂದ ಮನ್ನಣೆ ಪಡೆದುಕೊಂಡರು. ಚಿನ್ನ, ಕೋಲ ಹಾಗೂ ಗುಲಾಮರಿಗಾಗಿ ವ್ಯಾಪಾರ ಪ್ರಮುಖ ಸರಕೆಂದರೆ ಉತ್ತರ ಆಫ್ರಿಕಾದ ಮರುಭೂಮಿಗಳ ಉಪ್ಪು. ಪರಿಣಾಮವಾಗಿ ಮಾಲಿ ಟಿಂಬಿಕ್ಟು ಮತ್ತು ಗಾವೋಗಳು ಅತ್ಯಂತ ಪ್ರವರ್ಧಮಾನವನ್ನು ತಲುಪಿದವು. ಟಿಂಬಕ್ಟು ಇಸ್ಲಾಂ ಕಲಿಕೆ ಮತ್ತು ಸಂಸ್ಕೃತಿಯ ಕೇಂದ್ರವಾಯಿತು. ಹೀಗೆ ಇಸ್ಲಾಂ ಮತಾವಲಂಬನದಿಂದ ಮಾಲಿಯ ವಾಣಿಜ್ಯ ಮತ್ತು ಸಾಂಸ್ಕೃತಿಕ ಪ್ರಭಾವ ಬಲುದೂರದವರೆಗೆ ತಲುಪಿತು. ೧೪ನೆಯ ಶತಮಾನದ ಉತ್ತರಾರ್ಧದಲ್ಲಿ ಮಾಲಿ ಸಾಮ್ರಾಜ್ಯದ ಅವನತಿ ಪ್ರಾರಂಭವಾಯಿತು. ಯಾರು ಉತ್ತರಾಧಿಕಾರಿಯಾಗಬೇಕೆಂಬ ವಿವಾದ ಮಾಲಿಯ ಸೇನಾ ಸರ್ವೋನ್ನತೆಗೆ ಧಕ್ಕೆ ತಂದಿತು. ಅದರ ರಾಜಕೀಯ ನಿಯಂತ್ರಣ ಸೊಂಗಾಯಿಯಂತಹ ಅನೇಕ ಜನಾಂಗದವರೆಗೆ ಪ್ರಸರಿಸಿತ್ತು. ಆದರೆ ಈ ನಿಯಂತ್ರಣವೇನಿದ್ದರೂ ಮಾಲಿಯನ್ನು ಯಾರೂ ವಿರೋಧಿಸದೇ ಇದ್ದ ಕಾಲದವರೆಗೆ ಮಾತ್ರ. ಮಾಲಿಯ ಸೇನಾ ದುರ್ಬಲತೆಯ ಜೊತೆಗೆ ವಾಣಿಜ್ಯ ಇಳಿಮುಖವಾಯಿತು. ಮೊರಾಕ್ಕೊದ ರಾಜಕೀಯ ದುರ್ಬಲತೆ ವಿಶಾಲ ಸಹರಾ ವ್ಯಾಪಾರದ ವಿನಾಶಕ್ಕೆ ಕಾರಣವಾಯಿತು. ಮಾಲಿ ಸಾಮ್ರಾಜ್ಯವನ್ನು ಟರೆಕ್ ಅವರು ಉತ್ತರದಿಂದ, ಫುಲಾನಿ ಪಶ್ಚಿಮದಿಂದ ಮತ್ತು ಮೊಸಾಯಿ ದಕ್ಷಿಣದಿಂದ ಆಕ್ರಮಿಸಲಾರಂಭಿಸಿದರು. ಪೂರ್ವದ ಸೊಂಗಾಯಿ ತಾನು ಸ್ವತಂತ್ರ ಎಂದು ಘೋಷಿಸಿಕೊಂಡಿತು. ಇದು ಮಧ್ಯ

ನೈಜರ್ ಹಾಗೂ ಮಧ್ಯ ಕಾರವಾನ್ ಮಾರ್ಗಗಳನ್ನು ನಿಯಂತ್ರಿಸಲಾರಂಭಿಸಿತು ಮತ್ತು ಗಾವೋ ಸಾಮ್ರಾಜ್ಯವನ್ನು ಕಟ್ಟಿತು. ೧೩೭೫ರಲ್ಲಿ ಸೊಂಗ್ಯಾ ಮಾಲಿಯ ಪ್ರಾಬಲ್ಯವನ್ನು ಕಿತ್ತೊಗೆದು ಪೂರ್ವದಿಂದ ಅದರ ಮೇಲೆ ಒತ್ತಡ ಹೇರಲಾರಂಭಿಸಿತು ಮತ್ತು ಅದು ಪಶ್ಚಿಮ ಸೂಡಾನ್ ಅನ್ನೂ ನಿಯಂತ್ರಿಸಲಾರಂಭಿಸಿತು. ಆದರೆ ಈ ಹೊಸ ಸಾಮ್ರಾಜ್ಯದ ಪ್ರಾಬಲ್ಯ ಬಹಳ ಕಾಲ ಉಳಿಯಲಿಲ್ಲ. ಇಸ್ಲಾಂ ಮಾಲಿ ಸಾಮ್ರಾಜ್ಯದ ಶಕ್ತಿಮೂಲವಾಗಿತ್ತು. ಆದರೆ ಅದು ಸೊಂಗಾಯಿಯಲ್ಲಿ ಇಸ್ಲಾಂಮೇತರ ಜನಾಂಗದ ಪ್ರತಿಕ್ರಿಯೆಗೆ ಕಾರಣವಾಯಿತು. ಹೀಗಾಗಿ ತರುವಾಯದ ರಾಜರು ರಾಜಪಟ್ಟಕ್ಕೆ ಕ್ರಮಬದ್ಧ ಉತ್ತಾರಾಧಿಕಾರಕ್ಕೆ ಒಪ್ಪಲಿಲ್ಲ. ಆದ್ದರಿಂದ ರಾಜ್ಯನಿಯಂತ್ರಣದಲ್ಲಿ ವಿಫಲರಾದರು ಅಥವಾ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡರು. ಅದು ಸೌದಿ ಸುಲ್ತಾನರು ರೂಪಿಸಿದ್ದ ಬಲುವ್ಯವಸ್ಥಿತ ಮೊರಾಕ್ಕೋದ ದಾಳಿಗಳಿಗೆ ಪದೇ ಪದೇ ತುತ್ತಾಗಬೇಕಾಯಿತು. ಸಹರಾ ಉಪ್ಪು ಗಣಿಗಳ ನಿಯಂತ್ರಣಕ್ಕಾಗಿ ಈ ದಾಳಿಗಳನ್ನು ಮಾಡಲಾಯಿತು. ೧೫೯೦-೧೫೯೧ರಲ್ಲಿ ಅಹ್ಮದ್-ಅಲ್-ಮನ್ಸೂರನ ನೇತೃತ್ವದಲ್ಲಿ ಒಂದು ಯುದ್ಧಯಾತ್ರೆ ಹೊರಟು ಗಾವೋ, ಟಿಂಬಿಕ್ಟು ಮತ್ತು ಜಿನ್ನಿಗಳನ್ನು ಮುತ್ತಿ ಆಕ್ರಮಿಸಿಕೊಂಡಿತು. ಆದರೆ ಎಲ್ಲರೂ ಹಾತೊರೆಯುತ್ತಿದ್ದ ಅರಣ್ಯದ ಚಿನ್ನ ಉತ್ಪಾದಿಸುವ ಪ್ರದೇಶಗಳು ಮೊರಾಕ್ಕೋದವರ ಕೈಗೆ ನಿಲುಕಲಿಲ್ಲ. ಸೂಡಾನ್‌ನಲ್ಲಿ ಒಂದು ಶಕ್ತಿಶಾಲಿ ಕೇಂದ್ರಸರ್ಕಾರ ಇಲ್ಲದೇ ಇದ್ದ ಕಾರಣ ಈ ದಿಗ್ವಿಜಯದಿಂದ ಬಲುಕಾಲ ಬಾಳುವ ಯಾವುದೇ ಆರ್ಥಿಕ ಲಾಭ ದೊರೆಯಲಿಲ್ಲ.

### ವಿಶಾಲ ಸಹರಾ ವಾಣಿಜ್ಯದ ಅವನತಿ

ಸೂಡಾನ್ ಸಾಮ್ರಾಜ್ಯದ ವೈಭವಪೂರ್ಣ ದಿನಗಳು ಹಾಗೂ ಅದು ಬೆಳೆಸಿದ ವಿಶಾಲ ಸಹರಾ ವ್ಯಾಪಾರಗಳು ಕ್ಷೀಣಿಸುತ್ತ ಬಂದವು. ಹದಿನೈದನೇ ಶತಮಾನದಲ್ಲಿ ಪೋರ್ಚುಗೀಸರು ಮತ್ತವರ ಪ್ರತಿಸ್ಪರ್ಧಿ ರಾಷ್ಟ್ರಗಳು ಅಟ್ಲಾಂಟಿಕ್ ತೀರದ ಅನ್ವೇಷಣೆ ಪ್ರಾರಂಭಿಸಿದರು. ಗಿನಿಯಿಂದ ಉತ್ತರಕ್ಕೆ ಹರಿದು ಬರುತ್ತಿದ್ದ ಕೆಲವಾರು ವ್ಯಾಪಾರಗಳಿಗೆ ಯುರೋಪಿನ ವಾಣಿಜ್ಯ ಕೇಂದ್ರಗಳಲ್ಲಿ ಹೊಸ ವ್ಯಾಪಾರ ಕೇಂದ್ರಗಳು ದೊರೆತವು. ವಿಶಾಲ ಸಹರಾ ರಾಜ್ಯಗಳ ಮೇಲೆ ನಿಯಂತ್ರಣ ಉಳಿಸಿಕೊಳ್ಳುವುದಕ್ಕಾಗಿ ಆಕ್ರಮಣಕಾರರು ಪೋರ್ಚುಗಲ್, ಸ್ಪೈನ್, ಮೊರಾಕ್ಕೊ ಮತ್ತು ಅಟೊಮನ್ ಟರ್ಕ್‌ಗಳ ವಿರುದ್ಧ ಹೋರಾಟಕ್ಕೆ ಇಳಿಯಬೇಕಾಯಿತು. ಟರ್ಕಿಯ ಬಂದೂಕುಗಳು ಮತ್ತು ಯುದ್ಧತಂತ್ರಗಳನ್ನು ಬಳಸಿಕೊಂಡು ಬೋರ್ನು ಶಕ್ತಿಶಾಲಿ ರಾಜ್ಯವಾಯಿತು. ವಾಣಿಜ್ಯ ದೃಷ್ಟಿಯಿಂದ ಇದು ಘಾನ, ಮಾಲಿ ಅಥವಾ ಸೋಗಾಯ್‌ಗಳಷ್ಟೇ ಶ್ರೀಮಂತವಾಗಿದ್ದರೂ ಅದು ಮಘಾನಿಬ್‌ನಿಂದ ಸ್ಫೂರ್ತಿವಾಗಿರದೆ ಈಜಿಪ್ಟಿನಿಂದ ಸ್ಫೂರ್ತವಾದ ಇಸ್ಲಾಂನ ಸ್ಥಳೀಯ ಕೇಂದ್ರವಾಗಿ ಉಳಿಯಿತು. ವಿಶಾಲ ಸಹರಾ ವ್ಯಾಪಾರವು ಕೃಷಿ ಹಾಗೂ ಕೈಗಾರಿಕೆ ಸಂಪತ್ತಿನಲ್ಲಿ ಸಮೃದ್ಧವಾಗುತ್ತ ಬಂದ ಒಂದು ಸಣ್ಣ ರಾಜ್ಯವಾದ ಹೌಸಾದ ನಗರ ರಾಜ್ಯಗಳಿಗೆ ಹರಿಯಲಾರಂಭಿಸಿತು. ಮಾಲಿ, ಸೋಗಾಯ್ ಹಾಗೂ ಬೋರ್ನುಗಳ ಮೇಲಿನ ದಾಳಿಯ ಕಾರಣದಿಂದಾಗಿ ಹೌಸ

(ನೈಜೀರಿಯದಲ್ಲಿ ಮಾತನಾಡುವ ಅಫ್ರೋ ಏಷಿಯಾಟಿಕ್ ಕುಟುಂಬದ ಜಾಡ್‌ನ ಉಪಕುಟುಂಬದ ಒಂದು ಸದಸ್ಯ ಭಾಷೆ) ತನ್ನ ಆರ್ಥಿಕ ಮತ್ತು ಸಾಂಸ್ಕೃತಿಕ ಪ್ರಭಾವವನ್ನು ಮುಸ್ಲಿಂ ವ್ಯಾಪಾರಿಗಳ ಮೂಲಕ ಹರಡ ಲಾರಂಭಿಸಿತು. ಏಕೆಂದರೆ ಆಗ ಆ ಮುಸ್ಲಿಂ ವ್ಯಾಪಾರಿಗಳೇ ಅರಣ್ಯವಾಸಿ ಜನಕ್ಕೆ ವ್ಯಾಪಾರ ಮತ್ತ ಇಸ್ಲಾಂ ಅನ್ನು ತಲುಪಿಸುತ್ತಿದ್ದ ಪ್ರಧಾನ ವಾಹಕರಾಗಿದ್ದರು.

## ಬ್ರಿಟಿಷ್ ಹಾಗೂ ಫ್ರೆಂಚ್ ಅಧಿಕಾರ ವಿಸ್ತರಣೆ

ಫ್ರೆಂಚರು ಶೆವಾಸಿಲ್ ನದಿ ದಂಡೆ ಮೇಲೆ ನೆಲೆಯೂರಿದರು. ಬ್ರಿಟಿಷರು ಚಿನ್ನದ ತೀರದ ನೈಜೀರಿಯಾ ಪ್ರದೇಶದಲ್ಲಿ ನೆಲೆಯೂರಿದರು. ಗುಲಾಮ ಮತ್ತು ದಂತ ವ್ಯಾಪಾರಿಗಳ ಮೂಲಕ ನೈರೋಪಿಕ್ ಸೂಡಾನ್‌ನಲ್ಲಿ ಈಜಿಪ್ಟ್ ಆಕ್ರಮಿಸಿತು. ಸುಡಾನ್‌ನಲ್ಲಿ ಈಗ ಮುಸ್ಲಿಮರು ಸಕ್ರಿಯರಾಗಿದ್ದರು ಮತ್ತು ಇಡೀ ಜನಸಮುದಾಯ ಇಸ್ಲಾಂಗೆ ಪರಿವರ್ತಿತವಾಯಿತು. ನೈಜೀರಿಯಾದಲ್ಲಿ ಹೌಸಾ ಅಮೀರರ ಭ್ರಷ್ಟ ಮತ್ತು ದುರ್ಬಲ ಆಳ್ವಿಕೆ ವಿರುದ್ಧ ಫುಲಾನಿ ಒಂದು ಜಿಹಾದ್ ದಂಗೆ ಮಾಡಿತು ಮತ್ತು ೧೮೦೪ ಮತ್ತು ೧೮೧೧ರಲ್ಲಿ ತಮ್ಮ ರಾಜ್ಯಗಳಲ್ಲಿ ಸೊಕಾಟೋ ಮತ್ತು ಗಾಂಡೋ ಅವರ ಸಾಮ್ರಾಜ್ಯಗಳಲ್ಲಿ ವಿಲೀನಗೊಳಿಸಿದರು. ಬ್ರೋರ್ನುವಿನ ಮುಸ್ಲಿಂರು ಇವರ ವಿಸ್ತಾರಕ್ಕೆ ತಡೆಯುಂಟು ಮಾಡಿದ್ದರಿಂದ ಅವರು ದಕ್ಷಿಣದ ಯೂರೋಬಾಲ್ಯಾಂಡ್ ಕಡೆಗೆ ಮುಂದುವರಿದರು. ಪಶ್ಚಿಮದಲ್ಲಿ ಮಸ್ಸಿನಾದಲ್ಲಿದ್ದ ಫುಲಾನಿಯರೂ ಒಂದು ಹೊಸ ರಾಜ್ಯ ಸ್ಥಾಪಿಸಿದರು. ಫೌತಾ-ಕೋರೋವಿನಿಂದ ತುಕುಲಾರ್ ರಾಜನು ಇನ್ನೊಂದು ಜಿಹಾದ್ ನಡೆಸಿ ೧೮೬೩ರಲ್ಲಿ ಬಂಬಾರ ರಾಜ್ಯಗಳು ಮತ್ತು ಮಸ್ಸಿನಾಗಳನ್ನು ವಶಪಡಿಸಿಕೊಂಡನು. ಸಹಜವಾಗಿ ಈ ಮುನ್ನಡೆಗಳು ಮುಂದುವರೆದು ಬರುತ್ತಿದ್ದ ಬ್ರಿಟಿಷ್ ಹಾಗೂ ಫ್ರೆಂಚ್ ಬಲಗಳೊಂದಿಗೆ ಸಂಘರ್ಷಕ್ಕೊಳಗಾಗಬೇಕಾಯಿತು. ೧೮೬೯ರ ಹೊತ್ತಿಗೆ ಫ್ರೆಂಚರು ಸೆನೆಗಲ್‌ವರೆಗೆ ಗೆದ್ದುಕೊಂಡರು. ೧೮೯೦ರ ಹೊತ್ತಿಗೆ ಚಿನ್ನದ ತೀರ ಮತ್ತು ಕೆಳ ನೈಜೀರಿಯಾದಿಂದ ಬ್ರಿಟಿಷರ ಒಳಭೂಮಿಯನ್ನು ಆಕ್ರಮಿಸಿಕೊಳ್ಳ ಹತ್ತಿದರು ಮತ್ತು ಈಜಿಪ್ಟ್ ಮತ್ತು ಉಗಾಂಡದಲ್ಲಿ ಬ್ರಿಟಿಷ್ ಹಿತಾಸಕ್ತಿಗೆ ಬಹುಮುಖ್ಯವಾದ ನೈಲ್‌ನ ಮೇಲುಭಾಗವನ್ನು ಆಕ್ರಮಿಸಿಕೊಳ್ಳುವ ಬೆದರಿಕೆಯನ್ನೂ ಒಡ್ಡಿದರು.

## ಗಿನಿ

'ಅಗ್ಗಿನಾವ್' ಅಥವಾ 'ಗ್ನಾವಾ' ಎಂಬ ಬರ್ಬರ ಪದದ ಅರ್ಥ 'ಕಪ್ಪು ಮನುಷ್ಯ'. ಯುರೋಪಿಯನ್ನರಿಗೆ ಕಪ್ಪು ಆಫ್ರಿಕಾದ ಬಗ್ಗೆ ಮೊತ್ತಮೊದಲು ತಿಳಿದುಬಂದದ್ದು ಲಿಬಿಯಾದ ಅಲೆಮಾರಿಗಳ ಸಂಬಂಧದ ಮೂಲಕ. ಹೀಗಾಗಿ ಪಶ್ಚಿಮ ಯುರೋಪಿನ ಮೆಡಿಟರೇನಿಯನ್ ಭೂಮಿಯಲ್ಲಿ ರಚಿಸಿದ ನಕಾಶೆಗಳಲ್ಲಿ ೧೪ನೆಯ ಶತಮಾನದಲ್ಲಿ ಗಿನಿ ಎಂಬ ಹೆಸರು ಪ್ರಯೋಗವಾಗಲಾರಂಭಿಸಿತು.

ಆಫ್ರಿಕಾದ ಪಶ್ಚಿಮ ಕರಾವಳಿಯ ಅನ್ವೇಷಣೆಯಲ್ಲಿ ತೊಡಗಿದ್ದ ಪೋರ್ಚುಗೀಸರು ಮೂರ್ ಜನಾಂಗದ ಪ್ರಾಬಲ್ಯವಿದ್ದ ಪ್ರದೇಶಗಳಿಂದಾಚೆಗೆ ಪ್ರಯಾಣ ಮಾಡಿ, ಸೆನೆಗಲ್

ನದಿ ಮತ್ತು ಕೇಪ್‌ವೆಂಡೆಗೆ ಬಂದಾಗ ಮತ್ತು ಅಲ್ಲಿಂದಾಚೆ ಕಪ್ಪು ಜನರು ವಾಸಿಸುತ್ತಿದ್ದ ನಾಡಿಗೆ ಬಂದಾಗ ಅವರು ಆ ಜನಗಳಿಗೆ ಮತ್ತು ಆ ಭೂಮಿಗೆ ಎರಡಕ್ಕೂ ತಾವು ಮೊರಾಕ್ಕೋದಲ್ಲಿ ಕೇಳಿದ್ದ ಹೆಸರನ್ನೇ ಇಟ್ಟು ಕರೆದರು. ಪೋರ್ಚುಗೀಸರು ಮತ್ತು ಅವರ ಉತ್ತರಾಧಿಕಾರಿಗಳು ಕೇವಲ ಕರಾವಳಿಯ ವ್ಯಾಪಾರವನ್ನಷ್ಟೇ ದೃಷ್ಟಿಯಲ್ಲಿಟ್ಟು ಕೊಂಡಿದ್ದವರು ಮತ್ತು ಗಿನಿ ಎಂಬ ಹೆಸರು ಪಶ್ಚಿಮ ಆಫ್ರಿಕಾ ಕರಾವಳಿ ಭೂಮಿ ಮತ್ತು ಅದಕ್ಕೆ ಲಗತ್ತಾದ ಅರಣ್ಯ ಎಂಬ ಅರ್ಥ ಹೊಂದಿತ್ತು. ೧೧ನೆಯ ಶತಮಾನಕ್ಕೂ ಪೂರ್ವದ ಗಿನಿಯ ಇತಿಹಾಸ ಯಾರಿಗೂ ಗೊತ್ತಿಲ್ಲ. ಗಿನಿಯ ಕಪ್ಪು ಜನರಲ್ಲಿ ಲಿಖಿತ ದಾಖಲೆಗಳಿಲ್ಲದಿರುವ ಕೊರತೆ ನೀಗಿಸುವಂತಹ ಯಾವ ಕಾರ್ಯವನ್ನು ಪ್ರಾಗೈತಿಹಾಸಿಕ ಸಂಶೋಧನೆಗಳು ಮಾಡಿಲ್ಲ. ಇನ್ನು ತೋಂಡಿ ಸಂಪ್ರದಾಯದ ಇತಿಹಾಸದ ಮೌಲ್ಯ ಅದನ್ನು ತಿಳಿಸುವವರ ರಾಜಕೀಯ ಸಂಘಟನೆ ಎಷ್ಟರಮಟ್ಟದ್ದು ಎಂಬುದನ್ನು ಅವಲಂಬಿಸಿದೆಯಾದರೂ ಉತ್ತಮವಾಗಿ ಸಂಘಟಿತವಾದ ಗಿನಿ ರಾಜ್ಯಗಳ ಪರಂಪರೆ ಕೆಲವೊಮ್ಮೆ ೫೦೦ ವರ್ಷಗಳ ಐತಿಹಾಸಿಕ ದಾಖಲೆಗಳನ್ನು ನೀಡುತ್ತವೆ. ಅದೃಷ್ಟವಶಾತ್ ಈ ಕೆಲವು ಐತಿಹ್ಯಗಳು ಇತಿಹಾಸ ಬರೆಯಲು ಅನುವುಗೊಡುವಂತಹ ಇದೇ ಬಗೆಯ ಸೂಡಾನ್‌ನ ಐತಿಹ್ಯಗಳೊಂದಿಗೆ ಸಂಬಂಧ ಹೊಂದಿವೆ. ಪಶ್ಚಿಮ ಸೂಡಾನ್ ಅರಬ್ ಪ್ರಾಂತ್ಯವು ಭೂಗೋಳಶಾಸ್ತ್ರಜ್ಞರು, ಇತಿಹಾಸಕಾರರು ಮತ್ತು ಪ್ರವಾಸಿಗರಿಗೆ ಹೆಚ್ಚು ಹೆಚ್ಚು ಪರಿಚಿತವಾಗಿತ್ತು. ಹೀಗೆ ಸೂಡಾನ್‌ನ ಐತಿಹ್ಯ ಗಳೊಂದಿಗೆ ಪರಾಮರ್ಶಿಸಿ ಗಿನಿಯ ತಾತ್ಕಾಲಿಕ ಇತಿಹಾಸವನ್ನು ೧೧ನೆಯ ಶತಮಾನದವರೆಗೆ ಅಂದರೆ, ಐರೋಪ್ಯ ಮೂಲ ದೊರೆಯುವುದಕ್ಕೆ ಸುಮಾರು ೬೦೦ ವರ್ಷಗಳಿಗೆ ಮುಂಚೆ ರೂಪಿಸಬಹುದು. ಐವರಿ ಕೋಸ್ಟ್ ಮತ್ತು ನೈಜರ್ ನಡುವಿನ ಪ್ರದೇಶದ ಜನರು ವ್ಯವಸ್ಥಿತ ರಾಜ್ಯಗಳನ್ನು ಸ್ಥಾಪಿಸುವಲ್ಲಿ ಇತರರಿಗಿಂತ ಹೆಚ್ಚು ಮುಂದುವರೆದವರಾಗಿದ್ದರು. ಗಿನಿಯಲ್ಲಿ ರಾಜ್ಯ ಸ್ಥಾಪನೆಯು ಸೂಡಾನ್‌ನಿಂದ ವಲಸೆ ಬಂದ ಜನರಿಂದ ಸಾಮಾನ್ಯವಾಗಿ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ಅವರು ತಮ್ಮ ರಾಜ್ಯಗಳ ಸಾಂಪ್ರದಾಯಿಕ ಪರಂಪರೆಯನ್ನು ರಕ್ಷಿಸಿಕೊಂಡು ಬರುವುದಕ್ಕೂ ವಿಶೇಷ ಎಚ್ಚರವನ್ನು ವಹಿಸಿದರು. ಇವು ಕೈಸರನನ್ನು ಕುರಿತ ಐತಿಹ್ಯಗಳು (ಅವನನ್ನು ಪರ್ಷಿಯನ್ ರಾಜನೆಂದು ವರ್ಣಿಸಲಾಗಿದೆ). ಆತ ತನ್ನ ಅನುಯಾಯಿಗಳೊಂದಿಗೆ ಈಜಿಪ್ಟಿನಿಂದ ನಪಾಟಾಕ್ಕೆ ಮತ್ತು ಅಲ್ಲಿಂದ ಚಾಡ್ ಸರೋವರದ ಪಶ್ಚಿಮಕ್ಕೆ ಓಡಿಬಂದನು. ಆತ ನುಪ್, ಬೋರ್ನು, ಜುಕುನ್, ಕ್ವಾರಾರಾಫಾ ಗಳೂ ಸೇರಿದಂತೆ ಒಂದು ರಾಜ್ಯಗಳ ಸರಣಿಯನ್ನೇ ಸ್ಥಾಪಿಸಿದನು ಎಂದು ಸ್ಮರಿಸಲಾಗುತ್ತದೆ. ಅವುಗಳಲ್ಲಿ ಕೆಲವು ಹೌಸಾ ರಾಜ್ಯಗಳು ಮತ್ತು ಯೊರೂಬಾ ರಾಜ್ಯಗಳಾದವು. ಈ ಕಥೆಯ ಐತಿಹಾಸಿಕ ಆಧಾರವನ್ನು ಅಳೆಯುವುದು ಕಷ್ಟ. ಆದರೆ ಹೆಸರುಗಳು ಮತ್ತು ಇನ್ನಿತರ ಪುರಾವೆಗಳನ್ನು ಆಧರಿಸಿದಾಗ ನೈಲಾಡಿ ಸೂಡಾನ್‌ನಲ್ಲಿ ಯಶಸ್ವಿಯಾದ ಕ್ರೈಸ್ತ ರಾಜ್ಯಗಳಿಂದ ೭ನೇ ಶತಮಾನದ ಹೊತ್ತಿಗೆ ಹೊರಗೋಡಿ ಬಂದದ್ದು ತಿಳಿದುಬರುತ್ತದೆ. ಯೊರೂಬಾ ಐತಿಹ್ಯಗಳ ಪ್ರಕಾರ ಈ ರಾಜ್ಯಗಳು ನೆಲೆನಿಂತ ಎರಡು ಮುಖ್ಯಧಾರೆಗಳಿಂದ ಸ್ಥಾಪಿತವಾದವು.

ಯೊರೂಬಾದ ಸೃಷ್ಟಿದೇವತೆಯ ಹೆಸರನ್ನು ಹೊಂದಿದ ಒಡುದುವಾ ವಲಸೆ. ಇದು ೧೦ನೇ ಶತಮಾನದ ಹೊತ್ತಿಗೆ ಹೌಸ ಭೂಮಿಯತ್ತ ಬಂದ ಎರಡನೆ ಪ್ರಮುಖ ವಲಸೆಯೊಂದಿಗೆ ಸಂಬಂಧಪಟ್ಟಿದೆ. ಯೊರೂಬಾ ಭೂಮಿಯ ಈ ಘಟನೆಗಳು ರಾಜ್ಯಕ್ಷೇತ್ರಗಳಲ್ಲಿ ಪ್ರಭಾವ ಬೀರಿದವು. ಇದರ ನಿಕಟ ಆಗ್ನೇಯ ಭಾಗದಲ್ಲಿದ್ದ ಬೆನಿನ್‌ನ ಸಂಪ್ರದಾಯವೂ ಇದೇ ರೀತಿಯ ರಚನಾಶೀಲ ಪ್ರಭಾವಕ್ಕೆ ಒಳಗಾದದ್ದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಕರಾವಳಿಯಲ್ಲಿ ಇನ್ನಷ್ಟು ದೂರದಲ್ಲಿ ಘಾನ್ ಈವ್, ಅಡಗ್ಮೆ ಮತ್ತು ಸಂಪ್ರದಾಯಗಳು ಯೊರೂಬಾ ಭೂಮಿಯಿಂದ ಪಶ್ಚಿಮಕ್ಕೆ ವಿಸ್ತರಣೆಯಾಗಿರುವುದನ್ನು ಸೂಚಿಸುತ್ತವೆ. ಈ ವಿಸ್ತರಣೆ ತನ್ನ ಸೀಮಾಂತ್ಯವನ್ನು ತಲುಪಿದ್ದು ೧೫ನೇ ಶತಮಾನದಲ್ಲಿ. ಹೀಗೆ ಈ ಪುರಾವೆಗಳಿಂದ ಹಳೆಯ ಐತಿಹ್ಯಗಳು ಮತ್ತು ಪರಂಪರೆಯನ್ನು ನಿಜವೆಂದು ದೃಢೀಕರಿಸುತ್ತವೆ ಮತ್ತು ಪೂರ್ವದ ಘಾನ ರಾಜ್ಯ ಒಡಮೂಡಲು ಆದ ವಲಸೆಗಳು ತಂಡತಂಡವಾಗಿ ದಾಳಿ ಮಾಡಿದ್ದರಿಂದ ಉಂಟಾದುದಲ್ಲ, ಹೋಲಿಕೆಯಲ್ಲಿ ಕಡಿಮೆ ಸಂಖ್ಯೆಯ ವಲಸೆಗಾರರು ಬಂದು ಈ ನಾಡು ಮೂಡಿತು ಎಂದು ತಿಳಿದುಬರುತ್ತದೆ. ಹೀಗೆ ವಲಸೆ ಬಂದ ತಂಡಗಳು ಈಗಾಗಲೇ ನೆಲೆಯೂರಿದ್ದ ಕಪ್ಪು ಜನಾಂಗದ ಬಂಧು ಸಮೂಹಗಳಿಗೆ ಹೊಸ ವಿಚಾರಗಳು ಮತ್ತು ತಂತ್ರಜ್ಞಾನವನ್ನು ನೀಡಿದರು. ಅವರನ್ನು ರಾಜಕೀಯ ಘಟಕಗಳಾಗಿ ಒಗ್ಗೂಡಿಸಿದರು ಎಂಬುದು ತಿಳಿದುಬರುತ್ತದೆ. ಆ ಪ್ರದೇಶದ ಉದ್ದಕ್ಕೂ ಒಂದು ಸಾಂಸ್ಕೃತಿಕ ನಿರಂತರ ಧಾರೆ ಇದೆ. ೧೪ನೆಯ ಶತಮಾನದ ಹೊತ್ತಿಗೆ ವೋಲ್ಟಾ ನದಿ ತೀರದುದ್ದಕ್ಕೂ ಬೋನ ಮತ್ತು ಬಾಂಡದಂತಹ ರಾಜ್ಯಗಳು ಮಲಿಂಕೆ ಸಾಮ್ರಾಜ್ಯದೊಂದಿಗೆ ಚಿನ್ನ ಮತ್ತು ಕೋಲಾ ಕಾಯಿಗಳನ್ನು ವ್ಯಾಪಾರ ಮಾಡಿ ಬಂದ ಹಣದಿಂದ ಶ್ರೀಮಂತರಾಗಲಾರಂಭಿಸಿದರು. ಅವರಲ್ಲಿ ಕೆಲವರು ವೊಲ್ಟಾ ತೆರೆದ ಪ್ರದೇಶದಿಂದ ದಕ್ಷಿಣಕ್ಕೆ ಕರಾವಳಿ ನಾಡಿನವರೆಗೆ ಮುಂದುವರೆದರು ಮತ್ತು ಸ್ವಲ್ಪಮಟ್ಟಿಗೆ ಅರಣ್ಯದೊಳಕ್ಕೂ ಪ್ರವೇಶಿಸಿ ನೆಲೆಸಿದರು. ಹದಿನೈದನೇ ಶತಮಾನದಿಂದೀಚೆಗೆ ಘಾನಾ ಜನರ ಮೇಲೆ ಸೂಡಾನ್‌ನ ಪ್ರಭಾವ ಕಡಿಮೆಯಾಗಲಾರಂಭಿಸಿತು. ಅದರ ಬದಲು ಗಿನಿ ಕರಾವಳಿಯಲ್ಲಿ ಐರೋಪ್ಯರ ವ್ಯಾಪಾರ ನೆಲೆಗಳು ಸ್ಥಾಪನೆಗೊಂಡ ಮೇಲೆ ಇಲ್ಲಿಯ ಜನರ ಮೇಲೆ ಎದ್ದು ಕಾಣುವಂತಹ ಪ್ರಭಾವ ಬೀರಲಾರಂಭಿಸಿದವು. ವೋಲ್ಟಾದಿಂದ ಪಶ್ಚಿಮಕ್ಕೆ ಇರುವ ಸೂಡಾನ್ ರಾಜ್ಯಗಳೊಂದಿಗೆ ಅಂದರೆ ಮುಖ್ಯವಾಗಿ ಘಾನ ಮತ್ತು ಮಾಲಿಗಳೊಂದಿಗೆ ಮತ್ತು ಪೂರ್ವದಲ್ಲಿ ಹನ್ಸ ರಾಜ್ಯಗಳು, ಖನೀಮ್ ಮತ್ತು ಬೋರ್ನುಗಳೊಂದಿಗೆ ಬಿರುಸಾದ ವ್ಯಾಪಾರ ನಡೆಯುತ್ತಿತ್ತು. ಘಾನ ಮುಖ್ಯವಾಗಿ ರಫ್ತು ಮಾಡುತ್ತಿದ್ದ ಪದಾರ್ಥಗಳೆಂದರೆ ಚಿನ್ನ, ಕೋಲಾಕಾಯಿಗಳು ಮತ್ತು ದಂತ. ಆಮದು ಮಾಡಿಕೊಳ್ಳುತ್ತಿದ್ದ ವಸ್ತುಗಳೆಂದರೆ ಉಪ್ಪು, ತಾಮ್ರ, ಕುದುರೆ ಮತ್ತು ಜಾನುವಾರು. ಘಾನಾದ ಉದ್ದಕ್ಕೂ ಸಾಮಾನ್ಯವಾಗಿ ಬಳಕೆಯಲ್ಲಿದ್ದ ಬಟ್ಟೆ ಮತ್ತು ಮಣಿಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಹಾಗೆಯೇ ರಫ್ತು ಮಾಡಲಾಗುತ್ತಿತ್ತು. ಆದರೆ ತೀರಪ್ರದೇಶಕ್ಕೆ ಐರೋಪ್ಯರು ಬರುವುದಕ್ಕೆ ಮುಂಚೆ ಘಾನಾದಲ್ಲಿ ಗುಲಾಮ ವ್ಯಾಪಾರ

ನಡೆದ ಬಗ್ಗೆ ದಾಖಲೆಗಳಿಲ್ಲ. ಹಾಗೆ ನೋಡಿದರೆ ಸೂಡಾನ್ ಅನೇಕ ಶತಮಾನಗಳಿಂದ ಉತ್ತರ ಆಫ್ರಿಕಾಕ್ಕೆ ಗುಲಾಮರನ್ನು ಸರಬರಾಜು ಮಾಡುತ್ತಿತ್ತು. ಐರೋಪ್ಯರ ಗುಲಾಮ ಮಾರಾಟ ಪ್ರಾರಂಭವಾದ ತರುವಾಯ ದೇಶಿ ರಾಜರು ಅವರಿಗೆ ಗುಲಾಮರನ್ನು ಒದಗಿಸು ತ್ತಿದ್ದರು. ಹೀಗಾಗಿ ಈ ಅರಣ್ಯ ರಾಜ್ಯವು ಹೆಚ್ಚು ಪ್ರಬಲವಾಯಿತು.

## ಮೊದಲ ಐರೋಪ್ಯ ವ್ಯಾಪಾರ ಮತ್ತದರ ಪರಿಣಾಮಗಳು

ಐರೋಪ್ಯರು ೧೪೪೫ರ ಸುಮಾರಿಗೆ ಉತ್ತರ ಆಫ್ರಿಕಾದ ವಿಶಾಲ ಸಹರಾ ವ್ಯಾಪಾರವನ್ನು ವೈರಿನಾಡಿಗಿಂತಲೂ ವಿಸ್ತರಿಸುವ ದೃಷ್ಟಿಯಿಂದ ಸೆನೆಗಲ್ ನದಿಯನ್ನು ಮತ್ತು ೧೪೭೨ರ ಫರ್ನಾಂಡೋಪೋವನ್ನು ತಲುಪಿದರು. ಸ್ವರ್ಣತೀರದಲ್ಲಿ ಎಲ್ಮಿನಾ ಎಂಬ ಅವರ ವ್ಯಾಪಾರ ನೆಲೆಯು ೧೪೮೨ರಲ್ಲಿ ಸ್ಥಾಪಿಸಲಾಯಿತು. ನೈಜರ್‌ನ ಪಶ್ಚಿಮ ನದಿಮುಖದಲ್ಲಿ ಬೆನಿನ್‌ಗೆ ಒಂದು ಬಂದರನ್ನು ೧೪೮೬ರಲ್ಲಿ ತೆರೆಯಲಾಯಿತು. ಪೋರ್ಚುಗೀಸರು ಕೇಪ್‌ವರ್ಥಿ ದ್ವೀಪಗಳನ್ನು ಸೂರೆ ಹೊಡೆದರು. ಸಮುದ್ರ ವ್ಯಾಪಾರದಲ್ಲಿ ಪೋರ್ಚುಗೀಸರಿಗಿದ್ದ ಹೆಚ್ಚು ಕಡಿಮೆ ಏಕಮಾನ್ಯತೆಯನ್ನು ೧೭ನೆಯ ಶತಮಾನದ ಪೂರ್ವದಲ್ಲಿ ಮೊತ್ತ ಮೊದಲು ಮುರಿದವರು ಡಚ್ಚರು. ಡಚ್ಚರು ಅಮೆರಿಕದಲ್ಲಿ ಐರೋಪ್ಯರ ನೆಡುತೋಪುಗಳಿಗೆ ಗುಲಾಮರನ್ನು ಒದಗಿಸುವುದರಲ್ಲಿ ನಿರತರಾಗಿದ್ದರು. ೧೬ ಮತ್ತು ೧೭ನೆಯ ಶತಮಾನದಲ್ಲಿ ಯೊರೂಬಾಲ್ಯಾಂಡ್‌ಗೆ ಕರಾವಳಿಯ ಪ್ರದೇಶಸ್ಥಳವಾಗಿದ್ದ ಬೆನಿನ್ ಸಂಪತ್ಸಮೃದ್ಧಿಯ ಒಂದು ಕಾಲಮಾನವನ್ನು ಅನುಭವಿಸಿತು ಮತ್ತು ಈ ಅವಧಿಯಲ್ಲಿ ಅದು ರಾಜ್ಯಗಳನ್ನು ಗೆದ್ದು ವಸಾಹತು ಸ್ಥಾಪಿಸಿ ತನ್ನ ರಾಜ್ಯಕ್ಷೇತ್ರವನ್ನು ವಿಸ್ತರಿಸಿತು. ತರುವಾಯ ಬೆನಿನ್ ಅವನತಿ ಹೊಂದುತ್ತಿರುವಾಗ ಯೊರೂಬ ರಾಜ್ಯಗಳಲ್ಲಿ ಬಹು ಉತ್ತರಕ್ಕೆ ಇರುವ ರಾಜ್ಯಗಳಲ್ಲಿ ಒಂದಾದ ಓಯೋ ದಕ್ಷಿಣದೆಡೆಗೆ ವಿಸ್ತರಿಸಲಾರಂಭಿಸಿತು. ತನ್ನ ಒಡನಾಡಿ ರಾಷ್ಟ್ರಗಳ ಮೇಲೆ ರಾಜಕೀಯ ಆಧಿಪತ್ಯವನ್ನು ಸ್ಥಾಪಿಸಿ ಇಡೀ ಉತ್ಪಾದಕ ಪ್ರದೇಶದ ವಿದೇಶಿ ವ್ಯಾಪಾರವನ್ನು ನಿಯಂತ್ರಿಸಲಾರಂಭಿಸಿತು. ೧೮ನೆಯ ಶತಮಾನದಲ್ಲಿ ಉತ್ತರದ ತುತ್ತತುದಿಯ ಆಡ ರಾಜ್ಯದ ದಹೋಮಿ, ಪಶ್ಚಿಮದಲ್ಲಿ ಓಯೋಗೆ ಪ್ರತಿಸ್ಪರ್ಧಿಯಾಯಿತು. ಈ ದಹೋಮಿ ಗುಲಾಮತೀರದಲ್ಲಿನ ಸಣ್ಣ ಬಂಧುರಾಜ್ಯಗಳನ್ನು ನುಂಗಿ ಹಾಕಿತು. ಗ, ಅಡಂಗ್ಮೆ ಮತ್ತು ಈವ್ ಎಂಬ ಅಕ್ರಾದಿಂದ ಕ್ವಿಥಾ ತೀರದವರೆಗಿನ ಜನಗಳ ಮೇಲೆ ೧೬೭೦ ಮತ್ತು ೧೭೩೦ರ ನಡುವೆ ಅಕ್ವಾಮು ಹಾಗೂ ಆಕಾನ್ ರಾಜ್ಯಗಳನ್ನು ಸ್ಥಾಪಿಸಲಾಯಿತು. ೧೮ನೇ ಶತಮಾನದ ಉತ್ತರಾರ್ಧದ ಹೊತ್ತಿಗೆ ಅಶಾಂತಿಗಳು (ಇದೊಂದು ಬುಡಕಟ್ಟು) ಕರಾವಳಿಯ ಐರೋಪ್ಯ ಕೋಟೆಗಳೊಂದಿಗೆ ವ್ಯಾಪಾರಕ್ಕೆ ಪ್ರವೇಶಾವಕಾಶವನ್ನು ಹುಡುಕುತ್ತಿದ್ದರು.

## ಮಧ್ಯ ಆಫ್ರಿಕಾ

ಮಧ್ಯ ಆಫ್ರಿಕಾದ ದೇಶೀಯ ನಿವಾಸಿಗಳು ಬಂಟು ಭಾಷೆಯನ್ನು ಮಾತನಾಡುವ ಕಪ್ಪು ಜನಾಂಗ. ಇವರು ಪಿಗ್ಮಿಯಂತಹ ಕೆಲವು ಪ್ರತ್ಯೇಕ ಗುಂಪುಗಳನ್ನು ಬಿಟ್ಟರೆ ಕಮರೂನ್‌ನಿಂದ

ದಕ್ಷಿಣ ಇಥಿಯೋಪಿಯಾವರೆಗಿನ ಬಂಟು ಗೆರೆಯಿಂದ ದಕ್ಷಿಣದ ಆಫ್ರಿಕಾದ ಬಹುಭಾಗದಲ್ಲಿ ವಾಸಿಸುತ್ತಿದ್ದಾರೆ. ಇಲ್ಲಿನ ಭಾಷೆಗಳ ತೌಲನಿಕ ಅಧ್ಯಯನದಿಂದ ಬಂಟು ಮಾತನಾಡುವ ಜನರು ಸಾಡಾನಿಕ್ ಎಂದು ವರ್ಗೀಕರಿಸಲಾದ ಭಾಷೆಯನ್ನು ಮಾತನಾಡುವ ಪಶ್ಚಿಮ ಆಫ್ರಿಕಾದ ಕಪ್ಪು ಜನಾಂಗದ ಒಂದು ಕವಲು ಆಗಿದ್ದಿರಬಹುದು. ಮಧ್ಯ ಆಫ್ರಿಕಾದ ಕಟಾಂಗ ಪ್ರದೇಶವು ಈ ಬಂಟು ಮಾತನಾಡುವ ಜನರು ವಾಸಿಸುತ್ತಿದ್ದ ಕೇಂದ್ರ ಪ್ರದೇಶವಾಗಿದ್ದು ಅಲ್ಲಿಂದ ಹರಡಿಕೊಂಡಂತೆ ಕಂಡುಬರುತ್ತದೆ. ಭಾಷಾ ಪುರಾವೆಗಳಿಂದ ಅವರು ಆಧುನಿಕ ಕಮರೂನ್ ಪ್ರದೇಶದಿಂದ ಉಗಮಗೊಂಡು ಪೂರ್ವಕ್ಕೆ ಮತ್ತು ದಕ್ಷಿಣದೆಡೆಗೆ ವಲಸೆ ಹೋಗಿರುವಂತೆ ಕಂಡುಬರುತ್ತದೆ. ಕ್ರಿಸ್ತಶಕದ ಆರಂಭದ ಕಾಲದಲ್ಲಿ ಈ ಜನರು ವಿಸ್ತಾರಗೊಂಡು ಎಲ್ಲೆಡೆ ಪ್ರಸರಿಸಿರುವುದು ಕಂಡುಬರುತ್ತದೆ. ಕಾಂಗೋನದಿ ಮುಖಜ ಭೂಮಿಯಲ್ಲಿ ಮಹಾನ್ ಕಾಂಗೋ ಸಾಮಾನ್ಯವು ೧೪೦೦ರ ಸುಮಾರಿನಲ್ಲಿ ಅಧಿಕಾರಕ್ಕೆ ಬಂತು. ಇಷ್ಟೊಂದು ವಿಶಾಲವಾದ ಪ್ರದೇಶದಲ್ಲಿ ಬಂಟು ಜನರು ಬಹುಬೇಗ ನೆಲೆ ಯೂರಲು ಬಹುಶಃ ಅವರ ಕಬ್ಬಿಣದ ಯುಗದ ತಂತ್ರಜ್ಞಾನ ಮತ್ತು ಆಗ್ನೇಯ ಏಷ್ಯಾ ಮೂಲದ ಬಾಳೆಹಣ್ಣು ಯಾಮ್, ಕೋಕೋ ಮತ್ತು ಕಬ್ಬು ಈ ಬೆಳೆಗಳನ್ನು ಅಳವಡಿಸಿ ಕೊಂಡು ಅಭಿವೃದ್ಧಿ ಪಡಿಸಿದ್ದೂ ಮುಖ್ಯ ಕಾರಣವಿರಬಹುದು. ಮಧ್ಯ ಬಂಟು ಜನಾಂಗ ವನ್ನು ಕುರಿತ ಐತಿಹಾಸಿಕ ಅತಿ ಪ್ರಾಚೀನ ಉಲ್ಲೇಖಗಳು, ಸುಮಾರು ಕ್ರಿ.ಶ.೧೦ನೆಯ ಶತಮಾನದಿಂದೀಚೆಗೆ ಪೂರ್ವ ಕರಾವಳಿಯನ್ನು ಕುರಿತ ಅರಬ್ಬರ ದಾಖಲೆಗಳಲ್ಲಿ ಕಾಣಬರುತ್ತದೆ. ಸೋಫಾಲ ಮೊಜಾಂಬಿಕ್‌ನ ಹಿನ್ನಾಡಿನಿಂದ ಅರಬ್ ವ್ಯಾಪಾರಿಗಳು ಚಿನ್ನವನ್ನು ಪಡೆಯುತ್ತಿದ್ದರು. ಅದಕ್ಕೆ ಪ್ರತಿಯಾಗಿ ಅವರು ಏಷ್ಯಾದ ಉತ್ಪನ್ನಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಪೋರ್ಚುಗೀಸರು ಕಾಂಗೋ ಮತ್ತು ಅಂಗೋಲಗಳಿಗೆ(೧೪೮೩ರಿಂದ) ಮತ್ತು ಮೊಜಾಂಬಿಕ್‌ಗೆ (೧೫೦೫ರಿಂದ) ಬಂದಾಗ ಆ ಎರಡೂ ಪ್ರದೇಶಗಳಲ್ಲಿ ಅವರು ಅನೇಕ ಬಂಟು ರಾಜ್ಯಗಳೊಂದಿಗೆ ಸಂಪರ್ಕ ಬೆಳಸಿಕೊಂಡರು. ಪಶ್ಚಿಮ ತೀರದಲ್ಲಿ ಕಾಂಗೋ, ಕಕಾಂನೋ, ಲೊಅಂಗೋ, ಡೊಂಗಾ ಇತ್ಯಾದಿ ರಾಜ್ಯಗಳು, ಇನ್ನೂ ಒಳಭಾಗದ ಕೂವಾ ರಾಜ್ಯವನ್ನು ಅನೇಕ ವಲಸೆಗಳ ತರುವಾಯ ೧೫೭೦ರ ಸುಮಾರಿನಲ್ಲಿ ಕಂಡುಹಿಡಿಯಲಾಯಿತು ಎಂಬುದು ತಿಳಿದುಬರುತ್ತದೆ. ಮವೀನೇ ಮಟಾಪ ಸಾಮ್ರಾಜ್ಯವೆಂದು ಸಾಮಾನ್ಯವಾಗಿ ಉಲ್ಲೇಖಿಸಲಾದ ಒಂದು ಗಮನಾರ್ಹ ರಾಜ್ಯ ಸಂಕೀರ್ಣವನ್ನು ಪೋರ್ಚುಗೀಸ್ ಅನ್ವೇಷಕರು ಹಾಗೂ ಮಿಷನರಿಗಳು ಪತ್ತೆ ಹಚ್ಚಿದರು. ಶಿಲಾ ಅವಶೇಷಗಳಲ್ಲಿ ವಿಖ್ಯಾತವಾದದ್ದು ಮತ್ತು ಹೆಚ್ಚು ಗಮನಾರ್ಹ ವಾದದ್ದು ಜಿಂಬಾಬ್ವೆಯಲ್ಲಿ ಮಾಸ್ವಿಂಗೋ ಬಳಿಯ ಬೃಹತ್ ಜಿಂಬಾವ್ವೆ. ಇದನ್ನು ಪುರಾತತ್ವ ಶಾಸ್ತ್ರಜ್ಞರು ಶೋಧನೆ ಮಾಡಿರುತ್ತಾರೆ. ಕಲ್ಲಿನ ಗೋಡೆಗಳು, ಮಣ್ಣಿನ ಮನೆಗಳ ಸುತ್ತಲೂ ಕೋಟೆ ಇರುವಂತಿದೆ. ಕಲ್ಲಿನ ಕಟ್ಟಡಗಳ ನಿರ್ಮಾಣ ಸುಮಾರು ೧೧೦೦ರಿಂದ ಪ್ರಾರಂಭವಾಯಿತು ಎಂದು ತೋರಿಸಲಾಗಿದೆ. ಇದು ೧೪೫೦ರಿಂದ ೧೫೩೦ರವರೆಗೆ (ರೋಜ್ವಿಗಳ ಅಡಿಯಲ್ಲಿ) ತನ್ನ ಗರಿಷ್ಠ ಮಟ್ಟಕ್ಕೆ ಅಭಿವೃದ್ಧಿ ಹೊಂದಿತು. 'ಜಿಂಬಾವ್ವೆ'ಯನ್ನು

ನಿರ್ಮಿಸಿದವರು ಆ ಪ್ರದೇಶದ ಆಧುನಿಕ ಜನರ ಪೂರ್ವಿಕರಾದ ಕಬ್ಬಿಣದ ಕೆಲಸಗಾರರು ಮತ್ತು ಚಿನ್ನದ ಗಣಿಗಾರಿಕೆ ಮಾಡುತ್ತಿದ್ದ ಬಂಟು ಜನರು ಎಂದು ಪರಿಗಣಿಸಲಾಗಿದೆ. ಮವಾನೆ ಮಟಾಪ ಸಂಸ್ಕೃತಿಯು ಪೋರ್ಚುಗೀಸರು ಅದಕ್ಕೆ ಭೇಟಿ ಇತ್ತಾಗ ಬಹುಶಃ ತನ್ನ ಅವನತಿಯ ಹಾದಿಯಲ್ಲಿತ್ತು. ಅದರ ಅವಸಾನಕ್ಕೆ ಚಿನ್ನದ ಉತ್ಪತ್ತಿ ಕಮ್ಮಿ ಆಗಿದ್ದು ಮತ್ತು ಬಂಟು ಜನರು ಪದೇ ಪದೇ ಮುತ್ತಿಗೆ ಹಾಕಿ ಗೆದ್ದದ್ದು ಕಾರಣವಿರುವಂತಿದೆ. ಈ ಸಂಸ್ಕೃತಿಯ ಮೇಲೆ ಸೋತೋ ಮತ್ತು ಶೋನಾ ಜನರು ಮತ್ತು ೧೪೫೦ರಲ್ಲಿ ರೋಜ್ವಿ ಜನರು ದಾಳಿ ಮಾಡಿದರು. ಈ ಜನರು ಮೆಂಬೋ ಸಾಮ್ರಾಜ್ಯವನ್ನು ನಿರ್ಮಿಸಿದರು. ಈ ಮೆಂಬೋ ಸಾಮ್ರಾಜ್ಯ ೧೮೩೦ರಲ್ಲಿ ನಗೋನಿ ಹಾಗೂ ನಡೆಬೆಲೆ ಅವರು ಅದನ್ನು ನಾಶಪಡಿಸುವವರೆಗೂ ಉಳಿದುಬಂದಿತ್ತು. ವಿಕ್ಟೋರಿಯಾ ಸರೋವರದ ವಾಯುವ್ಯ ಭಾಗದಲ್ಲಿ ಬಂಟು ಭಾಷೆ ಮಾತನಾಡುವ ಜನರು ಬುನ್ಯಾರೋ(ಅಥವಾ ಕಿರ್ತಾರ್) ಎಂದು ಕರೆಯಲಾದ ಒಂದು ಪ್ರಬಲ ರಾಜ್ಯವನ್ನು ೧೪ನೆಯ ಶತಮಾನದಲ್ಲಿ ಸ್ಥಾಪಿಸಿದರು. ಅದು ಈಗ ಉಗಾಂಡ ಎಂದು ಕರೆಯಲಾಗುವ ಪ್ರದೇಶವನ್ನು ಆಳುತ್ತಿತ್ತು. ಇದೇ ರೀತಿಯ ರಾಜ್ಯಗಳ ಗುಂಪುಗಳಿದ್ದವು. ಆದರೆ ಅವು ಇದಕ್ಕೂ ಹೆಚ್ಚು ವಿಶಾಲವಾಗಿದ್ದರೂ ಸಾಮಾನ್ಯವಾಗಿ ಅಷ್ಟೊಂದು ಸುಸ್ಥಿರವಾಗಿರಲಿಲ್ಲ. ಇದು ಬಹುಶಃ ವಿದೇಶಿ ವ್ಯಾಪಾರವಿಲ್ಲದೇ ಇದ್ದ ಕಾರಣದಿಂದ ಇರಬಹುದು. ಮಧ್ಯ ಬಂಟು ಜನಾಂಗದ ಉತ್ತರದ ರಾಜ್ಯಗಳಲ್ಲಿ ಪ್ರಮುಖವಾದದ್ದು ಆಗ್ನೇಯ ಕಾಂಗೋದ ಲುಬಾ ಸಾಮ್ರಾಜ್ಯ. ಇದು ಕ್ರಿ.ಶ.೧೫ ಮತ್ತು ೧೬ನೆಯ ಶತಮಾನಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಈಶಾನ್ಯ ಜಾಂಬಿಯಾದ ಕಜೆಂಬಾ ರಾಜ್ಯವು ೧೮ನೆಯ ಶತಮಾನದಲ್ಲಿ ಬಹಳ ಜನಪ್ರಿಯವಾಗಿತ್ತು. ದಕ್ಷಿಣದ ಇತರ ಚಿಕ್ಕ ಸಾಮ್ರಾಜ್ಯಗಳೆಂದರೆ ಅಂಕೋಲೆ, ಬುರುಂಡಿ ಮತ್ತು ವಾರ್ವಾಂಡಾ ಹಾಗೂ ಲೋಜಿ ಸಾಮ್ರಾಜ್ಯಗಳು. ಇವು ಜಾಂಬೇಜಿ (ಬರೋಡ್ಸೆಲ್ಯಾಂಡ್) ಮೇಲು ಭಾಗದ ಸಮೃದ್ಧ ನದಿ ಭೂಮಿಯ ರಾಜ್ಯಗಳು. ಇವು ತಮ್ಮ ಪರಾಕಾಷ್ಠೆಯನ್ನು ೧೯ನೆಯ ಶತಮಾನದಲ್ಲಿ ತಲುಪಿದವು.

**ಪೋರ್ಚುಗೀಸರಿಂದ ಶೋಷಣೆ**

ಕಾಂಗೋ ಕೆಳಭಾಗ ಮತ್ತು ಮೊಜಾಂಬಿಕ್‌ನ ಹಿನ್ನಾಡಿನಲ್ಲಿನ ರಾಜರನ್ನು ಪೋರ್ಚುಗೀಸ್ ರಾಜರ ಕ್ರೈಸ್ತ ಸಾಮಂತರುಗಳನ್ನಾಗಿ ಪರಿವರ್ತಿಸಿ, ದೇಶೀಯ ರಾಜರು ಮತ್ತು ಅವರ ವ್ಯಾಪಾರವನ್ನು ನಿಯಂತ್ರಿಸಲು ಪೋರ್ಚುಗೀಸರು ಪ್ರಯತ್ನಿಸಿದರು. ಪಶ್ಚಿಮದಲ್ಲಿ ಪೋರ್ಚುಗೀಸರು ರಾಜಕೀಯ ಹಾಗೂ ಧಾರ್ಮಿಕವಾಗಿ ಹಸ್ತಕ್ಷೇಪ ಮಾಡಿದ್ದು ಮತ್ತು ಅವರು ವಿದೇಶಿ ವ್ಯಾಪಾರವನ್ನು ಏಕಮಾನ್ಯ ಮಾಡಿಕೊಳ್ಳಲು ಪ್ರಯತ್ನಿಸಿದ್ದು, ಬಂಟು ರಾಜ್ಯಗಳ ಮೇಲೆ ಒತ್ತಡ ಹೇರಿ ಅವರ ವ್ಯವಸ್ಥಿತ ರಾಜ್ಯಭಾರವನ್ನು ದುರ್ಬಲಗೊಳಿಸಿತು. ಪೂರ್ವದಲ್ಲಿ ಪೋರ್ಚುಗೀಸರು ಚಿನ್ನದ ವ್ಯಾಪಾರದಲ್ಲಿ ನಿರತರಾಗಿದ್ದರು ಮತ್ತು ಒಳನಾಡ ಮವಾನೆ ಮಟಾಪಗಳೊಂದಿಗೆ ಸಂಪರ್ಕ ಬೆಳೆಸಲು ಕಷ್ಟವಾಗಿದ್ದರಿಂದ ಮತ್ತು ಸರ್ಕಾರದ

ದೌರ್ಬಲ್ಯ ಹೆಚ್ಚುತ್ತ ಬಂದದ್ದರಿಂದ ಬೇಸತ್ತಿದ್ದರು. ೧೭ ಮತ್ತು ೧೮ನೆಯ ಶತಮಾನದಲ್ಲಿ ಪೋರ್ಚುಗೀಸರು ಅಂಗೋಲ ಹಾಗೂ ಮೊಜಾಂಬಿಕ್‌ನ ತೀರ ಪ್ರದೇಶಗಳಲ್ಲಿ ನೇರ ಶೋಷಣೆಯನ್ನು ಮತ್ತೆ ಪ್ರಾರಂಭಿಸಿದರು. ಮೊಜಾಂಬಿಕ್‌ನಲ್ಲಿ ನೆಡುತೋಪು ಅರ್ಥ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದರು. ಅಂಗೋಲವನ್ನು ಲುಆಂಡಾ ಮತ್ತು ಬೆಂಗುವಲಾ ಬಂದರುಗಳ ಮೂಲಕ ಬಳಸಿಕೊಂಡರು. ೧೯ನೆಯ ಶತಮಾನದಲ್ಲಿ ಮಧ್ಯ ಆಫ್ರಿಕವು ಇನ್ನೂ ದಕ್ಷಿಣ ಭಾಗದಲ್ಲಿದ್ದ ಐರೋಪ್ಯ ನೆಲೆಗಳ ಪ್ರಭಾವಕ್ಕೆ ಒಳಗಾಗಲಾರಂಭಿಸಿತು. ಮೊದಲಿಗೆ ಭೂಮಿ ಕೊರತೆ ಇದ್ದಂತಹ ಬಂಟು ಜನರು ಉತ್ತರ ಭಾಗಗಳ ಮೇಲೆ ದಾಳಿ ಮಾಡಿ ಗೆದ್ದರು. ರೋಜ್ವಿ ರಾಜ್ಯವು ನಗೋನಿಗಳಿಂದ ನಾಶವಾಯಿತು. ಇವರು ಇನ್ನೂ ಮುಂದೆ ಹೋಗಿ ನೆಲೆಸಿದರು ಮತ್ತು ಮಾಲವಿಗಳ ಮೇಲೆ ದಾಳಿ ಮಾಡಿದರು. ಜಿಂಬಾವ್ವೆಯ ಶೋನಾಗಳ ಮೇಲೆ ಇತರ ಜುಲು ತುಂಡು ಗುಂಪಿನವರು ದಾಳಿ ಮಾಡಿದರು. ಮಜಿಲಿ ಕಾಜಿಗಳ ಅಡಿಯಲ್ಲಿ ನಡೆಬೆಲೆ ಅವರು ಬುಲವಾಯೋ ಸುತ್ತಮುತ್ತ ನೆಲೆಯೂರಿದರು. ಲೋಜಿ ರಾಜ್ಯವನ್ನು ದಕ್ಷಿಣ ಸೋತೋವಿನ ಒಂದು ಕವಲಾದ ಕೊಲಾಲೋ ಅವರು ಗೆದ್ದರು. ಎರಡನೆಯದಾಗಿ ಐರೋಪ್ಯ ಬೇಟೆಗಾರರು ವ್ಯಾಪಾರಗಳು, ಮಿಶನರಿಗಳು ಮತ್ತು ರಿಯಾಯಿತಿ ಅರಸುವವರು ಮಜಿಲಿಕೆ ಮತ್ತು ಅವರ ಉತ್ತರಾಧಿಕಾರಿಗಳಾದ ಲೊಬೆಂಗುಲ ಅವರು ಎಷ್ಟೇ ವಿರೋಧ ಒಡ್ಡಿದರೂ ಉತ್ತರದೆಡೆಗೆ ಮುನ್ನುಗ್ಗಿದರು. ಜಿಂಬಾವ್ವೆ ಹಾಗೂ ಅದರ ಚಿನ್ನದ ಗಣಿಗಳು ಕಾರ್ಲ್‌ಮೌಚ್, ಥಾಮಸ್ ಬೈನ್ ಫ್ರೆಡ್ರಿಕ್ ಸೆತಾನ್ ಮುಂತಾದವರ ಯಾತ್ರೆಗಳ ಮೂಲಕ ಹೊರಜಗತ್ತಿಗೆ ತಿಳಿದುಬಂದವು.

### ದಕ್ಷಿಣ ಆಫ್ರಿಕಾ

ಲಿಂಪಾಪೋ ಮತ್ತು ಜಾಂಬೇಜಿ ಕಣಿವೆಯ ಬಂಟು ಭಾಷೆ ಮಾತನಾಡುವ ಜನರು ಕ್ರಿ.ಶ.೧೫ನೆಯ ಶತಮಾನದ ಹೊತ್ತಿಗೆ ವ್ಯವಸಾಯ ಹಾಗೂ ಕಬ್ಬಿಣ ಮತ್ತು ಚಿನ್ನದ ಗಣಿಗಾರಿಕೆ ಮಾಡುತ್ತಿದ್ದ ಮುಂದುವರೆದ ರಾಜ್ಯಗಳನ್ನು ಬೆಳೆಸಿದ್ದರು. ಈ ಜನರು ಸ್ಯಾನ್ ಬೇಟೆಗಾರರು ಹಾಗೂ ಗೋವಳರಾದ ಕೋಯ್‌ಕೊಯಿನ್ ಜನರು ವಾಸಿಸುತ್ತಿದ್ದ ದಕ್ಷಿಣದ ಪ್ರದೇಶಕ್ಕೆ ವಲಸೆ ಬಂದರು. ಬಂಟು ಮಾತನಾಡುವ ಜನರು ಫಲವತ್ತಾದ ಪೂರ್ವದ ತೀರಪ್ರದೇಶದಲ್ಲಿ ನೆಲೆಸಿದರು ಮತ್ತು ಅಳಿದುಳಿದ ಸಾನ್ ಜನರನ್ನು ಕಲಹರಿ ಮರುಭೂಮಿಯ ಕಡೆಗೆ ಪಶ್ಚಿಮಕ್ಕೆ ಅಟ್ಟಿದರು. ಕೊಯ್‌ಕೊಯಿನ್ ಜನಾಂಗದ ಬಹು ಪಾಲನ್ನು ಈ ಹೊಸಬರು ತಮ್ಮ ಸಮಾಜದೊಳಗೆ ವಿಲೀನ ಮಾಡಿಕೊಂಡರು. ಅಳಿದುಳಿದ ಅವರ ಬುಡಕಟ್ಟಿನ ಜನರು ಕೇಪ್ ಪ್ರಾಂತದ ಪಶ್ಚಿಮ ಭಾಗಕ್ಕೆ ಸೀಮಿತರಾಗಬೇಕಾಯಿತು. ಉಳಿದು ಬಂದಿರುವ ಪರಂಪರಾಗತ ಐತಿಹ್ಯಗಳಿಂದ ದಕ್ಷಿಣದ ಬಂಟು ಜನಾಂಗದ ಆರಂಭದ ಚರಿತ್ರೆ ಸುಲಭವಾಗಿ ತಿಳಿದುಬರುವುದಿಲ್ಲ. ಅವರು ಪ್ರವೇಶಿಸಿದ ಭೂಮಿ ಬಹಳ ವಿಶಾಲವಾಗಿದ್ದು ಬಲು ವಿರಳವಾಗಿ ಜನರು ವಾಸಿಸುತ್ತಿದ್ದುದರಿಂದ ಅವರು ಹರಡಿ ಹೋಗಿರುವ ಸಾಧ್ಯತೆ ಬಹಳ. ಪರಿಣಾಮವಾಗಿ ಬುಡಕಟ್ಟು ಜನರು ಸತತವಾಗಿ ಸಣ್ಣ

ಗುಂಪುಗಳಾಗಿ ಚದುರಿ ಹೋದರು. ಹೀಗಿದ್ದರೂ ೧೮ನೆಯ ಶತಮಾನದ ಹೊತ್ತಿಗೆ ನಾವು ನಾಲ್ಕು ಪ್ರಧಾನ ವಿಧಾನಗಳನ್ನು ಕಾಣುತ್ತೇವೆ. ಉತ್ತರ ಟ್ರಾನ್ಸ್‌ವಾಲ್ ಮತ್ತು ದಕ್ಷಿಣ ರೊಡೇಷಿಯಾದಲ್ಲಿ ಲೆಂಬಾ ಮತ್ತು ವೆಂಡಾ ಗುಂಪುಗಳಿದ್ದುವು. ಬಹುಶಃ ಇವರು ಹಿಂದಿನ ಲಿಂಪಾಪೋ, ಜಾಂಬೇಜಿ ರಾಜ್ಯಗಳ ದಕ್ಷಿಣದಲ್ಲಿ ಉಳಿದುಬಂದ ಜನರಿರಬೇಕು. ಇನ್ನೂ ದಕ್ಷಿಣಕ್ಕೆ ಕೆಳಲಿಂಪಾಪೋ ಕಣಿವೆಯಲ್ಲಿ ಮತ್ತು ದಕ್ಷಿಣ ಮೊಜಾಂಬಿಕ್‌ನಲ್ಲಿ ಕೃಷಿಕ ಟಾಂಗಾಗಳಿದ್ದರು. ಇವರು ಬಹಳ ಹಿಂದೆಯೇ ನೆಲೆ ಊರಿದವರು. ಇದಕ್ಕೆ ದಕ್ಷಿಣದಲ್ಲಿ ಡ್ರಾಕೆನ್ಸ್ ಬರ್ಗ್‌ನ ಪೂರ್ವದ ಶ್ರೀಮಂತ ಕರಾವಳಿ ಬಯಲು ಪ್ರದೇಶದಲ್ಲಿ ಅನೇಕ ನುಗುನಿ ಗುಂಪಿನವರಿದ್ದರು. ಇನ್ನೂ ಪಶ್ಚಿಮಕ್ಕೆ ಹೋದರೆ ಸೋತೋ ಬುಡಕಟ್ಟಿನವರು ಮತ್ತು ಪೂರ್ವದ ಸೋತೋಗಳು ನುಗುನಿ ಜನಾಂಗದವರನ್ನು ತಮ್ಮಲ್ಲಿ ವಿಲೀನ ಮಾಡಿಕೊಂಡಿದ್ದರು. ಹಾಗೆಯೇ ಪಶ್ಚಿಮ ಸೋತೋ ಜನಾಂಗದವರು ಕೆಲವು ಸಾನ್ ಬುಡಕಟ್ಟಿನವರನ್ನು ತಮ್ಮಲ್ಲಿ ವಿಲೀನ ಮಾಡಿಕೊಂಡಿದ್ದರು.

### ಐರೋಪ್ಯ ನೆಲೆಗಳು

ಕರಾವಳಿ ನಾಡಿನ ಜನರಲ್ಲಿ ಹೆಚ್ಚೇನೂ ವ್ಯಾಪಾರ ಸರಕಿರದ ಕಾರಣ ಮತ್ತು ಸುರಕ್ಷಿತವಾಗಿ ಲಂಗರು ಹಾಕುವುದಕ್ಕೆ ತಾಣಗಳು ಇರದಿದ್ದ ಕಾರಣದಿಂದಾಗಿ ೧೭ನೇ ಶತಮಾನದವರೆಗೆ ದಕ್ಷಿಣ ಆಫ್ರಿಕಾಕ್ಕೆ ಬಹಳ ಮಂದಿ ಐರೋಪ್ಯರು ಬಂದು ನೆಲಸಲಿಲ್ಲ. ಹೀಗಿದ್ದರೂ ೧೬೫೨ರಲ್ಲಿ ಡಚ್ ಈಸ್ಟ್ ಇಂಡಿಯಾ ಕಂಪನಿ ಜಾನ್‌ವಾನ್ ರೈಬೆಕ್‌ನ ನೇತೃತ್ವದಲ್ಲಿ ಒಂದು ಸಣ್ಣ ಸೈನಿಕ ತುಕಡಿಯನ್ನು ಕೇಪ್ ಜಂಬೂದ್ವೀಪಕ್ಕೆ ಕಳುಹಿಸಿತು. ಹೀಗಿದ್ದರೂ ಸದರಿ ಕಂಪನಿ ರೈತರು ಪ್ರತ್ಯೇಕವಾಗಿ ಕೇಪ್‌ನಲ್ಲಿ ನೆಲೆಸಲು ಉತ್ತೇಜಿಸಿತು. ಆರಂಭದಲ್ಲಿ ೧೬೮೮ರಲ್ಲಿ ವಲಸೆ ಬಂದವರು ಕೇವಲ ಡಚ್ ಜನರು. ತರುವಾಯ ಫ್ರೆಂಚ್ ಹ್ಯೂಗೋನಾಟ್‌ಗಳೂ ಬಂದು ನೆಲಸಿದರು. ೧೮ನೆಯ ಶತಮಾನದ ಹೊತ್ತಿಗೆ ಈ ನೆಲೆನಿಂತ ಜನ ತಮಗೆ ಕಂಪನಿಯವರು ವಹಿಸಿಕೊಟ್ಟ ಕೆಲಸದ ಬಗ್ಗೆ ಅತೃಪ್ತರಾಗಲಾರಂಭಿಸಿದರು. ಈ ಕುಟುಂಬಗಳವರ ಮಕ್ಕಳು ಕಂಪನಿ ಆಡಳಿತದಲ್ಲಿ ಅವಕಾಶಗಳು ಇಲ್ಲದಿರುವುದಕ್ಕೆ ಅಸಂತುಷ್ಟರಾಗಿ ಕೇಪ್ ಪ್ರದೇಶವನ್ನು ಬಿಟ್ಟರು ಮತ್ತು ಇನ್ನೂ ಒಳಕ್ಕೆ ಹೋಗಿ ಬೇಟೆ ಹಾಗೂ ಸ್ಥಳೀಯ ಜನರೊಂದಿಗೆ ವ್ಯಾಪಾರ ಮಾಡುತ್ತ ತಮ್ಮದೇ ಆದ ಹೊಸದೊಂದು ಸಾಮ್ರಾಜವನ್ನು ಕಟ್ಟಿದರು. 'ಟ್ರೆಕ್ ಬೋರೆನ್'(ಅರೆ ಅಲೆಮಾರಿ ರೈತರು) ಎಂಬ ಸಮಾಜ ವಿಶಾಲವಾದದ್ದಾಗಿದ್ದು, ಗೋವಳ ಮೂಲದವರು ತಾವು ಮತ್ತು ದೇವರು ಇಬ್ಬರಲ್ಲಿ ಮಾತ್ರ ದೃಢವಾದ ನಂಬಿಕೆ ಉಳ್ಳವರಾಗಿದ್ದರು. ಈ ಪರಿಸ್ಥಿತಿಯಲ್ಲಿ ಕ್ಯಾಲ್ವಿನಿಸ್ಟ್ ಬೋಯಲ್‌ಗಳು ದಟ್ಟ ಅರಣ್ಯದಲ್ಲಿನ ದೇವರ ಮಕ್ಕಳು ಎಂದು ತಮ್ಮನ್ನು ಭಾವಿಸಲಾರಂಭಿಸಿದರು. ಮಳೆ ಚೆನ್ನಾಗಿ ಬೀಳುತ್ತಿದ್ದ ಪೂರ್ವ ಹಾಗೂ ಈಶಾನ್ಯದ ಭಾಗಗಳೆಡೆಗೆ ಈ ಬೋಯಲ್‌ಗಳು ವಿಸ್ತರಿಸಲಾರಂಭಿಸಿದರು. ಅಲ್ಲಲ್ಲಿ ಚದುರಿಹೋಗಿದ್ದ ಕೊಯ್‌ಕೊಯಿನ್ ಬುಡಕಟ್ಟಿನವರನ್ನೂ

ಈ ಬೋಯಲ್‌ಗಳು ವಿಲೀನಗೊಳಿಸಿಕೊಳ್ಳಲಾರಂಭಿಸಿದರು. ಎದುರುಗಡೆಯಿಂದ ಮುಂದು ವರಿದು ಬರುತ್ತಿದ್ದ ಮತ್ತು ಕೊಯ್‌ಕೊಯಿನ್‌ಗಳಿಗಿಂತ ಹೆಚ್ಚು ಸಂಘಟಿತರಾಗಿದ್ದ ಬಂಟು ಜನಾಂಗದವರು ಬೋಯರ್‌ಗಳ ಜೊತೆ ಸಂಘರ್ಷಕ್ಕಿಳಿದರು. ತತ್ಪರಿಣಾಮವಾಗಿ ೧೭೭೯ರಲ್ಲಿ ಮೊದಲ ಕೇಪ್ ಗಡಿನಾಡ ಯುದ್ಧವು ಕೇಪ್ ವಸಾಹತಿನ ಪೂರ್ವ ಗಡಿನಾಡಿನುದ್ದಕ್ಕೂ ಪ್ರಾರಂಭ ವಾಯಿತು. ಕಾಲಾನುಕ್ರಮದಲ್ಲಿ ಗ್ರೇಟ್ ಬ್ರಿಟನ್ ಕೇಪ್ ಅನ್ನು ಆಕ್ರಮಿಸಿಕೊಂಡಿತು ಮತ್ತು ೧೮೧೪ರಲ್ಲಿ ಕೇಪ್ ಅನ್ನು ವಿಧ್ಯುಕ್ತವಾಗಿ ಗ್ರೇಟ್ ಬ್ರಿಟನ್‌ಗೆ ಬಿಟ್ಟು ಕೊಡ ಲಾಯಿತು. ಹೀಗೆ ಬಂಟು ಮಾತನಾಡುವ ಜನರು, ಬೋಯರ್‌ಗಳು ಮತ್ತು ಬ್ರಿಟಿಷರ ನಡುವಿನ ಸಂಘರ್ಷ ಪ್ರಧಾನವಾಯಿತು.

### ಪೂರ್ವ ಆಫ್ರಿಕಾ

ಕ್ರಿ.ಶ.೧ನೆಯ ಶತಮಾನದ ಅನಾಮಧೇಯ ಗ್ರೀಕ್ ಕೃತಿ 'ಪೆರಿಪ್ಲಸ್ ಮಾರಿಸ್ ಎರಿತ್ರೈ' ನಲ್ಲಿ ಆಫ್ರಿಕಾದ ಪೂರ್ವತೀರಗಳ ಉಲ್ಲೇಖವಿದೆ. ಇದು (ಕ್ರಿ.ಶ.೨ನೆಯ ಶತಮಾನದ) ಭೂಗೋಳಶಾಸ್ತ್ರಜ್ಞ ಟಾಲೆಮಿಯ ಬರಹಗಳಲ್ಲಿ ದೃಢೀಕರಿಸಲ್ಪಟ್ಟಿದೆ. ಸೊಮಾಲಿಯಾದ (ಪೋರ್ಟ್‌ದುರ್ನ್, ಪೋರ್ಡ್) ಬಿರ್‌ಕಾವ್‌ನಲ್ಲಿ ರೋಮನ್ ನಾಣ್ಯಗಳು ಮತ್ತು ಮಸ್ತಾನಿ ಯಲ್ಲಿ ಈಜಿಪ್ಟ್ ವಂಶಾವಳಿಗಳ ನಾಣ್ಯಗಳು ದೊರೆತಿರುವ ಬಗ್ಗೆ ತಿಳಿದುಬಂದಿದೆ. ತೀರದುದ್ದಕ್ಕೂ ಕಂಡುಬಂದ ಕಲ್ಲಿನ ಕಲಾಕೃತಿಗಳು ಇಸ್ಲಾಂ ಪೂರ್ವದ ಕಾಲಕ್ಕೆ ಸೇರಿದ್ದು. ಪೂರ್ವ ಆಫ್ರಿಕಾವು ದಂತಕ್ಕಾಗಿ ಕಬ್ಬಿಣದ ಉಪಕರಣಗಳನ್ನು ವ್ಯಾಪಾರ ಮಾಡುತ್ತಿತ್ತು. ಆಫ್ರಿಕಾದಿಂದ ತಾಳೆ ಎಣ್ಣೆ, ಖಡ್ಗಮೃಗದ ಕೊಂಬು ಬರುತ್ತಿದ್ದವು. ಅರಬ್ಬರು ಈ ಸರಕುಗಳನ್ನು ಕೆಂಪು ಸಮುದ್ರ ಮಾರ್ಗದಲ್ಲಿ ಮೆಡಿಟರೇನಿಯನ್ ರಾಷ್ಟ್ರಗಳಿಗೆ ಅಲ್ಲಿಂದ ಅರೇಬಿಯಾ, ಪರ್ಷಿಯಾ ಮತ್ತು ಹಿಂದೂ ಮಹಾಸಾಗರ ದಾಟಿ ಭಾರತಕ್ಕೆ ಸಾಗಿಸುತ್ತಿದ್ದರು. ಈ ಆರಂಭದ ವ್ಯಾಪಾರದಲ್ಲಿ ಚೀನಿಯರೂ ಸೇರಿದ್ದರು. ಪೂರ್ವತೀರದ ದಾಖಲೆಗಳಲ್ಲಿ ಎಲ್ಲೂ ಗುಲಾಮ ವ್ಯಾಪಾರದ ಉಲ್ಲೇಖವಿಲ್ಲ. ಬಂಟೂ ಜನಾಂಗದವರು ಪೂರ್ವಕ್ಕೆ ವಿಸ್ತರಿಸುತ್ತ ಬಂದಂತೆ ಕಪ್ಪು ಗುಲಾಮರು ಹಿಂದೂ ಮಹಾಸಾಗರದ ಉದ್ದಕ್ಕೂ, ಒಂದು ವ್ಯಾಪಾರದ ವಸ್ತುವಾಗಿ ಪಟ್ಟಿಯಲ್ಲಿ ಸೇರಿದರು. ಮಡ್ಗಾಸ್ಕರ್‌ನಲ್ಲಿ ವಸಾಹತು ಹೂಡಿದ ಇಂಡೋನೇಷಿಯನ್ನರು ೮ನೇ ಶತಮಾನದಿಂದ ೧೨ನೆಯ ಶತಮಾನದವರೆಗೆ ವ್ಯಾಪಾರ ಮಾರ್ಗವನ್ನು ಹಿಂದೂ ಮಹಾಸಾಗರದ ಉದ್ದಕ್ಕೂ ವಾಣಿಜ್ಯ ಬೆಳೆದಂತೆ ಅರಬ್ಬರು ಪೂರ್ವ ಆಫ್ರಿಕಾದಲ್ಲಿ ನೆಲೆ ಊರುವುದೂ ಹೆಚ್ಚಾಯಿತು. ಈ ನೆಲೆಸುವಿಕೆ ೮ನೆಯ ಶತಮಾನ ದಿಂದ ಆರಂಭಗೊಂಡು ೧೩ರಿಂದ ೧೫ನೆಯ ಶತಮಾನದ ಹೊತ್ತಿಗೆ ಗರಿಷ್ಠ ಮಟ್ಟವನ್ನು ಮುಟ್ಟಿತು. ಪೂರ್ವ ಆಫ್ರಿಕಾ ಅರಬ್ ವ್ಯಾಪಾರದ ವಲಸಿಗರ ಒಂದು ಅಂಗ ಭಾಗವಾಗಿ ಹೋಯಿತು. ಹಿಂದೂ ಮಹಾಸಾಗರದುದ್ದಕ್ಕೆ ಮತ್ತು ಪೂರ್ವ ಆಫ್ರಿಕಾ ತೀರದುದ್ದಕ್ಕೆ ವ್ಯಾಪಾರ ಬೆಳೆದಂತೆ ನಗರ ಇಸ್ಲಾಮಿಕ್ ರಾಷ್ಟ್ರಗಳೂ ಬೆಳೆದವು. ಇವುಗಳಲ್ಲಿ ಬಹಳ

ಮುಖ್ಯವಾದವುಗಳಲ್ಲಿ ಚಿನ್ನದ ವ್ಯಾಪಾರಕ್ಕಾಗಿ ಸ್ಥಾಪಿತವಾದ ಕಿಲ್ವಾ ಒಂದು.

**ಕಿಲ್ವಾದ ಸರ್ವೋನ್ನತತೆ**

ಆಧುನಿಕ ಟಾಂಜೇನಿಯಾದ ತೀರದಿಂದಾಚೆಗೆ ಇರುವ ಒಂದು ದ್ವೀಪವಾದ ಕಿಲ್ವಾ ಆರಂಭದ ಕಾಲದಲ್ಲಿ ಅರೇಬಿಯನ್ ಮೂಲದ ಒಂದು ಇಸ್ಲಾಮಿಕ್ ಸಂಸ್ಕೃತಿಗೆ ಸೇರಿತ್ತು. ಆಗ ಕರಾವಳಿಯ ಅನೇಕ ನಗರಗಳಲ್ಲಿ ಇಸ್ಲಾಂ ಸಂಸ್ಕೃತಿ ಹುಲುಸಾಗಿ ಬೆಳೆಯಿತು. ಕಿಲ್ವಾದ ರಾಜರುಗಳು ಇತರ ಕೆಲವು ನಗರಗಳ ಮೇಲೆ ಒಂದು ಸೀಮಿತ ಅವಧಿಯವರೆಗೆ ಒಂದು ಬಗೆಯ ಅಧಿಕಾರ ಚಲಾಯಿಸಿರುವ ಸಾಧ್ಯತೆ ಇದೆ. ಕೆಲವು ಅಂತರ್ಜಾತಿ ವಿವಾಹಗಳೂ ಆಗಿ, ಎರಡು ಬಗೆಯ ಜನಾಂಗದ ಸಂಸರ್ಗದಿಂದ ಒಂದು ಸಮ್ಮಿಶ್ರ ಅರಬ್ ಆಫ್ರಿಕಾ (ಸ್ವಾಹಿಲಿ) ಸಂಸ್ಕೃತಿ ಬೆಳೆಯಿತು. ಜಿಂಬಾಬ್ವೆಯಿಂದ ಸೋಫಾಲಾಕ್ಕೆ(ಮೊಜಾಂಬಿಕ್ ತೀರದಲ್ಲಿ) ಬರುವ ಚಿನ್ನವನ್ನು ಕಿಲ್ವಾ ಬಹುಕಾಲ ನಿಯಂತ್ರಿಸುತ್ತಿತ್ತು. ಇದೇ ಕಿಲ್ವಾದ ಸರ್ವೋನ್ನತೆಗೆ ಕಾರಣ. ಹೀಗಿದ್ದರೂ ಪೂರ್ವ ಆಫ್ರಿಕಾದ ವ್ಯಾಪಾರ ಇನ್ನೂ ವೈವಿಧ್ಯಮಯ ಸರಕುಗಳನ್ನು ಹೊಂದಿತ್ತು. ಅದರಲ್ಲಿ ದಂತ ಹಾಗೂ ಗುಲಾಮರೂ ಸೇರಿದ್ದರು. ಅವರು ಸಂಸರ್ಗಿಸುತ್ತಿದ್ದ ಪ್ರಮುಖ ರಾಷ್ಟ್ರಗಳೆಂದರೆ ಅರೇಬಿಯಾ ಮತ್ತು ಭಾರತ. ಈ ರಾಷ್ಟ್ರಗಳೂ ಪೂರ್ವ ಕರಾವಳಿಯ ಸಾಂಸ್ಕೃತಿಕ ಅಭಿವೃದ್ಧಿಯ ಮೇಲೆ ಪ್ರಭಾವ ಬೀರಿದವು. ಎರಡು ಚೀನಿ ಅನ್ವೇಷಕ ತಂಡಗಳು ಅಂದರೆ ಒಂದು ೧೪೧೭-೧೪೧೯ರ ನಡುವೆ ಹೊರಟು ಮಾಲಿಂದಿ ತಲುಪಿತು ಮತ್ತು ಇನ್ನೊಂದು ೧೪೨೧-೧೪೨೨ರಲ್ಲಿ ಪ್ರಯಾಣ ಹೊರಟು ಸೋಮಾಲಿ ತೀರದ ಬ್ರಾವ ಮತ್ತು ಮೊಗಡಿಷುವಿನಷ್ಟು ದಕ್ಷಿಣಕ್ಕೆ ಪ್ರಯಾಣ ಮಾಡಿದವು.

**ಪೋರ್ಚುಗೀಸ್ ನೆಲೆಗಳು**

ಕಿಲ್ವಾದ ಅವನತಿಯ ಪರಿಣಾಮವಾಗಿ ೧೬ನೇ ಶತಮಾನದಲ್ಲಿ ಬಂದ ಪೋರ್ಚುಗೀಸರು ಕರಾವಳಿಯ ಉದ್ದಕ್ಕೂ ನೆಲೆಗಳು ಮತ್ತು ಕೋಟೆಗಳನ್ನು ಸ್ಥಾಪಿಸಿದರು. ಕಾಲಕ್ರಮದಲ್ಲಿ ಮೊಂಬಾಸ ಪೋರ್ಚುಗೀಸರನ್ನು ಪ್ರತಿಭಟಿಸುವ ಕೇಂದ್ರವಾಯಿತು. ೧೫೨೯ರಲ್ಲಿ ಪೋರ್ಚುಗೀಸರು ಮೊಂಬಾಸದ ಮೇಲೆ ದಾಳಿ ಮಾಡಿದರು. ಪೋರ್ಚುಗೀಸರು ಮೊಜಾಂಬಿಕ್, ಸೋಫಾಲ್, ಜಾಂಜಿಬಾರ್, ಪೆಂಬಾ ಮತ್ತು ಮಾಲಿಂದಿಗಳನ್ನು ಪೂರ್ವ ಕಡಲ ತೀರದಲ್ಲಿ ವಶಪಡಿಸಿಕೊಂಡರು. ಚಿನ್ನದ ವ್ಯಾಪಾರ ತರುವಾಯ ಕಿಲ್ವಾದವರ ಕೈನಿಂದ ಪೋರ್ಚುಗೀಸರ ಕೈಗೆ ೧೬ನೇ ಶತಮಾನದಲ್ಲಿ ಬದಲಾಯಿತು. ಈ ಪ್ರದೇಶಗಳ ಆಳ್ವಿಕೆಯನ್ನು ಸ್ಥಳೀಯ ರಾಜರ ಸಹಾಯದೊಂದಿಗೆ ಮಾಡಲಾಯಿತು. ೧೫೮೫ರಲ್ಲಿ ಪೂರ್ವ ಕರಾವಳಿಯನ್ನು ತುರುಷ್ಕ ಸೇನಾನಿ ಮಿರಾಲೆಬೇ ದಾಳಿ ಮಾಡಿದನು. ೧೫೮೯ರಲ್ಲಿ ಅವನು ಮೊಂಬಾಸವನ್ನು ವಶಪಡಿಸಿಕೊಂಡನು. ಆದರೆ ಪೋರ್ಚುಗೀಸರು ಅವನ ಮೇಲೆ ದಾಳಿ ಮಾಡಿದರು. ಮಿರಾಲೆಬೇ ಪೋರ್ಚುಗೀಸರಿಗೆ ಶರಣಾದನು. ಆದರೆ ಆ ನಗರವನ್ನು ಜಿಂಬಾ ಬುಡಕಟ್ಟಿನವರು ನಾಶಪಡಿಸಿದರು. ಕಾಂಗೋದ ಮೇಲ್ಭಾಗದಿಂದ ಬಂದ ಜಿಂಬಾಗಳು ಬಲು

ವಿನಾಶಕಾರಿ ದಳಗಳೊಂದಿಗೆ ಆಗಮಿಸಿದರು. ೧೫೮೭ರಲ್ಲಿ ಅವರು ಕಿಲ್ವಾವನ್ನು ಸೂರೆಗೈದರು. ಪೋರ್ಚುಗೀಸರು ಮಿರಾಲೆಬೆಯೊಡನೆ ಕಾದಾಡುತ್ತಿದ್ದಾಗ ಮೊಂಬಾಸದ ಮೇಲೂ ದಾಳಿ ಮಾಡಿದರು. ಸ್ಥಳೀಯ ಜನರ ನೆರವಿಗೆ ಬಂದ ಸಗೇಜು ಬುಡಕಟ್ಟಿನ ಜನರು ಜಿಂಬಾಗಳ ನಾಮಾವಶೇಷ ಮಾಡಿದರು. ಹೀಗೆ ಜಿಂಬಾ ಪೂರ್ಣವಾಗಿ ಮಾಯವಾಯಿತು. ಸಗೇಜು ಮೊಂಬಾಸಕ್ಕೆ ತೆರಳಿ ಅದನ್ನು ೧೫೯೨ರಲ್ಲಿ ವಶಪಡಿಸಿಕೊಂಡು ತನ್ನ ಮಿತ್ರ ಮಾಲಿಂದಿಯ ಸುಲ್ತಾನನಿಗೆ ಕೊಟ್ಟಿತು. ಆತ ಅದನ್ನು ಪೋರ್ಚುಗೀಸರಿಗೆ ಇತ್ತನು. ೧೫೯೨ರಲ್ಲಿ ಅವರು ಅಲ್ಲಿ ಪೋರ್ಟ್ ಜೀಸಸ್ ಕಟ್ಟಲು ಪ್ರಾರಂಭಿಸಿದನು. ೧೬೩೧ರಲ್ಲಿ ಮೊಂಬಾಸಾದ ಸುಲ್ತಾನ ತನ್ನ ತಂದೆಯನ್ನು ಪೋರ್ಚುಗೀಸರ ಪ್ರಚೋದನೆಯಿಂದ ಕೊಲೆ ಮಾಡಿದ್ದರಿಂದ ತನ್ನ ಮಾಜಿ ಮಿತ್ರರ ವಿರುದ್ದ ದಂಗೆ ಎದ್ದನು. ಅವನನ್ನು ಶೀಘ್ರವೇ ನಗರದಿಂದ ಹೊಡೆದಟ್ಟಿದನು. ಅವನು ಆಗಾಗ್ಗೆ ಪೋರ್ಚುಗೀಸರ ವಿರುದ್ಧ ಪ್ರತಿಭಟನೆ ನಡೆಸುತ್ತಿದ್ದನು. ಇದು ಅವರ ಅಧಿಕಾರಕ್ಕೆ ಬಲವಾದ ಪೆಟ್ಟು ನೀಡಿತು ಮತ್ತು ಅನೇಕ ನಗರಗಳು ಮೊಂಬಾಸಾದ ದಾರಿಯನ್ನೇ ಅನುಸರಿಸಿದವು. ಬಹಳ ಗಂಭೀರವಾದ ದಾಳಿ ನಡೆದದ್ದು ೧೬೯೮ರಲ್ಲಿ. ಆಗ ಅರೇಬಿಯನ್ ಜಂಬೂದ್ವೀಪದಲ್ಲಿನ ಒಮಾನ್‌ನ ಸೇನೆಯೊಂದು ಮೊಂಬಾಸಾವನ್ನು ಮುತ್ತಿಗೆ ಹಾಕಿತು. ಮೂರು ವರ್ಷಗಳ ತರುವಾಯ ಮೊಂಬಾಸಾ ಮತ್ತಿತರ ಕಡಲ ತೀರದ ಪಟ್ಟಣಗಳು ಅವರ ನೇರ ಆಳ್ವಿಕೆಗೆ ಒಳಪಟ್ಟವು. ೧೭೨೮ರಲ್ಲಿ ಒಮಾನ್‌ನ ಸುಲ್ತಾನನು ತನ್ನ ರಾಜ್ಯದಲ್ಲಿ ಕಾರ್ಯ ನಿರತನಾಗಿದ್ದುದರ ಲಾಭ ಪಡೆದುಕೊಂಡು ಬೊಂಬಾಸವನ್ನು ಪೋರ್ಚುಗೀಸರು ವಶಪಡಿಸಿಕೊಂಡರು. ಆದರೆ ಅವರು ಅದನ್ನು ಕೇವಲ ಒಂದು ವರ್ಷದ ಕಾಲ ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದು ಸಾಧ್ಯವಾಯಿತು. ಪೋರ್ಚುಗೀಸರು ಮೊಜಾಂಬಿಕ್ ಮತ್ತು ಸೋಫಾಲ್‌ನ ಕೋಟೆಗಳನ್ನು ನೋಡಿಕೊಳ್ಳುವುದಕ್ಕಷ್ಟೇ ತೃಪ್ತಿಪಡಬೇಕಾಯಿತು. ಆದರೆ ರುವುಮಾ ನದಿಯ ಉತ್ತರದಲ್ಲಿನ ಅವರ ಆಧಿಪತ್ಯ ಅಂತ್ಯವಾಯಿತು. ಮೊಂಬಾಸದಲ್ಲಿ ಮಜ್ ರುಯಿ ಕುಟುಂಬವು ತನ್ನ ಅಧಿಪತ್ಯ ಸ್ಥಾಪಿಸಿತು. ಕಿಲ್ವಾ ಕೂಡ ಒಮಾನ್‌ನ ಅಧಿಪತ್ಯವನ್ನು ನಿರಾಕರಿಸಿತು. ೧೭೭೦ರಲ್ಲಿ ಗುಲಾಮರನ್ನು ಅರಸಿಬಂದ ಫ್ರೆಂಚರು ಕಿಲ್ವಾದ ಸುಲ್ತಾನನೊಂದಿಗೆ ವ್ಯವಹಾರ ಮಾತುಕತೆ ನಡೆಸಿದರು. ಮತ್ತೆ ಆಚರಣೆಗೆ ಬಂದ ಈ ಗುಲಾಮ ವ್ಯಾಪಾರ ೧೯ನೇ ಶತಮಾನದ ಹೊತ್ತಿಗೆ ಬೃಹತ್ ಗಾತ್ರವನ್ನು ತಲುಪಿತು. ಕಿಲ್ವಾದ ಮಹತ್ವ ಏರುತ್ತ ಬಂದಂತೆ ಅದು ೧೭೮೦ರಲ್ಲಿ ಒಮಾನ್‌ನ ಸುಲ್ತಾನನಿಗೆ ನಿಷ್ಠೆಯಿಂದಿದ್ದಿತು ಮತ್ತು ಒಮಾನ್‌ನ ಸುಲ್ತಾನನ ಹೊಸ ಕಾರ್ಯಕೇಂದ್ರವಾಯಿತು. ೧೯ನೆಯ ಶತಮಾನದ ಆದಿಭಾಗದಲ್ಲಿ ಬ್ರಿಟಿಷರು ಗುಲಾಮಗಿರಿ ವಿರುದ್ಧ ಸಮರ ಸಾರಿ ಪೂರ್ವದ ತೀರಕ್ಕೆ ಆಗಮಿಸಿದರು. ಇದು ಕರಾವಳಿ ಪ್ರದೇಶದಲ್ಲಿ ಜರುಗಿದ ಒಂದು ಮಹತ್ವದ ಘಟನೆ. ೧೮೪೧ರಲ್ಲಿ ಒಬ್ಬ ಬ್ರಿಟಿಷ್ ಕೌನ್ಸಿಲ್‌ನನ್ನು ಜಾಂಜಿಬಾರ್‌ನಲ್ಲಿ ನೇಮಿಸಲಾಯಿತು. ೧೮೫೬ರ ತರುವಾಯ ಫ್ರಾನ್ಸ್ ಗುಲಾಮ ವ್ಯಾಪಾರವನ್ನು ಕೈಬಿಟ್ಟಿತ್ತು ಮತ್ತು ಜಾಂಜಿಬಾರ್‌ನ ರಾಜಕೀಯದಲ್ಲಿ ಹಸ್ತಕ್ಷೇಪ

ಮಾಡುವುದನ್ನು ನಿಲ್ಲಿಸಿತು. ೧೮೭೩ರಲ್ಲಿ ಬ್ರಿಟಿಷರು, ಸುಲ್ತಾನನು ಗುಲಾಮ ವ್ಯಾಪಾರವನ್ನು ನಿಷೇಧಿಸಬೇಕೆಂದು ಒತ್ತಾಯಿಸಿದಾಗ ಆತ ತನ್ನ ಪ್ರಜೆಗಳ ವಿರುದ್ಧ ಬ್ರಿಟಿಷ್ ಬೆಂಬಲವನ್ನು ಪೂರ್ಣವಾಗಿ ಅವಲಂಬಿಸಿ ಉಳಿಯಬೇಕಾಯಿತು.

## ಐರೋಪ್ಯರ ಪ್ರಭಾವ

೧೪೬೭ ಮತ್ತು ೧೪೯೪ರ ನಡುವೆ ಪೋರ್ಚುಗೀಸರು ಸಿಯಾರಾಲಿಯೇನ್, ಪರ್ನಾಡೋಪೋ, ಕೇಪ್ ಸೈಂಟ್ ಕ್ಯಾಥರಿನ್ ಮತ್ತು ಕಾಂಗೋಗಳವರೆಗೆ ದಕ್ಷಿಣದ ಪ್ರದೇಶಗಳನ್ನು ಪತ್ತೆ ಮಾಡಿದಂದಿನಿಂದ ೧೫ನೆಯ ಶತಮಾನದಲ್ಲಿ ಆಫ್ರಿಕಾದ ಮೇಲೆ ಐರೋಪ್ಯದ ಪ್ರಭಾವ ಪ್ರಾರಂಭವಾಯಿತು. ೧೪೮೭ರಲ್ಲಿ ಬಾರ್ತಲೋಮಿಯಾ ಡ್ಯೆಯಾಸನು ಕೇಪ್ ಆಫ್ ಗುಡ್‌ಹೋಪ್ ಅನ್ನು ಕಂಡುಹಿಡಿದನು. ೧೪೯೭ರಲ್ಲಿ ವಾಸ್ಕೋಡಿಗಾಮಾ ಭಾರತಕ್ಕೆ ಕೇಪ್ ಮಾರ್ಗವನ್ನು ಕಂಡುಹಿಡಿದನು. ಪೋರ್ಚುಗೀಸರು ಇನ್ನೂ ಒಳಕ್ಕೆ ಪ್ರಯಾಣ ಬೆಳಸಿ ೧೬ ಮತ್ತು ೧೭ನೆಯ ಶತಮಾನದಲ್ಲಿ ಪೂರ್ವದ ಕಡಲ ತೀರದಲ್ಲಿ ನೆಲೆಸಿದರು. ೧೭ನೆಯ ಶತಮಾನದಲ್ಲಿ ಫ್ರೆಂಚರು ಗಾಂಬಿಯಾ ನದಿಗೆ ಹಡಗುಗಳನ್ನು ಕಳುಹಿಸಿದರು ಮತ್ತು ೧೮ನೆಯ ಶತಮಾನದ ಆದಿಭಾಗದ ಹೊತ್ತಿಗೆ ಸೆನೆಗಲ್ ನಾಡಿನವರೆಗೆ ಕಳುಹಿಸಿದರು. ೧೭೯೫, ೧೭೯೬ ಮತ್ತು ೧೮೦೫ರಲ್ಲಿ ಡಚ್ಚರು ಮತ್ತು ಬ್ರಿಟಿಷರು ಅನ್ವೇಷಣೆಯನ್ನು ಪ್ರಾರಂಭಿಸಿದರು. ೧೯ನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಇಥಿಯೋಪಿಯಾ, ನೈಲ್ ಕಣಿವೆ ಮೇಲುಭಾಗ, ಉತ್ತರ ಆಫ್ರಿಕಾ ಮತ್ತು ದಕ್ಷಿಣ ಆಫ್ರಿಕಾದವರೆಗೆ ಅನ್ವೇಷಣೆ ಮಾಡಲಾಯಿತು. ಆರಂಭದ ವಾಣಿಜ್ಯ ಸಂಪರ್ಕವೇನಿದ್ದರೂ ಗುಲಾಮ ವ್ಯಾಪಾರದ ಮೇಲೆ ಕೇಂದ್ರೀಕೃತವಾಗಿತ್ತು. ೧೭ನೆಯ ಶತಮಾನದಿಂದೀಚೆಗೆ ಕೂಲಿ ಗುಲಾಮರಿಗೆ ಅಮೆರಿಕದ ನೆಡುತೋಪುಗಳಲ್ಲಿ ಬಹಳ ಬೇಡಿಕೆ ಬಂದದ್ದರಿಂದ ಆಫ್ರಿಕಾದ ವ್ಯಾಪಾರ ವಾಣಿಜ್ಯಕ್ಕೆ ಒಂದು ಹೊಸ ಆಯಾಮ ಬಂದಿತು. ೧೮ನೆಯ ಶತಮಾನವು ಮಧ್ಯ, ಪೂರ್ವ ಹಾಗೂ ಪಶ್ಚಿಮ ಆಫ್ರಿಕಾಗಳಿಂದ ಗುಲಾಮ ವ್ಯಾಪಾರದ ಅಂತಿಮಘಟ್ಟ ಆಗಿತ್ತು. ಆದರೆ ಈ ವ್ಯಾಪಾರದಿಂದ ಜನಸಂಖ್ಯೆ ಇಲ್ಲವಾಗುವುದಾಗಲಿ ಮತ್ತು ರಾಜಕೀಯ ಗೊಂದಲವಾಗುವುದಾಗಲಿ ಆಗಲಿಲ್ಲ. ಅಂಗೋಲವು ಗುಲಾಮರ ಸರಬರಾಜು ಮಾಡುತ್ತಿದ್ದ ಮುಖ್ಯ ಪ್ರದೇಶ. ಆದರೆ ಕಾಂಗೋರಾಜ್ಯ ಒಂದು ರಾಜಕೀಯ ಅಖಂಡ ಪ್ರದೇಶವಾಗಿರುವುದು ಅಂತ್ಯವಾಯಿತು. ಗುಲಾಮ ಯುದ್ಧಗಳು ಮತ್ತು ಅದರಿಂದ ಉಂಟಾದ ಪರಸ್ಪರ ನಾಮಾವಶೇಷಗೊಳಿಸುವ ಕಲಹಗಳನ್ನು ಪೋರ್ಚುಗೀಸರು ಉತ್ತೇಜಿಸಿದ್ದೇ ಇದಕ್ಕೆ ಮುಖ್ಯ ಕಾರಣ. ಪೋರ್ಚುಗೀಸರೊಂದಿಗಿನ ಸಂಪರ್ಕದಿಂದ ಲುಂಬ ಮತ್ತು ಲುಂಡ ರಾಜ್ಯಗಳು ದಂತ ಹಾಗೂ ಸ್ವಲ್ಪಮಟ್ಟಿಗೆ ಗುಲಾಮರ ವಿನಿಮಯದಿಂದ ಬಂದೂಕು ಹಾಗೂ ಮದ್ದು ಗುಂಡುಗಳನ್ನು ಪಡೆದುಕೊಂಡವು. ಪೋರ್ಚುಗೀಸರು ಇನ್ನೂ ಒಳ ಭಾಗಗಳಿಗೆ ಪ್ರವೇಶಿಸಿ ೧೫೬೦ರಲ್ಲಿ ಮಾನೋಮಟಾಪದ ಮೇಲೆ ನಿಯಂತ್ರಣವನ್ನು ಸ್ಥಾಪಿಸಿದರು. ಆದರೆ ಚಂಗಮೈರ್‌ಗಳು ೧೬೯೩-೧೬೯೫ರಲ್ಲಿ ಮಾನೋಮಡಾಪ ಮತ್ತು ಪೋರ್ಚುಗೀಸರನ್ನು

ಕರಾವಳಿ ತೀರಕ್ಕೆ ಅಟ್ಟಿದರು. ಇನ್ನೂ ಉತ್ತರಕ್ಕೆ ಮೂಲತಃ ಜಾಂಬಿಬಾರ್‌ನಲ್ಲಿ ನೆಲೆಸಿ, ಗುಲಾಮ ವ್ಯಾಪಾರ ಮುಖ್ಯಭೂಮಿಯ ದೇಶಿ ಆಫ್ರಿಕನ್ನರ ಕೈಯಲ್ಲೇ ಇದ್ದರೂ ಅದಕ್ಕೆ ಆರಂಭದ ವಿದೇಶಿ ಸಂಪರ್ಕವನ್ನು ಒದಗಿಸಿದರು.

ಇಲ್ಲಿ ಗುಲಾಮ ವ್ಯಾಪರವು ದಂತದ ವ್ಯಾಪಾರದೊಂದಿಗೆ ಹೆಣೆದುಕೊಂಡಿತ್ತು. ಇದೇ ರೀತಿ ಪಶ್ಚಿಮ ಆಫ್ರಿಕಾದಲ್ಲಿ ಗುಲಾಮ ವ್ಯಾಪಾರ ಬಂದೂಕು ಮತ್ತು ಚಿನ್ನದ ವ್ಯಾಪಾರಗಳೊಂದಿಗೆ ಸಂಬಂಧಿತವಾಗಿತ್ತು. ೧೯ನೆಯ ಶತಮಾನದಲ್ಲಿ ಗುಲಾಮ ವ್ಯಾಪಾರ ಅಂತ್ಯಗೊಂಡದ್ದರಿಂದ ಸಕ್ರಮವಾದ ನ್ಯಾಯಯುತ ವ್ಯಾಪಾರ ವಾಣಿಜ್ಯಕ್ಕೆ ನಾಂದಿಯಾಯಿತು. ಈ ಅವಧಿಯಲ್ಲಿ ಐರೋಪ್ಯ ಕೈಗಾರಿಕೆಗಳ ಬೇಡಿಕೆಗೆ ನೇರ ಪ್ರಕ್ರಿಯೆಗಾಗಿ ಆಫ್ರಿಕಾದ ಆರ್ಥಿಕ ಚಟುವಟಿಕೆ ಬೆಳೆಯಿತು.

**ಪರಾಮರ್ಶನ ಗ್ರಂಥ**

೧. ಚೇಂಬರ್ಲಿನ್ ಎಂ.ಇ., ೧೯೭೪. ದಿ ಸ್ಕ್ರಾಂಬಲ್ ಫಾರ್ ಆಫ್ರಿಕಾ, ಲಂಡನ್: ಲಾಂಗ್‌ಮೇನ್ ಗ್ರೂಪ್ ಲಿಮಿಟೆಡ್.

೨. ಜೋನ್ ಫ್ಲಿಂಡ್(ಸಂ), ೧೯೭೫. ದಿ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಆಫ್ರಿಕಾ, ಕೇಂಬ್ರಿಡ್ಜ್: ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್.

೩. ಬೆಸಿಲ್ ಡೇವಿಡ್ಸನ್, ೧೯೭೩. ವಿಚ್ ವೇ ಆಫ್ರಿಕಾ?, ಮೂರನೆಯ ಮುದ್ರಣ, ಲಂಡನ್: ಪೆಂಗ್ವಿನ್ ಬುಕ್ಸ್.

೩

# ಸಂಸ್ಕೃತಿ ಮತ್ತು ನಾಗರಿಕತೆ ಬುಡಕಟ್ಟುಗಳು

ಡಿ. ಸರಿತಾ
ಅನುವಾದ: ಎಂ. ಜೈಕುಮಾರ್

ಆಫ್ರಿಕಾ ಖಂಡದಲ್ಲಿ ವಿವಿಧ ಬಗೆಯ ಜನರು, ಭಾಷೆಗಳು ಮತ್ತು ಸಂಸ್ಕೃತಿಗಳು ಕಾಣಸಿಗುತ್ತವೆ. ಹೊಮಿನಿಡೆಯ ಅಂದರೆ ಮಾನವ ಕಾಲದ ತೊಟ್ಟಿಲು ಆಫ್ರಿಕಾ ಎಂಬುದು ಈಗ ಎಲ್ಲೆಡೆ ಮಾನ್ಯವಾಗಿದೆ. ಅಂಗರಚನಾ ಶಾಸ್ತ್ರದ ಪ್ರಕಾರ ಆಧುನಿಕ ಆಫ್ರಿಕಾದ ಜನರು ೧೦೦ ಸಾವಿರ ವರ್ಷಗಳ ಹಿಂದೆ ಸಹರಾ ಕೆಳಗಿನ ಆಫ್ರಿಕಾದಲ್ಲಿ ಜನಿಸಿದರು ಎಂದು ನಂಬಲಾಗಿದೆ. ಉತ್ತರ ಆಫ್ರಿಕಾವು ಈಗ ದಕ್ಷಿಣದಲ್ಲಿ ಐರೋಪ್ಯ ಭೌಗೋಳಿಕ ಜನಾಂಗಗಳಿಂದ ಸಮೃದ್ಧವಾಗಿದೆ. ಅವರಲ್ಲಿ ಬಹಳಷ್ಟು ಮಂದಿ ಸಹಾರ ಕೆಳಗಿನ ಜನರು. ಈ ಭೌಗೋಳಿಕ ಜನಾಂಗಗಳನ್ನು ಅವರ ದೈಹಿಕ ಲಕ್ಷಣಗಳ ಆಧಾರದ ಮೇಲೆ ಸ್ಥೂಲವಾಗಿ ವಿಂಗಡಿಸಬಹುದು. ಆದರೆ ಅವರುಗಳ ನಡುವಿನ ನಿಜವಾದ ವ್ಯತ್ಯಾಸಗಳು ಬಹುಪಾಲು ಜೀವರಸಾಯನ ಶಾಸ್ತ್ರದ್ದು(ಉದಾಹರಣೆಗೆ ರಕ್ತ ಗುಂಪುಗಳ ಭಿನ್ನತೆ).

ಉತ್ತರದ ತೀರದುದ್ದಕ್ಕೂ ಮತ್ತು ಈಶಾನ್ಯ ಭಾಗದಲ್ಲಿ ಅಟ್ಲಾಸ್ ಗಿರಿಶ್ರೇಣಿಗಳ ಬರ್ಬರದಿಂದ ಹಿಡಿದು ಇಥಿಯೋಪಿಯಾದ ಅಮಹರ್‌ಗಳವರೆಗೆ ಕಾಕಸಾಯಿಡ್ ಜನಾಂಗ ಗಳನ್ನು ಕಾಣುತ್ತೇವೆ. ಇವರು ಚರ್ಮದ ಬಣ್ಣದಲ್ಲಿ ವೈವಿಧ್ಯವನ್ನು ಹೊಂದಿದ್ದರೂ, ಮೆಟ್ಟಲು ಕೂದಲು ಹಾಗೂ ನೀಗ್ರೋ ಸ್ವರೂಪದ್ದಲ್ಲದ ಮುಖಲಕ್ಷಣಗಳನ್ನು ಹೊಂದಿರು ತ್ತಾರೆ. ಇನ್ನೊಂದು ತುತ್ತತುದಿಯನ್ನು ನೋಡಿದರೆ, ಮೊದಲು ಎಲ್ಲೆಡೆ ಹರಡಿಕೊಂಡಿದ್ದು ಈಗ ನೈರುತ್ಯ ಮರುಭೂಮಿ ಪ್ರದೇಶಕ್ಕೆ ಸೀಮಿತರಾದ ಬುಷ್‌ಮನ್ ಹಾಗು ಹೊಡೆನ್ ಟೌಡ್‌ಗಳನ್ನು ಕಾಣುತ್ತೆವೆ. ಇವರು ಕುಳ್ಳಗಿದ್ದು ಹಳದಿ ಕಂದು ಮೈಬಣ್ಣ ಹಾಗೂ ವಿಶಿಷ್ಟ ಬಗೆಯ ಕೂದಲು ಹೊಂದಿರುತ್ತಾರೆ. ಈ ಎರಡೂ ತೀರ ವಿಭಿನ್ನ ಬುಡಕಟ್ಟುಗಳ ನಡುವೆ ಅಲ್ಲಲ್ಲಿ ವಿರಳವಾಗಿ ಹರಡಿಕೊಂಡಂತೆ ವರ್ಷಾರಣ್ಯಗಳಲ್ಲಿ ತುಂಬ ಜನವಿರುವ ಪ್ರದೇಶ

ಗಳಲ್ಲಿ ಬೇರೆಯದೇ ಆದ ಪಿಗ್ಮಿ ಬುಡಕಟ್ಟಿನ ಜನರಿದ್ದಾರೆ. ಸಹಾರಾ ಕೆಳಗಿನ ಆಫ್ರಿಕಾದಲ್ಲಿ ಮಿಕ್ಕೆಲ್ಲರಿಗಿಂತ ಪ್ರಮುಖವಾಗಿ ನೀಗ್ರೋ ಬುಡಕಟ್ಟಿನ ಜನರಿದ್ದಾರೆ. ಮೈಬಣ್ಣ ಹಾಗೂ ಎತ್ತರದಲ್ಲಿ ಅವರು ಗಣನೀಯ ಪ್ರಮಾಣದಲ್ಲಿ ಭಿನ್ನತೆಯನ್ನು ತೋರುತ್ತಾರೆ. ಬಟ್ಟರೆ ಪೂರ್ವ ಆಫ್ರಿಕಾ ಮತ್ತು ನೈಲ್ ನದಿ ಮೇಲಿನ ಪ್ರದೇಶದಲ್ಲಿ ಎತ್ತರವಾದ ನಸುಗಪ್ಪು ಬಣ್ಣದ ಜನಾಂಗ ಕಾಣುತ್ತಾರೆ. ಈ ಖಂಡಕ್ಕೆ ಹೋಲಿಕೆಯಲ್ಲಿ ಇತ್ತೀಚೆಗೆ ವಲಸೆ ಬಂದ ಜನಾಂಗವಾಗಿ ಮಡಗಾಸ್ಕರ್‌ನಲ್ಲಿ ಮಂಗೋಲಿಯನ್ ಬುಡಕಟ್ಟಿನ ಜನ ಕಾಣುತ್ತಾರೆ.

**ನೆಲಸು ವಿನ್ಯಾಸ**

ಸಹಾರಾದ ಉತ್ತರಕ್ಕಿರುವ ಆಫ್ರಿಕಾದಲ್ಲಿ ಆಫ್ರೋ ಏಷಿಯನ್ ಗುಂಪಿನ ಭಾಷೆಗಳನ್ನಾಡುವ ಜನರು ಪ್ರಮುಖವಾಗಿ ನೆಲಸಿದ್ದಾರೆ. ಮೊರಾಕ್ಕೊ, ಅಲ್ಜೀರಿಯಾ ಮತ್ತು ಟುನಿಷಿಯಾದ ಬುಡಕಟ್ಟುಗಳು ಇವರಲ್ಲಿ ಪ್ರಮುಖರು. ಇವರಲ್ಲಿ ಅನೇಕರು ನಸುಗಪ್ಪು ಮೈಬಣ್ಣ, ಕಪ್ಪು ತಲೆಗೂದಲು, ತೆಳು ನೀಳನಾಸಿಕ ಮತ್ತು ಮೇಲೆತ್ತಿಕೊಂಡಿರುವ ತುಟಿಗಳನ್ನು ಹೊಂದಿರುತ್ತಾರೆ. ಅನೇಕ ಪ್ರದೇಶಗಳಲ್ಲಿ ಸಾಂಸ್ಕೃತಿಕ ಸಂಪರ್ಕದ ಕಾರಣದಿಂದ ಮತ್ತು ಅಂತರ ವಿವಾಹಗಳಿಂದ ಬುಡಕಟ್ಟುಗಳು, ಅರೇಬಿಯಾದಿಂದ ಉತ್ತರ ಆಫ್ರಿಕಾಕ್ಕೆ ಅನೇಕ ತಂಡಗಳಲ್ಲಿ ವಲಸೆ ಬಂದ ಸೆಮೆಟಿಕ್ ಭಾಷೆ ಮಾತನಾಡುವ ಅರಬ್ಬರೊಂದಿಗೆ ಬಹುಪಾಲು ಕಲೆತು ಹೋಗಿದ್ದಾರೆ. ಪರಿಣಾಮವಾಗಿ ಮಘ್ರಿಬ್ ಸಂಸ್ಕೃತಿ ಹುಟ್ಟಿತು. ಸಹಾರಾದಲ್ಲಿ ಶುವಾ ಎಂಬಂತಹ ಅರಬ್ ಜನರು ತುವರೆಗ್‌ನಂತಹ ಬರ್ಬರರ ಜೊತೆ ಜೊತೆಯಲ್ಲೇ ವಾಸಿಸುತ್ತಿದ್ದಾರೆ. ಪಶ್ಚಿಮ ಆಫ್ರಿಕಾದಲ್ಲಿ ಪಶ್ಚಿಮ ಮತ್ತು ಮಧ್ಯಸೂಡಾನ್ ಎಂದು ಕರೆಯಲ್ಪಡುವ ಮರುಭೂಮಿಯ ದಕ್ಷಿಣದ ಭಾಗದಲ್ಲಿ ಗೋವಳ ಫುಲಾನಿಗಳಿರುವುದು ಕಪ್ಪು ಜನಾಂಗದೊಂದಿಗೆ ನಸುಗಪ್ಪು ಬಣ್ಣದ ಜನರು ಸಮ್ಮಿಲನಗೊಂಡಿರುವುದಕ್ಕೆ ಸಾಕ್ಷಿ. ಪೂರ್ವ ಆಫ್ರಿಕಾದ ತೀರದಲ್ಲಿ ಬಂಟು ಮಾತನಾಡುವ ಜನರು ಅರಬ್ ನೆಲಸಿಗರೊಂದಿಗೆ ಸಂಪರ್ಕ ಬೆಳೆಸಿದರು. ಅಂತರ ವಿವಾಹದ ಕಾರಣದಿಂದಾಗಿ ಒಂದು ವಿಶಿಷ್ಟ ಸ್ವಾಹಿಲಿ ಸಂಸ್ಕೃತಿ ಬೆಳೆಯಿತು. ಇಥಿಯೋಪಿಯಾ ಮತ್ತು ಸೋಮಾಲಿಯಾದಲ್ಲಿ ಕುಶಿಟಿಕ್ ಕವಲಿನ ಮತ್ತು ಹೆಮೆಟಿಕ್ ಭಾಷೆ ಮಾತನಾಡುವ ಜನರು ವಾಸಿಸುತ್ತಿದ್ದರು. ಕ್ರಿ.ಪೂ. ೭ನೆಯ ಮತ್ತು ೬ನೇ ಶತಮಾನಗಳಲ್ಲಿ ಸೆಮೆಟಿಕ್ ಭಾಷೆಗಳನ್ನು ಮಾತನಾಡುವ ಜನರು ತಂಡತಂಡಗಳಲ್ಲಿ ವಲಸೆ ಬಂದ ಕಾರಣ ಪೂರ್ವದ ಆಕ್ಸುಮೈಟ್ ಸಂಸ್ಕೃತಿ ಒಡಮೂಡಿತು. ಇನ್ನು ಈ ಖಂಡದ ಉಳಿದ ಭಾಗಗಳಲ್ಲಿ ಪ್ರಧಾನವಾಗಿ ಕಪ್ಪು ಬುಡಕಟ್ಟಿನ ಕಂದುವರ್ಣದಿಂದ ಕಡುಗಂದುವರ್ಣದ ಮತ್ತು ಮುಖ್ಯವಾಗಿ ಗುಂಗುರುಗೂದಲು, ದಪ್ಪ ಮೂಗು ಹಾಗೂ ದಪ್ಪ ಮೇಲೆತ್ತಿದ ತುಟಿಗಳುಳ್ಳ ಜನರು ವಾಸಿಸುತ್ತಾರೆ. ಅವರಲ್ಲಿ ನಾಲ್ಕು ಮುಖ್ಯ ವರ್ಗಗಳನ್ನು ಗುರುತಿಸಬಹುದು. ಸಹಾರಾ ಮರುಭೂಮಿಯ ದಕ್ಷಿಣಕ್ಕೆ ಈ ಖಂಡದ ಅಗಲಕ್ಕೂ ಹರಡಿಕೊಂಡ ಪ್ರದೇಶದ ಸುಡಾನಿಕ್ ಜನರು, ಪಶ್ಚಿಮ ಆಫ್ರಿಕಾದ ಅರಣ್ಯಗಳ ಗಿನಿ ತೀರದ ಜನರು, ಪೂರ್ವ ಆಫ್ರಿಕಾದ ನೈಲಾಟಿಕ್ ಜನರು ಮತ್ತು ಮಧ್ಯ ಹಾಗೂ ದಕ್ಷಿಣ ಆಫ್ರಿಕಾದ ಬಂಟು

ಜನರು. ಮಾಲಿಂಕೆ, ಹೌಸಶಾಂಗ್ಯೆ ಮತ್ತು ಬೋರ್ನುನಂತಹ ಅನೇಕ ಸುಡಾನಿಕ್ ಜನರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿರುತ್ತಾರೆ. ಕ್ರೈಸ್ತಮತಕ್ಕೆ ಪರಿವರ್ತನೆ ಸಹರಾ ಕೆಳಗಿನ ಆಫ್ರಿಕಾದ ಕರಾವಳಿ ಪ್ರದೇಶಗಳಲ್ಲಿ ಗಮನೀಯವಾಗಿ ಕಂಡುಬರುತ್ತದೆ.

ಬಂಟು ಮಾತನಾಡುವ ಜನರು ಭೂಮಧ್ಯರೇಖೆಯ ದಕ್ಷಿಣದ ಆಸುಪಾಸಿನಲ್ಲಿ ವಾಸಿಸುತ್ತಿದ್ದಾರೆ. ಜಾಂಬೆಜಿಯಲೋಜ ಜನರು, ನಮೀಬಿಯಾದ ನೈರುತ್ಯ ಆಫ್ರಿಕಾದ ಹೆರೇರೋ, ದಕ್ಷಿಣ ಆಫ್ರಿಕಾದ ಜುಲು ಜನರು ಬಂಟು ಮಾತನಾಡುವ ಸಮೂಹದವರು. ಕಾಂಗೋ ವರ್ಷಾರಣ್ಯಗಳ ದಕ್ಷಿಣದ ಅರಣ್ಯ ಪ್ರದೇಶಗಳು ಬಂಟು ಜನರ ಮೂಲಸ್ಥಾನ. ಈ ಪ್ರದೇಶದಿಂದ ಬಂಟು ಮತನಾಡುವ ಜನರು ತಮ್ಮೊಂದಿಗೆ ಕಬ್ಬಿಣಯುಗದ ಸಂಸ್ಕೃತಿಯನ್ನು ಕೊಂಡೊಯ್ಯುತ್ತ ಎಲ್ಲ ದಿಶೆಗಳಿಗೂ ಹರಡಿಕೊಂಡರು. ಬಂಟು ಮಾತನಾಡುವ ಜನರು ಆಕ್ರಮಿಸಿಕೊಂಡ ಅನೇಕ ಪ್ರದೇಶಗಳಲ್ಲಿ ಬಂಟು ಪೂರ್ವದ ಸಂಸ್ಕೃತಿಯ ಅವಶೇಷಗಳು ದೊರೆಯುತ್ತವೆ.

ಇವರಲ್ಲಿ ಪ್ರಮುಖರಾದವರೆಂದರೆ ವರ್ಷಾರಣ್ಯಗಳ ಪಿಗ್ಮಿ ಜನಾಂಗ ಮತ್ತು ಕಲಹರಿಯ (ಬುಷ್ ಮನ್) ಸಾನ್ ಜನಾಂಗ, ಇವರಿಬ್ಬರೂ ಬೇಟೆ ಹಾಗೂ ಹಣ್ಣು ಹಂಪಲು ಸಂಗ್ರಹಿಸುವವರು ಹಾಗೂ ನಮೀಬಿಯಾ(ನೈರುತ್ಯ ಆಫ್ರಿಕಾದ) ಮತ್ತು ದಕ್ಷಿಣ ಆಫ್ರಿಕಾದ ಖೋಯಿಖೋಯಿನ್(ಹಾಟೆನ್ ಟಾಟ್) ಜನರು. ಎಲ್ಲ ಕಡೆಯೂ ಪ್ರಾಚೀನ ಸಮಾಜಗಳ ಮೇಲೆ ದಬ್ಬಾಳಿಕೆ ತೋರಿ ಬಂಟು ಕೃಷಿಕರು ವಿಸ್ತಾರವಾಗಿ ಹರಡಿಕೊಂಡರು. ಈ ಪ್ರಾಚೀನ ಸಮಾಜಗಳ ಜನರನ್ನು ತಮ್ಮಲ್ಲಿ ವಿಲೀನ ಮಾಡಿಕೊಂಡರು ಇಲ್ಲವೇ ಅವರನ್ನು ತೀರ ಶುಷ್ಕ ಅಥವಾ ಬಲು ಆರ್ದ್ರವಾದ ಪ್ರದೇಶಗಳಿಗೆ ಅಟ್ಟಿದರು. ಈ ಖಂಡದ ದಕ್ಷಿಣ ತುತ್ತ ತುದಿಯ ಪ್ರದೇಶಗಳಲ್ಲಿ ಡಚ್ ಮತ್ತು ಇಂಗ್ಲಿಷ್ ಮೂಲದ ಜನರು ಪ್ರಧಾನವಾಗಿ ಇರುವುದನ್ನು ಕಾಣುತ್ತೇವೆ. ಇದರ ಜೊತೆಗೆ ಭಾರತೀಯ ಮೂಲದ ಸಣ್ಣ ಪುಟ್ಟ ಜನಾಂಗಗಳು, ಖೋಯಿಖೋಯಿನ್, ಐರೋಪ್ಯ ಮತ್ತು ಏಷ್ಯಾದ ಬುಡಕಟ್ಟುಗಳ ಸಮ್ಮಿಶ್ರವಾದ 'ಕೇಪ್ ಕಲರ್ಡ್' ಎಂದು ಕರೆಯಲಾಗುವ ಜನರಿದ್ದಾರೆ. ಡಚ್ ಅಥವಾ ಬೋಯರ್ ವಲಸೆ ೧೭ನೆಯ ಶತಮಾನದಲ್ಲಿ ಪ್ರಾರಂಭಗೊಂಡಿತು. ೧೯ನೆಯ ಶತಮಾನದಲ್ಲಿ ಬ್ರಿಟಿಷರು ನಟಾಲ್, ಜಾಂಬಿಯ ಮತ್ತು ಜಿಂಬಾಬ್ವೆಗಳಲ್ಲಿ ನೆಲೆಸಿದರು. ವಲಸೆ ಬಂದ ಜನರೇ ಬಹುಸಂಖ್ಯಾತರಾಗಿ ಇದ್ದ ಕಾರಣ, ದಕ್ಷಿಣ ಆಫ್ರಿಕಾ ನೈರುತ್ಯ ಆಫ್ರಿಕಾ, ಜಿಂಬಾಬ್ವೆ, ಅಂಗೋಲ ಮತ್ತು ಮೊಜಾಂಬಿಕ್‌ಗಳಲ್ಲಿ ಆಫ್ರಿಕಾ ಜನರು ಸ್ವಯಮಾಡಳಿತವನ್ನು ಸಾಧಿಸುವುದು ನಿಧಾನ ವಾಗುವುದಕ್ಕೆ ಕಾರಣವಾಗಿದೆ. ಇದರಿಂದಾಗಿ ಜನಾಂಗಗಳ ನಡುವೆ ಕಹಿ ಮನೋಭಾವ ಉಂಟಾಗಿರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಉತ್ತರ ಆಫ್ರಿಕಾದಲ್ಲಿ ಫ್ರಾನ್ಸ್, ಇಟಲಿ ಮತ್ತು ಸ್ಪೈನ್ ದೇಶಗಳಿಂದ ಬಹುಸಂಖ್ಯಾತರಾಗಿ ಐರೋಪ್ಯರು ನೆಲಸಿದರೂ ಅರಬ್ ರಾಷ್ಟ್ರೀಯತಾ ಭಾವನೆ ಬೆಳೆಯಿತು. ಮೊರಾಕ್ಕೊ,

ಟ್ಯುನಿಷಿಯಾ ಹಾಗೂ ಅಲ್ಜೀರಿಯಾಗಳು ಸ್ವತಂತ್ರ ನಾಡಾದವು. ಸ್ಥಳೀಯ ಜನರೇ ರಾಜಕೀಯವಾಗಿ ಬಲಿಷ್ಠರಾದ ಕಾರಣ ವಸಾಹತು ಮಾಡಿಕೊಂಡಿದ್ದ ವಿದೇಶಿಯರು ತಮ್ಮ ತಾಯ್ನಾಡುಗಳಿಗೆ ಹಿಂದಿರುಗುವಂತಾಯಿತು.

### ಜನಾಂಗಗಳು ಮತ್ತು ಭಾಷೆ

ಆಫ್ರಿಕಾದ ಬುಡಕಟ್ಟುಗಳು ಮತ್ತು ಜನಾಂಗೀಯ ರಚನೆಯು ವೈವಿಧ್ಯ ಮತ್ತು ಸಂಕೀರ್ಣವಾಗಿದೆ. ಈ ಜನಾಂಗ ರಚನೆ ಪ್ರಮುಖವಾಗಿ ನಿಲುವು, ಮೈಬಣ್ಣ, ತಲೆಗೂದಲ ಸ್ವರೂಪ ಮುಂತಾದ ಬಹುರೂಪರೇಷೆಗಳನ್ನು ಆಧರಿಸಿದೆಯೇ ಹೊರತು ಆನುವಂಶಿಕ ಅಥವಾ ರಕ್ತದ ಗುಂಪುಗಳ ಲಕ್ಷಣಗಳನ್ನು ಆಧರಿಸಿರುವುದಿಲ್ಲ. ಇವರನ್ನು ಐದು ಬಗೆಯಾಗಿ ವಿಂಗಡಿಸಬಹುದಾಗಿದೆ.

೧. ಬುಷ್ ಮನಾಯಿಡ್ ಜನರು: ಇವರು ಪೂರ್ವ ಮತ್ತು ದಕ್ಷಿಣ ಆಫ್ರಿಕಾಗಳಲ್ಲಿ ಬಹಳ ಭಾಗಗಳಲ್ಲಿ ಹರಡಿಕೊಂಡಿದ್ದರು. ಇವರು ಕುಳ್ಳಗೆ ಮತ್ತು ಹಳದಿ ಕಂದು ವರ್ಣದವರಾಗಿರುತ್ತಾರೆ ಹಾಗೂ ಅವರ ತಲೆಗೂದಲು ಒಂದು ವಿಶಿಷ್ಟ ಮೆಣಸು ಕಾಳಿನ ವರ್ಣದ್ದಾಗಿರುತ್ತದೆ. ಈಗ ನೈರುತ್ಯ ಆಫ್ರಿಕಾದ ಸಾನ್ ಮತ್ತು ಖೋಯಿಖೋಯಿನ್‌ಗಳು ಮತ್ತು ಟಾಂಜೇನಿಯಾದ ತೀರ ಜನವಿದೂರ ಪ್ರದೇಶಗಳ ಬುಷ್‌ಮನಾಯ್ಡ್ ಜನರು ಈಗ ಇವರ ಪ್ರತಿನಿಧಿಗಳು ಎನ್ನಬಹುದು.

೨. ಪಿಗ್ಮಾಯ್ಡ್ ಜನರು: ಇವರೂ ಕುಳ್ಳ ಹಾಗೂ ಕಂದು ಮೈಬಣ್ಣದವರು.

೩. ನಿಗ್ರಾಯ್ಡ್ ಜನರು: ಈ ಖಂಡದಲ್ಲಿ ಬಹಳವಾಗಿ ಹರಡಿಕೊಂಡಿರುವವರು ಈ ಜನರೇ. ಇವರ ಮೈಬಣ್ಣ ಪಶ್ಚಿಮ ಆಫ್ರಿಕಾದ ಕಡುಗಪ್ಪಿನಿಂದ ಹಿಡಿದು ಪೂರ್ವ ಮತ್ತು ದಕ್ಷಿಣ ಆಫ್ರಿಕಾದಲ್ಲಿನ ಕಂದು ಬಣ್ಣದವರೆಗೆ ವೈವಿಧ್ಯಪೂರ್ಣವಾಗಿದೆ. ಎತ್ತರದಲ್ಲಿ ಪಶ್ಚಿಮದ ಕುಳ್ಳ ಜನರಿಂದ ಹಿಡಿದು ದಕ್ಷಿಣ ಸೂಡಾನ್‌ನ ಅತಿ ಎತ್ತರ ಹಾಗೂ ತೆಳುಕಾಯದ ನೈಲೋಟ್‌ಗಳವರೆಗೆ ವೈವಿಧ್ಯವಿದೆ.

೪. ಉತ್ತರ ಮತ್ತು ಈಶಾನ್ಯ ಆಫ್ರಿಕಾದ ಕಾಕಸಾಯಿಡ್‌ಗಳು: ಇವರು ಆಫ್ರಿಕೇತರ ಮೆಡಿಟರೇನಿಯನ್ ಕಾಕಸಾಯಿಡ್‌ಳಿಗೆ ಸಂಬಂಧಿಕರಾಗಿರುತ್ತಾರೆ. ಅವರ ಮೈಬಣ್ಣ ಉತ್ತರ ಆಫ್ರಿಕಾದ ನಸು ಕಂದುಬಣ್ಣದಿಂದ ಹಿಡಿದು ಸೋಮಾಲಿಯಾದ ಕಡುಗಪ್ಪು ಬಣ್ಣದವರೆಗೆ ವೈವಿಧ್ಯಮಯವಾಗಿದೆ. ಅವರ ಕೂದಲು ಸಾಮಾನ್ಯವಾಗಿ ಮೆಟ್ಟಲು ಗೂದಲು.

೫. ಮಂಗೋಲಿಯನ್ ಬುಡಕಟ್ಟು ಜನಾಂಗ: ಇವರು ಮಡಗಾಸ್ಕರ್‌ನಲ್ಲಿ ಕಾಣಸಿಗುತ್ತಾರೆ. ಈ ಖಂಡಕ್ಕೆ ಇವರು ಇತ್ತೀಚೆಗೆ ವಲಸೆ ಬಂದವರು.

ಆಫ್ರಿಕಾದ ದೇಶೀಭಾಷೆಗಳನ್ನು ಸ್ಥೂಲವಾಗಿ, ಆಫ್ರಿಕಾ ನೈಜರ್, ಕಾರ್ಡೋಫನ್ನೆಯ, ನೈಲ್, ಸಹರಾ ಮತ್ತು ಸಹರಾದ ದಕ್ಷಿಣಕ್ಕೆ ಖೋಯಿಯನ್ ಕುಟುಂಬಗಳ ಹೆಮಿಟೋ-

ಸೆಮಿಟಿಕ್ ಗುಂಪು ಮತ್ತು ಆಸ್ಟ್ರೋನೇಷಿಯನ್ ಎಂದು ವಿಂಗಡಿಸಬಹುದು. ಆದರೆ ಈ ವರ್ಗೀಕರಣ ಸಾಕಷ್ಟು ವಿವಾದಕ್ಕೆ ಎಡೆ ಮಾಡಿಕೊಟ್ಟಿದೆ. ಒಟ್ಟಾರೆ ಸಹರಾ ಹಾಗೂ ಸೂಡಾನ್‌ನಲ್ಲಿ ಅರಾಬಿಕ್ ಭಾಷೆ ಅಧಿಕೃತ ಹಾಗೂ ಅನಧಿಕೃತ ಭಾಷೆ. ಹಾಗೆಯೇ ಇತರ ಕೆಲವು ರಾಜ್ಯಗಳಲ್ಲಿ ಅದು ಧಾರ್ಮಿಕ ಭಾಷೆ. ಸಹರಾದಿಂದ ಜಾಂಬೆಸಿ ನದಿಗಳ ನಡುವಿನ ರಾಜ್ಯಗಳಲ್ಲಿ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಾರೆ. ಫ್ರೆಂಚ್ ಪಶ್ಚಿಮ ಆಫ್ರಿಕಾ-ಫ್ರೆಂಚ್ ಈಕ್ವೆಟೋರಿಯಲ್ ಆಫ್ರಿಕಾ ಮತ್ತು ಮಡ್ಗಾಸ್ಕರ್(ಮಾಲಗಾಸ್ಸೆ ಕೂಡ ಇಲ್ಲಿ ಅಧಿಕೃತ ಭಾಷೆ) ಜೈರ್‌ಗಳಲ್ಲಿ ಅಧಿಕೃತ ಭಾಷೆಯಾಗಿದೆ. ಪಶ್ಚಿಮ, ಮಧ್ಯ ಮತ್ತು ಪೂರ್ವ ಆಫ್ರಿಕಗಳಲ್ಲಿ ಇಂಗ್ಲಿಷ್ ಅಧಿಕೃತ ಭಾಷೆ. ಈ ಹಿಂದೆ ಪೋರ್ಚುಗಲ್‌ನ ಅಡಿಯಲ್ಲಿ ಇದ್ದ ದೇಶಗಳ ಪೋರ್ಚುಗೀಸ್ ಭಾಷೆ ಅಧಿಕೃತ ಅಥವಾ ಅನ್ಯಥಾ ಆಡುಭಾಷೆಯಾಗಿದೆ. ದಕ್ಷಿಣ ಆಫ್ರಿಕಾದಲ್ಲಿ ಆಫ್ರಿಕನ್ ಹಾಗು ಇಂಗ್ಲಿಷ್ ಭಾಷೆ ಎರಡೂ ಅಧಿಕೃತ ಭಾಷೆಗಳು. ಇಥಿಯೋಪಿಯಾದಲ್ಲಿ ಅಮಹಾನಿಕ್ ಅಧಿಕೃತ ಭಾಷೆ. ಕೆಲವು ಆಫ್ರಿಕನ್ ಭಾಷೆಗಳು ಅವುಗಳ ತಾಯ್ನಾಡಿನಿಂದ ಹೊರಗೆ ಸಂಪರ್ಕ ಭಾಷೆಯಾಗಿ ಚಾಲ್ತಿಗೆ ಬಂದಿದೆ. ಇವು ಒಂದು ವಿಶಾಲ ಪ್ರದೇಶದಲ್ಲಿ ವ್ಯಾಪಾರ ಮತ್ತಿತರ ಸಂಪರ್ಕಕ್ಕೆ ಉಪಯುಕ್ತವಾಗಿ ಕಂಡುಬಂದ ಭಾಷೆಗಳು. ಇವುಗಳಲ್ಲಿ ಸ್ವಾಹಿಲಿ ಭಾಷೆಯೂ ಒಂದು. ಇದು ಒಂದು ಉಪಕುಟುಂಬದ ಕಾಂಗೋ ಕೊರಡೋಶಿಯನ್ ಭಾಷೆ. ಇದು ಕಾಲಾಂತರದಲ್ಲಿ ಅರಾಬಿಕ್ ನಿಂದ ಅನೇಕ ಶಬ್ದಾವಳಿಯನ್ನು ತನ್ನಲ್ಲಿ ಸೇರಿಸಿಕೊಂಡಿತು. ಜಂಜಿಬಾರ್ ಮತ್ತು ಅದರ ಅಕ್ಕಪಕ್ಕದ ಕರಾವಳಿ ಪ್ರದೇಶಕ್ಕೆ ಅರಬ್ ವ್ಯಾಪಾರದ ಕಾರಣದಿಂದ ಈ ರೀತಿ ಅರಾಬಿಕ್ ಶಬ್ದಾವಳಿ ಸೇರುವುದು ಸಾಧ್ಯವಾಯಿತು. ಇತರ ಆಫ್ರಿಕನ್ನರೂ ವ್ಯಾಪಾರ ವಾಣಿಜ್ಯದಲ್ಲಿ ಇದರ ಉಪಯುಕ್ತತೆ ಗುರುತಿಸಿದರು. ಹೀಗಾಗಿ ಇಂದು ಕೀನ್ಯಾ, ಟಾಂಜೇನಿಯಾ ಉಗಾಂಡಗಳಲ್ಲಿರುವ ಐರೋಪ್ಯ ಮತ್ತು ಅಮೇರಿಕನ್ ನಿವಾಸಿಗಳೂ ಸೇರಿದಂತೆ ಅಲ್ಲಿನ ಜನರು ಸ್ವಾಹಿಲಿಯ ಒಂದಲ್ಲೊಂದು ಉಪಭಾಷೆಯನ್ನು ಮಾತನಾಡುತ್ತಾರೆ. ಆಫ್ರಿಕಾದ ಉಳಿದೆಡೆ ಬೆಂಬ(ಮಧ್ಯ ಆಫ್ರಿಕಾದ ಬಂಟುಭಾಷೆ), ಲಿಂಗಲಾ ಮತ್ತು ಕೊಂಗ(ಕಾಂಗೋ ಪ್ರಜಾಸತ್ತಾತ್ಮಕ ಗಣರಾಜ್ಯದ ಬಂಟುಭಾಷೆ), ಹೌಸ(ನೈಜೀರಿಯಾದಲ್ಲಿ ಮಾತನಾಡುವ ಆಫ್ರೊಏಷಿಯಾಟಿಕ್ ಕುಟುಂಬದ ಚಾಡ್‌ನ ಉಪಕುಟುಂಬದ ಒಂದು ಸದಸ್ಯ ಭಾಷೆ), ಮಂಡಿಂಗೋ (ಗಿನಿಯಲ್ಲಿ ಮಾತನಾಡುವ ಕಾಂಗೋ ಕೊರಡೋಫೇರಿಯನ್ ಉಪಕುಟುಂಬದ ಒಂದು ಸದಸ್ಯಭಾಷೆ) ಮತ್ತು ಫುಲಾನಿಯಾದಂತಹ ಭಾಷೆಗಳು ಅವರವರ ಪ್ರದೇಶಗಳ ಸಂಪರ್ಕ ಭಾಷೆಗಳಾಗಿವೆ. ಇನ್ನೂ ಪಶ್ಚಿಮಕ್ಕೆ ಹೋದರೆ ಡೈಯಲಿ ಎಂದು ಮಾಲಿಂಕೆ ಭಾಷೆಯ ಉಪಭಾಷೆ ಸಂಪರ್ಕ ಭಾಷೆಯ ಸ್ಥಾನಮಾನವನ್ನು ಗಳಿಸಿದೆ. ಈ ಖಂಡದ ಪ್ರಮುಖ ಭಾಷಾ ಕುಟುಂಬಗಳೆಂದರೆ:

೧. ನೈಜರ್ ಕೊರಡೋಫೇನಿಯನ್ ಬಹಳ ಪ್ರಚಲಿತವಿರುವಂತಹ ಭಾಷಾ ಕುಟುಂಬ. ಇದರಲ್ಲಿ ಎರಡು ಉಪಕುಟುಂಬಗಳಿವೆ. ನೈಜರ್-ಕಾಂಗೋ, ಮತ್ತು ಕೊರಡೋಫೇ

ನಿಯನ್ ಎಂಬ ಈ ಭಾಷೆಗಳನ್ನು ಸೆನೆಗಲ್‌ನಿಂದ ಕಾಂಗೋವರೆಗೆ ಕಾಣಬಹುದು ಮತ್ತು ಇತ್ತೀಚಿನ ವಲಸೆಗಳಿಂದ ಪೂರ್ವ ಮತ್ತು ದಕ್ಷಿಣ ಆಫ್ರಿಕಾಗಳಲ್ಲಿ ಕಾಣಬಹುದು. ನೈಜರ್ ಕಾಂಗೋ ಪ್ರದೇಶಗಳೆಂದರೆ ಪಶ್ಚಿಮ ಅಟ್ಲಾಂಟಿಕ್, ಮಂಡೆ, ವೊಲ್ಟಾಯಿಕ್, ಕ್ವಾ, ಬೆನು ಎಕಾಂಗೋ ಮತ್ತು ಅಡ್ಮಾವ ಪೂರ್ವ ಉಪಗುಂಪುಗಳು. ಕೊರಡೋಫೇನಿಯನ್ ೧೫ ಉಪಗುಂಪುಗಳನ್ನು ಒಳಗೊಂಡಿದೆ. ಇವೆಲ್ಲವನ್ನೂ ಸೂಡಾನಿ ಒಂದು ಅತಿ ಸಣ್ಣ ಪ್ರದೇಶದೊಳಗೆ ಮಾತನಾಡಲಾಗುತ್ತಿದೆ.

೨. ನೈಲೋ ಸಹರಾ ಕುಟುಂಬದಲ್ಲಿ ಸಹರಾದ ದಕ್ಷಿಣಕ್ಕೆ ನೈಜರ್ ಮಧ್ಯಭಾಗದಿಂದ ನೈಲ್ ನದಿವರೆಗಿನ ಸವನ್ನಾ ವಲಯದುದ್ದಕ್ಕೂ ಮಾತನಾಡುವ ಭಾಷೆಗಳು ಒಳ ಗೊಂಡಿದೆ. ಅದರ ಉಪಗುಂಪುಗಳೆಂದರೆ ಶೊಂಗ್ಯಾ, ಸಹಾರಾನ್, ಮಾಬನ್, ಫರ್, ಬಾರಿನೈಲ್ ಮತ್ತು ಕೋಮನ್.

೩. ಹ್ಯಾಮಿಡೋ ಸೆಮೆಟಿಕ್; ಪುರಾತನ ಈಜಿಪ್ಟ್ ಭಾಷೆ, ಬರ್ಬರ್ ಕುರೆಟಿಕ್ ಮತ್ತು ಚಾಡ್.

೪. ಕೋಯಿಸಿನ್ ಅಥವಾ ಕ್ಲಿಕ್ ಕುಟುಂಬದಲ್ಲಿ ಸಾನ್ ಮತ್ತು ಖೋಯಿಖೋಯಿನ್ ಭಾಷೆಗಳಿವೆ. ಇಂದು ಇವು ನೈರುತ್ಯ ಆಫ್ರಿಕಾ ಮತ್ತು ಉತ್ತರ ಟಾಂಜೇನಿಯಾದ ಹೊರ ವಲಯದ ಹಡ್ಡಾ ಮತ್ತು ಸಂದಾವೇ.

೫. ಆಸ್ಟ್ರೋನೇಷಿಯನ್ ಕುಟುಂಬವು ಮಡ್ಗಾಸ್ಕರ್‌ನ ಮಲಿಗೆಸೆಯ ವಿವಿಧ ಉಪಭಾಷೆಗಳನ್ನು ಹೊಂದಿದೆ.

ಪಶ್ಚಿಮ ಆಫ್ರಿಕಾದಲ್ಲಿ ಕ್ರಿಯೋಲ್(ಕ್ರಿಯೋ) ಮತ್ತು ಪಿಜಿನ್‌ನ ರೂಪಗಳು ಕರಾವಳಿ ನಗರಗಳಲ್ಲಿ ಬಹಳ ಪ್ರಚಲಿತವಿದೆ. ಹೌಸ ಮತ್ತು ಫುಲಾನಿ ಸವನ್ನಾ ವಲಯದಲ್ಲಿ ಬಹಳ ಪ್ರಚಲಿತ. ದಕ್ಷಿಣ ಆಫ್ರಿಕಾದಲ್ಲಿ ಇಂಗ್ಲಿಷ್ ಮತ್ತು ಸ್ಥಳೀಯ ಬಂಟುವಿನ ಒಂದು ಮಿಶ್ರ ಭಾಷೆಯಾದ ಫ್ಯಾನಗಲೋವನ್ನು ಗಣಿ ಪ್ರದೇಶದಲ್ಲಿ ಮಾತನಾಡುತ್ತಾರೆ.

ಬಹಳಷ್ಟು ಆಫ್ರಿಕನ್ ಭಾಷೆಗಳಿಗೆ ಸ್ವದೇಶಿ ಲಿಪಿಗಳಿಲ್ಲ. ಈಗೇನೋ ಸರ್ಕಾರ ಮತ್ತು ಮಿಶನ್‌ಗಳು ಅವನ್ನು ಲಿಖಿತರೂಪಕ್ಕಿಳಿಸಲು ಪ್ರಯತ್ನಿಸುತ್ತಿದ್ದಾರೆ(ಸ್ವಾಹಿಲಿಯಂತಹ) ಅನೇಕ ಆಫ್ರಿಕನ್ ಭಾಷೆಗಳನ್ನು ಶತಶತಮಾನಗಳಿಂದ ಅರಾಬಿಕ್ ಲಿಪಿಯಲ್ಲಿ ಬರೆಯ ಲಾಗುತ್ತಿದೆ. ಹೇಗಿದ್ದರೂ ಕೆಲವು ಅಪವಾದಗಳಿವೆ. ಅವುಗಳಲ್ಲಿ ಪ್ರಸಿದ್ಧವಾದವೆಂದರೆ, ಸಿಯಾರಲಿಯೇನ್‌ನ ವಾಯ್, ಕಾಮೆರೂನ್‌ನ ಮಯ್, ಟೂಯರೆಗ್ ಮತ್ತಿತರ ದಕ್ಷಿಣ ಸಹರಾದ ಬರ್ಬರ ಗುಂಪುಗಳು ತಮ್ಮದೇ ಲಿಪಿ ಹೊಂದಿದೆ.

## ಸಂಸ್ಕೃತಿ ಮತ್ತು ಜನಾಂಗೀಯ ಗುಂಪುಗಳು

ಆಫ್ರಿಕಾದಲ್ಲಿ ೩೦೦೦ ಜನಾಂಗೀಯ ಗುಂಪುಗಳು, ಬುಡಕಟ್ಟು, ಅಥವಾ ಜನರನ್ನು ಹೊಂದಿದೆ. ಇವರೇ ಸಹರಾ ಕೆಳಗಿನ ಆಫ್ರಿಕಾ ಸಮಾಜದ ಆಧಾರ. ಈ ಆಫ್ರಿಕನ್ ಸಂಸ್ಕೃತಿಯ ಪಾರಂಪರಿಕ ಸಾಮಾಜಿಕ ಮತ್ತು ಆರ್ಥಿಕ ಸಂಘಟನೆಗಳು ಸ್ವತಂತ್ರವಾದವು.

ಈ ಸಾಮಾಜಿಕ ಘಟಕಗಳು ವಿಶಿಷ್ಟ ಭಾಷೆ ಮತ್ತು ಧರ್ಮದ ವಿಷಯದಲ್ಲಿ ಸಾಂಸ್ಕೃತಿಕವಾಗಿ ತಾವು ಒಂದೇ ಎಂದು ಭಾವಿಸುವ ಗುಂಪುಗಳು. ಅವರ ನಡುವಿನ ಸೀಮಾರೇಖೆಯನ್ನು ಕಟ್ಟುನಿಟ್ಟಾಗಿ ಎಳೆಯಲಾಗದು. ಒಂದೇ ಬಗೆಯ ಸಮುದಾಯಗಳ ಗುಂಪನ್ನು ಒಂದೇ ಬುಡಕಟ್ಟು ಗುಂಪು ಎಂದು ಪರಿಗಣಿಸಬೇಕೇ ಅಥವಾ ಅನೇಕ ಬುಡಕಟ್ಟು ಗುಂಪುಗಳೆಂದು ಪರಿಗಣಿಸಬೇಕೇ ಎಂಬುದು ನಿರ್ಣಯಿಸುವುದು ಕಷ್ಟದ ವಿಷಯ.

ಹೀಗಿದ್ದರೂ ಈ ಜನರನ್ನು ಅವರ ಭಾಷೆ ಹಾಗೂ ಅವರ ಸಂಸ್ಕೃತಿಯ ಮುಖ್ಯ ರೂಪರೇಷೆಯ ಆಧಾರದ ಮೇಲೆ ವರ್ಗೀಕರಿಸುವುದು ಹೆಚ್ಚು ಅನುಕೂಲ. ಈ ಸಾಂಸ್ಕೃತಿಕ ವರ್ಗೀಕರಣವನ್ನು ಕೆಲವು ಸಾಮಾನ್ಯ ಗುಣಲಕ್ಷಣಗಳನ್ನುಳ್ಳ ಅನೇಕ ಸಮಾಜಗಳನ್ನು ಒಳಗೊಂಡು ಸಾಂಸ್ಕೃತಿಕ ಪ್ರದೇಶಗಳನ್ನು ಆಧರಿಸಿ ಮಾಡಲಾಗುತ್ತದೆ. ಆದರೆ ಆಫ್ರಿಕಾದ ಸಂದರ್ಭದಲ್ಲಿ ಅಂಥ ವರ್ಗೀಕರಣವು ಅರ್ಥಪೂರ್ಣವಾಗುವುದಿಲ್ಲ. ಏಕೆಂದರೆ ಇಲ್ಲಿನ ಸಾಂಸ್ಕೃತಿಕ ಪ್ರದೇಶ ತೀರಾ ದೊಡ್ಡದು ಮತ್ತು ಪ್ರತಿಯೊಂದರಲ್ಲೂ ಬೇರೆ ಬೇರೆ ಬಗೆಯ ಸಾಮಾಜಿಕ ಮತ್ತು ರಾಜಕೀಯ ಸಂಘಟನೆಗಳಿವೆ. ಅಮೆರಿಕದ ಮಾನವಶಾಸ್ತ್ರಜ್ಞನಾದ ಮೆಲ್‌ಹಿಲ್ಲಿ ಜೆ ಹೆಸ್‌ಹೌಸ್ಟ್ ಮತ್ತು ತರುವಾಯ ಜಿ.ಪಿ.ಮುರ್‌ಡೋಕ್ ಮಾಡಿದ ವರ್ಗೀಕರಣಗಳಿವೆ. ಜಿ.ಪಿ. ಮುರ್‌ಡೋಕ್ ಅವರು ಭಾಷಾವಾರು ಮತ್ತು ಜನಾಂಗೀಯ ಇತಿಹಾಸ ಗುಂಪುಗಳಾಗಿ ಗುರುತಿಸಿದ ಜನರ ಸಣ್ಣ ಗುಂಪುಗಳನ್ನು ಘಟಕಗಳಾಗಿ ತೆಗೆದುಕೊಂಡಿರುತ್ತಾರೆ. ಈ ಬಹುಸಂಖ್ಯಾತ ವಿಭಾಗಗಳನ್ನು ಬಿಟ್ಟು ನೋಡಲು ಇಚ್ಛಿಸುವುದಾದರೆ ಆಗ ಪ್ರಮುಖ ಪ್ರದೇಶಗಳೆಂದರೆ (ಉತ್ತರ ಆಫ್ರಿಕಾವನ್ನು ಬಿಟ್ಟು) ಪಶ್ಚಿಮ, ಪಶ್ಚಿಮಮಧ್ಯ, ಪೂರ್ವ ಮತ್ತು ಮಧ್ಯ ಹಾಗೂ ದಕ್ಷಿಣ ಆಫ್ರಿಕಾ.

### ಪಶ್ಚಿಮ ಆಫ್ರಿಕಾ

ಪಶ್ಚಿಮ ಆಫ್ರಿಕಾದಲ್ಲಿ ಗಣನೀಯವಾಗಿ ವಿಭಿನ್ನ ಜನಾಂಗೀಯ ಮತ್ತು ಸಾಂಸ್ಕೃತಿಕ ಗುಂಪುಗಳಿವೆ. ಈ ಪ್ರದೇಶ ಎರಡು ಪ್ರಮುಖ ವಲಯಗಳನ್ನು ಹೊಂದಿದೆ. ೧. ದಕ್ಷಿಣ ಸಹರಾ ಗಡಿ ನಾಡಿನ ಉದ್ದಕ್ಕೂ ಸಹರಾ ಮತ್ತು ೨. ಅಟ್ಲಾಂಟಿಕ್ (ಪಶ್ಚಿಮ) ಕರಾವಳಿ ಉದ್ದಕ್ಕೂ ವರ್ಷಾರಣ್ಯ. ಸಹರಾ ವಲಯದ ಪ್ರಮುಖ ಬೆಳೆಗಳೆಂದರೆ ಮಿಲೆಟ್, ಜೋಳ, ಮುಸುಕಿನ ಜೋಳ, ಎಳ್ಳು ಮತ್ತು ಬೇಳೆಕಾಳುಗಳು. ಗಾಂಬಿಯಾದಿಂದ ಲೈಬಿರಿಯಾವರೆಗಿನ ಪಶ್ಚಿಮ ಭಾಗದಲ್ಲಿ ಗದ್ದೆ ಮತ್ತು ಹೊಲದ ಭತ್ತ ಮುಖ್ಯ ಬೆಳೆ. ಸವನ್ನಾ ಪ್ರದೇಶದಲ್ಲಿ ಹತ್ತಿಯನ್ನು ಬೆಳೆಯುತ್ತಾರೆ ಮತ್ತು ಮಗ್ಗವು ಪಾರಂಪರಿಕವಾದದ್ದು. ಅವರ ದೇಶಿ ಹಸ್ತಕಲೆ ಎಂದರೆ ಹಿತ್ತಾಳೆ ಮತ್ತು ಕಂಚಿನ ಎರಕ ಹುಯ್ಯುವುದು, ಬೆಳ್ಳಿ ಹಾಗೂ ಚಿನ್ನದ ಕುಸುರಿ ಕೆಲಸ, ಚರ್ಮಗಾರಿಕೆ, ಮಣ್ಣಿನ ಇಟ್ಟಿಗೆಯಿಂದ ಕಮಾನು ಛಾವಣಿ ಹಾಗೂ ಕಮಾನು ಗೋಡೆಗಳುಳ್ಳ ಮನೆ ಕಟ್ಟುವುದು. ಇವರ ಎರಡು ಬಹುಮುಖ್ಯ ಪ್ರಾಣಿಗಳೆಂದರೆ ಹಸು ಮತ್ತು ಕುದುರೆ. ಕುದರೆಯನ್ನು ವ್ಯಾಪಾರ, ಸಾರಿಗೆ ಮತ್ತು ಈ ಹಿಂದೆ ಯುದ್ಧಗಳಲ್ಲಿ ಬಳಸುತ್ತಿದ್ದರು. ಅರಣ್ಯ ವಲಯಗಳಲ್ಲಿ ಗೆಡ್ಡೆಗೆಣಸುಗಳು (ಯಾಮ್ ಮತ್ತು ಕೋಕೋ

ಯಾಮ್), ಎಣ್ಣೆ ಹಾಗೂ ರಫಿಯಾ ತಾಳೆಗಳು ಮುಖ್ಯ ಬೆಳೆ. ಹಣ್ಣುಗಳು, ಕೋಕೋ, ಮೆಣಸು, ಕೋಲ ಇವು ಅವರ ಜೀವನೋಪಾಯಕ್ಕಾಗಿ ಮತ್ತು ವ್ಯಾಪಾರಕ್ಕಾಗಿ ಬಹಳ ಮುಖ್ಯವಾದವು. ಸಾಕು ಪ್ರಾಣಿಗಳೆಂದರೆ, ಮೇಕೆ, ಹಂದಿ, ಕೋಳಿ ಮತ್ತು ಇನ್ನು ಕೆಲವು ಪ್ರದೇಶಗಳಲ್ಲಿ ಕುಳ್ಳ ದನಕರುಗಳು. ಅರಣ್ಯ ಮತ್ತು ಕರಾವಳಿ ಪ್ರದೇಶದಲ್ಲಿ ಬಾಕ್ಸೈಟ್, ವಜ್ರಗಳು ಮತ್ತು ಚಿನ್ನದಂತಹ ಪ್ರಮುಖ ಖನಿಜಗಳನ್ನು ಹೊಂದಿದೆ. ಮರದ ಕೆತ್ತನೆ, ಕುಂಭಗಾರಿಕೆ, ಲೋಹದ ಎರಕ ಮತ್ತು ಕಬ್ಬಿಣದ ಕುಲುಮೆಗಾರಿಕೆ ಬಹಳವಿದೆ. ಬಹುಪಾಲು ಪರಂಪರಾಗತ ಸಮಾಜಗಳಲ್ಲಿ ಅನೇಕ ಶಕ್ತಿಶಾಲಿ ರಾಜ್ಯಗಳಿವೆ. ಅವುಗಳ ಸುತ್ತ ಚಿಕ್ಕಪುಟ್ಟ ಹಾಗೂ ರಾಜಕೀಯವಾಗಿ ದುರ್ಬಲವಾದ ಸಮುದಾಯಗಳಿವೆ. ಸವನ್ನಾದ ಮುಖ್ಯ ಜನತೆಯಲ್ಲಿ ಮೂರು ಪ್ರಮುಖ ಗುಂಪುಗಳಿವೆ. ಅಂದರೆ ಮಂಡೆ(ಸೆನಗಲ್ ಮತ್ತು ಮಾಲಿಯಲ್ಲಿ ಇದರಲ್ಲಿ ಬುಡಕಟ್ಟುಗಳ ಜನರು ಮಾಲಿಂಕೆ, ಸೋನಿಂಕೆ ಮತ್ತಿತರರು ಸೇರಿರುತ್ತಾರೆ). ಸವನ್ನಾದ ಪೂರ್ವ ವಲಯದಲ್ಲಿ ವೊಲ್ಟಾನಿಕ್ ಗುಂಪು (ಸೆನ್ನಫೋ ಲೋಬಿ, ಗ್ರುಂಷಿ, ಡಾಗನ್ ಮತ್ತು ಮೊಸ್ಸಿ), ಉತ್ತರ ನೈಜೀರಿಯಾದಲ್ಲಿ ನೈಜರ್ ಮತ್ತು ಕಮರೂಗ್ ಹಾಗೂ ಪ್ರಧಾನವಾಗಿ ಮುಸ್ಲಿಮರಲ್ಲದ ಅನೇಕ ಸಣ್ಣ ಬುಡಕಟ್ಟುಗಳು. ಈ ಪ್ರದೇಶದುದ್ದಕ್ಕೂ ಫುಲಾನಿ ಗುಂಪುಗಳನ್ನು ನೋಡುತ್ತೇವೆ. ಪ್ರಮುಖವಾಗಿ ಇವರು ದನಗಾಹಿ ಮುಸ್ಲಿಂ ಜನರು. ಇವರು ದೇಶೀಯ ಜನರನ್ನು(ಹೌಸ್)ಗೆದ್ದು ನೆಲೆಸಿರುವಂತಿದೆ. ಸಹರಾದ ಅಂಚಿನಲ್ಲಿ ಅನೇಕ ಬುಡಕಟ್ಟು ಭಾಷೆ ಮಾತನಾಡುವ ಜನರಿದ್ದಾರೆ. ಅವರನ್ನು ಒಟ್ಟಾಗಿ ಕುವರೆಗ್, ಜಾಡ್ ಸರೋವರದ ಕಾನ್ಮಿ ಮತ್ತು ಅನೇಕ ಸೆಮೆಡಿಕ್ ಮಾತನಾಡುವ ಬೆಡೌವಿನ್ ಅರಬ್ ಜನರೆಂದು ಕರೆಯಲಾಗುತ್ತದೆ. ಕರಾವಳಿ ವಲಯದಲ್ಲಿರುವ ವಿಶಾಲ ಸಮುದಾಯಗಳೂ ಬಹುಪಾಲು ರಾಜ್ಯಗಳೇ ಆಗಿವೆ. ನೈಜೀರಿಯಾದಲ್ಲಿ ಇಗ್ಬೋ ಮತ್ತು ಇದೈಬೋಗಳೂ ಇರುತ್ತಾರೆ. ಇವರು ಅನೇಕ ಸ್ವಾಯತ್ತ ರಾಜ್ಯಗಳಾಗಿ ಸಂಘಟಿತರಾಗಿರುತ್ತಾರೆ. ಈಡೋ ಮತ್ತಿತರ ಯರೂಬಾದ ಶಕ್ತಿಶಾಲಿ ರಾಜ್ಯಗಳು ಇರುತ್ತವೆ. ಪಶ್ಚಿಮಕ್ಕೆ ಹೋದರೆ ಬೆನಿನ್‌ನ ಫಾನ್ ಅಕಾನ್ ಒಕ್ಕೂಟದ ವಿವಿಧ ಜನರು ಅದರಲ್ಲೂ ಬಹುಪಾಲು ಘಾನಾದಲ್ಲಿ ಇರುತ್ತಾರೆ. ಇವರಲ್ಲಿ ಬಲುದೊಡ್ಡ ಗುಂಪೆಂದರೆ ಅರೊಂಟಿ, ಈವ್, ಗಾ, ಘಾಂಟಿ ಮತ್ತು ಕರಾವಳಿಯ ಅನಯಿ; ಸಿಯಾರಾ ಲಿಯೋನ್‌ನ ಮೆಂಡೆ ಮತ್ತು ಟೆಮ್ನೆ ಲೈಬೀರಿಯಾದ ಕ್ರು, ಸೆನೆಗಲ್‌ನ ವುಲೋಫ್, ಸೆರೆರ್, ಡ್ಯೂಲ್ ಮತ್ತಿರರು; ಸಿಯೋನ್ನೈ ಲಿಯೋನ್ ಹಾಗೂ ಲೈಬಿರಿಯಾದ ಕ್ರಿಯಾಲರು ಇವರು ನವಜಗತ್ತಿನ ವಿಮುಕ್ತ ಗುಲಾಮರ ವಂಶದವರು.

### ಪಶ್ಚಿಮ ಮಧ್ಯ ಆಫ್ರಿಕಾ

ಪಶ್ಚಿಮ ಮಧ್ಯ ಆಫ್ರಿಕಾವು ಉತ್ತರದಲ್ಲಿ ಚಾಡ್‌ನ ಸವನ್ನಾ, ಉಬಾಂಗಿ ಮತ್ತು ಸೂಡಾನ್‌ನಿಂದ ನೈಲ್‌ವರೆಗೂ ಹಬ್ಬುತ್ತದೆ. ದಕ್ಷಿಣದಲ್ಲಿ ಇದು ಬಹುಪಾಲು ಕಾಂಗೋವಿನ ಅರಣ್ಯ ಭೂಮಿ. ಜನಾಂಗೀಯವಾಗಿ ಇದು ಉತ್ತರದಲ್ಲಿ ಅರಬ್ಬರೊಂದಿಗೆ ಕಾಂಗೋ

ಮತ್ತು ಗಬಾನ್‌ನಲ್ಲಿ ಪಿಗ್ಮಿಗಳೊಂದಿಗೆ ಹಾಗೂ ಇನ್ನೂ ದಕ್ಷಿಣದಲ್ಲಿ ಸುಡಾನ್ ಹಾಗೂ ಬಂಟು ಮಾತನಾಡುವ ಜನರೊಂದಿಗೆ ಬೆರೆತು ಹೋಗಿದೆ. ಈ ಇಡೀ ಪ್ರದೇಶದ ಪ್ರಧಾನ ಅರ್ಥವ್ಯವಸ್ಥೆ ವ್ಯವಸಾಯದ್ದಾಗಿದೆ. ಉತ್ತರ ಸವನ್ನಾ ಕಾಮರೂನ್ ಪ್ರದೇಶದ ಅನೇಕ ಜನರನ್ನು ಹೊಂದಿದೆ. ಇವರು ಸಣ್ಣ ಪುಟ್ಟ ರಾಜ್ಯಗಳಾಗಿ ವಿಂಗಡಿತರಾಗಿದ್ದಾರೆ. ಇವರಲ್ಲಿ ಬಮರಿಕೆ ಬುಡಕಟ್ಟಿನವರು ಬಹುಸಂಖ್ಯಾತರಾಗಿದ್ದಾರೆ. ಕಮರೂನ್ ಹಾಗೂ ನೈಲ್ ನಡುವೆ ಸಾರ, ಮಾಂಗ್‌ಬೆಟು ಮತ್ತು ಅಜೆಂಡೆಯಂತಹ ಸುಡಾನಿಕ್ ಮಾತನಾಡುವ ಜನರಿದ್ದಾರೆ. ದಕ್ಷಿಣಕ್ಕೆ ಹೋದಂತೆ ಬಂಟು ಜನರು ಸಿಗುತ್ತಾರೆ. ಅವರಲ್ಲಿ ಗೆಬಾನ್ ಮತ್ತು ಕಾಂಗೋವಿನ ಫಾಂಗ್, ಮಾಂಗೋ, ಕುಬಾ ಲುಬಾ, ಕಾಂಗೋ ಮತ್ತು ಅಂಗೋಲಾದ ಜೊಕ್ವೆಗಳಿದ್ದಾರೆ.

## ಪೂರ್ವ ಆಫ್ರಿಕಾ

ಈ ಪ್ರದೇಶ ಅನೇಕ ಜೀವಿ ಪರಿಸರ ಹಾಗೂ ಸಾಂಸ್ಕೃತಿಕ ಪ್ರದೇಶಗಳನ್ನು ಹೊಂದಿದೆ. ಉತ್ತರ ಮತ್ತು ಪೂರ್ವದಲ್ಲಿ ಇಥಿಯೋಫಿಯಾದ ಎತ್ತರ ಭೂಮಿಗಳಿಂದ ವಿಭಜಿತವಾದ ಸುಡಾನ್ ಹಾಗೂ ಸೋಮಾಲಿಯಾದ ಒಣ ಭೂಮಿಗಳಿವೆ. ಮಧ್ಯದಲ್ಲಿ ಕಿನ್ಯಾಪರ್ವತ ಮತ್ತು ಕಿಲಿಮಂಜಾರೋ ಸುತ್ತಮುತ್ತಲ ಮಹಾಸರೋವರಗಳು ಹಾಗೂ ಎತ್ತರ ಭೂಮಿಗಳ ಫಲವತ್ತಾದ ಪ್ರದೇಶಗಳಿವೆ. ಉಳಿದ ಭಾಗವೆಂದರೆ ಸವನ್ನಾ, ಉತ್ತರದಿಂದ ದಕ್ಷಿಣಕ್ಕೆ ಹಬ್ಬಿರುವ ಗ್ರೇಡ್ ರಿಫ್ಟ್ ಕಣಿವೆಯ ತಗ್ಗುಪ್ರದೇಶ. ಫಲವತ್ತಾದ ಪ್ರದೇಶ ಹತ್ತಿ ಮತ್ತು ಕಾಫಿಯಂತಹ ನಗದು ಬೆಳೆಗಳನ್ನು ಉತ್ಪಾದಿಸುತ್ತದೆ. ಸಾಂಪ್ರದಾಯಿಕ ಮುಖ್ಯ ಆಹಾರಗಳೆಂದರೆ ಆಹಾರ ಧಾನ್ಯಗಳು. ಆದರೆ ವಿಕ್ಟೋರಿಯಾ ಸರೋವರದ ಜನರಿಗೆ ಬಾಳೆಹಣ್ಣು, ಗೆಡ್ಡೆಗೆಣಸುಗಳೂ ಸಹ ತಿಳಿದಿವೆ. ಈ ಪ್ರದೇಶದುದ್ದಕ್ಕೂ ದನಕರು, ಮೇಕೆ, ಕುರಿ, ಕೋಳಿ, ಕತ್ತೆ, ನಾಯಿಗಳು ಕಾಣಬರುತ್ತವೆ. ಸುಡಾನ್, ಸೋಮಾಲಿಯಾ ಮತ್ತು ಕೀನ್ಯಾ ಹಾಗೂ ಟಾಂಜೇನಿಯಾಗಳ ಮಧ್ಯ ಮೈದಾನ ಭಾಗಗಳಲ್ಲಿ ಗೋವಳ ಸಮುದಾಯವೂ ಕಾಣಬರುತ್ತದೆ. ಈ ಸಂಕೀರ್ಣ ಜನಾಂಗೀಯ ಸಮುದಾಯಗಳುಳ್ಳ ಪ್ರದೇಶದಲ್ಲಿ ನೈಲ್ ಕಣಿವೆಯ ಪಾರಾಗೈಲೋಟಿಕ್ ಮಾತನಾಡುವ ಗೋವಳ ವರ್ಗದವರು (ಶಿಲ್ಲುಕ್, ದಿಂಕ, ಲುಓ ಲಾಂಗೋ ಮತ್ತು ಈ ಹಿಂದೆ ನೈಲೋಟ್‌ಗಳೆಂದು ಕರೆಯಲ್ಪಡುತ್ತಿದ್ದ ಇತರರು) ಮಧ್ಯ ಮೈದಾನದವರು(ನಿಲೋಹಿ ಮೈಟ್‌ಗಳೆಂದು ಈ ಹಿಂದೆ ಕರೆಯುತ್ತಿದ್ದ ಮಸಾಯಿ, ನಂದಿ ಮತ್ತಿತರರು ಹಾಗೂ ಆಫ್ರಿಕಾದ ಕೊಂಬಿನ ಸೋಮಾಲಿ ಮತ್ತು ಗಲ್ಲ ಎಂಬ ಕುಶೈಟಿಕ್ ಮಾತನಾಡುವವರು, ಇಂಥಿಯೋಫಿಯಾದಲ್ಲೂ ಸೆಮೆಟಿಕ್ ಮಾತನಾಡುವ ಅಮಹರ ಮತ್ತಿತರರು. ಈ ಪ್ರದೇಶದ ಉಳಿದ ಬಹಳಷ್ಟು ಜನರು ಬಂಟು ಭಾಷೆ ಮಾತನಾಡುವವರು. ಇವರು ರಾಜಕೀಯ ಮತ್ತಿತರ ಸಾಂಸ್ಕೃತಿಕ ಗುಣಲಕ್ಷಣಗಳಲ್ಲಿ ವೈವಿಧ್ಯವುಳ್ಳವರು. ಆದರೆ ಇವರೆಲ್ಲಾ ರೈತರು. ಮಹಾಸರೋವರಗಳ ಪ್ರದೇಶಗಳಲ್ಲಿ ಈ ಹಿಂದೆ ಬಲಿಷ್ಠರಾಗಿದ್ದ ಅನೇಕ ಬಂಟು ರಾಜ್ಯಗಳಿದ್ದವು(ಗಾಂಡ, ನಯಾರೋ, ವಾರ್ಯಾಂಡ,

ರುಂಡಿ ಮತ್ತು ಇತರೆ). ಕೀನ್ಯಾ ಮೇಲುನಾಡಿನಲ್ಲಿ ಕಿಕುಯು ಲುಹ್ಯಾ ಮತ್ತಿತರರಿದ್ದಾರೆ. ಕರಾವಳಿ ಪ್ರದೇಶದಲ್ಲಿ ಸ್ವಾಹಿಲಿ ಭಾಷೆ ಮಾತನಾಡುವ ವಿವಿಧ ಬುಡಕಟ್ಟುಗಳಿವೆ. ಟಾಂಜೇನಿಯಾದಲ್ಲಿ ಜಾಗಾ, ನ್ಯಾಮವೇಜಿ, ಸುಕುಮ ಇನ್ನೂ ಅನೇಕರಿದ್ದಾರೆ. ಇತರ ಕೆಲವು ಜನಾಂಗೀಯ ಗುಂಪುಗಳ ಸಣ್ಣ ಪಳೆಯುಳಿಕೆಗಳಿವೆ. ಇವುಗಳೆಂದರೆ ಬೇಟೆಗಾರ ಬಕ್ಕೈಕ್ ಅಥವಾ ಡೊರೋಟೋ, ಹಾಡ್ಜ ಮತ್ತು ಕೆಲವು ಪಿಗ್ಮಿಗಳು. ಕಡಲ ತೀರದಲ್ಲಿ ಒಂದು ಕಾಲದಲ್ಲಿ ಜಾಂಜಿಬಾರ್ ಅನ್ನು ನೆಲೆಯಾಗಿ ಹೊಂದಿದ್ದ ಹಾಗೂ ರಾಜಕೀಯವಾಗಿ ಬಲಿಷ್ಠರಾಗಿದ್ದ ಅರಬ್ಬರಿದ್ದಾರೆ.

## ಮಧ್ಯ ಮತ್ತು ದಕ್ಷಿಣ ಆಫ್ರಿಕಾ

ಮಧ್ಯ ಮತ್ತು ದಕ್ಷಿಣ ಆಫ್ರಿಕಾದ ಬಹುಭಾಗ ತೆರೆದ ಒಣ ಸವನ್ನಾ ಹುಲ್ಲುಗಾವಲು ಪ್ರದೇಶವಾಗಿದ್ದು ಇದೊಂದು ವಿಶಾಲವಾದ ಸಾಂಸ್ಕೃತಿಕ ಪ್ರದೇಶ ಎಂದು ಪರಿಗಣಿಸಲಾಗುತ್ತದೆ. ವಾಯುವ್ಯಕ್ಕೆ ಕಾಂಗೋ ಅರಣ್ಯದ ಅಂಚುಗಳಿವೆ. ನೈರುತ್ಯಕ್ಕೆ ಭೂಮಿ ಹೆಚ್ಚು ಶುಷ್ಕವಾಗಿದೆ ಮತ್ತು ದಕ್ಷಿಣ ಆಫ್ರಿಕಾದ ಕರಾವಳಿ ಪ್ರದೇಶ ಹೊಂದಿದೆ. ಮೊಜಾಂಬಿಕ್ ಹೆಚ್ಚು ಫಲವತ್ತಾದದ್ದು ಮತ್ತು ಅದರಲ್ಲಿ ಬಹುಪಾಲು ಮೆಡಿಟರೇನಿಯನ್ ಹವಾಮಾನ ಹೊಂದಿದೆ. ಈ ಪ್ರದೇಶದಲ್ಲಿ ಒಂದಾನೊಂದು ಕಾಲದಲ್ಲಿ ಸಾನ್(ಬುಷ್ ಮೆನ್) ಮತ್ತು ಖೋಯಿಖೋಯಿನ್(ಹಾಟೆನ್‌ಟಾಟ್‌ಗಳು) ವಾಸಿಸುತ್ತಿದ್ದರು. ಇಬ್ಬರೂ ಖೋಯಿಷನ್ ಮಾತನಾಡುವ ಜನರು. ಬುಷ್‌ಮನ್‌ಗಳು ಬೇಟೆಗಾರರು ಮತ್ತು ಖೋಯಿ ಖೋಯಿನ್‌ಗಳು ಗೋವಳರು. ಸಾನ್‌ಗಳು ಇಂದು ನೈರುತ್ಯ ಆಫ್ರಿಕಾದ ಒಣ ಭಾಗಗಳು ಮತ್ತು ಬೋಟ್ಸ್‌ವಾನಾಗಳಿಗೆ ಸೀಮಿತರಾಗಿದ್ದಾರೆ. ಬಹುಪಾಲು ಖೋಯಿಖೋಯಿನ್‌ಗಳು ಐರೋಪ್ಯ ಮತ್ತು ಏಷ್ಯನ್ ಸಂಕರಗಳೊಂದಿಗೆ ಕೇಪ್ ಪ್ರಾಂತದಲ್ಲಿನ ಕೇಪ್ ವರ್ಣದ ಜನರೊಂದಿಗೆ ಬೆರೆತುಹೋಗಿದ್ದಾರೆ. ಇತರ ದೇಶೀ ಜನರೆಂದರೆ ಬಂಟು ಮಾತನಾಡುವ ನೀಗ್ರೋ ಬುಡಕಟ್ಟಿನ ಜನರು. ಇವರು ಮೂಲತಃ ಕಮರೂನ್ ಪ್ರದೇಶದಿಂದ ಬಂದವರು. ಸುಮಾರು ೨೦೦೦ ವರ್ಷಗಳ ಹಿಂದೆ ಈ ಪ್ರದೇಶದುದ್ದಕ್ಕೂ ಹರಡಿಕೊಂಡರು. ಮಂಚೂಣಿಯಲ್ಲಿದ್ದ ಭಾಷಾ ದೃಷ್ಟಿಯಿಂದ ದಕ್ಷಿಣ ಬಂಟು ಎಂದು ಕರೆಯಲಾದ ಜನಾಂಗದವರು ತಮಗಿಂತ ಮುಂಚೆ ಇದ್ದ ಖೋಯಿಸನ್‌ಗಳನ್ನು ಹೊಡೆದಟ್ಟಿದರು ಮತ್ತು ಅವರ ಭಾಷೆಯಲ್ಲಿದ್ದ ಕೀರಲು ಕಂಠ್ಯಗರನ್ನು ತಮ್ಮ ಭಾಷೆಗೆ ಸೇರಿಸಿಕೊಂಡರು. ೧೮ನೆಯ ಮತ್ತು ೧೯ನೆಯ ಶತಮಾನದಲ್ಲಿ ಐರೋಪ್ಯರೊಂದಿಗೆ ಸಂಪರ್ಕಕ್ಕೆ ಬಂದ ಮೇಲೆ ಬಂಟು ಮಾತನಾಡುವ ಜನರು ತಮ್ಮ ತಮ್ಮಲ್ಲೇ ಒಬ್ಬರು ಮೇಲೊಬ್ಬರು ತಿರುಗಿ ಬಿದ್ದರು. ಜುಲು, ಸ್ವಾಜಿ, ಸ್ವಾನ, ಡೆಬೆಲೆ, ಸೋಕೋ ಮತ್ತಿತರ ವಿಜೇತ ರಾಜ್ಯಗಳನ್ನು ಸ್ಥಾಪಿಸಿದರು.

ಉತ್ತರದಲ್ಲಿ ಕಾಂಗೋದಿಂದ ಮಾಲವಿವರೆಗೆ ಮಧ್ಯ ಬಂಟು ಭಾಷೆಯ ಜನರಿದ್ದಾರೆ. ಜೊತೆಗೆ ತಮ್ಮ ಬಂಧುತ್ವ ಪದ್ಧತಿಯಲ್ಲಿ ದಕ್ಷಿಣ ಬಂಟು ಭಾಷಿಕ ಜನರಿಗಿಂತ ಸ್ಪಷ್ಟ ಭಿನ್ನತೆಯುಳ್ಳ ಅನೇಕ ಬಗೆಯ ರಾಜಕೀಯ ಪದ್ಧತಿಗಳುಳ್ಳ ರೈತರು ಸಹ ಇದ್ದಾರೆ.

ಇವರಲ್ಲಿ ಬೆಂಬಾ, ತೊಂಗ, ಚೀವಾ ನ್ಯಾನ್ಜ, ಯಾವೊ ಮತ್ತಿತರರು ಪ್ರಮುಖರು. ನೈರುತ್ಯ ಆಫ್ರಿಕಾದಲ್ಲಿ ನೈರುತ್ಯ ಬಂಟುಗಳು ಇದ್ದಾರೆ. ಇವರಲ್ಲಿ ಒವಾಂಬೋ ಮತ್ತು ಹೆರೇರೋಗಳು ಪ್ರಮುಖರು.

### ಮಡ್ಗಾಸ್ಕರ್

ಅಂತಿಮವಾಗಿ ಮಡ್ಗಾಸ್ಕರ್ ದ್ವೀಪ ಒಂದು ವಿಶಿಷ್ಟ ಸಾಂಸ್ಕೃತಿಕ ಪ್ರದೇಶವಾಗಿದೆ. ವಿವಿಧ ಮಲಗಾಸೆ ಬುಡಕಟ್ಟಿನ ಜನರು ಅವರಲ್ಲಿ ರಾಜಕೀಯವಾಗಿ ಪ್ರಮುಖರೆಂದರೆ ಮೆರಿನಾ. ಇವರು ಇಂಡೋನೇಷಿಯಾ ಮೂಲದವರು. ಇವರು ಬಹುಶಃ ಕ್ರಿ.ಶ.೫ ಮತ್ತು ೬ನೆಯ ಶತಮಾನದಲ್ಲಿ ಹಿಂದೂ ಮಹಾಸಾಗರ ದಾಟಿ ವಲಸೆ ಬಂದಿರುವಂತಿದೆ.

### ಸಮಾಜದ ವಿವಿಧ ಆಯಾಮಗಳು

ಆಫ್ರಿಕಾದ ಸಮಾಜಗಳು ಸದಾ ಒಂದು ನಿಧಾನಗತಿಯ ಬದಲಾವಣೆಯಲ್ಲೇ ನಿರತವಾಗಿವೆ. ಈ ಅನೇಕ ಸಮಾಜಗಳು, ಕಿರುಗಾತ್ರದ ಸಂಕುಚಿತ ವ್ಯಾಪ್ತಿಯ ಸಾಂಪ್ರದಾಯಿಕ ಸಮಾಜದಿಂದ ವಿಶ್ವಾದ್ಯಂತದ ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳ ಒಂದು ಭಾಗವಾದ ವಿಶಾಲ ವ್ಯಾಪ್ತಿಯ ರೂಪಗಳಿಗೆ ಬದಲಾಗುತ್ತಿವೆ. ಈ ಬದಲಾವಣೆಯನ್ನು ಸಾಂಪ್ರದಾಯಿಕ ಸಮಾಜದ 'ವಿಘಟನೆ' ಎಂದು ಕರೆಯಲಾಗುತ್ತದೆ.

### ಅರ್ಥವ್ಯವಸ್ಥೆ

ಆಫ್ರಿಕಾದ ಬಹುಪಾಲು ಮಂದಿ ಸಣ್ಣ ಪ್ರಮಾಣದ ರೈತರು, ಸಾಂಪ್ರದಾಯಿಕ ತಂತ್ರಜ್ಞಾನ, ಸಾಧನ ಮತ್ತು ಸರಳ ಸಂಪನ್ಮೂಲ ಅವಲಂಬಿಸಿದವರು. ಸಂಪರ್ಕ ಸಾಧನಗಳು ಚೆನ್ನಾಗಿ ಇಲ್ಲದ ಕಾರಣ ವ್ಯಾಪಕ ವ್ಯಾಪಾರದಲ್ಲಿ ನಿರತರಾಗಿರಲಿಲ್ಲ. ಪರಂಪರಾಗತವಾಗಿ ಅವರ ಉತ್ಪನ್ನಗಳೆಲ್ಲಾ ಕೇವಲ ಜೀವನಾಧಾರಕ್ಕಾಗಿ ಇದ್ದವು. ಸಾಮಾನ್ಯವಾಗಿ ಉತ್ಪಾದಕ ಮತ್ತು ವಿತರಕ ಘಟಕ ಎಂದರೆ ಸಮುದಾಯ ಅಥವಾ ಕುಟುಂಬ ಆಗಿರುತ್ತಿದ್ದವು. ಇವು ಮೂಲತಃ ಅರ್ಥವ್ಯವಸ್ಥೆಯ ಘಟಕವಾಗಿದ್ದಷ್ಟೇ ಅಲ್ಲ ಕೌಟುಂಬಿಕ, ರಾಜಕೀಯ ಮತ್ತು ಧಾರ್ಮಿಕ ಘಟಕಗಳೂ ಆಗಿದ್ದವು. ಒಂದು ನಿರ್ದಿಷ್ಟ ಪ್ರದೇಶದೊಳಗೆ ಸಾಂಪ್ರದಾಯಿಕವಾಗಿ ಜೀವನಮಟ್ಟ ಒಂದೇ ಸಮನಾಗಿರುತ್ತಿತ್ತು. ಹಿಂದೆ ಮಾರುಕಟ್ಟೆಗಳು ಇರುತ್ತಿರಲಿಲ್ಲ. ಹಣವು ಯಾವುದೇ ರೂಪದಲ್ಲಿ ಕಾಣುತ್ತಿರಲಿಲ್ಲ. ವ್ಯಾಪಾರ ವಿನಿಮಯ ಕೊಡುಗೆ ವಿನಿಮಯದಿಂದ ನಡೆಯುತ್ತಿತ್ತು ಕೂಲಿ ಕೊಟ್ಟು ಕೆಲಸ ಮಾಡಿಸುವುದು ಅವರಿಗೆ ತಿಳಿದೇ ಇರಲಿಲ್ಲ. ಬಹುಪಾಲು ಎಲ್ಲ ಕಡೆಯೂ ಅದು ಹೊಲಗದ್ದೆ ಕೆಲಸವಿರಲಿ ಅಥವಾ ಇತರ ಕೆಲಸವಿರಲಿ ಪರಸ್ಪರ ಸಹಕಾರ ಇರುತ್ತಿತ್ತು. ಕೆಲವು ಅಪವಾದಗಳೆಂದರೆ ಬಲುದೂರದ ವ್ಯಾಪಾರ ನಡೆಸುತ್ತಿದ್ದ ಮತ್ತು ವ್ಯಾಪಕ ವಿನಿಮಯ ಹಾಗೂ ಸಂಪರ್ಕ ಮತ್ತು ಶತಮಾನಗಳಿಂದ ವ್ಯಾಪಾರ ಮಾರ್ಗಗಳನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಒಂದು ರಾಜಕೀಯ ವ್ಯವಸ್ಥೆಯನ್ನು ರೂಪಿಸಿಕೊಂಡು ಬಂದ ಎರಡು ಸಮಾಜಗಳು ವಸಾಹತು ಆಡಳಿತ ಸ್ಥಾಪಿಸಿ ಆದ ಮೇಲೆ ಯುರೋಪಿನಲ್ಲಿ ನವಜಗತ್ತು ಹಾಗೂ ಹಿಂದೂ ಮಹಾಸಾಗರ ದಾಟಿ ಇತರೆ

ಮಾರುಕಟ್ಟೆಗಳು ಬೆಳೆದದ್ದರಿಂದ ಈ ಸಾಮ್ರಾಜ್ಯಗಳು ಮುಹೊರ ಮಾರುಕಟ್ಟೆಗಳನ್ನು ನಿಯಂತ್ರಿಸುವಲ್ಲಿ ತಮ್ಮ ಮಹತ್ವವನ್ನು ಕಳೆದುಕೊಂಡವು. ಮಹತ್ವದ ಬೆಳವಣಿಗೆಗಳೆಂದರೆ ಅಮೆರಿಕನ್ನರು ಮತ್ತು ಪೂರ್ವ ಪ್ರದೇಶಗಳಿಗೆ ಗುಲಾಮ ವ್ಯಾಪಾರ. ಖನಿಜಗಳು ಮತ್ತು ಲಾಭದಾಯಕ ಬೆಳೆಗಳನ್ನು ಪತ್ತೆ ಹಚ್ಚಿ ಅವುಗಳ ಲಾಭ ಪಡೆದುಕೊಂಡದ್ದು. ಅನೇಕ ವಸಾಹತು ರಾಷ್ಟ್ರಗಳಲ್ಲಿ ತೆರಿಗೆ ಪದ್ಧತಿಯನ್ನು ಜಾರಿಗೆ ತಂದದ್ದರಿಂದ ಮತ್ತು ಅದನ್ನು ನಗದಾಗಿಯೇ ಸಂದಾಯ ಮಾಡ ಬೇಕೆಂದು ಒತ್ತಾಯಿಸಿದ್ದರಿಂದ ಜನರು ನಗದು ಬೆಳೆಗಳನ್ನು ಬೆಳೆಯುವಂತೆ ಒತ್ತಾಯವನ್ನು ತಂದಿತು. ಇಲ್ಲವೇ ತಮ್ಮ ಶ್ರಮ ದುಡಿಮೆಯನ್ನು ಕೈಗಾರಿಕಾ ಅಥವಾ ಆಡಳಿತ ನಗರಗಳಲ್ಲಿ ಮಾರಿಕೊಳ್ಳುವಂತಾಯಿತು. ಇದರ ಪರಿಣಾಮವಾಗಿ ರೈತರ ಉತ್ಪಾದನೆಯಲ್ಲಿ ಬೆಳವಣಿಗೆ ಮತ್ತು ಗ್ರಾಹಕ ಸಾಮಗ್ರಿಗಳ ಆಮದು ಹೆಚ್ಚಾಯಿತು. ಸಾಂಪ್ರದಾಯಿಕವಾಗಿ ಇದ್ದ ಸಮಾನ ಜೀವನಮಟ್ಟ ಹೊರಟುಹೋಗಿ ಬಡವ-ಬಲ್ಲಿದ ಎಂಬ ತಾರತಮ್ಯ ಎದ್ದು ಕಾಣತೊಡಗಿತು. ಹಣ ಮತ್ತು ಮಾರುಕಟ್ಟೆಗಳನ್ನು ಆಧರಿಸಿ ವಿಶಾಲ ಶ್ರೇಣಿಯ ವಿನಿಮಯ ಪದ್ಧತಿಗಳು ಬೆಳೆದದ್ದರಿಂದ ಜನರ ಪ್ರಮಾಣಕ್ಕೆ ಮತ್ತು ರಫ್ತು ಬೆಳೆಯ ಸಾಗಣೆಗೆ ರಸ್ತೆ ಮತ್ತು ರೈಲು ಮಾರ್ಗಗಳ ಸ್ಥಾಪನೆಗಳಿಂದಾಗಿ ಕೂಲಿ ಆಳುಗಳು ದೂರದ ಮತ್ತು ಕಡುಬಡತನದ ಹಳ್ಳಿ ಪ್ರದೇಶಗಳಿಂದ ನಗರಗಳಿಗೆ ಹಾಗೂ ರಫ್ತು ಬೆಳೆ ಬೆಳೆಯುವ ಪ್ರದೇಶಗಳಿಗೆ ವಲಸೆ ಹೋಗುವಂತಾಯಿತು. ನಗರಗಳೇ ಬಹುಪಾಲು ನಿಯಂತ್ರಿಸುವ ಬೃಹತ್ ಗಾತ್ರದ ಆರ್ಥಿಕ ಮತ್ತು ರಾಜಕೀಯ ಪ್ರದೇಶಗಳು ನಿರ್ಮಾಣಗೊಂಡವು. ಇದರಿಂದ ಸಾಂಪ್ರದಾಯಿಕವಾಗಿ ಕಿರಿದಾದ ಬುಡಕಟ್ಟು ಘಟಕಗಳು ತಮ್ಮ ಸ್ವಾಯತ್ತತೆಯನ್ನು ಕಳೆದುಕೊಂಡವು. ಇದರೊಂದಿಗೆ ನಗರದಲ್ಲಿ ಬಡವರಾದ ಮತ್ತು ಶೋಷಿತರಾದ ನಗರಕೂಲಿಕಾರ ವರ್ಗ ಅಕುಶಲತೆ ಹಾಗೂ ಪೂರ್ಣ ನಿಯೋಜನೆ ಇಲ್ಲದ ಗಂಭೀರ ಸಮಸ್ಯೆಯಿಂದ ಬಳಲು ವಂತಾಯಿತು. ಹಳ್ಳಿಗಳಲ್ಲಿ ದುಡಿಯುವ ದೃಢಕಾಯ ಯುವಕರು ಸಂಖ್ಯೆ ಕಡಿಮೆಯಾಯಿತು. ಇದರಿಂದ ನಗರಗಳಲ್ಲೂ ಹಳ್ಳಿಗಾಡುಗಳಲ್ಲೂ ಬಡತನ ತಾಂಡವವಾಡುವ ಒಂದು ವಿಷವರ್ತುಲ ನಿರ್ಮಾಣವಾಯಿತು.

ಹೀಗೆ ಸ್ವಾರ್ಥ ಪರವಾದಂತಹ ವಸಾಹತುಶಾಹಿ ಆಫ್ರಿಕಾ ಸಮಾಜವನ್ನು ವಿಶ್ವವ್ಯಾಪಿ ಅರ್ಥವ್ಯವಸ್ಥೆಗೆ ಸೆಳೆದು ತಂದರೂ ಅದು ಪ್ರತ್ಯೇಕವಾಗಿ ಸ್ವಯಂಪೂರ್ಣವಾಗಿದ್ದ ಸಾಂಪ್ರದಾಯಿಕ ಸಮಾಜವನ್ನು ಪೂರ್ಣವಾಗಿ ನಾಶಗೊಳಿಸಿತು. ಆಧುನಿಕ ಆಫ್ರಿಕನ್ ಸಮಾಜವು ತನ್ನ ವಸಾಹತುಶಾಹಿ ಒಡೆಯರ ಅಗತ್ಯತೆಗಳನ್ನು ಬೇಡಿಕೆಗಳನ್ನು ಪೂರೈಸುವುದಕ್ಕಾಗಿ ಬೆಳೆದವೇ ಹೊರತು ಆಫ್ರಿಕನ್ ರಾಜ್ಯಗಳ ನಿಜವಾದ ಹಿತಾಸಕ್ತಿಯಿಂದಲ್ಲ.

ಚದುರಿದಂತಹ ಹಳ್ಳಿಗಳು ಕುಗ್ರಾಮಗಳು ಬಹಳ ಪ್ರಚಲಿತವಿದ್ದ ನೆಲಸು ವಿನ್ಯಾಸ. ಸಂಯುಕ್ತ ಮತ್ತು ವಿಶಾಲ ಕುಟುಂಬಗಳು ತಮ್ಮನ್ನು ರಕ್ಷಿಸಿಕೊಳ್ಳಲು ಹಾಗೂ ಕೌಟುಂಬಿಕ ಸಹಕಾರಕ್ಕೆ ತಕ್ಕಷ್ಟು ದೊಡ್ಡವಾಗಿದ್ದವು. ಆದರೆ ಕಟ್ಟಡ ನಿರ್ಮಿತಿಯ ಸಾಮಗ್ರಿಗಳು ಬಹುಕಾಲ ಬಾಳಿಕೆ ಬಾರದಿರುವ ಕಾರಣ ಇವು ಶಾಶ್ವತವಾಗಿರುವುದಿಲ್ಲ. ಸಾಂಪ್ರದಾಯಿಕ

ಆಫ್ರಿಕನ್ ಮನೆಗಳನ್ನು ಸ್ಥಳೀಯವಾಗಿ ದೊರೆಯುವ ಸಾಮಗ್ರಿಗಳಿಂದ ಕಟ್ಟಲಾಗುತ್ತದೆ. ಉತ್ತರ ಆಫ್ರಿಕಾದ ದನಗಾಹಿಗಳು ಬಟ್ಟೆ ಅಥವಾ ಕುರಿ-ಮೇಕೆಗಳ ತೊಗಲುಗಳಿಂದ ನಿರ್ಮಿಸಿದ ಡೇರೆಗಳಲ್ಲಿ ವಾಸಿಸುತ್ತಾರೆ. ಚರ್ಮ ಅಥವಾ ಕಂಬಳಿಯನ್ನು ಮರುಳು ನೆಲದ ಮೇಲೆ ಹಾಸಿರುತ್ತಾರೆ. ಉಷ್ಣವಲಯ ಮತ್ತು ಉಪ ಉಷ್ಣವಲಯಗಳಲ್ಲಿ ದನಗಾಹಿಗಳು ಸಾಮಾನ್ಯವಾಗಿ ಮರದ ಕಂಬಗಳು, ಒಪಿಯರ್(ಬಳುಕುವ ರಂಬೆಗಳು) ಮತ್ತು ತೊಗಲಿನಿಂದ ನಿರ್ಮಿತವಾದ ಗುಂಡನೆಯ ಗುಡಿಸಿಲಿನಲ್ಲಿ ವಾಸಿಸುತ್ತಿದ್ದರು. ಆಫ್ರಿಕಾದ ಹುಲ್ಲುಗಾವಲಿನಲ್ಲಿ ಬಹುಪಾಲು ದೊಡ್ಡ ಮಣ್ಣಿನ ಮನೆಗಳನ್ನುಳ್ಳ ಗ್ರಾಮಗಳು ಸಾಂಪ್ರದಾಯಿಕ. ಆಫ್ರಿಕಾದ ಬಹಳಷ್ಟು ಕಡೆ ಕಂಡುಬರುವ ಮನೆಗಳು ಮಣ್ಣಿನ ಗೋಡೆಗಳು ಮತ್ತು ಹುಲ್ಲು ಅಥವಾ ತಾಳೆಗರಿಯ ಛಾವಣಿ ಹೊಂದಿರುತ್ತದೆ. ವಸಾಹತುಶಾಹಿಗಿಂತಲೂ ಹಿಂದಿನ ಕಾಲದ ದೊಡ್ಡ ಹಾಗೂ ಶಾಶ್ವತ ಪಟ್ಟಣಗಳು ಪ್ರಮುಖವಾಗಿ ಪಶ್ಚಿಮ ಆಫ್ರಿಕಾದಲ್ಲಿ ಅರಣ್ಯ ಮತ್ತು ಸವನ್ನಾ ವಲಯಗಳೆರಡರಲ್ಲೂ ಕಾಣಸಿಗುತ್ತವೆ. ಟಿಂಬಿಕ್ಟು, ಚೆಲ್ನೆ, ಕಾನೋ ಮತ್ತಿತರ ಪಟ್ಟಣಗಳು ಮಧ್ಯಯುಗದಿಂದ ಇದೆ. ಬೆನಿನ್ ಮತ್ತು ಇಸ್ವಾನ್‌ವ, ಯರೋಬಾ ನಗರ ಗಳು ಮತ್ತು ಓಯೋಗಳು ಅದಕ್ಕಿಂತ ಇತ್ತೀಚಿನವಾದರೂ ಅನೇಕ ಶತಮಾನಗಳಷ್ಟು ಹಿಂದಿನವು. ಪೂರ್ವ ಆಫ್ರಿಕಾದಲ್ಲಿ ಮೊಂಬಾಸದಂತಹ ಮಧ್ಯಕಾಲೀನ ಅರಬ್ ಕರಾವಳಿ ಪಟ್ಟಣಗಳಿವೆ. ಈ ಎಲ್ಲ ಪಟ್ಟಣಗಳು ಇನ್ನೂ ದೇಶೀಯ ಮತ್ತು ಸರಿಸುಮಾರು ಒಂದೇ ಬಗೆಯ ಜನರನ್ನು ಹೊಂದಿವೆ. ಕೃಷಿ ಮತ್ತು ಕರಕುಶಲ ಕಲೆಗಳೂ ಸೇರಿದಂತೆ ಅನೇಕ ವೃತ್ತಿಗಳಿವೆ. ಆದರೆ ಕೈಗಾರಿಕೆಗಳು ಇಲ್ಲವೇ ಇಲ್ಲ ಎನ್ನಬಹುದು. ಸಂಪತ್ತು ಅಧಿಕಾರವೆಲ್ಲಾ ಅರಸನಲ್ಲಿ ನಿಹಿತವಾಗಿರುತ್ತವೆ. ಆತನ ರಾಜ್ಯಾಡಳಿತ ಸುತ್ತಮುತ್ತಲ ಗ್ರಾಮೀಣ ಪ್ರದೇಶಕ್ಕೂ ಹರಡಿರುತ್ತದೆ. ಹೀಗಾಗಿ ಪಟ್ಟಣವೆಂಬುದು ಒಂದು ಪ್ರತ್ಯೇಕ ಘಟಕವಾಗಿರದೆ ವಿಶಾಲ ಕ್ಷೇತ್ರದ ಕೇಂದ್ರಸ್ಥಾನವಾಗಿರುತ್ತದೆ. ಬದಲಾಗಿ ವಸಾಹತುಶಾಹಿ ಅಡಿಯಲ್ಲಿ ಸ್ಥಾಪಿತವಾದ ಪಟ್ಟಣ ಮತ್ತು ನಗರಗಳು ಭಿನ್ನವಾದವು. ಅವನ್ನು ಆಫ್ರಿಕಾದ ಉದ್ದಕ್ಕೂ ನೋಡಬಹುದು. ಬಡತನದ ಬೇಗೆಯಲ್ಲಿರುವ ಹಿನ್ನಾಡುಗಳಿಂದ ವಲಸೆ ಬರಲು ಕೇಂದ್ರ ಪ್ರದೇಶಗಳಾಗಿದ್ದ ಕಾರಣ ಇಲ್ಲಿ ವಿವಿಧ ಜನಾಂಗದ ಜನರಿದ್ದಾರೆ. ನಗರ ಹಾಗೂ ಅದರ ಸುತ್ತಮುತ್ತಲ ಗ್ರಾಮೀಣ ಪ್ರದೇಶಕ್ಕೂ ನಡುವೆ ಕಡಿದಾದ ಅಂತರವಿದೆ. ಕುಶಲ ಕೆಲಸಗಾರರು ಮತ್ತು ಅಕುಶಲ ಕೆಲಸಗಾರರ ನಡುವೆ ಸ್ಪಷ್ಟವಾದ ತಾರತಮ್ಯವಿದೆ. ಕುಶಲ ಕೆಲಸಗಾರರು (ನಗರಾಡಳಿತದ ಸದಸ್ಯರೊಂದಿಗೆ) ವಿದೇಶಿಯರಾಗಿರುತ್ತಾರೆ ಮತ್ತು ವಸಾಹತುಶಾಹಿ ದಿನಗಳಲ್ಲಿ ಒಟ್ಟಾರೆ ಜನಸಮುದಾಯಕ್ಕಿಂತ ಜನಾಂಗೀಯವಾಗಿ ಭಿನ್ನ.

### ದೇಶೀಯ ಗುಂಪು

ಬಹಳಷ್ಟು ಗ್ರಾಮೀಣ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಕೌಟುಂಬಿಕ ಗುಂಪುಗಳೆಂದರೆ ಅವಿಭಕ್ತ ಅಥವಾ ಒಟ್ಟು ಕುಟುಂಬಗಳು. ಅದರಲ್ಲಿ ಅನೇಕ ತಲೆಮಾರುಗಳ

ಬಂಧುಗಳು ಮತ್ತು ಅವರ ಪತಿ ಅಥವಾ ಪತ್ನಿಯರು ಇರುತ್ತಾರೆ. ಅವರೆಲ್ಲರಿಗೂ ಮುಖಂಡನಾಗಿ ಹಿರಿಯನೊಬ್ಬ ಇರುತ್ತಾನೆ. ಈ ಸಮುದಾಯದ ಗಾತ್ರ ಭಿನ್ನವಾಗಿರುತ್ತದೆ. ಆದರೆ ಸಾಮಾನ್ಯವಾಗಿ ಮೂರರಿಂದ ಐದು ತಲೆಮಾರುಗಳ ಬಂಧುಗಳಿರುತ್ತಾರೆ. ಅದು ಸ್ಥಿರವಾದ ಮತ್ತು ಬಹುಕಾಲವಾಳುವ ಕೌಟುಂಬಿಕ ಘಟಕವಾಗಿರುತ್ತದೆ. ಒಂದು ಪರಸ್ಪರ ಸಹಕಾರಿಯಾದ, ಇತರರ ವಿರುದ್ಧ ತನ್ನನ್ನು ರಕ್ಷಿಸಿಕೊಳ್ಳಬಲ್ಲ ಮತ್ತು ತನ್ನೆಲ್ಲಾ ಸದಸ್ಯರನ್ನು ಅವರ ಜೀವನದುದ್ದಕ್ಕೂ ಪರಿಪಾಲಿಸಬಲ್ಲ ಗುಂಪಾಗಿರುತ್ತದೆ. ಕೃಷಿಕರು ಮತ್ತು ಗೋವಳರ ನಡುವೆ ನಡೆಯುವ ಮದುವೆಗಳಲ್ಲಿ ಹೆಣ್ಣಿನ ಸಂಬಂಧಿಕರಿಗೆ 'ಹೆಣ್ಣಿನ ತೆರ' ಕೊಡಬೇಕಾಗಿ ಬರುತ್ತದೆ. ಬಹುಪತ್ನಿತ್ವ ಬಹಳ ಪ್ರಚಲಿತವಾಗಿತ್ತು ಮತ್ತು ಆದರ್ಶವೆಂದು ಪರಿಗಣಿತವಾಗಿತ್ತು. ಎಷ್ಟು ಪತ್ನಿಯರು ಎಂಬುದು ಗಂಡನ ಅಂತಸ್ತು ಹಾಗೂ ಸಂಪತ್ತನ್ನು ಅವಲಂಬಿಸಿತ್ತು. ಮುಖಂಡರು ಮತ್ತು ರಾಜರಿಗೆ ತಮ್ಮ ಅಂತಸ್ತಿನ ಹಿರಿಮೆಗಾಗಿ ಮತ್ತು ತಮ್ಮ ಅಸಂಖ್ಯಾತ ಪ್ರಜೆಗಳಿಗೆ ಔತಣಾತಿಥ್ಯ ನೀಡಲು ಸಾಧ್ಯವಾಗುವಂತೆ ಅನೇಕ ಪತ್ನಿಯರು ಇರಬೇಕಿತ್ತು. ಆಫ್ರಿಕಾದಲ್ಲಿ ಬಹಳ ಕಡೆ ಈ ನಿವಾಸಿ ಗುಂಪುಗಳೆಂದರೆ ವಂಶಸ್ಥರು ಅಥವಾ ಪೀಳಿಗೆ ಎನ್ನುವಂತೆ ಆನುವಂಶಿಕವಾಗಿ ಬಂದ ಜರನ್ನು ಉಳ್ಳ ಗುಂಪು. ವಂಶಸ್ಥರ ತರುವಾಯದ ಟಿಸಿಲುಗಳವರೇ ಪೀಳಿಗೆಗಳು. ಒಂದು ಪೀಳಿಗೆಯ ಸದಸ್ಯರುಗಳಿಗೆಲ್ಲಾ ತೀರ ಇತ್ತೀಚಿನ ಪೀಳಿಗೆಯ ಒಬ್ಬ ಪಿತೃ ಇರುತ್ತಾನೆ. ಅವರು ಸಹ ಸಾಮಾನ್ಯವಾಗಿ ಗಣನೀಯರಾದ ಮುಖಂಡರು ಮತ್ತು ಕಾರ್ಯಭಾರವುಳ್ಳ ಒಂದು ನಿಕಾಯದ ಸದಸ್ಯರಾಗಿರುತ್ತಾರೆ. ಪೀಳಿಗೆಯ ಕಾರಣದಿಂದ ವಿಶಾಲ ಸಾಮುದಾಯಿಕ ವ್ಯವಹಾರಗಳಲ್ಲಿ ಅವರು ಒಂದು ನಿರ್ದಿಷ್ಟ ರಾಜಕೀಯ ಅಧಿಕಾರದ ಸ್ಥಾನ ಪಡೆಯಲು ಅರ್ಹರಾಗುತ್ತಾರೆ. ಒಂದೊಂದು ಆನುವಂಶಿಕ ಗುಂಪಿಗೂ ಕೊಟ್ಟ ಮಹತ್ವ ಬೇರೆ ಬೇರೆಯಾಗಿರುತ್ತದೆ. ಆದರೆ ವಾರಸುದಾರರು, ಪುತ್ರ ಪೌತ್ರರು ಮತ್ತು ಮದುವೆಯಾಗಿ ಬಂದವರಿಗೆ ಸೂಕ್ತ ವ್ಯವಸ್ಥೆ ಮಾಡಲು ಇದು ಬಹಳ ಮುಖ್ಯ. ೨೦ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಈ ವ್ಯವಸ್ಥೆ ಬದಲಾಗುತ್ತಿದೆ. ಅವಿಭಕ್ತ ಕುಟುಂಬಗಳು ಇಲ್ಲವಾಗಿ ಗಂಡ, ಹೆಂಡತಿ, ಮಕ್ಕಳು ಎನ್ನುವಂತಹ ಕುಟುಂಬ ವ್ಯವಸ್ಥೆ ಜಾರಿಗೆ ಬರುತ್ತಿದೆ. ಏಕೆಂದರೆ ತಮ್ಮ ಹಿರಿಯರು ಹೆಂಗಸರು ಮಕ್ಕಳನ್ನು ಅದೇ ಬಡತನದ ಹುಟ್ಟೂರುಗಳಲ್ಲಿ ಬಿಟ್ಟು ನಗರಕ್ಕೆ ವಲಸೆ ಬರುತ್ತಿದ್ದಾರೆ. ಆಫ್ರಿಕಾದಲ್ಲಿ ಸರಿಸುಮಾರು ಹದಿಹರೆಯ ತಲುಪುವ ವಯಸ್ಸಿನಲ್ಲಿ ಅನೇಕ ಬುಡಕಟ್ಟುಗಳಲ್ಲಿ ಯುವಜನರಿಗೆ ಅವರನ್ನು ವಯಸ್ಕ ಪ್ರಪಂಚಕ್ಕೆ ಪಾದಾರ್ಪಣ ಮಾಡಿಸುವ ವಿಧ್ಯುಕ್ತ ಆಚಾರಗಳನ್ನು ಮಾಡುತ್ತಾರೆ. ಆಫ್ರಿಕಾದ ಇನ್ನೂ ಕೆಲವು ಭಾಗಗಳಲ್ಲಿ ಬುಡಕಟ್ಟು ಸಮುದಾಯದಲ್ಲಿ ಒಂದು ಕ್ರಮಬದ್ಧತೆಯನ್ನು ಕಾಪಾಡುವುದಕ್ಕಾಗಿ ಕೆಲವು ಸಾಂಪ್ರದಾಯಿಕ ಕರ್ತವ್ಯಗಳನ್ನು ಮಾಡುವಂತಹ ಗಂಡಸರ ಅಥವಾ ಹೆಂಗಸರ ಗುಪ್ತಸಮಾಜಕ್ಕೆ ಅವರನ್ನು ಪಾದಾರ್ಪಣ ಮಾಡಿಸಲಾಗುತ್ತದೆ.

## ರಾಜಕೀಯ ವ್ಯವಸ್ಥೆ

ಆಫ್ರಿಕಾದ ರಾಜಕೀಯ ವ್ಯವಸ್ಥೆಗಳು ವೈವಿಧ್ಯಮಯವಾಗಿವೆ. ಒಂದು ತುದಿಯಲ್ಲಿ ಸರ್ವಾಧಿಕಾರಿ ಮುಖಂಡತ್ವ ಇದ್ದರೆ ಇನ್ನೊಂದು ತುದಿಯಲ್ಲಿ ಮುಖಂಡರೇ ಇಲ್ಲವೇನೋ ಎಂಬಂತಹ ಬಂಧುಗಳ ಸಮೂಹವನ್ನು ಕಾಣುತ್ತೇವೆ. ಸಾಂಪ್ರದಾಯಿಕವಾದ ಮೂರು ಮುಖ್ಯ ಆಡಳಿತ ವ್ಯವಸ್ಥೆಗಳನ್ನು ನೋಡುತ್ತೇವೆ. ಒಂದು ಸಾನ್ ಮತ್ತು ಪಿಗ್ಮಿ ಜನಾಂಗಗಳಲ್ಲಿ ಇರುವಂತೆ ಬೇಟೆಗಾರ ತಂಡದ ಸರಳ ಸಂಘಟನೆ. ಇದರಲ್ಲಿ ಈ ತಂಡವೇ ರಾಜಕೀಯ ವ್ಯವಸ್ಥೆ. ಇವರು ಒಂದೇ ಬಂಧುತ್ವ ಗುಂಪಿನವರಾಗಿದ್ದು ನೆರೆಹೊರೆಯವರೊಂದಿಗೆ ಅಂತರ ವಿವಾಹದ ಕಾರಣದಿಂದ ಸಂಬಂಧ ಹೊಂದಿದ್ದು ಒಂದೇ ಸಾಂಸ್ಕೃತಿಕ ಗುಣಲಕ್ಷಣ ಹೊಂದಿರುವುದನ್ನು ಅರಿತಿರುವವರು. ಇಲ್ಲಿ ಅಧಿಕಾರವು ಅತಿವೃದ್ಧ ಗಂಡಸರ ಕೈಯಲ್ಲಿರುತ್ತದೆ. ಎರಡನೆಯ ಬಗೆ ಎಂದರೆ ಬಹಳ ಪ್ರಚಲಿತವಿರುವಂತಹದು. ಇದರಲ್ಲಿ ಕೇಂದ್ರೀಕೃತ ರಾಜಕೀಯ ಆಡಳಿತವಿಲ್ಲದ ಸಮೂಹಗಳು ಬರುತ್ತದೆ. ಇವು ರಾಜಕೀಯ ವ್ಯವಸ್ಥೆ ಹಾಗೂ ತಮ್ಮ ಪ್ರತ್ಯೇಕ ವೈಶಿಷ್ಟ್ಯವನ್ನು ಅನ್ಯಥಾ ಉಳಿಸಿಕೊಂಡು ಬರುತ್ತವೆ. ರಾಜಕೀಯ ಅಧಿಕಾರ ಇದರಲ್ಲಿ ಪ್ರತ್ಯೇಕವಾದ ರೂಪ ಪಡೆದುಕೊಂಡಿರುವುದಿಲ್ಲ. ಹಾಗಾಗಿ ಬಂಧುತ್ವ ಮತ್ತು ಮತೀಯ ಅಧಿಕಾರಕ್ಕಿಂತ ಭಿನ್ನವಾಗಿರುವುದಿಲ್ಲ. ಇಂತಹ ಅನೇಕ ಸಮಾಜಗಳು ವಂಶಸ್ಥರು ಮತ್ತು ಪೀಳಿಗೆಗಳನ್ನು ಆಧರಿಸಿರುತ್ತವೆ. ಇಲ್ಲಿ ಬಹುಪಾಲು ರಾಜಕೀಯ ಅಧಿಕಾರವು ವಂಶಸ್ಥರು ಮತ್ತು ಪೀಳಿಗೆಯ ವಂಶವೃಕ್ಷದಲ್ಲಿ ಹಿರಿಯರಾದ ಗಂಡಸರ ಕೈಯಲ್ಲಿ ಇರುತ್ತದೆ. ಹೀಗಿದ್ದರೂ ಈ ವ್ಯವಸ್ಥೆಯಲ್ಲಿ ವಿವಾದಗಳನ್ನು ಸಂಘಟಿತ ಬಲದಿಂದ(ಜಗಳ ಮತ್ತು ಯುದ್ಧದಿಂದ) ಪರಿಹರಿಸಲಾಗುತ್ತದೆ. ಇತರ ಬಗೆಯ ರಾಜಕೀಯ ಅಧಿಕಾರ ಕೇಂದ್ರೀಕೃತವಾಗಿರದ ಸಮಾಜಗಳಲ್ಲಿ ಅಧಿಕಾರವು ವಯಸ್ಸಿನಲ್ಲಿ ಹಿರಿಯರಾದ ಗಂಡಸರ ಕೈಯಲ್ಲಿ ಇರುತ್ತದೆ. ಇಡೀ ಸಮಾಜವು ವಾಡಿಕೆಯಾಗಿ ಗುರುತಿಸಲ್ಪಟ್ಟ ವಯೋಮಾನದ ತಲೆಮಾರುಗಳಾಗಿ ವಿಂಗಡಿತವಾಗಿರುತ್ತವೆ. ಇಲ್ಲಿ ಒಂದು ವಿಶಾಲ ಪ್ರದೇಶದ ಸ್ಥಳೀಯ ಗುಂಪುಗಳನ್ನು ಪ್ರತಿನಿಧಿಸುವ ಹಿರಿಯರ ಪರಿಷತ್ತು ಆಡಳಿತ ಅಧಿಕಾರ ಹೊಂದಿರುತ್ತದೆ. ಜಗಳವನ್ನು ಚರ್ಚೆ, ಸಮಾಲೋಚನೆಗಳ ಮೂಲಕ ಪರಿಹರಿಸುತ್ತಾರೆ. ಇದನ್ನು ಸಾಂಪ್ರದಾಯಿಕವಾಗಿ ದನಕರು ಸಾಕುವ ಯುದ್ಧ ಪ್ರಿಯ ಮಸಾಯಿ ಮತ್ತಿತರ ಪೂರ್ವ ಆಫ್ರಿಕಾದ ಜನರಲ್ಲಿ ಹಾಗೂ ಮತ್ತಿತರ ದಕ್ಷಿಣ ಆಫ್ರಿಕಾದ ಜನರಲ್ಲಿ ಕಾಣಬಹುದು. ಮೂರನೇ ಮುಖ್ಯವಾದ ರಾಜಕೀಯ ವ್ಯವಸ್ಥೆ ಎಂದರೆ ವಿವಿಧ ಗಾತ್ರದಲ್ಲಿರುವ ಪರಂಪರಾಗತ ಆಫ್ರಿಕಾದ ಸಂಸ್ಥಾನಗಳು. ಇದು ರಾಜನಯುಳ್ಳದ್ದು ಅಧಿಕಾರ ವ್ಯಾಪ್ತಿ ರಾಜ ಮತ್ತು ಪ್ರಜೆಗಳ ಸಂಬಂಧ ಇವುಗಳೂ ಒಂದು ಸಂಸ್ಥಾನದಿಂದ ಇನ್ನೊಂದಕ್ಕೆ ಭಿನ್ನವಾಗಿವೆ. ಈ ಸಂಬಂಧದಲ್ಲಿ ಆತನನ್ನು ಜುಲು ಮತ್ತು ಸ್ವಾಜಿ ಜನಾಂಗಗಳಲ್ಲಿ ಇರುವಂತೆ ಹಿರಿಯ ಸಂಬಂಧಿಕ ಎಂದು ಮಾತ್ರವೇ ಪರಿಗಣಿಸಬಹುದು. ಅನೇಕ ರಾಜರ ಒಂದು ಮಹಾ ಒಕ್ಕೂಟದಲ್ಲಿ ಘಾನಾದ ಅಶ್ಶಾಂಟಿ ಜನರಲ್ಲಿರುವಂತೆ ಆತ 'ಸಮಾನರಲ್ಲಿ ಪ್ರಪ್ರಥಮ'-'ಪ್ರೈಮಸ್ ಇಂಟರ್ ಪೇರ್ಸ್' ಎಂದು

ಪರಿಗಣಿಸಬಹುದು. ಇಲ್ಲವೇ ವಾಂಡ, ರುಂಡಿ ಅಥವಾ ಜಾಂಜಿವಾರ್‌ನ ಅರಬ್ ಸುಲ್ತಾನ ರಾಜ್ಯದಲ್ಲಿದ್ದಂತೆ ಆತನು ತನ್ನ ಪ್ರಜೆಗಳಿಗಿಂತಲೂ ಜನಾಂಗೀಯವಾಗಿ ಭಿನ್ನವಾದವರು ಎಂದು ಪರಿಗಣಿಸುತ್ತಿರುವ ಅವರನ್ನು ಗೆದ್ದ ಆಳುತ್ತಿರುವ ವರ್ಗದ ಸದಸ್ಯನಾಗಿರಬಹುದು. ರಾಜನಿಗೆ ರಾಜಕೀಯ ಹಾಗೂ ಧಾರ್ಮಿಕ ಎರಡೂ ಅಧಿಕಾರಗಳಿದ್ದವು. ಅವು ಅತ್ಯಂತ ಸಂಘಟಿತ ಮತ್ತು ಪ್ರಬಲ ರಾಜ್ಯಗಳಾಗಿದ್ದವು. ರಾಜನ ಅಧಿಕಾರವನ್ನು ಪರಿಭಾವಿಸಿ ನಿಯಂತ್ರಿಸಲು ಕೆಲವು ಸಂಕೀರ್ಣ ಸಂಸ್ಥೆಗಳಿದ್ದವು. ಅನೇಕ ರಾಜ್ಯಗಳು ವಿಶ್ವದ ಇತರರ ಭಾಗಗಳಲ್ಲಿನ ರಾಜ್ಯಗಳಿಗೆ ಹೋಲಿಸಬಹುದಾದಂತೆ ಅನೇಕ ಶತಮಾನಗಳಿಂದ ವಂಶ ಪಾರಂಪರ್ಯವಾಗಿ ಆಳಲ್ಪಡುತ್ತಿದ್ದವು ಮತ್ತು ಶ್ರೀಮಂತ ಆಸ್ಥಾನ ಹಾಗೂ ಆಡಳಿತ ನಡೆಸುವ ಅಧಿಕಾರಿ ವರ್ಗಗಳನ್ನು ಹೊಂದಿದ್ದವು.

ರಾಜ್ಯಗಳು ಅರಣ್ಯ ಪ್ರದೇಶದಲ್ಲಿ ಬೆಳೆಯುತ್ತಿದ್ದುದು ಬಲು ವಿರಳ. ಆದರೆ ಸವನ್ನಾ ಭಾಗದಲ್ಲಿ ಚೆನ್ನಾಗಿ ಬೆಳೆದವು. ೧೯ನೆಯ ಶತಮಾನದಲ್ಲಿ ಸಣ್ಣ ಸಣ್ಣ ಪಾಳೆಯಗಾರರು ಇರುತ್ತಿದ್ದ ಪ್ರದೇಶಗಳು ಸರ್ವೇಸಾಮಾನ್ಯವಾಗಿದ್ದವು. ಇವೇ ಮುಂದೆ ರಾಜ್ಯಗಳಾಗಿ ಬೆಳೆದವು ಉದಾಹರಣೆಗೆ ಜುಲು, ಪೂರ್ವ ಆಫ್ರಿಕಾದ ಬಯಲುನಾಡಿನಲ್ಲಿ ಬುನ್ಯಾರೋವಿ ನಂತಹ ಮಹಾನ್ ಮತ್ತು ಇನ್ನೂ ಪ್ರಾಚೀನವಾದ ವಿಜೇತ ರಾಜ್ಯಗಳು ಬೆಳೆದವು. ಕಾಂಗೋ ಅರಣ್ಯದ ದಕ್ಷಿಣದ ಸವನ್ನಾದಲ್ಲಿ ಕಾಂಗೋ, ಲುಂಡಾ ಮತ್ತಿತರ ರಾಜ್ಯಗಳಿವೆ. ಉತ್ತರದಲ್ಲಿ ಸಹರಾದ ದಕ್ಷಿಣ ಭಾಗಕ್ಕೆ ಸೋಂಗೆ ಮತ್ತು ಬೋರ್ನುಗಳಂತಹ ಗಣನೀಯ ರಾಜ್ಯಗಳ ಒಂದು ಸರಣಿಯೇ ಇತ್ತು. ನೈರುತ್ಯ ಆಫ್ರಿಕಾದಲ್ಲಿ ಅರಣ್ಯ ರಾಜ್ಯಗಳು ಎಂದು ಭಾವಿಸಲಾದ ಅನೇಕ ರಾಜ್ಯಗಳಿದ್ದವು. ಆದರೆ ಸಂಕೀರ್ಣ ಹವಾಮಾನ ಕಾರಣಗಳಿಗಾಗಿ ಇವರ ಪ್ರದೇಶ ಗಳಲ್ಲಿ ಸವನ್ನಾ ಹುಲ್ಲುಗಾವಲು ಹತ್ತಿರದ ಕಡಲತೀರದವರೆಗೂ ಹಬ್ಬಿದೆ. ಅಶಾಂತಿ, ದಹೊಮೆ ಮತ್ತು ಯರೂಬಾ ರಾಜ್ಯಗಳು ಪ್ರಮುಖವಾಗಿ ಹುಲ್ಲುಗಾವಲು ಪ್ರದೇಶದಲ್ಲಿ ಕೇಂದ್ರೀಕೃತವಾಗಿದ್ದವು. ಕೇವಲ ಬೆನಿನ್ ಪ್ರಾಚೀನ ಅರಣ್ಯ ರಾಜ್ಯವಾಗಿತ್ತು. ರಾಜ್ಯಗಳಿಗೂ ಬಯಲುನಾಡಿಗೂ ಇದ್ದ ಸಂಬಂಧಕ್ಕೆ ಕಾರಣವೇನೆಂದರೆ ಇಲ್ಲಿನ ರೈತರ ಬಹು ಸುಲಭವಾಗಿ ಗೆದ್ದು ಅವರು ಕಪ್ಪಕಾಣಿಕೆಗಳನ್ನು ಕೊಡುವಂತೆ ಮಾಡಬಹುದಾಗಿದೆ. ಅಷ್ಟೇ ಅಲ್ಲ, ಹುಲ್ಲುಗಾವಲಿನ ಉತ್ಪನ್ನಗಳಾದ ದನಕರುಗಳು ಮತ್ತು ದವಸ ಧಾನ್ಯಗಳನ್ನು ಕಾಡಿನ ಗೆಡ್ಡೆಗೆಣಸುಗಳಿಗಿಂತ ಬಹಳ ಸುಲಭವಾಗಿ ಸಾಗಿಸಬಹುದಾಗಿದೆ. ಅರಣ್ಯ ಒಂದು ಒಳ್ಳೆಯ ಅಡಗುದಾಣವೂ ಆಗಿರುತ್ತಿತ್ತು. ಅದರಲ್ಲೂ ಉತ್ತರದಲ್ಲಿ ಅವರ ಮಹತ್ವ ಹೆಚ್ಚು. ಉತ್ತರದ ಸವನ್ನಾ ರಾಜ್ಯಗಳ ಬಹಳ ಪ್ರಮುಖ ಆಯುಧವಾದ ಅಶ್ವದಳದಿಂದ ಅರಣ್ಯ ತನ್ನ ನಿವಾಸಿಗಳನ್ನು ರಕ್ಷಿಸುತ್ತಿತ್ತು. ನಾವು ಹಿಂದೆ ಹೇಳಿದ ಆಫ್ರಿಕಾದಲ್ಲಿ ವ್ಯಾಪಾರಕ್ಕೆ ಅಂತಹ ಮಹತ್ವದ ಸ್ಥಾನ ಇರಲಿಲ್ಲ ಎಂಬ ಹೇಳಿಕೆಗೆ ಸವನ್ನಾದ ವಿಶಾಲ ರಾಜ್ಯಗಳು ಅಪವಾದ ಗಳಾಗಿದ್ದವು. ಉತ್ತರ ಸವನ್ನಾ ರಾಜ್ಯಗಳು ವಿಶಾಲ ಸಹರಾ ವ್ಯಾಪಾರವನ್ನು ಬಹಳವಾಗಿ ಅವಲಂಬಿಸಿದ್ದವು. ಈ ವ್ಯಾಪಾರವನ್ನು ಎಷ್ಟರ ಮಟ್ಟಿಗೆ ತಾವು ನಿಯಂತ್ರಿಸಲು ಸಾಮರ್ಥ್ಯ

ವನ್ನು ಹೊಂದಿದ್ದುವು ಎಂಬುದಕ್ಕೆ ಅನುಸಾರವಾಗಿ ಅವುಗಳಲ್ಲಿ ಏಳು ಬೀಳುಗಳೂ ಉಂಟಾಗುತ್ತಿದ್ದವು.

ಇತರ ಅನೇಕ ರಾಜ್ಯಗಳು ಅದರಲ್ಲೂ ಪಶ್ಚಿಮ ಆಫ್ರಿಕಾ ಮತ್ತು ದಕ್ಷಿಣ ಕಾಂಗೋ ಸವನ್ನಾ ಪ್ರದೇಶದ ರಾಜ್ಯಗಳು ಗುಲಾಮ ವ್ಯಾಪಾರದೊಂದಿಗೆ ಬಹಳ ನಿಕಟ ಸಂಬಂಧ ಹೊಂದಿದ್ದವು. ಈ ರಾಜಕೀಯ ವ್ಯವಸ್ಥೆಗಳಲ್ಲಿ ಅನೇಕ ವ್ಯವಸ್ಥೆಗಳು ಇನ್ನೂ ಅಸ್ತಿತ್ವ ದಲ್ಲಿವೆ. ಹೊಸ ರಾಷ್ಟ್ರಗಳ ರಾಜ್ಯದಲ್ಲಿ ಅವಲಂಬಿತ ಭಾಗಗಳಾಗಿ ಉಳಿದಿವೆ ಮತ್ತು ಅವುಗಳ ಒಡೆಯರು ಹಾಗೂ ರಾಜರ ಹಿಂದಿನ ಅಧಿಕಾರ ಬಹುಪಾಲು ಕುಂಠಿತವಾಗಿವೆ ಇಲ್ಲವೇ ರದ್ದಾಗಿವೆ. ವಸಾಹತು ಸರ್ಕಾರಗಳು ರಾಜಕೀಯ ಅಧಿಕಾರದ ಏಕಸಾಮ್ಯವನ್ನು ಹೊಂದಿದ ಕಾರಣ ಈ ಎಲ್ಲ ರಾಜ್ಯಗಳು ವಸಾಹತುಶಾಹಿಯ ಅವಧಿಯಲ್ಲಿ ದುರ್ಬಲಗೊಂಡವು.

ಸಾಂಪ್ರದಾಯಿಕ ಆಫ್ರಿಕನ್ ಸಮಾಜಗಳು ಬಹಳಷ್ಟು ಸಂಪತ್ತು ಮತ್ತು ಅಧಿಕಾರಕ್ಕೆ ಅನುಗುಣವಾಗಿ ಸಾಮಾಜಿಕ ಸ್ತರಗಳನ್ನು ಹೊಂದಿದ್ದವು. ಆದರೆ ಆಫ್ರಿಕಾದಲ್ಲಿ ಸಾಹಸೋದ್ಯಮಿ ಗಳು ವ್ಯಾಪಾರಿಗಳು ಹೆಚ್ಚಿದಂತೆ ವಿದ್ಯಾಭ್ಯಾಸದ ಮಧ್ಯದ ಅಂತರ ಹೆಚ್ಚಾದಂತೆ ಆರ್ಥಿಕ ಮತ್ತು ರಾಜಕೀಯ ಭಿನ್ನತೆಗಳು ಬಹುವಾಗಿ ಹೆಚ್ಚುತ್ತಿವೆ. ಎಲ್ಲ ರಂಗಗಳಲ್ಲೂ ಆರ್ಥಿಕ ಮತ್ತು ರಾಜಕೀಯ ಗಣ್ಯವರ್ಗವೊಂದು ಬೆಳೆಯುತ್ತಿದೆ. ಇವರು ಸಾಂಪ್ರದಾಯಿಕ ಬುಡಕಟ್ಟು ಮತ್ತು ಕೌಟುಂಬಿಕ ಸಂಬಂಧಗಳನ್ನು ಕೈಬಿಟ್ಟು ಹೊಸದಾದ ಶ್ರೀಮಂತ ಮತ್ತು ಮಧ್ಯಮ ವರ್ಗಗಳ ಸದಸ್ಯರಾಗಿರುತ್ತಾರೆ.

### ಧರ್ಮಗಳು

ನೀಗ್ರೊ ಜನಗಳ ಸಾಂಪ್ರದಾಯಿಕ ಧರ್ಮ ಇಸ್ಲಾಂ. ಇದು ಆಫ್ರಿಕಾದ ಅತಿ ಪ್ರಚಲಿತ ಧರ್ಮಗಳು. ಕ್ರಿಸ್ತಶಕದ ಆದಿಭಾಗದಲ್ಲಿ ಉತ್ತರ ಆಫ್ರಿಕಾದಲ್ಲಿ ಕ್ರೈಸ್ತಧರ್ಮ ಕಾಲಿಟ್ಟಿತು. ಆದರೆ ಈ ಆರಂಭದ ಪ್ರಭಾವದಿಂದ ಈಗ ಉಳಿದಿರುವುದು ಈಜಿಪ್ಟಿನ ಮತ್ತು ಇಥಿಯೋಪಿಯಾದ ಕೋಪ್ಟಿಕ್ ಚರ್ಚ್ ಎಂಬ ಒಂದು ದೊಡ್ಡ ಧಾರ್ಮಿಕ ವರ್ಗ ಮಾತ್ರ. ನಗರ ಪ್ರದೇಶದಲ್ಲಿ ಮಾತ್ರ ಜುದಾಯಿಸಂ ಕಾಣಬರುತ್ತದೆ. ಇಥಿಯೋಪಿಯಾದ ಫಿಲಾಸ ಕ್ರಿ.ಪೂ.೧ನೇ ಶತಮಾನದಷ್ಟು ಹಿಂದಿನ ಜುದಾಯಿಸಂನ ಒಂದು ವರ್ಗ. ಇಸ್ಲಾಂ ಧರ್ಮ ೭ನೇ ಶತಮಾನದಲ್ಲಿ ಪಾದಾರ್ಪಣ ಮಾಡಿತು ಮತ್ತು ೧೩ನೆಯ ಶತಮಾನದ ಹೊತ್ತಿಗೆ ಸಹರಾದ ದಕ್ಷಿಣ ಭಾಗಕ್ಕೆ ಹಬ್ಬಲಾರಂಭಿಸಿತು. ಉತ್ತರ ಮತ್ತು ಪೂರ್ವ ಆಫ್ರಿಕಾದಲ್ಲಿ ಇದೇ ಪ್ರಮುಖ ಧರ್ಮ. ಸ್ವದೇಶಿ ಧರ್ಮಗಳಲ್ಲಿ ಕೆಲವು ಸಾಮಾನ್ಯ ಗುಣಲಕ್ಷಣಗಳನ್ನು ಹೊಂದಿದೆ. ಧರ್ಮ ಎಂಬುದು ಉತ್ಸವಗಳು ಮಾತ್ರವಲ್ಲ; ದೈನಂದಿನ ಬದುಕಿನ ಒಂದು ಬಹುಮುಖ್ಯ ಭಾಗ. ಸರ್ವಶಕ್ತ ಮಹಾದೇವ, ಎಲ್ಲ ಸೃಷ್ಟಿಸಿದ ಕರ್ತೃ ಆದ ಒಂದು ಅದಿದೈವ ಆಫ್ರಿಕಾದ ಎಲ್ಲ ಸಾಂಪ್ರದಾಯಿಕ ಧರ್ಮಗಳ ಕೇಂದ್ರ ಬಿಂದು. ಆತ ಸದಾಚಾರಗಳ ಮೂಲಸ್ತೋತ್ರ ಮತ್ತು ದುಷ್ಟ ಶಿಕ್ಷಕ(ಆತನನ್ನು ಪ್ರಾರ್ಥನೆ, ಬಲಿದಾನ

ಮತ್ತಿತರ ಆಚಾರಗಳಿಂದ ಕೆಳಮಟ್ಟದ ಅಧಿ ಪ್ರಾಕೃತಿಕ ಶಕ್ತಿಗಳ ಮೂಲಕ ತಲುಪಬಹುದು). ಈ ದೇವರಿಗೆ ಸಾಮಾನ್ಯವಾಗಿ ಗಂಡು ಅಥವಾ ಹೆಣ್ಣು ಎಂಬ ಯಾವುದೇ ಲಿಂಗಭೇದ ಮಾಡಿರುವುದಿಲ್ಲ. ಆದರೆ ಕೆಲವು ಸಂದರ್ಭದಲ್ಲಿ ಗಂಡು ಅಥವಾ ಹೆಣ್ಣು ಎಂದು ಕರೆದಿರುವುದುಂಟು. ಹಲವು ಬಾರಿ ದೇವರಿಗೆ ಒಂದು ಸರ್ವಾಂತರ್ಯಾಮಿ ಮೂರ್ತ ಸ್ವರೂಪವನ್ನು ನೀಡಿರುವುದೂ ಉಂಟು. ಜನರು ದೈನಂದಿನ ಸಂಪರ್ಕ ಹೊಂದಿರುವ ಅಥವಾ ತಾವು ಹಿಂದಿನಿಂದಲೂ ಅರಿತಿರುವ ವಸ್ತುಗಳು ಅಥವಾ ವ್ಯಕ್ತಿಗಳಿಗೆ ಬಲು ಮುಖ್ಯ ಆಧ್ಯಾತ್ಮಿಕ ಶಕ್ತಿಗಳನ್ನು ಆರೋಪಿಸುತ್ತಿದ್ದರು. ಹೀಗಾಗಿ, ಗಾಳಿಯ ಅನೇಕ ಬಗೆ, ಅನೇಕ ಸ್ತರಗಳ ಚೇತನಗಳು ಇರುತ್ತಿದ್ದವು. ಈಗ ದೈವದ ಸ್ಥಾನ ಪಡೆದ ಪಿತೃಗಳು ಅಥವಾ ಪ್ರೇತಗಳು ಇರಬಹುದು. ತಮ್ಮ ಜನರನ್ನು ಇಂದಿನ ನಾಡಿಗೆ ಕರೆತಂದು ಈಗಿರುವಂತೆ ಅವರ ಸಮಾಜವನ್ನು ಸ್ಥಾಪಿಸಿದ ಪುರಾಣ ವೀರರು ಇರಬಹುದು. ಹೀಗೆ ಪಿತೃಗಳು ತಾವು ತೀರಿ ಹೋದ ಮೇಲೂ ತಮ್ಮ ವಂಶಿಕರ ಬದುಕಿನಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತಾರೆ ಎಂಬ ನಂಬಿಕೆಯ ಮೇಲೆ ಪಿತೃಪೂಜೆ ಆಫ್ರಿಕಾದಲ್ಲಿ ಬಹಳ ಸಾಮಾನ್ಯವಾಗಿ ಆಚರಣೆಯಲ್ಲಿತ್ತು.

ಉತ್ಸವ ಹಾಗೂ ಪೂಜಾ ಕಾರ್ಯ ನಿರ್ವಹಿಸುವವರೆಂದರೆ ಪೂಜಾರಿಗಳು, ವಂಶ ಅಥವಾ ಪೀಳಿಗೆಯ ಹಿರಿಯರು, ಮಳೆ ಬರಿಸುವವರು ದೇವರ ಆವಾಹಕರು, ಪ್ರವಾದಿಗಳು ಮತ್ತಿತರರು. ಇವರಲ್ಲಿ ತಜ್ಞರು ಎನ್ನಬಹುದಾದವರು ಬಲು ಕಡಿಮೆ. ತಮ್ಮ ವಯಸ್ಸು, ವಂಶಪಾರಂಪರ್ಯ ಅಥವಾ ರಾಜಕೀಯ ಹುದ್ದೆಯ ಕಾರಣದಿಂದ ಅವರಿಗೆ ಈ ಅಧಿಕಾರ ದೊರಕುತ್ತಿತ್ತು. ತಾವು ಮುಖಂಡರಾಗಿರುವ ಸಾಮಾಜಿಕ ಗುಂಪಿನ ತಮ್ಮ ಅವಿಭಕ್ತ ಕುಟುಂಬದ, ಪೀಳಿಗೆಯ, ವಂಶದ, ಸ್ಥಳೀಯ ಗ್ರಾಮ, ಸಮುದಾಯ, ತಮ್ಮ ಪಾಳೆಗಾರಿಕೆಯಲ್ಲಿನ ಸಮುದಾಯ ಇವೇ ಮುಂತಾದವುಗಳ ಆಚಾರ ಸಮರ್ಪಕವಾಗಿರುವಂತೆ ನೋಡಿಕೊಳ್ಳಲು ಅವರು ಜವಾಬ್ದಾರರು. ಇವರ ಉತ್ಸವಾಧಿಕಾರವು ಅವರ ಜಾತ್ಯತೀತ ಮತ್ತು ಆಂತರಿಕ ಅಧಿಕಾರಕ್ಕೆ ಒಂದು ಮಂಜೂರಾತಿಯಾಗಿರುತ್ತದೆ.

ಪ್ರತಿಯೊಂದು ದೇಶಿ ಆಫ್ರಿಕನ್ ಧರ್ಮದ ಮತ್ತೊಂದು ಮಹತ್ವದ ಅಂಶವೆಂದರೆ ಲೋಕೋತ್ಪತ್ತಿ ಶಾಸ್ತ್ರ-ಇದರಲ್ಲಿ ಬುಡಕಟ್ಟುಗಳ ಆರಂಭ ಮತ್ತು ಅವರ ಆರಂಭದ ವಲಸೆ ಮತ್ತು ಸಾವಿನ ಮೂಲ, ಸಮಾಜದ ಸ್ವರೂಪ, ಹೆಣ್ಣು ಗಂಡುಗಳ ಸಂಬಂಧ, ಬದುಕು ಮತ್ತು ಸತ್ತವರ ಬಗ್ಗೆ ಇತ್ಯಾದಿ ಪ್ರತಿಯೊಂದು ಸಂಸ್ಕೃತಿ ಸೈದ್ಧಾಂತಿಕ ಸಮಸ್ಯೆಗಳನ್ನು ವಿವರಿಸಲಾಗುತ್ತದೆ. ಪುರಾಣಗಳು ಪುಣ್ಯಕತೆಗಳು, ಜನಪದ ಕಥೆಗಳು ಮತ್ತು ಒಗಟುಗಳಲ್ಲಿ ಸಾಮಾಜಿಕ ಮೌಲ್ಯಗಳು ವ್ಯಕ್ತವಾಗುತ್ತವೆ. ಇವುಗಳ ಬಾಹ್ಯ ಅರ್ಥದ ಹಿಂದೆ ಅನೇಕ ಬಾರಿ ಹೊರಗಿನವರಿಗೆ ಬಹುಬೇಗನೇ ಅರ್ಥವಾಗದಂತಹ ಸಾಮಾಜಿಕ ಮತ್ತು ಐತಿಹಾಸಿಕ ಅರ್ಥಗಳು ಅಡಗಿರುತ್ತವೆ. ಜನರು ದುರದೃಷ್ಟಗಳನ್ನು ವಿವರಿಸಿ ಹೇಳಲು ಮತ್ತು ಅದನ್ನು ನಿಯಂತ್ರಿಸಲು ಹಿಂದೆ ಮಾಟ, ಮಾಯಮಂತ್ರಗಳಿಗೆ ಬಲು ಪ್ರಾಧಾನ್ಯ ನೀಡಲಾಗುತ್ತಿತ್ತು.

ಮಾಟ ಮತ್ತು ಮಾಯಮಂತ್ರಗಳಲ್ಲಿ ಜನರ ನಂಬಿಕೆ ಕಡಿಮೆಯಾಗುತ್ತಾ ಬಂದಿದ್ದರೂ, ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಅದಕ್ಕೆ ಇಂದಿಗೂ ಮಹತ್ವವಿದೆ. ನಗರವಾಸಿಗಳು ಮತ್ತು ವಲಸೆ ಬಂದ ಕೂಲಿಗಾರರ ದುರದೃಷ್ಟ ಇತ್ಯಾದಿಗಳನ್ನು ವಿವರಿಸಿ ಹೇಳಲು ಈಗಲೂ ಅದನ್ನು ಬಳಸಲಾಗುತ್ತಿದೆ.

**ಕಲೆ**

ಆಫ್ರಿಕಾದ ಕಲೆ ಮೊದಲಿಗೆ ಕ್ರಿಯಾತ್ಮಕ ಮತ್ತು ಅವು ಅವರ ನಂಬಿಕೆಗಳ ಪ್ರತೀಕಗಳು. ಹೀಗಾಗಿ ಅವು ಐರೋಪ್ಯ ಕಲಾಪ್ರಕಾರಗಳಿಗಿಂತ ಭಿನ್ನವಾದವು. ಆಫ್ರಿಕನ್ ಕಲೆ ಎಂದರೆ ಇಲ್ಲಿ ಕಪ್ಪು ಜನಾಂಗದ ಕಲೆಯನ್ನು, ಅಂದರೆ ಸಹರಾ ಕೆಳಗಿನ ಆಫ್ರಿಕಾದ ಕಲೆಯನ್ನು, ಅಂದರೆ ಉತ್ತರ ಆಫ್ರಿಕಾದ ಕರೇಶಿಯನ್ ಜನಾಂಗದವರ ಸಂಸ್ಕೃತಿಗಿಂತ ಭಿನ್ನವಾದ ನೀಗ್ರೊ ಮೂಲವಾಸಿಗಳು ಇದ್ದಂತಹ ಭೂಖಂಡದ ಕಲೆಯನ್ನು ಉದ್ದೇಶಿಸಿ ಹೇಳಲಾಗಿದೆ. ಸಹರಾ ಕೆಳಗಿನ ಪ್ರದೇಶಗಳನ್ನು ಈ ಮುಂದಿನ ಭೂಪ್ರದೇಶಗಳಾಗಿ ವಿಂಗಡಿಸುವುದು ಸಾಮಾನ್ಯವಾಗಿ ರೂಢಿ. ಸಹರಾದ ನಿಕಟ ದಕ್ಷಿಣ ಭಾಗದಲ್ಲಿ ಖಂಡದ ಅಗಲಕ್ಕೂ ಹರಡಿಕೊಂಡ ಸೂಡಾನ್‌ನ ಹುಲ್ಲುಗಾವಲಿನ ತೆರೆದ ಬಯಲುಗಳು, ಪಶ್ಚಿಮ ಆಫ್ರಿಕಾದ ಅರಣ್ಯ ಪ್ರದೇಶ ಮತ್ತು ಕಾಡುಗಳು, ಮಧ್ಯ ಆಫ್ರಿಕಾದ ಕಾಂಗೂ ನದಿ ಕಣಿವೆ ಪ್ರದೇಶ, ಪೂರ್ವ ಆಫ್ರಿಕಾದ ಸವನ್ನಾಗಳು, ದಕ್ಷಿಣ ಆಫ್ರಿಕಾದ ಸವನ್ನಾಗಳು ಮತ್ತು ಮರುಭೂಮಿಗಳು, ಈ ಯಾವ ಪ್ರದೇಶದಲ್ಲೂ ಸಮಾನವಾದ ಸಂಸ್ಕೃತಿ ಇಲ್ಲ. ಉದಾಹರಣೆಗೆ ದಕ್ಷಿಣ ಸುಡಾನ್ ಶಿಲ್ಪಕಲಾ ವೈವಿಧ್ಯ ಹಾಗೂ ಶಿಲ್ಪಕೃತಿಗಳಿಗೆ ಪ್ರಸಿದ್ಧವಾದದ್ದು. ಆದರೆ ಪೂರ್ವ ಪ್ರದೇಶದಲ್ಲಿ ಶಿಲ್ಪಕಲೆ ಇಲ್ಲವೇ ಇಲ್ಲ ಎನ್ನಬಹುದು, ಬದಲಾಗಿ ಸಂಗೀತ ಮತ್ತು ಮೌಖಿಕ ಸಾಹಿತ್ಯದಲ್ಲಿ ಇಲ್ಲಿನ ಕಲೆ ಸಮೃದ್ಧವಾಗಿದೆ. ಇಷ್ಟೊಂದು ವೈವಿಧ್ಯವಿದ್ದರೂ ಆಫ್ರಿಕನ್ ಕಲೆಯನ್ನು ಹಲವಾರು ಕಾರಣಗಳಿಂದ ಇಡಿಯಾಗಿ ಚರ್ಚಿಸಬಹುದಾಗಿದೆ. ಒಂದು ಕಾರಣ ಹೀಗಿದೆ: ಬೇರೆ ಬೇರೆ ಜನಾಂಗದ ಕಲಾಕೃತಿಗಳು ಸ್ವರೂಪದಲ್ಲಿ ಬೇರೆ ಬೇರೆಯಾಗಿಯೇ ಇದ್ದರೂ ಜನರ ಸಾಂಸ್ಕೃತಿಕ ಜೀವನದಲ್ಲಿ ಕಲೆ ಹಾಗೂ ಕಲಾವಿದನ ಸಾಂಪ್ರದಾಯಿಕ ಪಾತ್ರ ಇಡೀ ಖಂಡ ದಲ್ಲಿ ಒಂದೇ ತೆರನಾಗಿರುತ್ತದೆ. ಇನ್ನೊಂದು ಕಾರಣವೆಂದರೆ ಆಧುನಿಕ ಆಫ್ರಿಕಾದ ದೇಶಗಳ ಗಡಿಗಳೂ ಮತ್ತು ಆಫ್ರಿಕಾದ ಸಾಂಸ್ಕೃತಿಕ ಗಡಿಗಳೂ ಒಂದೇ ಆಗಿರುವುದಿಲ್ಲ. ಹೀಗಾಗಿ ಇಲ್ಲಿ ಕಲೆಯನ್ನು ಒಂದು ದೇಶದ ಕಲೆ ಎಂದು ಚರ್ಚಿಸದೆ ಒಂದು ಪ್ರದೇಶದ ಕಲೆ ಎಂದು ಚರ್ಚಿಸುವುದು ಅವಶ್ಯಕ.

ಸಹರಾದ ದಕ್ಷಿಣದ ಆಫ್ರಿಕಾದಲ್ಲಿನ ಕಲೆಗಳ ಇತಿಹಾಸ ದೊರಕುವುದು ತೀರ ಅಲ್ಪಸ್ವಲ್ಪ. ಏಕೆಂದರೆ ಆರ್ದ್ರತೆ ಮತ್ತು ಗೆದ್ದಲು ಕಾಟ ಬೇಗ ಹಾಳಾಗುವಂತಹ ವಸ್ತುಗಳನ್ನು ಬಲುಬೇಗ ನಾಶಪಡಿಸುತ್ತದೆ. ನೂರು ವರ್ಷಕ್ಕಿಂತಲೂ ಹಳೆಯದಾದ ಮರದ ಕೆತ್ತನೆಯ ಕೃತಿಯನ್ನು ಕಾಣುವುದು ಬಲು ಅಪರೂಪ. ಹೀಗಿದ್ದರೂ ಇಬನ್ ಬಟುಟಾ ಎಂಬುವನು

ಮಾಲಿಯಲ್ಲಿ, ನೈಜರ್ ತಿರುವಿನ ಪ್ರದೇಶದಲ್ಲಿ ಈಗಲೂ ಧರಿಸುವ ಬೋಬೋ ಮುಖವಾಡಕ್ಕೆ ಸರಿಸಮನಾದ ಮರದ ಹಕ್ಕಿಯ ಮುಖವಾಡಗಳನ್ನು ಕುರಿತು ೧೯೩೫ರಲ್ಲಿ ಹೇಳುತ್ತಾನೆ. ಕೆಲವು ಆಫ್ರಿಕನ್ ಕಲೆಗಳು ಮನೋರಂಜಕ ಮೌಲ್ಯ ಹೊಂದಿವೆ. ಕೆಲವಕ್ಕೆ ರಾಜಕೀಯ ಅಥವಾ ತಾತ್ತ್ವಿಕ ಮಹತ್ವವಿದೆ. ಕೆಲವು ಆಚಾರ ಸಂಪ್ರದಾಯದ ಸಾಧನಗಳಾಗಿವೆ. ಇನ್ನು ಕೆಲವು ಸ್ಪಷ್ಟ ಸೌಂದರ್ಯ ಮೌಲ್ಯವುಳ್ಳ ವಸ್ತುಗಳಾಗಿವೆ. ಆಫ್ರಿಕಾದ ಕಲೆ ಕೇವಲ ಕಾರ್ಯೋದ್ದೇಶ ಉಳ್ಳದ್ದು. ಯಾವುದೇ ಕಲಾಕೃತಿಯ ಹಿಂದಿನ ಆಶಯ ಆಫ್ರಿಕಾದಲ್ಲಿಯಾಗಲಿ ಇನ್ನೆಲ್ಲಾದರೂ ಆಗಿರಲಿ ಅನಿವಾರ್ಯವಾಗಿ ಸಂಕೀರ್ಣವಾಗಿರುತ್ತದೆ. ಆಫ್ರಿಕಾದ ಕೆತ್ತನೆ ಕೆಲಸದ ಕಲಾಕೃತಿಗಳನ್ನು ಒಂದಿಲ್ಲೊಂದು ವ್ಯಾವಹಾರಿಕ ಬಳಕೆಗೆ ತಯಾರಿಸಲಾಗಿದೆ ಎಂದ ಮಾತ್ರಕ್ಕೆ ಅವು ಅದೇ ಸಮಾಯದಲ್ಲಿ ಸೌಂದರ್ಯಾನುಭೂತಿಯನ್ನೂ ನೀಡುತ್ತವೆ ಎಂಬ ಅಂಶವನ್ನು ಅಲ್ಲಗಳೆಯಲಾಗದು. ಒಂದು ನಿರ್ದಿಷ್ಟ ಆಫ್ರಿಕನ್ ಕಲಾಕೃತಿಯನ್ನು ಒಂದು ನಿರ್ದಿಷ್ಟ ಸ್ಥಳ, ಪ್ರದೇಶ ಅಥವಾ ಕಾಲಮಾನಕ್ಕೆ ಸೇರಿದ್ದು ಎಂದು ಹೇಳಬಹುದಾದಷ್ಟು ಶೈಲಿಯ ಭಿನ್ನತೆ, ರೂಪ, ಸಾಮ್ಯತೆ ಮತ್ತು ಸಾಂಪ್ರದಾಯಿಕತೆ ಕಂಡುಬರುತ್ತದೆ. ಮೊದಲನೆಯದು ಭೂಗೋಳಕ್ಕೆ ಸಂಬಂಧಿಸಿದ್ದು, ಇನ್ನಿತರ ಅಂಶಗಳು ಸಮಾನವಾಗಿದ್ದು, ಬೇರೆ ಬೇರೆ ಪ್ರದೇಶದ ಜನ ಕೃತಿಗಳನ್ನು ಬೇರೆ ಬೇರೆ ರೀತಿಯಲ್ಲಿ ತಯಾರಿಸುತ್ತಾರೆ. ಎರಡನೆಯದು ತಂತ್ರಜ್ಞಾನ; ಇನ್ನು ಕೆಲವು ಪ್ರದೇಶಗಳಲ್ಲಿ ಶೈಲಿಯ ಭಿನ್ನತೆ ಬಳಸಿದ ಸಾಮಗ್ರಿಯನ್ನು ಅವಲಂಬಿಸಿರುತ್ತದೆ. ಮೂರನೆಯದು ಸ್ವೋಪಜ್ಞತೆ; ತಜ್ಞರಾದವರು ಒಬ್ಬನೇ ಕಲಾವಿದನ ಕೃತಿಯನ್ನು ಗುರುತಿಸಬಲ್ಲರು. ನಾಲ್ಕನೆಯದು ಸಂಸ್ಥೆಗಳು. ಏಕೆಂದರೆ ಕಲಾಕೃತಿಗಳ ನಿರ್ಮಿತಿಯು ಒಂದು ನಿರ್ದಿಷ್ಟ ಸ್ಥಳಕ್ಕೆ ವಿಶಿಷ್ಟವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಭಾವದಿಂದ ಉಂಟಾಗುತ್ತದೆ. ಕಲಾಕೃತಿಗಳನ್ನು ಮಾರಬಹುದು ಮತ್ತು ಅವುಗಳ ಪ್ರತಿ ಕೃತಿಗಳನ್ನು ತಯಾರಿಸಬಹುದು. ಕಲಾವಿದರೂ ಒಂದೂರಿನಿಂದ ಇನ್ನೊಂದಕ್ಕೆ ಪ್ರಯಾಣ ಬೆಳಸುತ್ತಾರೆ. ಸಂಸ್ಥೆಗಳು ಅವುಗಳ ಫಲವಾದ ಕಲಾಕೃತಿಗಳ ಸಮೇತ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಬಹುದು ಅಥವಾ ಹರಡಬಹುದು. ಕೆಲವು ಬಾರಿ ನೆರೆಹೊರೆಯ ಜನರು ಅದರ ನಕಲು ಮಾಡಿರಬಹುದು. ಕೆಲವು ಬಾರಿ ಅವನ್ನು ಕೊಂಡುಕೊಂಡಿರಬಹುದು. ಕೆಲವು ಬಾರಿ ಯುದ್ಧ ಮಾಡಿ ಗೆದ್ದು ಸೂರೆಹೊಡೆದು ಕೊಂಡೊಯ್ದಿರಬಹುದು. ಅಂತಿಮ ಫಲವೇನೆಂದರೆ ಆಫ್ರಿಕನ್ ಕಲೆಯ ಶೈಲಿಯ ಸಂಕೀರ್ಣತೆ ಮತ್ತು ಈ ಕಾರಣದಿಂದಾಗಿ ವರ್ಗೀಕರಣವನ್ನು ಸುಲಭವಾಗಿ ಮಾಡುವುದು ಸಾಧ್ಯವಿಲ್ಲ.

### ಮೌಖಿಕ ಸಂಪ್ರದಾಯ

ಆಫ್ರಿಕಾದ ಮೌಖಿಕ ಸಂಪ್ರದಾಯದ ಸಾಹಿತ್ಯವು ಸಾರ ಮತ್ತು ವೈವಿಧ್ಯದಲ್ಲಿ ಬೇರೆ ಯಾವುದೇ ಜಾನಪದ ಅಥವಾ ಶಿಷ್ಟ ಪ್ರಾಚೀನ ಅಥವಾ ಅರ್ವಾಚೀನ ಪ್ರಮುಖ

ಸಂಸ್ಕೃತಿಗಳ ಸಾಹಿತ್ಯಕ್ಕೆ ಸರಿಸಮವಾಗಿದೆ. ಸಹರಾದ ದಕ್ಷಿಣ ಭಾಗದಲ್ಲಿ ವಾಸಿಸುತ್ತಿರುವ ಜನಗಳ ತೋಂಡಿ ಸಂಪ್ರದಾಯದ ಕಾವ್ಯ ಮತ್ತು ಕಥನ ಪ್ರಕಾರಗಳು ಬಲು ಶ್ರೀಮಂತ ಮತ್ತು ವೈವಿಧ್ಯಪೂರ್ಣವಾಗಿದೆ. ಇದರಲ್ಲಿ ಪುರಾಣಗಳಿವೆ, ಸ್ತುತಿಗೀತಗಳಿವೆ, ಮಹಾಕಾವ್ಯ, ಜನಪದ ಕಥೆಗಳಿವೆ, ಒಗಟು, ಗಾದೆಗಳು ಮತ್ತು ಮಂತ್ರ ತಂತ್ರಗಳಿವೆ. ಈ ಪ್ರಕಾರಗಳ ವಸ್ತು ಸಾರಗಳು ಬಹಳ ವೈವಿಧ್ಯಮಯವಾಗಿವೆ. ಇದರಲ್ಲಿ ಶಿಶು ಪ್ರಾಸಗಳಿವೆ. ಮೌಖಿಕ ಇತಿಹಾಸ ಹಾಗೂ ಬುದ್ಧಿಗೆ ಸವಾಲನ್ನು ಒಡ್ಡುವ ಸಾಂಕೇತಿಕ ಕೃತಿಗಳೂ ಇವೆ. ಆಫ್ರಿಕಾದ ಮೌಖಿಕ ಸಾಹಿತ್ಯದಿಂದ ಸಂಗ್ರಹಿಸಿದ ಗದ್ಯ ಕಥನಗಳೆಂದರೆ ಐತಿಹ್ಯಗಳು, ಪುರಾಣಗಳು, ಜನಪದ ಕಥೆಗಳು, ಘಟನಾವಳಿ ಮತ್ತು ನಗೆಹನಿಗಳೂ ಪ್ರಮುಖವಾದವು. ಆದರೆ ಆಫ್ರಿಕಾದ ಸಮಾಜದಲ್ಲಿ ಅಷ್ಟೇ ಪ್ರಾಮುಖ್ಯತೆ ಪಡೆದವೆಂದರೆ ಗಾದೆಗಳು, ಒಗಟುಗಳು, ಗೀತ ನಾಟಕಗಳು, ಪದ್ಯ, ಸ್ತುತಿನಾಮಾವಳಿ ಮತ್ತು ಬಾಯಿ ತೊಡರಿಸುವ ಮಾತುಗಳು. ಈ ಸಾಹಿತ್ಯ ತ್ವರಿತವಾಗಿ ಸಾಂಸ್ಕೃತಿಕವಾಗಿ ಬದಲಾಗುತ್ತಿರುವ ನಗರವಾಸಿಗಳಲ್ಲೂ ಪ್ರಚಲಿತವಿದ್ದು ಮೂಲಭೂತವಾದ ಸಮರೂಪತೆ ಮತ್ತು ಗಣನೀಯ ಚೈತನ್ಯಶೀಲತೆ ಮತ್ತು ಸಾಹಿತ್ಯದಲ್ಲಿ ಕಾಣಬರುತ್ತದೆ. ಆಫ್ರಿಕಾದ ಈ ಮೌಖಿಕ ಸಾಹಿತ್ಯದ ಒಂದು ಪ್ರಮುಖ ಲಕ್ಷಣವೆಂದರೆ ಅದಕ್ಕೂ ಸಂಗೀತಕ್ಕೂ ಇರುವ ನಿಕಟ ಸಂಬಂಧ. ಬಹಳಷ್ಟು ಕಾವ್ಯವನ್ನು ಆಡುವುದು ಅಥವಾ ಹಾಡುವುದಕ್ಕಿಂತ ಸಂಗೀತದ ಮೂಲಕ ಅಭಿವ್ಯಕ್ತಿಸಲಾಗುವುದು. ದೇಶೀಯವಾಗಿ ಐತಿಹ್ಯ ಹಾಗೂ ಪುರಾಣಗಳನ್ನು ಅಷ್ಟಾಗಿ ಭಿನ್ನವಾಗಿ ಪರಿಗಣಿಸುವುದಿಲ್ಲ. ಜನಪದ ಗೀತೆಗಳನ್ನು ಕಾಲ್ಪನಿಕ ಎಂದು ಪರಿಗಣಿಸುತ್ತಾರೆ. ಆದರೆ ಅದಕ್ಕೆ ಭಿನ್ನವಾಗಿ ಐತಿಹ್ಯ ಹಾಗೂ ಪುರಾಣಗಳನ್ನು ನಿಜವಾದ ಐತಿಹಾಸಿಕ ಕಥನಗಳೆಂದು ಪರಿಗಣಿಸುತ್ತಾರೆ. ಪ್ರಾಣಿ ಚಮತ್ಕಾರಗಳ ಜನಪದ ಕಥೆಗಳು ಅಂದರೆ ಆಮೆ, ಮೊಲ, ಕಾಡುಮೊಲ, ಚಿರತೈನ್ ಅಥವಾ ಜೇಡಗಳನ್ನು ಒಳಗೊಂಡ ಕಥೆಗಳು ಬಹಳ ಪ್ರಚಲಿತವಾದ ಆಫ್ರಿಕನ್ ಕಥೆಗಳು. ಇದಲ್ಲದೆ ಆಫ್ರಿಕನ್ ಕಥೆಗಳಲ್ಲಿ ಮಾನವ ಮತ್ತು ದೈವೀವಂಚಕರು, ರಾಜರು ಮತ್ತು ಶ್ರೀ ಸಾಮಾನ್ಯರು, ಅವಳಿಗಳು, ಬೇಟೆಗಾರರು, ರಾಕ್ಷಸರು ಮತ್ತು ಕುಳ್ಳರು ಇನ್ನೂ ಏನೇನೋ ಪಾತ್ರಗಳು ಭಾಗವಹಿಸುತ್ತವೆ. ಆದರೆ ಈ ಕಥೆಗಳನ್ನು ಪ್ರಾಣಿ ಕಥೆಗಳಷ್ಟು ಹೆಚ್ಚಾಗಿ ಸಂಗ್ರಹಿಸಿರುವುದಿಲ್ಲ. ಹೇಳುವ ವಿಷಯವನ್ನು ನಾಟುವಂತೆ ಹೇಳುವುದಕ್ಕಾಗಿ ಮತ್ತು ಮಾತಿಗೊಂದು ಸೊಗಸು ನೀಡುವುದಕ್ಕಾಗಿ ಗಾದೆಗಳನ್ನು ಬಳಸುತ್ತಾರೆ. ಅವುಗಳನ್ನು ಕೌಶಲ್ಯ ಪೂರ್ಣವಾಗಿ ಬಳಸುವುದು ಆಫ್ರಿಕನ್ ಸಮಾಜದಲ್ಲಿ ವಾಗ್ಮಿಕೆಯ ಕುರುಹು. ಇವು ಮಾತಿನ ಅಂದಗಾರಿಕೆಯನ್ನು ಸೂಚಿಸುತ್ತದೆ. ಅನೇಕ ಗಾದೆಗಳ ಅರ್ಥ ಬಹಳ ನಿಗೂಢವಾಗಿರುತ್ತದೆ. ಅದನ್ನು ಬಳಸುವವರ ಸಂಸ್ಕೃತಿ ಅರ್ಥವಾಗಿದ್ದರೆ ಮಾತ್ರ ಅದನ್ನು ಅರ್ಥ ಮಾಡಿಕೊಳ್ಳಬಹುದು. ಗಾದೆಗಳ ಒಂದು ತಂಡವನ್ನು ವಿಶ್ಲೇಷಿಸಿ ನೋಡಿದರೆ ಆ ಗಾದೆಗಳು ಅಂಗ ಭಾಗವಾಗಿರು ವಂತಹ ಸಂಸ್ಕೃತಿಯ ಮೂಲಭೂತ ಮೌಲ್ಯಗಳು ಅರ್ಥವಾಗುತ್ತವೆ. ಗಾದೆಗಳ ಬಗ್ಗೆ ಅಧ್ಯಯನ ಮಾಡಿರುವಷ್ಟು ಒಗಟುಗಳನ್ನು ಅಧ್ಯಯನ ಮಾಡಿರುವುದಿಲ್ಲ. ಏಕೆಂದರೆ ಅವನ್ನು ಹೆಚ್ಚಾಗಿ ಮಕ್ಕಳೇ ಹೇಳಿಕೊಳ್ಳುತ್ತಿರುತ್ತವೆ. ಸಾಮಾನ್ಯವಾಗಿ ಅವು ಪ್ರಶ್ನೆಗಳ

ರೂಪದಲ್ಲಿರದೆ ಹೇಳಿಕೆಗಳ ರೂಪದಲ್ಲಿರುತ್ತವೆ. ಪ್ರಶ್ನೆ ಮತ್ತು ಉತ್ತರಗಳ ನಡುವಿನ ಸಂಪರ್ಕ ಬಲು ಸೂಕ್ಷ್ಮವಾಗಿರುತ್ತದೆ. ಇದನ್ನು ಅರ್ಥ ಮಾಡಿಕೊಳ್ಳಲು ಅದಕ್ಕೆ ಮೂಲ ಮಾತೃಕೆಯಾದ ಸಂಸ್ಕೃತಿಯ ಆಳವಾದ ಪರಿಚಯವಿರಬೇಕು. ಇಂಗಿತಾರ್ಥ ಒಗಟುಗಳು ಮತ್ತು ಗಾದೆ ಒಗಟುಗಳು ಎರಡೂ ಆಫ್ರಿಕನ್ ಸಾಹಿತ್ಯದಲ್ಲಿವೆ. ಕಥೆ ಹೇಳುವುದು ಆಫ್ರಿಕಾದಲ್ಲಿ ಒಂದು ಲಲಿತ ಕಲೆಯಾಗಿದೆ ಮತ್ತು ಕೆಲವು ಸಮಾಜದಲ್ಲಿ ಅದು ವೃತ್ತಿಪರ ಕಲೆಯಾಗಿ ಹೋಗಿದೆ. ಜನಪದ ಕಥೆಗಳನ್ನು ಸಾಮಾನ್ಯವಾಗಿ ಬೇಸಿಗೆಯ ರಾತ್ರಿಗಳಲ್ಲಿ ಹೇಳುತ್ತಾರೆ. ಕಥನಕಾರ ಹಾಗೂ ಕೇಳುಗರ ನಡುವಿನ ಸಂವಾದ ಅತ್ಯಂತ ನಾಟಕೀಯವಾಗಿರುತ್ತದೆ. ಉತ್ತಮ ಕಥನಕಾರ ಒಳ್ಳೆಯ ನಟ ಕೂಡ. ಆತ ತನ್ನ ಧ್ವನಿ, ಕೈಗಳು ಮತ್ತು ದೈಹಿಕ ಅಭಿನಯಗಳ ಮೂಲಕ ವಂಚಕನ ನಡವಳಿಕೆಗಳನ್ನು ಮತ್ತು ಬೇಟೆಗಾರ ತನ್ನ ಬೇಟೆ ಅಟಕಾಯಿಸುವುದನ್ನು ಅನುಕರಿಸಿ ತೋರುತ್ತಾನೆ. ಕಥೆಯ ಪ್ರಾರಂಭಕ್ಕೆ ಒಗಟು ಹೇಳುವುದು ನಡೆಯುತ್ತದೆ. ಜನಪದ ಕಥೆಗಳ ನಡುನಡುವೆ ಸಂಗೀತ ಹಾಗೂ ಹಾಡುಗಾರಿಕೆ ಬರುತ್ತದೆ. ಕೇಳುಗರೂ ಅವರಲ್ಲಿ ಭಾಗವಹಿಸುತ್ತಾರೆ. ಕಥೆಗಾರ ಕೇಳಿದ ಒಂದು ಪ್ರಶ್ನೆಗೆ ಕೇಳುಗರೂ ಉತ್ತರಿಸಬಹುದು ಅಥವಾ ಕಥೆಗಾರ ಹಾಡುವಾಗ ಕೇಳುಗರು ಮೇಳಗಾಯಕರಾಗಿ ವರ್ತಿಸಬಹುದು. ಆಫ್ರಿಕಾದ ಮೌಖಿಕ ಸಂಪ್ರದಾಯದ ಸಾಹಿತ್ಯದ ವಿವಿಧ ಪ್ರಕಾರಗಳು ಆಫ್ರಿಕನ್ ಸಮಾಜದಲ್ಲಿ ವಿವಿಧ ಕಾರ್ಯಗಳನ್ನು ನಿರ್ವಹಿಸುತ್ತವೆ. ಇವು ಮನೋರಂಜನೆಯನ್ನು ನೀಡುವುದಷ್ಟೇ ಅಲ್ಲ ತಮ್ಮ ಎಳೆಯರಿಗೆ ಶಿಕ್ಷಣ ನೀಡಲು, ಆಚಾರ ಮತ್ತು ನಂಬಿಕೆಗಳ ಮೌಲ್ಯ ಪ್ರತಿಪಾದನೆ ಮಾಡಲು ಸಾಂಸ್ಕೃತಿಕ ನಡಾವಳಿಗಳನ್ನು ಪಾಲಿಸುವಂತೆ ಉತ್ತೇಜಿಸಲು ಮತ್ತು ಸಾಂಘಿಕ ನಡವಳಿಕೆಗಳಿಗೆ ಮನೋವೈಜ್ಞಾನಿಕ ಹೊರ ಅರಿವನ್ನು ನೀಡಲು ಇವನ್ನು ಬಳಸಲಾಗುತ್ತದೆ. ಒಗಟುಗಳು ಕಿರಿಯರ ಬುದ್ಧಿಶಕ್ತಿಯನ್ನು ನಿಶ್ಚಿತಗೊಳಿಸುತ್ತದೆ. ಇದೇ ರೀತಿ ನಿರ್ದಿಷ್ಟ ಉತ್ತರವಿಲ್ಲದ ಡೋಲಾಯಮಾನ ಜನಪದ ಕಥೆಗಳು ಹಿರಿಯರ ಧೀಶಕ್ತಿಯನ್ನು ಚುರುಕುಗೊಳಿಸುತ್ತವೆ. ಪುರಾಣಗಳು ಅಧಿ ಪ್ರಾಕೃತಿಕ ನಂಬಿಕೆಗಳು ಮತ್ತು ಆಚಾರಗಳನ್ನು ಕುರಿತ ಪ್ರಶ್ನೆಗಳಿಗೆ ಉತ್ತರ ನೀಡುವ ಆಕರಗಳೆಂದು ಪರಿಗಣಿಸುತ್ತಾರೆ. ಭೂಮಾಲೀಕತ್ವ, ಸಾಮಾಜಿಕ ಸ್ಥಾನಮಾನ ಮತ್ತು ರಾಜಕೀಯ ಅಧಿಕಾರವನ್ನು ಕುರಿತು ಸಮರ್ಥನೆ ನೀಡಲು ಇವನ್ನು ಬಳಸಲಾಗುತ್ತದೆ.

ವಾಡಿಕೆಯ ಸಂಭಾಷಣೆಯಲ್ಲಿ ಗಾದೆಗಳನ್ನು, ಮಾರ್ಗದರ್ಶನ ನೀಡಲು, ಪ್ರೋತ್ಸಾಹ ನೀಡಲು ಅಥವಾ ಪ್ರಶಂಸಿಸಲು ಬಳಸುತ್ತಾರೆ. ಇಟ್ಸೆಕೋ ಮಾತನಾಡುವ ಜನರ ನಾಟಕ ಸಂಸ್ಥೆಗಳು ಸಾಂಸ್ಕೃತಿಕ ಕಟ್ಟುಕಟ್ಟಳೆಗಳನ್ನು ಪಾಲಿಸಲು ತಪ್ಪಿದ ಜನರ ಮೇಲೆ ಸಾಮಾಜಿಕ ನಿಯಂತ್ರಣವನ್ನು ಸಾಧಿಸುವುದಕ್ಕಾಗಿ, ಜನರು ಹಾಗೂ ಬೊಂಬೆಗಳು ನಟಿಸುವಂತಹ ನಾಟಕಗಳನ್ನು ಆಡುತ್ತಾರೆ. ಅಂತಿಮವಾಗಿ ಜನಪದ ಕಥೆಗಳಲ್ಲಿ ಸಾಂಸ್ಕೃತಿಕ ನೈಜತೆಯನ್ನು ತಿರುಚಿ ಹೇಳುವ ಪ್ರಕ್ರಿಯೆ ಮನಸ್ಸಿನ ಇಚ್ಛೆಯನ್ನು ಪರ್ಯಾಯವಾಗಿ ಪೂರ್ಣಗೊಳಿಸುವುದಕ್ಕೆ

ಮಾಡಿದ ಪ್ರಯತ್ನಗಳನ್ನು ಸೂಚಿಸುತ್ತವೆ. ಈ ಕಥಾನಕಗಳ ಪಾತ್ರಗಳು, ಜನರು ಸಾಮಾಜಿಕ ಕಟ್ಟುಪಾಡುಗಳ ಕಾರಣ ಮಾಡಲಾರದಿದ್ದ ಆದರೆ ಮನಸ್ಸಿನಲ್ಲಿ ತಾವು ಮಾಡಬೇಕೆಂದು ಬಯಸುವ ರೀತಿಗಳಲ್ಲಿ ವರ್ತಿಸುತ್ತವೆ. ಹೀಗೆ ಜನಪದ ಕಥೆಗಳು ಕೇಳುಗರ ಭಾವ ಪರಿಶೋಧನೆಯ ಕೆಲಸ ನಿರ್ವಹಿಸುತ್ತವೆ.

**ಸಾಹಿತ್ಯ**

ಬರವಣಿಗೆಯ ಕಲೆ ರೂಪುಗೊಳ್ಳುವುದಕ್ಕೆ ಬಹಳ ಮೊದಲೇ ಆಫ್ರಿಕಾದ ಜನತೆ ಪುರಾಣ, ಐತಿಹ್ಯ, ನೀತಿಕಥೆಗಳು, ಒಗಟು ಮತ್ತು ಉತ್ತಮ ಸಂವಾದಗಳ ಮೂಲಕ ತಮ್ಮ ಆಲೋಚನೆಗಳು, ಭಾವನೆಗಳು ಮತ್ತು ಕಾಳಜಿಗಳಿಗೆ ಕಲಾತ್ಮಕ ಅಭಿವ್ಯಕ್ತಿ ನೀಡಿದ್ದಾರೆ. ಮೌಖಿಕ ಸಾಹಿತ್ಯದ ಸಾಂಪ್ರದಾಯಿಕ ರೂಪಗಳು ಇಂದಿಗೂ ಮುಂದುವರಿಯುತ್ತಿವೆ ಹಾಗೂ ಸಮಕಾಲೀನ ವಸ್ತುಗಳನ್ನು ಮತ್ತು ಪುರಾತನ ವಸ್ತುಗಳನ್ನು ಒಳಗೊಂಡಿರುತ್ತವೆ. ಯೊರೂಬಾದ ಸಮೃದ್ಧ ಮೌಖಿಕ ಸಾಹಿತ್ಯ ಲಿಖಿತ ಸಾಹಿತ್ಯದ ಮೇಲೆ ತನ್ನ ಪ್ರಭಾವವನ್ನು ಬೀರಿದೆ. ಹೌಸಾ ಭಾಷೆಯನ್ನು ಅರಾಬಿಕ್ ಮತ್ತು ರೋಮನ್ ಲಿಪಿಗಳಲ್ಲಿ ಬರೆದಿರುತ್ತಾರೆ. ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮೌಖಿಕ ಮತ್ತು ಲಿಖಿತ ಸಾಹಿತ್ಯಗಳ ನಡುವಿನ ಕೊಳ್ಕೊಡೆ. ಕಥಾಕಾಲಕ್ಷೇಪಕ್ಕೆ ಹೆಚ್ಚು ಒತ್ತು ನೀಡಲಾಗುತ್ತದೆ. ಇಥಿಯೋಪಿಯಾದ ಭಾಷೆಗಳಲ್ಲಿ ಪ್ರಮುಖವಾದವು ಅಮ್ಹಾರಿಕ್, ಸೋಮಾಲಿ, ಸ್ವಾಹಿಲಿ. ಸೋಮಾಲಿಯಲ್ಲಿ ಬಹಳ ಪುರಾತನವಾದ ಸಮೃದ್ಧವಾದ ಮೌಖಿಕ ಸಾಹಿತ್ಯ ವಿದೆ. ಅದು ಇಂದಿಗೂ ಪ್ರವರ್ಧಿಸುತ್ತಿದೆ ಮತ್ತು ಆಧುನಿಕ ಬರವಣಿಗೆಯ ಮೇಲೆ ಪ್ರಭಾವವ ಬೀರುತ್ತಿದೆ. ಅಮ್ಹಾರಿಕ್ ಅಧಿಕೃತ ಭಾಷೆ. ಸ್ವಾಹಿಲಿಯ ಹಳೆಯ ಕಿಂಗೋಜಿ ಉಪಭಾಷೆಯನ್ನು ಅರಾಬಿಕ್ ಲಿಪಿಯಲ್ಲಿ ಬರೆಯಲಾಗುತ್ತದೆ. ಸ್ವಾಹಿಲಿ ಕಾವ್ಯದಲ್ಲಿ ಸಾರ್ವಜನಿಕ ಮತ್ತು ಧಾರ್ಮಿಕ ವಿಮರ್ಶಾತ್ಮಕವಾದ ರಚನೆಯ ಒಂದು ಪ್ರಬಲ ಸಂಪ್ರದಾಯವಿದೆ. ಈ ರೀತಿ ಬೋಧನಾಪ್ರಧಾನ ಕಾವ್ಯ ರಚಿಸಿದ ಪ್ರಖ್ಯಾತ ಕವಿ ಎಂದರೆ ಮಾನ ಕುಪೋನ ಬಿಂಟಿ ಮಷ್ಠಾ ಎಂಬ ಕಿನ್ಯಾದ ಲಾಮೂ ದ್ವೀಪದ ಕವಿ. ದಕ್ಷಿಣ ಆಫ್ರಿಕಾವು ಶೋನಾ ಬೆಂಬಾ, ಡಾವಾನ್, ಜುಲು, ಪೇಡಿ, ಕ್ಸೋಸ ಮತ್ತು ಸೋಕೋ ಎಂಬ ಆಫ್ರಿಕಾ ಭಾಷೆಗಳಲ್ಲಿ ಅಗಾಧ ಸಾಹಿತ್ಯವನ್ನು ರಚಿಸಿದೆ.

**ಸಂಗೀತ ಮತ್ತು ನೃತ್ಯ**

ಆಫ್ರಿಕಾದ ಸಂಗೀತ ಮತ್ತು ನೃತ್ಯವನ್ನು ಒಟ್ಟೊಟ್ಟಿಗೆ ಅಧ್ಯಯನ ಮಾಡಲಾಗುತ್ತದೆ. ಏಕೆಂದರೆ ಇವುಗಳಲ್ಲಿ ಒಂದು ಕಲೆಯನ್ನು ಪ್ರದರ್ಶಿಸುವಾಗ ಇನ್ನೊಂದು ಕಲೆಯನ್ನೂ ಜೊತೆ ಜೊತೆಯಲ್ಲೇ ಬಳಸುತ್ತಾರೆ. ಇಂದು ಶಾಸ್ತ್ರೀಯ ಅಥವಾ ಸಾಂಪ್ರದಾಯಿಕ ಎಂದು ಕರೆಯುತ್ತಿರುವ ಸಂಗೀತ ಬಹುಶಃ ಈ ಹಿಂದೆ ಬಳಕೆಯಾಗುತ್ತಿದ್ದ ಆಫ್ರಿಕನ್ ಸಂಗೀತಕ್ಕಿಂತ ಭಿನ್ನ. ಆಫ್ರಿಕನ್ ಸಂಗೀತ ಹಿಂದೆ ಒಂದು ನಿರ್ದಿಷ್ಟ ಜನಾಂಗೀಯ ಸಮುದಾಯಕ್ಕೆ

ಕಟ್ಟುನಿಟ್ಟಾಗಿ ಸೇರಿರಲಿಲ್ಲ. ಆಫ್ರಿಕನ್ ಸಂಗೀತದ ಅತಿ ಪ್ರಾಚೀನ ಕುರುಹುಗಳು ಪ್ರಾಗೈತಿಹಾಸಿಕ ಶೋಧನೆಯಿಂದ ದೊರೆತಿವೆ. ಸಹಾರ ಕೆಳಗಿನ ಹವಾಮಾನ ವಲಯಗಳಲ್ಲಿನ ನಿಕ್ಷೇಪಗಳಲ್ಲಿ ಸಸ್ಯಮೂಲದಿಂದ ತಯಾರಿಸಿದ ಸಂಗೀತ ಸಾಧನಗಳು ಉಳಿದಿಲ್ಲವಾದರೂ, ನೈಜೀರಿಯಾದ ಸಂಗೀತದ ಬಗ್ಗೆ ಪ್ರಾಗೈತಿಹಾಸಿಕ ಮೂಲಗಳು ಅಂದರೆ ಕಲ್ಲು ಮತ್ತು ಆವೆಮಣ್ಣಿನಲ್ಲಿ ಸಂಗೀತ ಉಪಕರಣಗಳ ಪ್ರತಿಕೃತಿಗಳು ರಚಿತವಾಗಿರುವುದು ದೊರೆಯುತ್ತವೆ. ಕ್ರಿ.ಶ.೧೦ನೇ ಶತಮಾನದಿಂದ ಮತ್ತು ೧೪ನೆಯ ಶತಮಾನದಿಂದ ಇಗ್ಬಿನ್(ತಮಟೆ) ತಾಳ ವಾದ್ಯಗಳು ಬಳಕೆಯಲ್ಲಿದ್ದಂತಿದೆ. ಈಗ ಯೊರೂಬಾ ಸಂಸ್ಕೃತಿಗೆ ಸೇರಿದ್ದೆಂದು ಹೇಳುವ ಆದರೆ ಸವನ್ನಾದ ಉದ್ದಗಲಕ್ಕೂ ವಿಶಾಲ ಪ್ರದೇಶದಲ್ಲಿ ಚಿರಪರಿಚಿತವಾದ ಡುನ್‌ಡುನ್ ಒತ್ತಡ ತಮಟೆಗಳು ಬಹುಶಃ ೧೫ನೆಯ ಶತಮಾನದ ಸುಮಾರಿಗೆ ಬಳಕೆಗೆ ಬಂದವಾಗಿರಬೇಕು. ಏಕೆಂದರೆ ಬೆನಿನ್ ರಾಜ್ಯಾದಲ್ಲಿ ಆ ಕಾಲಾವಧಿಯಲ್ಲಿ ತಯಾರಾದ ಫಲಕಗಳಲ್ಲಿ ಅವುಗಳ ಉಲ್ಲೇಖವಿದೆ. ಯೊರೂಬಾ ತಮಟೆಗಳನ್ನು ಒರಿಕ್ಕಿ ಕಾವ್ಯವಾಚನದೊಂದಿಗೆ "ಮಾತನಾಡುವ ತಮಟೆ"ಗಳೆಂದು ಬಳಸುತ್ತಾರೆ. ಜೋಡು ಕಬ್ಬಿಣದ ಕ್ಲಾಪರ್ ಇಲ್ಲದ ಗಂಟೆಗಳು ಈ ಮಾತಾಡುವ ತಮಟೆಗಳಿಗಿಂತ ಮುಂಚೆ ಬಂದಿರುವಂತಿದೆ. ಮಣಿಗಂಟೆ ಮತ್ತು ನೀಳಗಂಟೆಗಳು ಅವುಗಳ ಕ್ಲಾಪರ್ ಸಮೇತ ೧೫ನೆಯ ಶತಮಾನದ ಹೊತ್ತಿಗೆ ಪರಿಚಿತವಾಗಿದ್ದವು. ಸಂಗೀತಕ್ಕೆ ಸಂಬಂಧಿಸಿದಂತೆ ದೊರೆತ ಇತರ ಪ್ರಾಗೈತಿಹಾಸಿಕ ವಸ್ತುಗಳೆಂದರೆ ಜೈರ್ ನ ಶಬಾ ವಲಯದಲ್ಲಿ ಮತ್ತು ಜಿಂಬಾಬ್ವೆಯ ಅಮೇಲ ನಿವೇಶನಗಳಲ್ಲಿ ದೊರೆತ ಕಬ್ಬಿಣದ ಗಂಟೆಗಳು, ಬೆನಿನ್‌ನ ಕಂಚಿನ ಫಲಕಗಳು ಸಂಗೀತ ಕುರಿತ ಇತಿಹಾಸಕ್ಕೆ ಇನ್ನಷ್ಟು ಮತ್ತು ಅಪರಿಮಿತವಾದ ಆಕರಗಳನ್ನು ಒದಗಿಸುತ್ತದೆ. ಆಫ್ರಿಕಾದ ಜನರ ಬೃಹತ್ ಹಾಗೂ ಸಣ್ಣ ಪುಟ್ಟ-ವಲಸೆಗಳು, ಸಂಗೀತ ಶೈಲಿ ಹಾಗೂ ಉಪಕರಣಗಳು ಹೊಸ ಪ್ರದೇಶಗಳನ್ನು ತಲುಪುಲು ಕಾರಣವಾದವು. ಪಶ್ಚಿಮ ಆಫ್ರಿಕಾದ ಕ್ವಾ ಭಾಷೆ ಮಾತನಾಡುವ ಜನರಿಂದ ಬಹುಶಃ ಆರಂಭಗೊಂಡ ಒಂಟಿ ಹಾಗೂ ಜೋಡಿ ಕಬ್ಬಿಣದ ಗಂಟೆಗಳು ಕಬ್ಬಿಣ ಯುಗದ ಒಂದು ಮಾತನಾಡುವ ಜನರಿರುವ ಪಶ್ಚಿಮ ಮಧ್ಯ ಆಫ್ರಿಕಾಕ್ಕೆ ಹರಡಿತು ಮತ್ತು ಅಲ್ಲಿಂದ ಜಿಂಬಾಬ್ವೆ ಹಾಗು ಜಾಂಬೆಸಿ ನದಿ ಕಣಿವೆಗೆ ತಲುಪಿತು.

ಆಫ್ರಿಕಾದ ಸಂಗೀತ ವಾದ್ಯ ಉಪಕರಣಗಳಲ್ಲಿ ತಮಟೆಗೆ ಬಹಳ ಪ್ರಾಮುಖ್ಯ ದೊರಕಿದೆ. ಹೀಗಿದ್ದರೂ ಈ ಖಂಡದ ಸಂಗೀತದಲ್ಲಿ ಪ್ರಮುಖ ಪಾತ್ರವಹಿಸುವಂತಹ ಇನ್ನೂ ಅನೇಕ ವಾದ್ಯಗಳಿವೆ. ಉಸಿರು ವಾದ್ಯವಾದ ಹನ್ನೋ ಸರಳವಾದ ಮುಖ ಬಿಲ್ಲಿನಿಂದ ಹಿಡಿದು ಸಂಕೀರ್ಣ ವಾದ್ಯಗಳಾದ ಜಿತರ್, ಹಾರ್ಪ್, ಲೂದ್ ಮತ್ತು ಲೈರ್ ಗಳಂತಹ ತಂತಿ ವಾದ್ಯಗಳಿವೆ. ಖಂಡದಾದ್ಯಂತ ಹರಡಿದ ವಿವಿಧ ಬಗೆಯ ಗಿಲಕಿ ವಾದ್ಯಗಳಿವೆ. ಅವುಗಳೆಂದರೆ ಲಯ ಸಾಧನ ಗಿಲಕಿ ವಾದ್ಯಗಳು ಅಂದರೆ, ಗಿಲಕಿ, ಸಿಸ್ಟ್ರಂ, ಪೂಳ್ಳುಗಿಲಂ, ಮಾರಿಂಬ ಎಂದು ಕರೆಯುವ ವಿವಿಧ ಸೈಲೋಫೋನ್‌ಗಳು ಸಹಾರಾ ಕೆಳಗಿನ ಆಫ್ರಿಕಾದ ಜನತೆಗೆ ಬಹಳ ಪರಿಚಿತವಿದ್ದವು. ಲಾಮಲ್ಲೊ ಫೋನ್ ಅಥವಾ ತಂದ್ ಪಿಯಾನೋ ಎಂಬ ಇಡಿಯೋ

ಫೋನ್ ಆಫ್ರಿಕಾಕ್ಕೆ ವಿಶಿಷ್ಟವಾದದ್ದು. ತಾಳ ಹಾಗೂ ಸಂಗೀತ ವಾದ್ಯಗಳ ನಡುವೆ ಬರುವ ಆಫ್ರಿಕಾದ ಸ್ಪಿಕ್ ಇಡೋ ಫೋನ್ ಅಥವಾ ಸ್ಲಿಡ್ ಡ್ರಮ್ ಅನ್ನು ಡೊಳ್ಳು ಮಾಡಿದ ದಿಮ್ಮಿಗಳಿಂದ ತಯಾರಿಸಲಾಗುತ್ತದೆ. ಕಾರ್ಡೋಫೋನ್ ಎಂಬುದು ಎರಡು ನಿಶ್ಚಿತ ಬಿಂದುಗಳ ನಡುವೆ ಎಳೆದು ಕಟ್ಟಿದ ತಂತಿಗಳಿಂದ ಧ್ವನಿ ಹೊರಡಿಸುವಂತಹ ವಾದ್ಯ. ಸಂಗೀತ ಬಿಲ್ಲು ಲೂಟ್, ಪಿಟೀಲು, ಹಾರ್ಪ್‌ಲ್ಯಾಟ್‌ಗಳು, ಲೈರ್‌ಗಳು, ಹಾರ್ಫ್‌ಗಳು ಈ ತರಹದ ವಾದ್ಯಗಳು. ಏರೋಫೋನ್ ಅಥವಾ ಆಫ್ರಿಕಾದಲ್ಲಿ ಬಳಸಲಾಗುವ ಉಸಿರು ವಾದ್ಯಗಳನ್ನು ಮೂರು ಬಗೆಯಾಗಿ ವಿಂಗಡಿಸಲಾಗುತ್ತದೆ. ಕೊಳಲು, ಬಿದುರು ಪೀಪಿ ಮತ್ತು ತುತ್ತೂರಿ.

ಆಫ್ರಿಕನ್ ಸಮೂಹದ ನೃತ್ಯಗಳು ವಿವಿಧ ಬಗೆಯ ಸಾಮಾಜಿಕ ಉದ್ದೇಶಗಳಿಗೆ ಸಲ್ಲುತ್ತವೆ. ಒಂದು ಸ್ವದೇಶಿ ನೃತ್ಯ ಪರಂಪರೆಯ ಒಳಗೆ ಪ್ರತಿ ನೃತ್ಯ ಪ್ರದರ್ಶನವೂ ಒಂದು ಮುಖ್ಯ ಹಾಗೂ ಅನೇಕ ಉಪ ಉದ್ದೇಶಗಳನ್ನು ಹೊಂದಿರುತ್ತದೆ. ಇದು ಜನರ ಸಾಮುದಾಯಿಕ ಮೌಲ್ಯಗಳು ಮತ್ತು ಸಾಮಾಜಿಕ ಸಂಬಂಧಗಳನ್ನು ಅಭಿವ್ಯಕ್ತಿಸುತ್ತದೆ ಅಥವಾ ಬಿಂಬಿಸುತ್ತದೆ. ವಿವಿಧ ಬಗೆಯ ನೃತ್ಯ ಶೈಲಿಗಳ ಭಿನ್ನತೆಯನ್ನು ಗುರುತಿಸಬೇಕಾದರೆ ಪ್ರತಿಯೊಂದು ನೃತ್ಯವನ್ನು ಏತಕ್ಕಾಗಿ ಮಾಡಲಾಗುತ್ತದೆ ಎಂಬುದನ್ನು ಗುರುತಿಸುವುದು ಅಗತ್ಯ. ಉತ್ಸವ ಆಚರಣೆ ಹಾಗೂ ಸಾಮಾಜಿಕ ಮನೋರಂಜನೆಗಳ ನಡುವೆ ಇಲ್ಲಿ ಭಿನ್ನತೆ ಸ್ಪಷ್ಟವಾಗಿ ಕಾಣಸಿಗದು. ಒಂದು ಉದ್ದೇಶ ಇನ್ನೊಂದರೊಳಗೆ ಮಿಳಿತವಾಗಿರುತ್ತದೆ. ನೃತ್ಯವನ್ನು ಒಂದು ಸಾಮಾಜಿಕ ಉತ್ಸವವಾಗಿ ಆನಂದಿಸುತ್ತಾರೆ. ಹಾಗೆಯೇ ಅದು ಸಾಮುದಾಯಿಕ ಜೀವನದ ಒಂದು ಅಭಿವ್ಯಕ್ತಿಯಾಗಿ ಮನೋರಂಜನೆ ಹಾಗೂ ಸಂತೋಷವನ್ನು ನೀಡುವ, ಅದನ್ನು ಅದಕ್ಕಾಗಿಯೇ ಆನಂದಿಸಬಲ್ಲ ಒಂದು ಚಟುವಟಿಕೆಯಾಗಿರುತ್ತದೆ. ಇನ್ನೂ ಅನೇಕ ಆಚಾರ ವಂತ ಸಮಾಜಗಳಲ್ಲಿ ಚಿಕಿತ್ಸಾ ವಿಧಾನವಾಗಿ ಇದನ್ನು ಬಳಸಲಾಗುತ್ತದೆ. ಉದಾಹರಣೆಗೆ ಹೌಸಾ ಹೆಂಗಸಸರು ನೃತ್ಯದ ಮೂಲಕ ರೋಗ ವಾಸಿ ಮಾಡಿಸುತ್ತಾರೆ. ಬೋರಿ ಪಂಥದಲ್ಲಿ ದೆವ್ವ ಮೈಮೇಲೆ ಬರುವುದು ನೃತ್ಯದಿಂದ. ಅನೇಕ ಪ್ರದೇಶಗಳಲ್ಲಿ ಛದ್ಮವೇಷ ನೃತ್ಯ ಧಾರ್ಮಿಕ ಸಮಾಜಗಳಲ್ಲಿ ಸಾಮಾನ್ಯ ಆಚರಣೆಯಾಗಿರುತ್ತದೆ. ಪ್ರಾಣಿಗಳ ಮುಖವಾಡ, ಬಟ್ಟೆ ಹಾಗೂ ರಫಿಯಾದಿಂದ ಸುತ್ತಲಾದ ಬಿದುರಿನ ರಚನೆಗಳನ್ನು ಬಳಸಲಾಗುವುದು. ಎಲ್ಲ ಆಫ್ರಿಕನ್ ಸಂಸ್ಕೃತಿಗಳಲ್ಲಿ ನೃತ್ಯ, ಸಂಗೀತ ಹಾಗೂ ಹಾಡುಗಳು ಒಂದು ಸಮುದಾಯ ದಲ್ಲಿ ವ್ಯಕ್ತಿ ಹಾಗೂ ಗುಂಪಿನ ಪಾತ್ರವನ್ನು ನಿರ್ಧರಿಸುತ್ತದೆ. ಪದ್ಧತಿಯ ನೃತ್ಯಗಳಲ್ಲಿ ರಾಜನಾದವನು ತನ್ನ ನೃತ್ಯ ಕ್ಷಮತೆಯನ್ನು ತೋರಿಸಬೇಕಾಗುತ್ತದೆ. ಅಗತ್ಯ ಗುಣಮಟ್ಟ ವನ್ನು ಆತ ತೋರದಿದ್ದರೆ ಅವನ ಪ್ರತಿಷ್ಠೆಗೆ ಕುಂದುಂಟಾಗುತ್ತದೆ. ಆತ ಆಸ್ಥಾನದಲ್ಲಿ ರಾಜಗಾಂಭೀರ್ಯದಿಂದ ಕುಳಿತಿರುವಾಗ ಆತನ ಸೇನಾನಾಯಕರು ಪ್ರತಿಯೊಬ್ಬರೂ ಅವರವರಿಗೆ ಗುಪ್ತವಾದ ನರ್ತನ ಲಯದಿಂದ ಅವನನ್ನು ಸ್ವಾಗತಿಸುತ್ತಾರೆ. ಆಮೇಲೆ ಬೇಟೆಗಾರರು ಸಂಕೀರ್ಣ ನರ್ತನ ಲಯದಲ್ಲಿ ನೃತ್ಯ ಮಾಡಲಾರಂಭಿಸುತ್ತಾರೆ. ಅರಮನೆ ಮುಖ್ಯಸ್ಥರು, ಹೆಂಗಸರು, ಮಾರುಕಟ್ಟೆ ಮುಖ್ಯಸ್ಥರು, ಹುಡುಗಿಯರು, ಯುವಕರು, ಮಕ್ಕಳು

ಎಲ್ಲರೂ ರಾಜನನ್ನು ಸ್ತುತಿಸುವುದಕ್ಕೆ ತಮ್ಮ ತಮ್ಮದೇ ಆದ ನೃತ್ಯ ವಿಧಾನ ಹೊಂದಿರುತ್ತಾರೆ. ಕೆಲವು ಪ್ರದೇಶಗಳಲ್ಲಿ ಅಂತ್ಯಕ್ರಿಯೆಗಳಲ್ಲಿ ಮಣ್ಣು ಮಾಡಿ ಬಂದ ಮೇಲೆ ನರ್ತಿಸಲು ಮತ್ತು ವಾರ್ಷಿಕೋತ್ಸವಗಳಲ್ಲಿ ನರ್ತಿಸಲು ನೃತ್ಯಗಳನ್ನು ವಿನ್ಯಾಸಗೊಳಿಸಲಾಗಿದೆ. ವೃತ್ತೀಯ ಕೂಟಗಳು ಮತ್ತು ವೃತ್ತಿಪರರ ಸಂಘಗಳು ಅಂದರೆ ಕಮ್ಮಾರರು, ಬೇಟೆಗಾರರು, ಮರದ ಕೆತ್ತನೆ ಕೆಲಸಗಾರರು ಮುಂತಾದವರು ತಮ್ಮದೇ ಆದ ಅಭಿವ್ಯಕ್ತಿ ನೃತ್ಯಗಳನ್ನು ಹೊಂದಿರುತ್ತಾರೆ. ಘಾನಾದ ಅಕನ್ ಅವರು ಅಬೋಫಾರ್ ನೃತ್ಯವನ್ನು ಆಡುತ್ತಾರೆ. ಇದು ಕ್ರೂರ ಪ್ರಾಣಿಯನ್ನು ಕೊಂದ ತರುವಾಯ ಆಡಲಾಗುವ ಮೂಕಾಭಿನಯ ನೃತ್ಯ. ನೃತ್ಯ ಆಫ್ರಿಕಾದಲ್ಲಿ ಅತ್ಯಂತ ಜನಪ್ರಿಯವಾದ ಮನೋರಂಜನ ಪ್ರಕಾರ. ಹಳ್ಳಿಗಳಲ್ಲಿ ಸಂಜೆ ಹೊತ್ತಿನಲ್ಲಿ ಅನೌಪಚಾರಿಕ ನೃತ್ಯಕ್ಕೆ ಅವಕಾಶವಿರಬಹುದು, ಆದರೆ ಅಲ್ಲಿ ಸ್ತ್ರೀ ಪುರುಷರ ನಡುವೆಯೂ ಸಂಬಂಧವನ್ನು ಬಹಳ ಕಟ್ಟುನಿಟ್ಟಾಗಿ ನಿಯಂತ್ರಿಸಲಾಗುತ್ತದೆ. ಕೆಲಸ ಮಾಡುವ, ಸಾಮಾಜಿಕ ಹಾಗೂ ಮನೋರಂಜನಾ ಚಲನೆಗಳಲ್ಲಿ ಪರಿಸರ, ಚಾರಿತ್ರಿಕ ಹಾಗೂ ಸಾಮಾಜಿಕ ಸನ್ನಿವೇಶಗಳು ಹೇಗೆ ಅಭಿವ್ಯಕ್ತವಾಗುತ್ತವೆ ಎಂಬುದನ್ನು ಅವಲಂಬಿಸಿ ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ನೃತ್ಯಶೈಲಿ ಬದಲಾಗುತ್ತದೆ. ನೈಜೀರಿಯಾದ ಕಂಬಾರಿಗಳು ತಮ್ಮ ತಗ್ಗಾದ ಬಾಗಿಲುಗಳ ಮೂಲಕ ಮನೆಗಳನ್ನು ಪ್ರವೇಶಿಸಲು ಸದಾ ಮುಂದೆ ಬಗ್ಗಿ ನಡೆಯುತ್ತಾರೆ. ಅವರ ನೃತ್ಯ ಭಂಗಿಗಳಲ್ಲೂ ಇದೇ ಬಿಂಬಿತವಾಗಿರುತ್ತದೆ. ಕೆಲವೆಡೆ ನೃತ್ಯವನ್ನು ಪೂರ್ಣ ವೃತ್ತಾಕಾರವಾಗಿ ಮತ್ತು ವೃತ್ತದ ಕೇಂದ್ರದೆಡೆ ಎಲ್ಲರೂ ಮುಖ ಮಾಡಿ ವೃತ್ತಾಕಾರವಾಗಿ ಚಲಿಸುತ್ತಾ ನರ್ತಿಸುತ್ತಾರೆ. ಶಕ್ತಿಶಾಲಿ ಯೋಧ ಸಂಪ್ರದಾಯವಿರುವ ಸಂಸ್ಕೃತಿಗಳಲ್ಲಿ ನೇರವಾದ ಪಂಕ್ತಿಗಳಲ್ಲಿ ನರ್ತಿಸುವುದು ಬಹಳ ಸಾಮಾನ್ಯ.

### ವಾಸ್ತುಶಿಲ್ಪ

ಆಫ್ರಿಕಾದ ವಾಸ್ತುಶಿಲ್ಪ ವೈವಿಧ್ಯ, ಪ್ರಾಕೃತಿಕ ಸಂಪನ್ಮೂಲಗಳು, ಹವಾಮಾನ, ಸಸ್ಯಸಮೃದ್ಧಿ ಮುಂತಾದ ಪರಿಸರದ ಅಂಶಗಳ ಪರಸ್ಪರ ಸಂಸರ್ಗವನ್ನು ಬಿಂಬಿಸುತ್ತದೆ. ಕಟ್ಟಡ ನಿರ್ಮಾಣದಲ್ಲಿ ಬಳಸಿದ ವಸ್ತುಗಳಲ್ಲಿ ಕಲ್ಲು ಬಹುಕಾಲ ಬಾಳಿಕೆ ಬರುವಂತಹದ್ದಾದ್ದ ರಿಂದ ಪ್ರಾಚೀನ ಕಟ್ಟಡಗಳ ಕಲ್ಲಿನ ಭಾಗವು ಇಂದೂ ಉಳಿದಿದೆ. ಆದರೆ ಇತರ ಸಾಮಗ್ರಿ ಗಳು, ಮಳೆ, ಕೊಳೆತ ಅಥವಾ ಗೆದ್ದಲಿಗೆ ಗುರಿಯಾಗಿ ಹಾಳಾಗಿ ಹೋಗಿವೆ. ಆರಂಭದ ಸೋತೋ ಮತ್ತು ಸ್ವಾನಾ ವಸತಿಗಳ ಕಲ್ಲಿನ ಗೋಡೆಯ ಕೊಪ್ಪಲುಗಳು ಮತ್ತು ಪಿಗ್ಮಿಗಳು ದನಕರುಗಳಿಗಾಗಿ ಕಟ್ಟಲಾದ ಕಲ್ಲು ಗೋಡೆಯ ಗುಂಡಿ ವೃತ್ತಗಳು ಹುದುಗಿದ ಕೊಪ್ಪಲುಗಳು ಈಗ ಅಧ್ಯಯನದ ವಸ್ತುಗಳಾಗಿವೆ. ಸೋತೋಗಳು ಇಪ್ಪತ್ತನೇ ಶತಮಾನದಲ್ಲಿ ಕಲ್ಲಿನ ಕಾರ್ಬೆಲ್‌ಗಳು ಇರುವ ನಿವಾಸಿಗಳನ್ನು ಮತ್ತು ವೃತ್ತಾಕಾರದ ಹುಲ್ಲು ಹಾಗು ಛಾವಣಿಯ ಗುಡಿಸಲುಗಳನ್ನು ಕಟ್ಟುತ್ತಾರೆ. ಅಲೆಮಾರಿಗಳು ಮತ್ತು ದನಗಾಹಿಗಳು ಲಘು ಚಪ್ಪರದ ಗೂಡುಗಳನ್ನು ಕಡ್ಡಿಗಳು ಹಾಗೂ ರಂಬೆಗಳನ್ನು ಬಳಸಿ ಅದರ ಮೇಲೆ ಹುಲ್ಲು ಹೊದಿಸಿ

ನಿರ್ಮಿಸುತ್ತಾರೆ. ಈ ಗುಡಿಸಲುಗಳು ಬಿರುಗಾಳಿಯನ್ನು ತಡೆದುಕೊಳ್ಳುವಷ್ಟು ಭದ್ರವಾಗಿರುತ್ತವೆ. ದಕ್ಷಿಣ ಆಫ್ರಿಕಾದಲ್ಲಿ ಜುಲು, ಸ್ವಾಜಿ, ನಟಾಲ್ ಮತ್ತು ಗಣೆಗಳು ಸಮಕೇಂದ್ರದ ಕಮಾನುಗಳನ್ನು ಬಳಸಿ ಗುಮ್ಮಾಟ ಹಂದರಗಳನ್ನು ನಿರ್ಮಿಸುತ್ತಾರೆ. ಕ್ಯೂನಾ ಅವರ ತರುವಾಯದ ಗೃಹಗಳು ಒಂದು ನಿಯತ ಬಗೆಯ ರೂಪವನ್ನು ಹೊಂದಿರಲು ಪ್ರಾರಂಭಿಸಿದವು. ಅಂದರೆ ಸ್ತಂಭಾಕಾರದ ಒಂದೇ ಕೊಠಡಿಯುಳ್ಳ ಮೇಲೆ ಶಂಕುವಿನಾಕೃತಿಯ ಛಾವಣಿಯುಳ್ಳ ಮನೆಗಳು. ಈ ತರಹದ ಮನೆಗಳು ಆಫ್ರಿಕಾದ ಉದ್ದಕ್ಕೂ ಕಾಣಬರುತ್ತವೆ. ಇಂಥ ಮನೆಗಳನ್ನು ಸವನ್ನಾದ ಬಹುಪಾಲು ಜನರು ಮತ್ತು ಅರೆ ಮರುಭೂಮಿಯ ಸೂಡಾನ್ ಮತ್ತು ಪಶ್ಚಿಮ ಆಫ್ರಿಕಾದ ಜನರು ನಿರ್ಮಿಸುತ್ತಾರೆ. ಮರ ಅಷ್ಟಾಗಿ ಸಿಗುವುದಿಲ್ಲವಾದ ಕಾರಣ ಇದನ್ನು ಮಣ್ಣಿನಲ್ಲಿ ಸುರುಳಿ ಕುಂಭಕಲೆಯ ವಿಧಾನದಿಂದ ನಿರ್ಮಿಸುತ್ತಾರೆ. ಮಣ್ಣಿನ ಗೋಡೆಗಳು ಮತ್ತು ನೆಲವನ್ನು ನಯವಾಗಿ ಗಿಲಾವು ಮಾಡಿ ಕಲ್ಲಿನಷ್ಟು ಗಟ್ಟಿ ಮಾಡುತ್ತಾರೆ. ಇವುಗಳ ಮೇಲ್ಮೈಯನ್ನು ಕುಸುರಿ ಕಲೆಯಿಂದ ಅಂದಗೊಳಿಸಿ ಮಣ್ಣಿನಿಂದ ಬಣ್ಣ ನೀಡಲಾಗುತ್ತದೆ. ಕೆಲವು ಬಾರಿ ಪುರಾತನ ಚಿತ್ರಕೃತಿಗಳಿಂದ ಕೆತ್ತನೆ ಮಾಡಿರುವುದು ಕಾಣುತ್ತದೆ. ವಾಸದ ಗುಡಿಸಲುಗಳು, ಕಣಜಗಳು, ಇತರ ಉಗ್ರಾಣ ಮತ್ತು ಆಡು, ಕೋಳಿಗಳ ಗೂಡುಗಳನ್ನು ಒಂದೇ ಅಂಗಳದಲ್ಲಿ ನಿರ್ಮಿಸುತ್ತಿದ್ದರು. ಸಹಾರ ಕೆಳಗಿನ ಆಫ್ರಿಕಾದ ಬಹಳ ಜನಸಾಂದ್ರತೆಯುಳ್ಳ ಭಾಗಗಳಲ್ಲಿ ನೈಜೀರಿಯಾ ೧೬ನೆಯ ಶತಮಾನ ದಿಂದಲೂ ಐರೋಪ್ಯ ವ್ಯಾಪಾರಿಗಳ ಸಂಪರ್ಕ ಹೊಂದಿತ್ತು. ಅಕಾನ್ ಜನರು, ಘಾನಾದ ಅಶ್ವಾಡಿಗಳ ಆಯತಾಕಾರದ ಮನೆಗಳಲ್ಲಿ ಗಣೆ ಕಂಬಗಳನ್ನು ಹಂದರವಾಗಿ ಬಳಸಿ ಅದಕ್ಕೆ ಮಣ್ಣನ್ನು ಮಧ್ಯೆ ಮಧ್ಯೆ ತುಂಬಲಾಗುತ್ತಿತ್ತು. ಅನೇಕ ಬಾರಿ ಅವುಗಳ ಮೇಲೆ ಒಳಗೆ ಹುಲ್ಲು, ಮೇಲೆ ಮಣ್ಣಿನ ಹೊದಿಕೆಗಳುಳ್ಳ ಆಕೃತಿಗಳಿಂದ ಅಲಂಕಾರ ಮಾಡಲಾಗುತ್ತಿತ್ತು.

ಚಿನ್ನವನ್ನು ತೂಗಲು ಬಳಸುತ್ತಿದ್ದ ಬಟ್ಟುಗಳ ಮೇಲೆ ಕಂಡುಬರುತ್ತಿದ್ದ ಸಾಂಕೇತಿಕ ಸುರುಳಿಯಾಕೃತಿ ಮೋಟಿಫ್‌ಗಳನ್ನು ಮಾಡಿಸಲಾಗುತ್ತಿತ್ತು. ಪಶ್ಚಿಮ ಆಫ್ರಿಕಾದ ತೀರಕ್ಕೆ ಹತ್ತಿರದಲ್ಲಿ ಕೆಲವು ಜನರು ಊರುಕಂಬಗಳ ಮೇಲೆ ಮನೆ ಕಟ್ಟುತ್ತಾರೆ. ಉದಾಹರಣೆಗೆ ಬೆನಿನ್‌ನ ಗಾನ್ವಿ ಹಳ್ಳಿ, ಸ್ವಾಹಿಲಿ ಮಾತನಾಡುವ ಕೀನ್ಯಾದ ಜನರು ಮಾಂಗ್ರೋಲ್ ಕಂಬ ಗಳನ್ನು ಬಳಸಿ ಕಟ್ಟಡ ಕಟ್ಟುತ್ತಿದ್ದರು. ಕಮರೂನ್‌ನಲ್ಲಿ ದುಆಲಾ ಮನೆಗಳು ಮಣ್ಣಿನ ಗಿಲಾವು ಉಳ್ಳವಾಗಿದ್ದರೂ ಅವನ್ನು ಬಿದುರಿನಿಂದ ಕಟ್ಟಲಾಗುತ್ತದೆ. ಬಮಿಲಿಕೆ ಮತ್ತು ನೆರೆಯ ಬಪೂಕ್‌ಗಳು ರಾಫಿಯ ತಾಳೆಯನ್ನೂ ಬಳಸುತ್ತಾರೆ. ಅಂಗೋಲಾದ ಕಾಂಗೋ ಜನಾಂಗ ಮತ್ತು ಜೈರ್‌ನ ಬುಷಾಂಗೋ ಜನರಿಗೂ ಇದು ಬಹಳ ಪ್ರಮುಖವಾದ ಕಟ್ಟಡ ಸಾಮಗ್ರಿ. ಅವರ ಮನೆಗಳು ಸ್ತಂಭಾಕಾರವಾಗಿದ್ದು ಚಾವಣಿ ಶಂಕುವಿನ ಆಕಾರದ್ದು, ಮಣ್ಣಿನ ಗಿಲಾವು ಹಾಗೂ ಜ್ಯಾಮಿತಿ ಆಕೃತಿಗಳಿಂದ ಅಲಂಕೃತವಾಗಿರುತ್ತವೆ. ಅಶಾಂಡಿ ಸಾಮ್ರಾಜ್ಯದ ರಾಜಧಾನಿ ನಗರವಾದ ಕುಮಾಸಿಯ ಮಣ್ಣು ಮತ್ತು ಕಲ್ಲಿನ ಅರಮನೆ ಐದು ಎಕರೆಗಳ

ವಿಸ್ತಾರದ್ದಾಗಿತ್ತು. ಅದರಲ್ಲಿ ಅನೇಕ ಅಂಗಳಗಳು ಮತ್ತು ವರಾಂಡಗಳು, ೬೦ಕ್ಕೂ ಹೆಚ್ಚು ಕೊಠಡಿಗಳು ಬಲು ಇಳಿಜಾರಾದ ಚಾವಣಿಗಳನ್ನು ಹೊಂದಿತ್ತು. ಇದಕ್ಕೂ ವಿಶಾಲವಾದ ಅರಮನೆ ಎಂದರೆ ನೈಜೀರಿಯಾದ ಬೆನಿನ್ ನಗರದ ಓಬಾನ ಬೃಹತ್ ಅರಮನೆ. ಓಯೋ ಸಾಮ್ರಾಜ್ಯದ ರಾಜಧಾನಿಯಾದ ಓಯೋ ೬೪೦ ಎಕರೆಗಳಷ್ಟು ವಿಸ್ತಾರವಾಗಿತ್ತು ಎಂದು ಹೇಳಲಾಗಿದೆ. ಅರಮನೆ ಕಟ್ಟಡಗಳನ್ನು ಬಲು ಗಣನೀಯ ಗಾತ್ರದಲ್ಲಿ ಕಟ್ಟಲಾಗುತ್ತಿತ್ತು. ತೆರೆದ ವರಾಂಡಗಳಿಗೆ ಸ್ತ್ರೀ ಆಕೃತಿ ಕೆತ್ತಿದ ಕಂಬಗಳಿಂದ ಆಧಾರ ನೀಡಲಾಗಿತ್ತು. ದಕ್ಷಿಣ ಮಧ್ಯ ಆಫ್ರಿಕಾದ ರೋಜ್ವಿ ಮಹಾರಾಜರು ೧೭ನೆಯ ಮತ್ತು ೧೮ನೆಯ ಶತಮಾನದಲ್ಲಿ ಕಟ್ಟಿದ ಜಿಂಬಾಬ್ವೆಯ (ಕಲ್ಲು ಕಟ್ಟಡಗಳು) ರಾಜವಾಡೆಗಳಾಗಿದ್ದವು. ಒಂದು ಉದಾಹರಣೆ ಆಧುನಿಕ ಜಿಂಬಾಬ್ವೆಯ ಖಾಮಿಯಲ್ಲಿ ನಾಯಕ ಚಂಗಮ್ಮೈರ್‌ನ ಕೋಟೆ, ರೆಜಿನಾ, ನಲಟಾಲಿಯಾ ಮತ್ತ ಡೋಲಾಡೋಲೋಗಳಲ್ಲಿನ ಅವಶೇಷಗಳನ್ನು ಗಮನಿಸಿದಾಗ ಯಾವುದೇ ಗಾರೆ ಬಳಸದೆ ಉತ್ತಮವಾದ ಕಲ್ಲು ಕಟ್ಟಡ ಹಾಗೂ ಅದರ ಮೇಲೆ ಬಾಣಾಕೃತಿಯ ವಿನ್ಯಾಸಗಳ ಮತ್ತು ಬಣ್ಣದ ಪಟ್ಟೆಗಳನ್ನು ಬಳಿದಿರುತ್ತಿದ್ದರು. ಪ್ರಕೃತಿ ಆರಾಧಕ ಧರ್ಮಗಳಲ್ಲಿ ಮರಗಳಲ್ಲಿ ಮೂರ್ತಿಗಳಲ್ಲಿ ಅಥವಾ ಬಲು ಸರಳವಾದ ಗುಡಿಗಳಲ್ಲಿ ದೇವರು ಇರುತ್ತಾನೆಂದು ನಂಬಿಕೆಯಾದ ಕಾರಣ ಸ್ಮಾರಕರೂಪಿಯಾದ ದೇಗುಲ ಶಿಲ್ಪ ಆಫ್ರಿಕಾದಲ್ಲಿ ಇಲ್ಲವೇ ಇಲ್ಲ ಎನ್ನಬಹುದು. ಕುಲಗುಡಿಗಳು ಮತ್ತು ದೇವರ ಕೊಠಡಿಗಳು, ಅವುಗಳಲ್ಲಿ ದೈವಗಳು ಮತ್ತು ಪಿತೃಗಳಿಗೆ ಸಲ್ಲಿಸಿದ ಮುಡಿಪು ಕಾಣಿಕೆಗಳು ಬಲು ಸಾಮಾನ್ಯ.

೧೧ನೆಯ ಶತಮಾನದಲ್ಲಿ ಘಾನಾ ಸಾಮ್ರಾಜ್ಯದ ರಾಜಧಾನಿಯಾದ ಕುಂಬಿಯಲ್ಲಿ ೧೨ ಮಸೀದಿಗಳಿದ್ದವೆಂದು ವರ್ಣಿಸಲಾಗಿದೆ. ತರುವಾಯ ಮಾಲಿ ಮತ್ತು ಸೊಂಗಾರ್ಯ ರಾಜ್ಯಗಳು ಪುರಾತನ ಘಾನಾವನ್ನು ಮೀರಿ ಬೆಳೆದವು. ಪಶ್ಚಿಮ ಆಫ್ರಿಕಾದ ನಗರಗಳ ಮಸೀದಿಗಳಲ್ಲಿ ಇಸ್ಲಾಂ ಧರ್ಮೀಯ ರಚನೆಗಳು ಹಾಗೂ ಪೂರ್ವಜರ ಕಂಬಗಳು ಮತ್ತು ಗುಡಿಗಳಲ್ಲಿದ್ದ ಶಂಕು ಆಕೃತಿಗಳ ಸಂಗಮವನ್ನು ಕಾಣಬಹುದು. ಆಫ್ರಿಕಾದ ಪೂರ್ವ ತೀರದಲ್ಲಿ ಇಸ್ಲಾಂ ಪ್ರಭಾವವು ಡೊವ್ ನೌಕೆ ವ್ಯಾಪಾರದೊಂದಿಗೆ ಪ್ರಾರಂಭವಾಯಿತು. ಈ ನೌಕೆಗಳು ವಾಣಿಜ್ಯ ಮಾರುತಗಳ ಮೇಲೆ ಅವಲಂಬಿಸಿದ್ದು ಪೂರ್ವ ಆಫ್ರಿಕಾವನ್ನು ಅರೇಬಿಯಾ ಮತ್ತು ಪರ್ಷಿಯಾದ ಕೊಲ್ಲಿಗಳು ಹಾಗೂ ಭಾರತದೊಂದಿಗೆ ಸಂಪರ್ಕ ಕಲ್ಪಿಸಿದವು. ೧೯ನೇ ಶತಮಾನದವರೆಗೆ ಆಫ್ರಿಕನ್ ವಾಸ್ತುಶಿಲ್ಪದ ಮೇಲೆ ಕ್ರೈಸ್ತ ಪ್ರಭಾವ ತೀರ ಕಡಿಮೆಯಾಗಿತ್ತು. ಇಥಿಯೋಪಿಯಾದ ಲಾಲಿಬೆಲ್ಲಾವ ಬಂಡೆ ಚರ್ಚುಗಳು ಇದಕ್ಕೊಂದು ಅಪವಾದ. ಲಾಲಿಬೆಲ್ಲಾ ಸಂತ ರಾಜನಾದ ಜೇಗ್ ರಾಜನ ಆಳ್ವಿಕೆಯ ಕಾಲವಾದ ೧೩ನೆಯ ಶತಮಾನದಲ್ಲಿ ಕೆಂಪು ಟುಫಾಕಲ್ಲಿನಲ್ಲಿ ೧೧ ಚರ್ಚುಗಳನ್ನು ಕೊರೆದು ನಿರ್ಮಿಸಲಾಗಿತ್ತು. ಇಥಿಯೋಪಿಯಾದ ಟಿಗ್ರೆ ಪ್ರದೇಶದುದ್ದಕ್ಕೂ ಅನೇಕ ಬಂಡೆಯಲ್ಲಿ ಕೊರೆದ ಗುಹಾ ಚರ್ಚುಗಳಿವೆ.

## ವರ್ಣಚಿತ್ರಕಲೆ

ಸಹಾರಾ ಕೆಳಗಿನ ಪ್ರದೇಶದಲ್ಲಿ ಒಂದಲ್ಲ ಒಂದು ರೀತಿಯ ವರ್ಣಚಿತ್ರಕಲೆ ಕಂಡುಬರುತ್ತದೆ. ವರ್ಣಚಿತ್ರವಷ್ಟೇ ಅಲ್ಲದೆ ಬಂಡೆಗಳ ಮೇಲೆ ಕೊರೆದ ಚಿತ್ರಗಳು ಅನೇಕ ಬಗೆಯ ಶರೀರ ವರ್ಣಚಿತ್ರಕಲೆಗಳಿವೆ. ಹಾಗೆಯೇ ಮನೆಗಳನ್ನು ಹಾಗೂ ಕಟ್ಟಡಗಳನ್ನು ವರ್ಣಚಿತ್ರ ಬರೆದು ಅಲಂಕರಿಸುತ್ತಾರೆ. ಶಿಲ್ಪಕೃತಿಗಳು ಮುಖವಾಡಗಳ ವರ್ಣಚಿತ್ರ ರಚನೆಗಳೂ ಇವೆ. ಬಂಡೆಗಳ ಮೇಲೆ ಮೂಕಚಿತ್ರ ಹಾಗೂ ಕೊರೆಚಿತ್ರಗಳ ರಚನೆ ಸಹರಾ ಹಾಗೂ ದಕ್ಷಿಣ ಆಫ್ರಿಕಾದಲ್ಲಿ ಕಂಡುಬರುತ್ತವೆ. ಸಹರಾದ ಕಲಾಕೃತಿಗಳಲ್ಲಿ ವಿವಿಧ ಶೈಲಿ ಹಾಗೂ ವಿವಿಧ ಬಗೆಯ ವಸ್ತುಗಳು ಇರುವ ಕಾರಣ ಅದನ್ನು ಪೀಳಿಗೆಯಿಂದ ಪೀಳಿಗೆಗೆ ಬಂದ ಕಲಾವಿದರು ರಚಿಸಿರುವುದು ಸ್ಪಷ್ಟವಾಗಿರುತ್ತದೆ. ದಕ್ಷಿಣ ಆಫ್ರಿಕಾದ ಬಹಳಷ್ಟು ಕಲಾಕೃತಿಗಳನ್ನು ಸಾನ್ ಜನಾಂಗದ ಪೂರ್ವಿಕರು ಮತ್ತು ಆ ಪ್ರದೇಶದ ಬೇಟೆಗಾರ ಹಾಗೂ ಕಂದಮೂಲ ಸಂಗ್ರಹಿಸುವ ಜನಾಂಗ ರಚಿಸಿದ್ದಾರೆ. ಆಫ್ರಿಕಾದ ಬಂಡೆ ಕಲಾಕೃತಿಗಳ ಅತಿ ಪ್ರಾಚೀನ ಕಲಾಕೃತಿಗಳಲ್ಲಿ ೩೦,೦೦೦ ಕೊರೆ ಚಿತ್ರಗಳು ಮತ್ತು ವರ್ಣಚಿತ್ರಗಳು ಸಹಾರದ ಬಂಡೆಗಳಲ್ಲಿವೆ. ಅದರಲ್ಲಿ ಈಗ ಮರುಭೂಮಿಯಲ್ಲಿ ಕಾಣಸಿಗದ ಅನೇಕ ಪ್ರಾಣಿಗಳನ್ನು ಚಿತ್ರಿಸಲಾಗಿದೆ. ದಕ್ಷಿಣ ಬಮಾನ್, ಅಲ್ಜೀರಿಯಾ ಮತ್ತು ಲಿಬಿಯಾದಲ್ಲಿನ ಅತಿ ಪ್ರಾಚೀನ ಕಲಾಕೃತಿಗಳಲ್ಲಿ ಬೇಟೆಗಾರರ ಜೀವನ ಹಾಗೂ ಈಗ ನಾಮಾವಶೇಷವಾಗಿರುವ ಕಾಡುಪ್ರಾಣಿಗಳು ಬಿಂಬಿತವಾಗಿವೆ. ತಸ್ಸಿಲ್ ಎನ್. ಅಜರ್‌ನಿಂದ ದೊರೆಯುವ ಮತ್ತೊಂದು ಚಿತ್ರದಲ್ಲಿ ಮುಖವಾಡ ಧರಿಸಿದ ಗಂಡು ಹೆಣ್ಣುಗಳನ್ನು ಬಿಂಬಿಸಲಾಗಿದೆ. ಇದರ ನಂತರ, ದನಗಾಹಿ ಅವಧಿ ಮತ್ತು ಅದರಲ್ಲಿ ಸಾಕಿದ ದನಕರುಗಳು ಚಿತ್ರಿತವಾಗಿವೆ. ಕುದುರೆ ಮತ್ತು ಒಂಟೆಗಳ ಕಾಲವನ್ನು ತೋರುವ ಚಿತ್ರಗಳಿವೆ.

## ಶಿಲ್ಪಕಲೆ

ಆಫ್ರಿಕಾದ ಶಿಲ್ಪಕಲೆಗೆ ಮರವೇ ಬಹಳ ಪ್ರಚಲಿತ ಮಾಧ್ಯಮವಾಗಿದ್ದರೂ, ತಾಮ್ರದ ಮಿಶ್ರಲೋಹಗಳು, ಕಬ್ಬಿಣ, ದಂತ, ಸುಟ್ಟ ಮಣ್ಣಿನ ಕೃತಿಗಳು, ಹಸಿಮಣ್ಣಿನ ಕಲೆಗಳು ಹಾಗೂ ಇದರ ಜೊತೆಗೆ ಬಲು ಅಪರೂಪವಾಗಿ ಕಲ್ಲು ಬಳಕೆಯಾಗಿವೆ. ಹಸಿ ಜೇಡಿಮಣ್ಣು ಇಡೀ ಖಂಡದಲ್ಲಿ ಬಹಳವಾಗಿ ಬಳಸಲಾಗುತ್ತಿದ್ದ ಮಾಧ್ಯಮ. ಇದು ಬಹಳ ಶಿಥಿಲವಾಗಿ ಒಡೆದು ಹೋಗುವುದರಿಂದ ಮತ್ತು ಅವುಗಳನ್ನು ಸಂಗ್ರಹಿಸುವುದು ಕಷ್ಟವಾದ್ದರಿಂದ ಅದನ್ನು ಸಾಹಿತ್ಯದಲ್ಲಿ ಬಹಳಷ್ಟು ನಿರ್ಲಕ್ಷಿಸಲಾಗಿದೆ. ಸೈರ್ ಪರ್ದೂ ತಂತ್ರವನ್ನು ಬಳಸಿ ತಾಮ್ರದ ಮಿಶ್ರಲೋಹದಲ್ಲಿ ಎರಕ ಹುಯ್ದಿರುವುದನ್ನು ಕಂಡರೆ ಕ್ರಿ.ಶ.೯ನೆಯ ಶತಮಾನದಷ್ಟು ಹಿಂದಕ್ಕೆ ಬಹಳ ಮುಂದುವರಿದ ಶಿಲ್ಪಕಲಾಗಾರಿಕೆಯನ್ನು ಕಾಣಬಹುದು. ಹೀಗಿದ್ದರೂ, ತಾಮ್ರಕ್ಕಿಂತಲೂ ಹೆಚ್ಚಾಗಿ, ಸತು ಮತ್ತು ಹಿತ್ತಾಳೆಯನ್ನು ಬಳಸಿರುವುದನ್ನು ಕಾಣಬಹುದು. ಬೆನಿನ್‌ನಲ್ಲಿ ಸತು ಹಿತ್ತಾಳೆಯನ್ನು ಅತಿ ಹೆಚ್ಚು ಬಳಸಿರುವುದನ್ನು ಕಾಣಬಹುದು. ಅನೇಕ ಸಂಸ್ಕೃತಿಗಳಲ್ಲಿ ಬೀಡು ಕಬ್ಬಿಣ ಶಿಲ್ಪಗಳು ಕಾಣಸಿಗುತ್ತವೆ. ದೋಗೋನ್, ಬಾಂಬರಾ,

ಘಾನ್ ಮತ್ತು ಯೊರೂಬಾ ಜನರೂ ಸೇರಿದಂತೆ ಪಶ್ಚಿಮ ಆಫ್ರಿಕಾದಲ್ಲಿ ಇದು ಹೆಚ್ಚು. ಶಿಲಾಕೃತಿಗಳು ಅನೇಕ ಬೇರೆ ಬೇರೆ ಕೇಂದ್ರಗಳಲ್ಲಿ ಕಂಡುಬರುತ್ತವೆ. ಗಟ್ಟಿ ಮತ್ತು ಮೆದು ಕಲ್ಲುಗಳನ್ನು ಬಳಸಿ ಕೃತಿಗಳನ್ನು ರಚಿಸಲಾಗಿದೆ. ಆದರೆ ಒಂದೇ ಸ್ಥಳದಲ್ಲಿ ಕಾಲಾಂತರದಲ್ಲಿ ಈ ಶಿಲ್ಪಕಲೆ ಬೆಳೆದಿರುವುದು ಕಾಣಸಿಗುವುದಿಲ್ಲ. ಆಫ್ರಿಕಾದ ಅನೇಕ ಭಾಗಗಳಲ್ಲಿ ದಂತ ಬಹಳ ಬೆಲೆ ಬಾಳುವ ಕಲಾಮಾಧ್ಯಮ. ನಯನುಣುಪಿನ ವಸ್ತುವಾದ ಕಾರಣ ಅದರಲ್ಲಿ ಕುಸುರಿ ಕೆಲಸ ಚೆನ್ನಾಗಿ ಮಾಡಲಾಗುತ್ತದೆ. ಬಲು ಅಪೂರ್ವವಾದ್ದರಿಂದ ಪ್ರತಿಷ್ಠೆಯ ವಸ್ತುವಾಗಿ ಕೆಲವು ಸಂಸ್ಕೃತಿಗಳಲ್ಲಿ ಬಳಸುತ್ತಾರೆ. ಆಫ್ರಿಕಾದ ಕಾಷ್ಠಶಿಲ್ಪಗಳನ್ನು ಆ ಖಂಡದುದ್ದಕ್ಕೂ ಒಂದೇ ಬಗೆಯ ಸಾಧನಗಳ ಮೂಲಕ ಕೆತ್ತುತ್ತಾರೆ. ಡೋಗನ್ ಶಿಲ್ಪಗಳು ಪಿತೃಪಂಥದ ಜೊತೆಗೆ ಸಂಬಂಧಿತವಾಗಿದೆ. ಬಾಗಾಗಳು ಅವರ ಬೃಹದಾಕಾರದ ಡಂಬಾ ಮುಖವಾಡಗಳಿಗೆ ಪ್ರಸಿದ್ಧವಾಗಿದೆ. ಸಹಾರ ಕೆಳಗಿನ ಆಫ್ರಿಕಾದ ಬಹಳ ಪ್ರಾಚೀನ ಕಲಾಕೃತಿಗಳೆಂದರೆ ಉತ್ತರ ನೈಜೀರಿಯಾದ ನೋಕ್ ಸಂಸ್ಕೃತಿಯ ಕಾಲಕೃತಿಗಳು. ಈಡೋ ಜನಾಂಗದವರು ಬೆನಿನ್ ನಗರಕ್ಕೆ ಹಿತ್ತಾಳೆ ಎರಕವನ್ನು ಪರಿಚಯಿಸಿದರು. ನೈಜಲ್ ಸುತ್ತಿನ ಈಜೋ ಜನಾಂಗ ಜಲದೈವಗಳ ಪಂಥದ ಮುಖವಾಡಗಳನ್ನು ತಯಾರಿಸಿದರು. ನೂಪ್‌ಗಳು ನೆಯ್ಗೆ, ಕಸೂತಿ, ಬ್ರೆಕ್ ತಯಾರಿಕೆ, ಮರ ಕೆತ್ತನೆ, ತಗಡು ಲೋಹರಚನೆಗಳು ಮುಂತಾದವಕ್ಕೆ ಪ್ರಸಿದ್ಧರು. ಮಧ್ಯ ಆಫ್ರಿಕಾದ ಗಾಬನ್‌ಗಳು ಕೋರೆ ಹಲ್ಲಿನ ಮುಖ ವಾಡಗಳಿಗೆ ಪಸ್ರಿದ್ಧ. ಒಂದೊಂದು ಪ್ರದೇಶದ ಪರಿಸರ, ಸಂಸ್ಕೃತಿ ಮತ್ತು ಸಂಪ್ರದಾಯಕ್ಕೆ ಅನುಗುಣವಾಗಿ ಇದೇ ಬಗೆಯ ಮುಖವಾಡಗಳು ಶಿಲ್ಪಗಳು ಮತ್ತು ಕಲಾಕೃತಿಗಳನ್ನು ಆಫ್ರಿಕಾದ ಉದ್ದಕ್ಕೂ ತಯಾರಿಸುತ್ತಾರೆ. ಘಾನಾದ ಅಶ್ವಾಡಿಗಳಲ್ಲಿನ ಸಮಾಧಿ ಸ್ಮಾರಕಗಳಂತೆ ಕೆಲವು ಪ್ರದೇಶಗಳಲ್ಲಿ ಕುಂಭಕಲಾ ತಂತ್ರವನ್ನು ಬಳಸುತ್ತಾರೆ. ನೈಜೀರಿಯಾ ಮಾಲಿಗಳಲ್ಲಿ ಇಫೆ ಹಾಗೂ ನೋಕ್‌ಗಳ ಕುಂಭಕಲಾ ಶಿಲ್ಪಗಳಿಗೆ ಇವೇ ತಂತ್ರಜ್ಞಾನ ಬಳಸಲಾಗಿದೆ ಎಂದು ಊಹಿಸಲಾಗಿದೆ. ಪೂರ್ವ ಹಾಗೂ ಪಶ್ಚಿಮ ಆಫ್ರಿಕಾಗಳಲ್ಲಿ ಬಟ್ಟೆಗಳನ್ನು ಸ್ಥಳೀಯವಾಗಿ ಬೆಳೆದ ಸ್ಪನ್ ಹತ್ತಿಯಿಂದ ಸಾಂಪ್ರದಾಯಿಕವಾಗಿ ನೇಯುತ್ತಾರೆ.

**ಪರಾಮರ್ಶನ ಗ್ರಂಥಗಳು**


೧. ಆಫ್ರಿಕಾ ಇನ್ ದಿ ಟ್ವೆಂಟಿ ಫಸ್ಟ್ ಸೆಂಚುರಿ ಎ ಫ್ಯೂಚರಿಸ್ಟಿಕ್ ಎಕ್ಸರ್‌ಸೈಜ್

೨. ಜಾಕ್ ವುಡ್ಸ್, ೧೯೭೭. ನ್ಯೂ ಥಿಯರಿಸ್ ಆಫ್ ರೆವಲ್ಯೂಷನ್, ನ್ಯೂಯಾರ್ಕ್ ಇಂಟರ್ ನ್ಯಾಷನಲ್ ಪಬ್ಲಿಷರ್ಸ್.

೩. ಬೆಸಿಲ್ ಡೇವಿಡ್ಸನ್, ೧೯೭೩. ವಿಚ್ ವೇ ಆಫ್ರಿಕಾ? ಮೂರನೇ ಮುದ್ರಣ; ಲಂಡನ್: ಪೆಂಗ್ವಿನ್ ಬುಕ್ಸ್.

೪

# ಆಫ್ರಿಕಾ
# ಸಾಂಸ್ಕೃತಿಕ ದ್ವಂದ್ವ

ಸರಳಾ ಕೃಷ್ಣಮೂರ್ತಿ
ಅನುವಾದ: ಕೃಷ್ಣಮೂರ್ತಿ

ವಿಶ್ವದ ಬಹುಪಾಲು ಎಲ್ಲ ದೇಶಗಳು ಸ್ವತಂತ್ರ ಆಡಳಿತಕ್ಕೊಳಪಟ್ಟು ೨೦ನೆಯ ಶತಮಾನಕ್ಕೆ ಹತ್ತಿರವಾಗುತ್ತಿರುವಾಗ ನಮಗಿಂದು ಉತ್ತರದ ಸಣ್ಣ ದ್ವೀಪವೊಂದು ವಿಶ್ವದ ಅರ್ಧಕ್ಕಿಂತ ಹೆಚ್ಚಿನ ಭೂ ಭಾಗವನ್ನು ಆಕ್ರಮಿಸಿ, ಅಲ್ಲಿನ ಜೀವನ, ಸಂಸ್ಕೃತಿಗಳನ್ನು ವಿನಾಶಗೊಳಿಸಿತ್ತೆಂಬುದನ್ನು ನಂಬುವುದು ಸುಲಭ ಸಾಧ್ಯವಿಲ್ಲ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ಚಕ್ರಾಧಿಪತ್ಯವನ್ನು ನಾವು ಅವರ ಅನೇಕ ಬರವಣಿಗೆಗಳ ಮೂಲಕ, ಸಾಹಿತ್ಯ, ಪತ್ರಲೇಖನ, ಟಿಪ್ಪಣಿ ಮುಂತಾದ ವಿವಿಧ ಪ್ರಕಾರಗಳ ಮೂಲಕ ಅನುಭವಿಸುತ್ತೇವೆ. ಬ್ರಿಟಿಷ್ ಚಕ್ರಾಧಿಪತ್ಯ ತನ್ನ ಸಾಮ್ರಾಜ್ಯಶಾಹಿ ಪ್ರಯತ್ನಗಳ ಉತ್ತುಂಗದಲ್ಲಿದ್ದಾಗ ವಿಶ್ವಾದಾದ್ಯಂತ ವಾರ್ತಾಜಾಲವೊಂದನ್ನು ಹೆಣೆದುಕೊಂಡು ತನ್ಮೂಲಕ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ರಾಜ್ಯಭಾರ ನಡೆಸಿತ್ತು. ಹೊಸ ನಾಡು-ನೆಲೆಗಳ ಅನ್ವೇಷಣೆಯಿಂದ ಆರಂಭಗೊಂಡ ಸಾಹಸಯಾತ್ರೆಗಳು ಸಮಯ ಕಳೆದಂತೆ ಹೊಸನಾಡುಗಳನ್ನು ಕಂಡು ಹಿಡಿಯುವುದೇ ಅಲ್ಲದೆ, ಸೂಕ್ಷ್ಮವಾಗಿ ಹಾಗೂ ಧೂರ್ತತೆಯಿಂದ ನೆಲಸುನಾಡಿನ ಆ ಜನಾಂಗಕ್ಕೆ ತಾನು ಉಪಕಾರ ವೆಸಗಿದ ಗೌರವ ಖ್ಯಾತಿ ಹಾಗೂ ಇತರ ಜನಾಂಗಗಳ ಕುರಿತಾದ ತನ್ನ ಔದಾರ್ಯದ ನಂಬಿಕೆಗೆ ಅನುವು ಮಾಡಿಕೊಟ್ಟಿತು.

ವಸಾಹತುಗಳ ನಿರ್ಮಾಣ ಕಾಲದಲ್ಲಿ ಬ್ರಿಟಿಷರು ತಮ್ಮನ್ನು ಕುರಿತಂತೆ ತಾವು ವಿಶ್ವ ವಿಜಯಿಗಳೆಂದೂ ವಿಶ್ವಕ್ಕೆ ನಾಗರಿಕತೆಯನ್ನು ಪರಿಚಯಿಸಿಕೊಟ್ಟವರೆಂಬ ವೀರೋಚಿತ ಕಲ್ಪನೆಯನ್ನು ಕಾಣುತ್ತಿದ್ದರು. ಅದು ಅವರ ಕಂಡರಿಯದ ಸೀಮೆಗಳನ್ನು ಭೇದಿಸುತ್ತಾ ಹೋದಂತೆ ಅವರು ಕ್ರಮೇಣ ತಮಗರಿಯದ ಬಿಂಬಗಳನ್ನೂ, ಭೌಗೋಳಿಕ ಪ್ರದೇಶಗಳನ್ನೂ, ಅಜ್ಞಾತವಾದ ದಿಗ್ಭ್ರಮೆಗೊಳಿಸುವಂತಹ ಸಂಸ್ಕೃತಿ ಹಾಗೂ ಜೀವನ ಶೈಲಿಗಳನ್ನು

ಸಂಧಿಸಿದಾಗ, ಅಜ್ಞಾತದಿಂದಾವರಿಸಿದ ಭೀತಿಗೊಳಗಾಗಿ ಈ ಭಿನ್ನ ಕಲ್ಪನೆಗಳಿಗೆ ತಮ್ಮ ಜ್ಞಾನದ ಪರಿಧಿಯಲ್ಲಿದ್ದ ಹೆಸರುಗಳನ್ನೇ ಕೊಟ್ಟು ನಾಮಕರಣ ಮಾಡಿದರು. ಸಾಮ್ರಾಜ್ಯಶಾಹಿಗಳು ತಮ್ಮಲ್ಲಿದ್ದ ನಿತ್ಯಸಿದ್ಧರೂಪಕಗಳನ್ನೂ, ಕಲ್ಪನೆಗಳನ್ನೂ, ಈ ಅಜ್ಞಾತ ಸ್ಥಳಗಳ ಅಸಂಭವ ಸನ್ನಿವೇಶಗಳಿಗೆ ವರ್ಗಾಯಿಸಿ ಅವುಗಳನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ನಡೆಸಿದರು. ಬ್ರಿಟಿಷರ ದೃಷ್ಟಿಯಲ್ಲಿ ವಸಾಹತುವಾದ ಒಂದು ಭೌಗೋಳಿಕ ಹಾಗೂ ನ್ಯಾಯಯುತವಾದ ಹೊಣೆಗಾರಿಕೆ. ಅವರು ಸ್ಥಳೀಯರ ಅಥವಾ ದೇಶೀಯರ ಅರಿವಿಲ್ಲದಂತೆಯೇ ಅವರ ಪರೋಕ್ಷ ಸಮ್ಮತಿಯಿಂದ ಈ ಹೊಣೆಗಾರಿಕೆಯ ಭಾರವನ್ನು ವಹಿಸಿಕೊಂಡರು. ವಸಾಹತಿಗೆ ಬಲಿಯಾದವರ ದೃಷ್ಟಿಯಲ್ಲಿ ಈ ಗ್ರಂಥಪಾಠದ ಹೊಣೆಗಾರಿಕೆಯ ನಿರ್ವಹಣೆ ಎಂದರೆ ತಮ್ಮ ನೆಲ-ನಾಡುಗಳನ್ನೂ, ಆಸ್ತಿ-ಪಾಸ್ತಿಗಳನ್ನೂ ಕಳೆದುಕೊಳ್ಳುವುದು, ದೊಡ್ಡ ಪ್ರಮಾಣದಲ್ಲಿ ಗುಲಾಮಗಿರಿಗೂ, ಬಲವಂತದ ಒಪ್ಪಂದಗಳಿಗೂ, ಬಡತನಕ್ಕೂ ಒಳಗಾಗುವುದೆಂದರ್ಥ. ಈ ಪರಕೀಯ ವಾತಾವರಣದ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳಲಾಗದ ಶೋಷಕರು ತಾವು ವಸಾಹತುಗಳನ್ನು ಆರಂಭಿಸಿ ಅವುಗಳನ್ನು ಊರ್ಜಿತಗೊಳಿಸಿದೆಲ್ಲೆಡೆ ಹೊಸ ಇತಿಹಾಸದ ಆರಂಭವನ್ನು ಘೋಷಿಸಿದರು. ಈ ಸಾಮ್ರಾಜ್ಯಶಾಹಿ ಪ್ರಜ್ಞೆಯು ಹುಟ್ಟುಹಾಕಿದ ಕಲ್ಪನೆಯನ್ನು ನಾವು ವಸಾಹತುಶಾಹಿ ವ್ಯಾಖ್ಯಾನ ಅಂದರೆ ವಾಸ್ತವವಾಗಿ ಗ್ರಂಥಪಾಠದ ಕ್ರಮವನ್ನನುಸರಿಸಿ ಕೂಡಿದ ಕಾನೂನುಗಳ ಸಂಗ್ರಹ ಹಾಗೂ ಆಚರಣೆ ಮತ್ತು ಅವುಗಳ ಸೂಚ್ಯಾರ್ಥಗಳ ಸಂಮಿಶ್ರಣ ಎಂದು ವರ್ಣಿಸಬಹುದು. ನೆಲೆಸುನಾಡಿನಲ್ಲಿ ತನ್ನ ಅಧಿಕಾರವನ್ನು ಖಚಿತಗೊಳಿಸಿ ಅದನ್ನು ಶಾಶ್ವತಗೊಳಿಸಲು ವಸಾಹತುಶಾಹಿಯು ಚರ್ಚ್, ನ್ಯಾಯಾಲಯ ಮುಂತಾದ ಕುರುಹುಗಳನ್ನು ಎಲ್ಲೆಡೆ ಹರಡಿಸಿದರು. ಇಷ್ಟೇ ಅಲ್ಲದೆ, ವಸಾಹತುಶಾಹಿ ಶಕ್ತಿಗಳು ಜಗತ್ತಿನದಾದ್ಯಂತ ತಾವು ಸ್ವಾಧೀನಪಡಿಸಿಕೊಂಡು ರಾಜ್ಯಗಳಲ್ಲಿ ಸಮಾಂತರ ಜಗತ್ತನ್ನು ಸೃಷ್ಟಿಸಿದರು. ಸಾಮ್ರಾಜ್ಯದ ವಿಸ್ತಾರದೊಂದಿಗೇ ಸಾಂಸ್ಕೃತಿಕವಾಗಿ ಹಾಗೂ ಭೌಗೋಳಿಕವಾಗಿ ಪ್ರತ್ಯೇಕವಾಗಿದ್ದ ಪ್ರದೇಶಗಳ ಮಧ್ಯ ನಿತ್ಯಸಿದ್ಧಕಲ್ಪನೆಗಳ ವಿನಿಮಯ ಖಚಿತಗೊಂಡು ಅವುಗಳ ನಡುವಣ ಇದ್ದ ವ್ಯತ್ಯಾಸಗಳು ಮಸುಕಾಗುತ್ತಾ ಹೋದವು. ವಸಾಹತುಶಾಹಿ ಸಾಹಿತ್ಯದಲ್ಲಿ ಚಿತ್ರಿತಗೊಂಡಿರುವ ಸಮಾಜದ ದೃಶ್ಯಗಳು ತಾಯ್ನಾಡಿನಲ್ಲಿ ಬಿಟ್ಟು ಬಂದಿರುವ ಸಮಾಜದ ಬಿಂಬವನ್ನೇ ಕಕ್ಕಿದಂತಿದೆ. ಈ ಮೂಲಕ ವಸಾಹತುವಾದಿಗಳು ತಾವು ಬಿಟ್ಟು ಬಂದಿರುವ ಇತಿಹಾಸ ಹಾಗೂ ನಂಬಿಕೆಗಳನ್ನು ತಮಗಾಗಿ ರೂಪಿಸಿಕೊಂಡು, ಎಡೆಬಿಡದಂತೆ ಅವುಗಳನ್ನು ಪುನರಾವರ್ತಿಸುತ್ತಾ ಹೋಗಿ ಅದರ ಅಜೇಯತನದಲ್ಲಿ ತಮ್ಮ ನಂಬಿಕೆಯನ್ನು ವಿಸ್ತರಿಸುತ್ತಾ ಹೋದರು.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ವಸಾಹತುಶಾಹಿಗಳು ತಮ್ಮ ಜನಾಂಗದ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಲು ತಮ್ಮ ಹಾಗೂ ಸ್ಥಳೀಯ ಜನರ ಮಧ್ಯೆ ಕಟ್ಟುನಿಟ್ಟಿನ ಭೇದವನ್ನು ನಿರ್ಮಿಸುವ ಶತಪ್ರಯತ್ನ ನಡೆಸಿದರು. ಬಿಳಿಯನ ಶ್ರೇಷ್ಠತೆಯ ಕಲ್ಪನೆಯನ್ನು ಪುಷ್ಟಿಗೊಳಿಸಲು ಈ ಜನಾಂಗೀಯ ವಿಭಜನೆ ಅವಶ್ಯಕವಾಯಿತು. ಆದರೂ

ಸಹ, ಈ ಪರಕೀಯ ವಾತಾವರಣದಲ್ಲಿ ಸೃಷ್ಟಿಯಾದ ಈ ಸಾಂಸ್ಕೃತಿಕ ಪರಾಮರ್ಶೆಗಳು ಹಾಗೂ ಅವು ಮೂಡಿಸಿದ ವಿಭಿನ್ನ ಅರ್ಥಗಳು, ಕೆಲವು ಯುರೋಪಿಯನ್ನರಿಗೆ ಕಥನ ರೂಪಗಳ ಹಾಗೂ ಕವಿತಾಯೋಗ್ಯ ಆಸಕ್ತಿಯ ಮೂಲಗಳಾದವೆಂಬುದನ್ನು ಇಲ್ಲಿ ಗಮನಿಸಬೇಕಾಗಿದೆ. ಪರಕೀಯ ವಾತಾವರಣದಲ್ಲಿ ತಮ್ಮ ಪ್ರಮಾಣಗಳು ಹಾಗೂ ನಿಸ್ಸಂದೇಹವಾದ ನಂಬಿಕೆಗಳು ಕಮರಿಹೋಗಬಹುದೆಂಬ ಅಜೀವ ಭಯ ಬ್ರಿಟಿಷ್ ವಸಾಹತುವಾದಿಗಳನ್ನು ಸದಾ ಕಾಡುತ್ತಿತ್ತು. ಈ ಆತಂಕವು ಒಂದೆಡೆ ಮಲಿನತೆ ಹಾಗೂ ನೀತಿ ಭ್ರಷ್ಟತೆಗಳಿಗೆ ಜನ್ಮ ನೀಡಿದರೆ, ಇನ್ನೊಂದೆಡೆ ಪಠ್ಯದಲ್ಲಿ ವಸಹಾತುಶಾಹಿ ದೃಷ್ಟಿ ಎಂದು ಕರೆಯಲ್ಪಡುವ ಬ್ರಿಟಿಷರಿಂದ ಸ್ವಯಂ ಅಂಗೀಕೃತಗೊಂಡ ಆಜ್ಞಾಪನೆಯ ಯಥಾದೃಷ್ಟ ರೂಪಣವನ್ನು ಹುಟ್ಟು ಹಾಕಿತು. ಈ ವಸಾಹತುಶಾಹಿ ದೃಷ್ಟಿಯು ಹೊಸ ನೆಲನಾಡುಗಳ ವಸಾಹತುಶಾಹಿ ಭೇದನೆಯೊಂದಿಗೆ ಯುಕ್ತವಾಗಿದ್ದ ಅವುಗಳ ಸಂಶೋಧನೆ, ಪರೀಕ್ಷೆ ಹಾಗೂ ತನಿಖೆಗಳಲ್ಲಿ ವ್ಯಕ್ತವಾಗುತ್ತದೆ.

ಈ ಕಾಲದ ಬರಹಗಳಲ್ಲಿ ನಾವು ಸಾಮ್ರಾಜ್ಯಶಾಹಿಗಳ ಭ್ರಾಮಕ ಕಲ್ಪನೆಗಳನ್ನು ಹುರಿದುಂಬಿಸುವಂತಹ ಅಂಶಗಳನ್ನು ಕಾಣಬಹುದು. ಅಂದು ಸಾಹಸಕಥೆಗಳು ಅತ್ಯಂತ ಜನಪ್ರಿಯವಾಗಿದ್ದವು. ಬಹುಪಾಲು ನಾಯಕ ಹಾಗೂ ಆತನ ಸಾಹಸ ಕಾರ್ಯಗಳ ಸುತ್ತುವರೆದಂತೆ ಹೆಣೆಯಲ್ಪಟ್ಟ ಈ ಕಥನಗಳು ಆತ ಕೈಗೊಳ್ಳುವ ಸಾಹಸಯಾತ್ರೆಯು (ಅದು ದೈಹಿಕ ಅಥವಾ ಆಧ್ಯಾತ್ಮಿಕವಾಗಿರಬಹುದು, ಲೌಕಿಕ ಅಥವಾ ಪ್ರಾದೇಶಿಕವಾಗಿರ ಬಹುದು. ಮೂಲತಃ ಅದೊಂದು ಸ್ಥಿತ್ಯಂತರ ಸಂಸ್ಕಾರ) ಅವಶ್ಯಕವಾಗಿ ಸ್ಥಳೀಯರ ಮೇಲೆ ಸಾಧಿಸುವ ವಿಜಯದಲ್ಲೋ, ಅತ್ಮತಾ ಜ್ಞಾನಪ್ರಾಪ್ತಿ ಮತ್ತು ತಾನು ಉತ್ಕರ್ಷಿತ ಸ್ಥಾನಕ್ಕೇರುವುದರಲ್ಲೋ, ವೈಯಕ್ತಿಕ ಅಥವಾ ರಾಷ್ಟ್ರೀಯ ಗೌರವ ಪ್ರಾಪ್ತಿ ಹಾಗೂ ಅಪರಿಮಿತ ಧನಪ್ರಾಪ್ತಿಗಳೊಂದಿಗೆ ಕೊನೆಗೊಳ್ಳುವ ಅನ್ವೇಷಣೆಯಾಗಿದೆ. ಹೀಗಾಗಿ ವಿಕ್ಟೋರಿಯನ್ ಕಾಲದ ಪೂರ್ವಾರ್ಧದಲ್ಲಿ ಮೂಡಿ ಬಂದ ಗೃಹ ಕಾದಂಬರಿಗಳು ಆ ಕಾಲದ ಉತ್ತರಾರ್ಧದಲ್ಲಿ ಸಾಹಸಗಾಥೆಗಳಿಗೂ, ಪರಿಶೋಧಕರ ಬರವಣಿಗೆಗಳಿಗೂ ಸ್ಥಾನವನ್ನು ಅನುವು ಮಾಡಿಕೊಟ್ಟವು. ಪುರುಷನೋರ್ವನಿಂದ ದಪ್ಪಕ್ಷರಗಳಲ್ಲಿ ಬರೆದು ಮುದ್ರಿಸಲ್ಪಟ್ಟ ಸ್ಮಾರಕಗಳಾಗಿ ಅಗಾಧ ಸಂಖ್ಯೆಯಲ್ಲಿ ಉತ್ಪತ್ತಿಯಾದ ವಸಾಹತುಶಾಹಿ ಅನುಭವದ ಈ ಗ್ರಂಥಪಠ್ಯವು ನಿತ್ಯಸಿದ್ಧ ಕಲ್ಪನೆಗಳನ್ನು ಭವಿಷ್ಯದ ವಸಾಹತುಶಾಹಿ ಅಧಿಕಾರಿಗಳ ಮನಸ್ಸಿನ ಮೇಲೆ ಮುದ್ರೆಯೊತ್ತಿತು. ವಸಾಹತುವಾದಿ ಸ್ವಯಂ ಕುರಿತಾದ ಉತ್ಕೃಷ್ಟ ಚಿತ್ರಣದ ಒಂದು ಪ್ರಮುಖ ಅಂಶವೆಂದರೆ - ಆ ಮತ್ತೊಂದರ ಅಂದರೆ ನೆಲಸು ನಾಡಿನ ಸ್ಥಳೀಯನ ಸೃಷ್ಟಿ- ವಸಾಹತುಶಾಹಿ ಆಕ್ರಮಣದಲ್ಲಿ ಈ ಬೇರೆತನದ ಸೃಷ್ಟಿಯ ಪ್ರಕ್ರಿಯೆ ಮೂಲಭೂತವಾದುದು. ವಸಾಹತುವಾದಿಗಳನ್ನು ಸದಾ ನೆಲಸುನಾಡಿನ ಸ್ಥಳೀಯರಿಗಿಂತ ಉತ್ತಮರೆಂದು ಚಿತ್ರಿಸಲಾಗುತ್ತಿತ್ತು. ಸ್ಥಳೀಯರನ್ನು ಕೀಳಾಗಿ, ಕುಬ್ಜರನ್ನಾಗಿ ಮಗುವಿನಂತೆಯೋ, ಕಾಡುಪ್ರಾಣಿಯಂತೆಯೋ, ಅಸಂಸ್ಕೃತ ಅಥವಾ ಅರೆ ಸಂಸ್ಕೃತ ಮನುಜರಾಗಿ ಚಿತ್ರಿಸಲಾಗುತ್ತಿತ್ತು. ಅವರನ್ನು ಪ್ರತ್ಯೇಕಿಸುವ, ಕೆಳದರ್ಜೆಗಿಳಿಸುವ ಶಕ್ತಿಯುತ

ತಂತ್ರಗಳ ಮೂಲಕ ಈ ಅಸಂಸ್ಕೃತರನ್ನು ಪಳಗಿಸಿ ಅವರನ್ನು ಅಂಕೆಯಲ್ಲಿಡುವ ಬಿಳಿಯನ ಕೈವಾಡದ ಅಗತ್ಯದ ಮಿಥ್ಯೆಯನ್ನು ಸದಾ ಚಿರಸ್ಮರಣೀಯವಾಗಿ ಉಳಿಯುವಂತೆ ಮಾಡಲಾಯಿತು. ಸ್ಪಿವಾಕರು ಸೂಚಿಸಿರುವಂತೆ ಇಂತಹ ಪಾತ್ರ ನಿರೂಪಣೆಯ ತಾತ್ವಿಕ ಹಾಗೂ ಜ್ಞಾನಕ್ಕೆ ಸಂಬಂಧಿಸಿದಂತಹ ಹಿಂಸೆಯನ್ನು ಒದಗಿಸಿ ತನ್ಮೂಲಕ ಪ್ರತ್ಯಕ್ಷ ದುರಾಕ್ರಮಣದ ಪಾಶವತೆಗೆ ಕುಮ್ಮಕ್ಕು ನೀಡಿ ಅದಕ್ಕೆ ಒತ್ತಾಸೆಯಾಗಿ ನಿಂತಿತು. ವಸಾಹತಿನ ಜನತೆಯನ್ನು ದುರ್ಬಲ, ಗತಿಹೀನ ಹೆಣ್ಣಿಗರೆಂದೂ ಯುರೋಪಿಯನ್ನರಿಗಿಂತ ಕೆಳದರ್ಜೆಯವರೆಂದು ಚಿತ್ರಿಸಲಾಯಿತು. ಹೀಗಾಗಿ ಆ ಬೇರೆಯವನು ವಸಾಹತುವಾದಿಗಳ ಮತ್ತು ವಸಾಹತಿನ ಜನತೆಯ ನಡುವಣ ಸಾಂಸ್ಕೃತಿಕ ಸಂಘರ್ಷದ ಐತಿಹಾಸಿಕ (ಮೇಲಿಂದ ಮೇಲೆ ಕೆತ್ತಲ್ಪಟ್ಟ) ಹಸ್ತಪ್ರತಿಯಾಗಿದ್ದಾನೆಂಬುದನ್ನು ನಾವು ಕಾಣಬಹುದು.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಬಂದ ಆಫ್ರಿಕಾದ ಕುರಿತಾದ ಯುರೋಪಿಯನ್ ನಿರೂಪಣೆಗಳಲ್ಲಿ ಸಾಮಾಜಿಕ ಅಂಧಃಪತನ ಹಾಗು ಅಶಾಂತಿಯ ಭಯದ ಕುರಿತಾದ ಆತಂಕ ವ್ಯಕ್ತವಾಗಿದೆ. ಆಫ್ರಿಕಾ ಯುರೋಪಿಯನ್ನರ ದಯಾಪರತೆಯ ಅಗತ್ಯವಿದ್ದ ಕಪ್ಪು ಖಂಡ, ಅನಾಗರಿಕವಾದ ಹಾಗೂ ನೀತಿಗೆಟ್ಟ 'ಕತ್ತಲೆ ತುಂಬಿದ ಹೃದಯ, ಜೀವ ಪ್ರಭೇದಗಳ ಉಗಮ ಹಾಗೂ ವಿಕಸನ ವ್ಯತ್ಯಾಸಗಳ ಕುರಿತಾದ ಡಾರ್ವಿನ್ನರ ತತ್ವಗಳು ವಸಾಹತುವಾದಿಯ ಮೇಲೆ ಯಾವ ಪ್ರಭಾವವನ್ನೂ ಬೀರಿದಂತೆ ಕಾಣಲಿಲ್ಲ. ಆಫ್ರಿಕಾದ ಕುರಿತಾದ ಪರಿಶೋಧಕರ ಚಿತ್ರಣದಲ್ಲಿ ನೆಲಸುನಾಡಿನ ಭೂಪ್ರದೇಶವನ್ನು ಹೆಣ್ಣಾಗಿಸಲಾಗಿದೆ. ಉದಾಹರಣೆಗೆ ರೈಡರ್ ಹ್ಯಾಗರ್ಡರ್ 'ಕಿಂಗ್ ಸೊಲೊಮನ್ಸ್ ಮೈನ್ಸ್'(೧೮೮೫)ನಲ್ಲಿ 'ಶೀಬಾಳ ಸ್ತನ ಬೆಟ್ಟಗಳು' ಆಯೀಶಾಳ ಆಳವಾದ ಗುಹೆಗಳು ಇತ್ಯಾದಿ.

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ವಸಾಹತುವಾದಿ ಬುದ್ಧಿಜೀವಿಗಳು ಸಾಂಸ್ಕೃತಿಕ ಪುನರುಜ್ಜೀವನವನ್ನು ಸಂಘಟಿಸುವ ಮೂಲಕ ಸಾಮ್ರಾಜ್ಯಶಾಹಿ ಶಕ್ತಿಗಳ ವಿರುದ್ಧ ದನಿಯೆತ್ತಲಾರಂಭಿಸಿದರು. ದಕ್ಷಿಣ ಆಫ್ರಿಕಾ, ಕೀನ್ಯಾ ಹಾಗೂ ನೈಜೀರಿಯಾಗಳಲ್ಲಿ ಸ್ಥಳೀಯರು ದಂಗೆಯೆದ್ದರು; ಅಲ್ಲಿ ಆಂತರಿಕ ಅಶಾಂತಿ ಕಾಣಿಸಿಕೊಂಡಿತು. ೧೯೧೨ರಲ್ಲಿ ದಕ್ಷಿಣ ಆಫ್ರಿಕಾ ನೇಟಿವ್ ನ್ಯಾಷನಲ್ ಕಾಂಗ್ರೆಸ್ ಮತ್ತು ಅನಂತರ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ (ಎ.ಎನ್.ಸಿ)ಗಳ ರಚನೆಯಾಯಿತು. ರಾಷ್ಟ್ರೀಯತೆಯ ಆರಂಭಿಕ ಬೆಳವಣಿಗೆ ಆ ಕಾಲದ ಯುಟೋಪಿಯನ್ ಆದರ್ಶವಾದಿ ತತ್ವಗಳ ಬೆಂಬಲ ದೊರಕಿತು. ಜೊತೆಗೆ ಅದು ಸಂಪದ್ಭರಿತವಾದ ಹಾಗೂ ಪವಿತ್ರವಾದ ನೈಜ ಸ್ಥಳೀಯ ಸಂಸ್ಕೃತಿ ಸದ್ಗುಣಗಳನ್ನು ಆರಿಸಿಕೊಂಡು ನಾಡಿಗರ ಸಹಜ ಪ್ರತಿರೋಧವೆನಿಸಿಕೊಂಡಿತು. ವಸಾಹತುವಾದಿಗಳಿಂದ ಪರಂಪರೆಯಾಗಿ ಪಡೆದ ಸಾಹಿತ್ಯದ ಆಚಾರ, ನಿಬಂಧಗಳಾದ ಕಾವ್ಯ, ಕಾದಂಬರಿ ಹಾಗೂ ಸಾಹಿತ್ಯದ ಇನ್ನಿತರ ಪ್ರಕಾರಗಳನ್ನು ವಶಪಡಿಸಿಕೊಂಡು, ಅದನ್ನು ವಿಕೇಂದ್ರೀಕರಿಸಿ ವಿವಿಧ ರೀತಿಯಲ್ಲಿ ಮಿಶ್ರತಳಿಗೊಳಿಸಲಾಯಿತು. ದಕ್ಷಿಣ ಆಫ್ರಿಕಾ ಹಾಗೂ ಪಶ್ಚಿಮ ಆಫ್ರಿಕಾದ ಬರಹಗಾರರು ಸಾಂಸ್ಕೃತಿಕ ಪ್ರದೇಶ ಹಾಗೂ ಅನುಭವಗಳ ಕುರಿತಾದ ತಮ್ಮ ಅರಿವನ್ನು

ತಮ್ಮದೇ ಆದ ಸ್ಪಷ್ಟ ಮಾತುಗಳಲ್ಲಿ ವ್ಯಕ್ತಪಡಿಸಿದರು.

ಇಂಗ್ಲೀಷಿನಲ್ಲಿ ಬಹುಶಃ ಮೊಟ್ಟ ಮೊದಲನೇ ಬಾರಿ ರಚಿತಗೊಂಡ ಆಫ್ರಿಕನ್ ಕಾದಂಬರಿ ದಕ್ಷಿಣ ಆಫ್ರಿಕಾದ ಸೋಲೊಮನ್ ಪ್ಲಾಟ್‌ಜೀ ಅವರ ಕೃತಿ ಮಹುಡಿ (೧೯೨೦). ಈ ಕಾದಂಬರಿಯಲ್ಲಿ ಪ್ಲಾಟ್‌ಜೀಯವರು ಪಾಶ್ಚಿಮಾತ್ಯ ಸಾಹಿತ್ಯದ ಪ್ರಭೇದಗಳಿಂದಲೂ ಆಫ್ರಿಕಾದ ಮೌಖಿಕ ಸಂಪ್ರದಾಯಗಳಿಂದಲೂ ಆಯ್ದುಕೊಂಡ ವಿನೂತನ ಸಾಹಿತ್ಯ ಪ್ರಭೇದಗಳನ್ನು ಹಾಗೂ ಭಾಷಿಕ ಸೂಚಿಗಳನ್ನು ಸಂಯೋಜಿಸಿದ್ದಾರೆ. ಸಾಹಸ ಕಾದಂಬರಿಗಳ ಸಂಪ್ರದಾಯಕ್ಕೆ ವೈದೃಶ್ಯ ತೋರಿಸುವ ಸಂವಾದಿಯಾಗಿ ಬರೆದಿರುವ ಮಹುಡಿಯ ಕಥೆಯು ಪರಿವರ್ತನೆಯ ಹಂತದಲ್ಲಿರುವ ಕರಿಯ ಸಮಾಜದ ಕಥೆ. ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸ್ವಾಧೀನ ಪಡಿಸಿಕೊಂಡು ರಾಷ್ಟ್ರೀಯತಾವಾದಿ ಬರಹಗಾರನು ವಸಾಹತುವಾದಿ ದೃಷ್ಟಿಯನ್ನು ಇಲ್ಲವಾಗಿಸಿ ತನ್ನದೇ ಆದ ಅನುಭವವನ್ನು ಪರಿಚಯಿಸಬಲ್ಲನೆಂಬುದೇ ಇದರ ಅರ್ಥ. ಆದರೆ ತದ್ವಿರುದ್ಧ ಅರ್ಥಗಳ ಪಂಗಡವನ್ನು ಸೃಷ್ಟಿಸುವಾಗಲೂ ಕೂಡ ರಾಷ್ಟ್ರೀಯ ವಾದಿ ಸಾಹಿತ್ಯ ವಸಾಹತುವಾದಿಯ ಶಕ್ತಿಯ ಶಬ್ದ ಭಂಡಾರವನ್ನೇ ಉಪಯೋಗಿಸ ಬೇಕೆಂದಾಯಿತು. 'ಸಮೀಪನ' ಎಂದು ಕರೆಯಲ್ಪಡುವ ಈ ಸಮಸ್ಯೆಯೇ ಆಫ್ರಿಕಾದ ಸಾಂಸ್ಕೃತಿಕ ದ್ವಂದ್ವಕ್ಕೆ ಆಧಾರತತ್ವವಾಗಿದೆ.

ಸಮೀಪನದಿಂದಾಗಿ ನೀಗ್ರೋವಾದ ಎಂಬ ಹೆಸರಿನ ಹೊಸ ವರ್ಗದ ಬರವಣಿಗೆಯ ಉದಯವಾಯಿತು. ನೀಗ್ರೋವಾದಿ ಬರಹಗಾರರು ಹೆಚ್ಚುವರಿ ಫ್ರೆಂಚ್ ಭಾಷಾ ಬರಹಗಾರರು. ಅವರು ಯುರೋಪಿಯನ್ನರು ತಮ್ಮ ತಲೆಗೆ ಕಟ್ಟಿರುವ ನೇತ್ಯರ್ಥಕ ಚಿತ್ರಣವನ್ನು ಕೆಡವಿ ಹಾಕಿ ಅವುಗಳಿಂದ ಸಕಾರಾತ್ಮಕ ಚಿತ್ರಣದ ಪುನರ್ ರಚನೆಯ ಜವಾಬ್ದಾರಿಯನ್ನು ತಮ್ಮ ಮೇಲೆ ಹೊತ್ತುಕೊಂಡರು. ಅವರು ದಬ್ಬಾಳಿಕೆಗೊಳಗಾದವರನ್ನು ಎತ್ತಿ ಹಿಡಿದರು. ಆ ಕಾರಣ ತುಚ್ಛವೆಂದು ಗುರುತಿಸಲ್ಪಟ್ಟ ಪ್ರತಿಯೊಂದನ್ನೂ ಅಂದರೆ ಪಿತ್ರಾರ್ಜಿತ ರಹಸ್ಯಗಳನ್ನೂ, ಗತಕಾಲದ ಕಪ್ಪು ಆಫ್ರಿಕಾದ ಸಹಜ ಪ್ರೇರಣೆಯ ಮತ್ತು ಕರುಳಿನಿಂದ ಹೊರಡುವ ತರಂಗ ಧಾಟಿಯನ್ನೂ, ಪ್ರಕೃತಿಯೊಂದಿಗೆ ತಮ್ಮ ಗಾಢ ಸಂಬಂಧವನ್ನು ಕೊಂಡಾಡಿದರು.

ಏಯಮೆ ಸೆಜಾಯರ್, ಡೇವಿಡ್ ಡಯೊಪ್, ಲಿಯೊಪಾಲ್ಡ್ ಸೆಂಗ್ ಹರ್ ಮತ್ತಿತರರಿಗೆ ನೀಗ್ರೋವಾದ ಯುರೋಪಿಯನ್ನರ ತರ್ಕಸಮ್ಮತವಾದ ಹಾಗೂ ವಿಶ್ಲೇಷಕ, ಗ್ರಹಣ ಶಕ್ತಿಗೆ ವಿರುದ್ಧವಾದ 'ಭಾವೋತ್ತೇಜಕ ಹಾಗೂ ಅಂತರ್ಬೋಧೆಯ' ಗ್ರಹಣ ಶಕ್ತಿಯನ್ನು ಅರಿತುಕೊಳ್ಳುವ ಬೌದ್ಧಿಕ ಚಳವಳಿಯಾಯಿತು. 'ಆಫ್ರಿಕನ್ನನು ನಿಸರ್ಗದೊಂದಿಗೆ ಹತ್ತಿರದ ಸಂಬಂಧ ಹೊಂದಿದ್ದು, ತನಗೂ ವಸ್ತುಗಳಾದ ಮರ, ಕಲ್ಲು, ಮತ್ತಿತರ ವಸ್ತುಗಳಿಗೂ ಮಧ್ಯೆ ಯಾವುದೇ ಭೇದವನ್ನು ಕಾಣುವುದಿಲ್ಲ' ಎಂದು ಸೆಂಗ್ ಹರ್ ಹೇಳುತ್ತಾರೆ.

ಸೆಂಗ್‌ಹರ್ ಅವರ ಅಭಿಪ್ರಾಯಗಳು ಆಫ್ರಿಕಾದ ಬುದ್ಧಿಜೀವಿಗಳ ಮಧ್ಯೆ ದೊಡ್ಡ

ವಿವಾದಗಳಿಗೆ ಎಡೆ ಮಾಡಿಕೊಟ್ಟಿವೆ. ಅಬಿಯೋಲಾ ಇರೆಲೆಯವರಂತಹ ವಿಮರ್ಶಕರು 'ಎಲ್ಲಾ ಆಫ್ರಿಕನರು' (ಪ್ಯಾನ್ ಆಫ್ರಿಕನಿಸಂ) ವಾದವನ್ನೂ, ಬಂಟು, ಅಕಾನ್, ಯೊರೂಬಾ, ಕಿಕುಯು, ಮೊಕಾಂಡೋ, ಜುಲು, ನ್ದೆಬೆಲೆ, ಮಸ್ಸಾಯಿ ಮತ್ತಿತರ ಎಲ್ಲಾ ಕರಿಯ ಬುಡಕಟ್ಟುಗಳೂ ಒಂದಾಗಿ ಒಂದೇ ಸಂಸ್ಕೃತಿಯ ಸಂತತಿಗೆ ಸೇರಿದವರೆಂದು ನಂಬಿದರೆ, ಏಜೆಕಿಯಲ್ ಮ್ಫಲೀಲೆ ಹಾಗೂ ಸೊಯಿಂಕಾರಂತಹ ವಿಮರ್ಶಕರು ನೀಗ್ರೋವಾದ (ನೆಗ್ರಿಟ್ಯೂಡ್)ವನ್ನು ತಿರಸ್ಕರಿಸಿದ್ದಾರೆ. ಜನಾಂಗಗಳ ಪ್ರತ್ಯೇಕತೆಯ ಮೇಲೆ ನಿಂತಿರುವ ವರ್ಣಭೇದ ನೀತಿಯ(ಅಪರ್ ಥೈಡ್) ಜನಾಂಗವಾದಿ ತತ್ವಕ್ಕೆ ನೀಗ್ರೋವಾದ ಬೆಂಬಲ ನೀಡುತ್ತವೆಂದೂ, ಈ ಕಲ್ಪನೆ ಸೃಜನಾತ್ಮಕ ಸಹಜ ಪ್ರವೃತ್ತಿಗೆ ತಕ್ಕಮಟ್ಟಿಗೆ ನಿರ್ಬಂಧ ಹೇರುತ್ತದೆಂದೂ ಮ್ಫಲೀಲೆ ತೋರಿಸಿಕೊಟ್ಟರು. ನೈಜೀರಿಯಾದ ಸೋಯಿಂಕಾ ಅವರು, ಹುಲಿಯನ್ನು ಹುಲಿತನದಿಂದಲೂ, ಡುಯಿಕರ್(ಒಂದು ಬಗೆಯ ಜಿಂಕೆ) ಅನ್ನು ಅದರ ಡುಯಿಕರ್ ತನದಿಂದಲೂ ಗುರುತಿಸಲಾಗದು. ಅವನ್ನು ಅವುಗಳ ನೆಗೆತದಿಂದ ಗುರುತಿಸಲಾಗುತ್ತದೆಂದೂ ಘೋಷಿಸಿದರು.

ಇಲ್ಲಿಗೆ ನಾವು ಆಫ್ರಿಕನ್ ಸಾಹಿತ್ಯ ಬೆಳವಣಿಗೆಯ ಎರಡನೇ ಘಟ್ಟದ ಹಂತಕ್ಕೆ ತಲುಪುತ್ತೇವೆ. ಐವತ್ತರ ದಶಕದ ಮಧ್ಯಭಾಗದಲ್ಲಿ ಎರಡನೇ ಮಹಾಯುದ್ಧಕ್ಕೆ ಮೊದಲು ಸಂವಿಧಾನಾತ್ಮಕ ಬೇಡಿಕೆಯೊಂದಿಗೆ ಆರಂಭವಾದ ಈ ವಸಾಹತುಶಾಹಿ ವಿರೋಧಿ ಸ್ವಾತಂತ್ರ್ಯ ಚಳವಳಿ ಬೆಳೆಯುತ್ತಾ ಹೋಗಿ ಜಗತ್ತಿನದಾದ್ಯಂತ ವಸಾಹತುಶಾಹಿಗಳ ಆಳ್ವಿಕೆಯನ್ನು ವಿರೋಧಿಸಿದ ಯಾರೂ ತಡೆಯಲಾರದಂತಹ ಸಿಟ್ಟಿನ ಮಹಾಪೂರವಾಗಿ ಕಂಡುಬಂದಿತು. ಜನಾಂಗೀಯವಾದಿ ಪಡಿಯಚ್ಚುಗಳನ್ನು ವ್ಯತಿರಿಕ್ತಗೊಳಿಸುವ ನೀಗ್ರೋವಾದದ ಆರಂಭಿಕ ಪ್ರಯತ್ನಗಳಂತಿರದೆ, ಈ ರಾಷ್ಟ್ರೀಯತಾವಾದಿಗಳು ತಮ್ಮದೇ ಆದ ಪರಿಭಾಷೆಯಲ್ಲಿ ಪ್ರಾತಿನಿಧ್ಯಕ್ಕಾಗಿ ವಾದಿಸತೊಡಗಿದರು. ರಾಜಕೀಯ ಆಂದೋಲನಕ್ಕೆ ಬರಹಗಾರರು ದಾರಿದೀಪವಾದರು. ಅವರು ಕಾಲಜ್ಞಾನಿಗಳೂ, ಪ್ರವಾದಿಗಳೂ ಆದರು. ಪ್ರತಿಭಟನೆಯ ಈ ಮಹಾಪೂರವೂ ನಿಜವಾಗಿಯೂ ವಸಾಹತುವಾದಿ ಪಾಶ್ಚಾತ್ಯ ಸಾಹಿತ್ಯ ಎಂದು ಕರೆಯಬಹುದಾದ ಸಾಹಿತ್ಯಕ್ಕೆ ಜನ್ಮ ನೀಡಿತು. ಆಫ್ರಿಕಾದ ರಾಷ್ಟ್ರೀಯತಾವಾದಿ ಬರಹಗಾರರು ತಮ್ಮ ಪ್ರಸ್ತುತ ಐತಿಹಾಸಿಕ, ಜನಾಂಗೀಯ ಅಥವಾ ಅಪ್ರಾಕೃತ ಸ್ಥಾನದಿಂದ ಇಲ್ಲಿಯವರೆಗೂ ವಸಾಹತುವಾದಿ ಅನುಭವದ ಆಘಾತಕ್ಕೊಳಗಾಗಿದ್ದ ತಮ್ಮ ಸಾಂತಿಕ ಅನನ್ಯತೆಯ ಪುನರ್ ಜೋಡಣೆಗೆ ಹೆಚ್ಚು ಮಹತ್ವ ನೀಡಿದರು. ಸಾಮ್ರಾಜ್ಯಶಾಹಿ ವಿರೋಧಿ ಸಂಗ್ರಾಮಗಳ ಇತಿಹಾಸವನ್ನೂ ಆಕ್ರಮಣಕಾರಿ ಶಕ್ತಿಗಳ ವಿರುದ್ಧ ಹೋರಾಡಿದ ತಮ್ಮ ದೇಶದ ವೀರರ ಗೌರವಗಾಥೆಗಳನ್ನು ತಮ್ಮ ಪೂರ್ವಜರ ಪರಾಕ್ರಮದ ಐತಿಹ್ಯಗಳನ್ನೂ ಶೋಧಿಸಿ ತೆಗೆದರು. ತಮ್ಮ ಆತ್ಮ ಚರಿತ್ರೆಗಳಲ್ಲಿಯೇ ದಾಖಲಿಸುವಂತೆ ಕ್ವಾಮೆನ್ ಕ್ರೂಮ್‌ಹ, ಕೆನ್ನೆತ್ ಕ್ವಾಂಡಾರಂತಹ ರಾಷ್ಟ್ರೀಯತಾವಾದಿ ನಾಯಕರು ಆಫ್ರಿಕಾದ ವಿಮೋಚನಾ ಹೋರಾಟಗಳಿಗೆ ಸಮೂಹ ರಾಜಕೀಯ ಪ್ರತಿಭಟನೆಯ ಮಾದರಿಯ ಮೊರೆ ಹೊಕ್ಕರು. ದಕ್ಷಿಣ ಆಫ್ರಿಕಾ

ಹಾಗೂ ಭಾರತಗಳಲ್ಲಿ ಗಾಂಧಿಯವರು ನಡೆಸಿದ ಪ್ರತಿಭಟನೆಯ ವಿಧಾನದಿಂದ ಪ್ರೇರಣೆ ಹಾಗೂ ಸ್ಫೂರ್ತಿಗಳನ್ನು ಪಡೆದುಕೊಂಡರು. ಈ ರೀತಿಯಾಗಿ ಪ್ರಭಾವಿತಗೊಂಡ ರಾಷ್ಟ್ರೀಯತಾವಾದಿ ಸಾಹಿತ್ಯವು ೧೯೫೦ರ ಹಾಗೂ ೧೯೬೦ರ ದಶಕಗಳಲ್ಲಿ ಹೆಚ್ಚೆಚ್ಚು ಕಲಹಪ್ರಿಯವಾಯಿತು ಹಾಗೂ ಅನೇಕ ವೇಳೆ ನಿರ್ಲಜ್ಜವಾಗಿ ರಾಜಕೀಯ ವಿವಾದಾತ್ಮಕ ಲಕ್ಷಣಗಳನ್ನು ಪಡೆದುಕೊಂಡಿತು.

ವಸಾಹತುವಾದಿಗಳಡಿಯಲ್ಲಿದ್ದ ಸ್ಥಳೀಯರ ಹೃದಯಗಳಿಗೆ ಹತ್ತಿರವಾದ ಹೋರಾಟಗಳನ್ನೂ, ಅವರ ಭಾವೋದ್ರೇಕಗಳನ್ನೂ, ಅಲ್ಲಿನ ಭೂದೃಶ್ಯಗಳನ್ನೂ ಸಾಹಿತ್ಯ ಪ್ರತಿನಿಧಿಸಬೇಕಾಯಿತು. ಚಿನುವಾ ಅಚಿಬೆಯವರ ಕಾದಂಬರಿ 'ಥಿಂಗ್ಸ್ ಫಾಲ್ ಅಪಾರ್ಟ್'(೧೯೫೮) ವಸಾಹತುವಾದಿ ಆತಿಕ್ರಮಣಕ್ಕೊಳಪಟ್ಟು, ಛಿದ್ರವಾದ ಇಬೋ ಸಮುದಾಯದ ಅನುಭವವನ್ನು ದಾಖಲಿಸುತ್ತದೆ. ಉಮೋಫಿಯಾದ ಮೇಲ್ವರ್ಗದ ಮುಖಂಡ ರಲ್ಲೊಬ್ಬರಾದ ಒಕೊಂಕ್ವೋ ಅವರು ಕ್ರೈಸ್ತ ಧರ್ಮ ಪ್ರಚಾರದ ಜೊತೆ ಯಾವುದೇ ರಾಜಿ ಮಾಡಿಕೊಳ್ಳಲೊಪ್ಪುವುದಿಲ್ಲ. ವಸಾಹತುವಾದಿ ಶಕ್ತಿಯನ್ನು ಮೂಲಭೂತವಾಗಿ ಪ್ರತಿರೋಧಿಸುವ ಆತನಲ್ಲಿ ತನ್ನ ಕುರಿತಾದ ಸ್ವಯಂ ಪ್ರಜ್ಞೆ ಹಾಗೂ ತನ್ನ ಸಮುದಾಯದ ಸಾಂಸ್ಕೃತಿಕ ಅನನ್ಯತೆಯ ಪ್ರಜ್ಞೆಗಳು ಗಾಢವಾಗಿ ಬೇರೂರಿವೆ. ಆದರೆ ಬಿಳಿಯನ ಮೇಲೆ ಸಂಪೂರ್ಣ ದೂಷಣೆ ಹೊರಿಸದಿರುವುದರಲ್ಲಿ ಅವನ ಮಹಾನತೆ ಅಡಗಿದೆ. ವಾಸ್ತವ ಪ್ರತ್ಯಕ್ಷದರ್ಶಿಯಾಗಿ ಉಮೋಫಿಯಾದ ಜನಾಂಗವು ತನಗಿಂತ ದೊಡ್ಡದಾದ ತನಗಿಂತ ಅಧಿಕವಾಗಿ ಪ್ರೇರಿತವಾದ ವಸಾಹತುವಾದಿ ಶಕ್ತಿಗಳ ಸಮ್ಮುಖದಲ್ಲಿ ಛಿದ್ರಗೊಳ್ಳುವುದನ್ನು ಅವರು ಇಲ್ಲಿ ಚಿತ್ರಿಸಿದ್ದಾರೆ; ಅಲ್ಲದೆ ಸಮುದಾಯ ಛಿದ್ರಗೊಳ್ಳಲು ಅದರ ಆಂತರಿಕ ಕಲಹಗಳೂ, ಅದರಲ್ಲಡಗಿರುವ ಭ್ರಾತೃಹಂತಕ ಸಂಘರ್ಷಗಳೂ ಕಾರಣವೆಂಬುದನ್ನು ಅವರಿಲ್ಲಿ ಕಾಣಿಸಿದ್ದಾರೆ.

ಅಚಿಬೆಯವರ ಎರಡನೆಯ ಕಾದಂಬರಿ 'ಅರೋ ಆಫ್ ಗಾಡ್'ನಲ್ಲಿ ಇಬೋ ಸಮುದಾಯದ ವೈಶಿಷ್ಟ್ಯ ಹಾಗೂ ಪ್ರಧಾನ ಲಕ್ಷಣಗಳು, ಅದರಲ್ಲೂ ಬಿಳಿಯರ ಸಾಂತಿಕ, ಭಾವಾತ್ಮಕ ಹಾಗೂ ರಾಜಕೀಯ ಆಧಿಪತ್ಯವನ್ನು ಏಕನಿಷ್ಠವಾಗಿ ವಿರೋಧಿಸುವ ನಾಯಕರ ಪ್ರತಿರೋಧವನ್ನು ದಾಖಲಿಸಲಾಗಿದೆ. ಆಫ್ರಿಕಾದೊಳಗೆ ಬಿಳಿಯರ ಆಗಮನ ಹಾಗೂ ಅವರ ಆಡಳಿತ ಸ್ಥಾಪನೆಗೆ ಮೊದಲು ಆಫ್ರಿಕಾದ ಇತಿಹಾಸದಲ್ಲಿ ಯಾವುದೇ ಗಮನಾರ್ಹ ಕ್ರಿಯೆ ಅಥವಾ ಸಾಧನೆ ಕಂಡುಬಾರದೆ ಅದನ್ನೊಂದು ಖಾಲಿ ಪುಟವಾಗಿ ಚಿತ್ರಿಸಿದ್ದ ಯುರೋಪಿಯನ್ನರ ಚಿತ್ರಣಕ್ಕೆ ಪ್ರತಿಕ್ರಿಯೆಯಾಗಿ ಮೂಡಿಬಂದ ಕಾದಂಬರಿಗಳಿವು. ಆಫ್ರಿಕಾದ ಗತಕಾಲವು 'ಒಂದು ಅನಾಗರಿಕ ಕರಾಳ ರಾತ್ರಿಯಲ್ಲ'ವೆಂದು ನಿದರ್ಶಿಸುವ ಶಕ್ತಿಯು ಕಾದಂಬರಿಕಾರರಲ್ಲಡಗಿದೆಯೆಂದು ಅಚಿಬೆಯವರು ಸ್ಪಷ್ಟವಾಗಿ ಹೇಳುತ್ತಾರೆ.

ಕಾದಂಬರಿಕಾರರಿಂದ ನಾಟಕೀಕರಿಸಲ್ಪಟ್ಟಿರುವ ಕಾಲವು ವಸಾಹತು ನಿರ್ಮಾಣದ ಪೂರ್ವಕಾಲವೇ ಆಗಲಿ ಅಥವಾ ಬಹುಬಾರಿ ಆದಂತೆ ಹೋರಾಟದ ಸಮಯದ ಕೃತಿಗಳೇ ಆಗಿರಲಿ, ಈ ರೀತಿಯಾದ ಐತಿಹಾಸಿಕ ಪುನಃ ಸಂಪಾದನೆಯು ಈ ಚಿತ್ರಣವನ್ನು ಸರಿಪಡಿಸುವ

ಪ್ರಯತ್ನದಂತೆ ಕಂಡುಬರುತ್ತದೆ. ಬರಹಗಾರರು ಸ್ಥಳೀಯರ ಒಳಜೀವನ ಹಾಗೂ ಐತಿಹಾಸಿಕ ಪಾತ್ರಗಳಾಗಿ ಅವರ ಅನುಭವಗಳನ್ನೂ ಅಲ್ಲಗಳೆದಂತಹ ವಸಾಹತುವಾದಿ ವ್ಯಾಖ್ಯಾನದೊಂದಿಗೆ ಈ ಪುನಶ್ಚೇತನಕಾರಕ ಸಂಬಂಧವನ್ನು ಸ್ಥಿರಪಡಿಸಿದರು.

ವೋಲೆ ಸೊಯಿಂಕಾ ಅವರು ಯೊರೂಬಾ ದಾಖಲೆಗಳನ್ನಾಧರಿಸಿ ನಾಟಕ ಕಾದಂಬರಿ ಹಾಗೂ ಪದ್ಯಗಳನ್ನು ಬರೆದರು. ಅವರ ನಾಟಕ, ಪದ್ಯ ಹಾಗೂ ಕಾದಂಬರಿಗಳಲ್ಲಿ ಒಗೂವಾ, ಒಬಾತಲಾ, ಮುಂತಾದ ದೇವರುಗಳು ಪದೇ ಪದೇ ಕಾಣಿಸಿಕೊಳ್ಳುತ್ತಾರೆ. ಸೊಯಿಂಕಾ ಅವರು ಒಗುವಾ ದೇವರನ್ನು ಪಾರಮಾರ್ಥಿಕ ಮಾನವೀಯ ಆದರೂ ನಿಷ್ಠುರವಾಗಿ ನ್ಯಾಯದ ಪುನರ್ ಸ್ಥಾಪನೆಯನ್ನು ಪ್ರತಿನಿಧಿಸುವ ದೇವರೆಂದು ವರ್ಣಿಸಿದ್ದಾರೆ. ಈತನೇ ಬಿಂಬ, ಪರಿಕಲ್ಪನೆ, ನೀತಿಸೂತ್ರ ಹಾಗೂ ಸಹಾನುಭೂತಿಗಳ ಸ್ಥೂಲ ಹೊಡೆತದ ಪ್ರಥಮ ಕಲಾವಿದ. ಈ ಕುಲುಮೆಯ ಮೊಟ್ಟ ಮೊದಲನೆಯ ತಂತ್ರಜ್ಞ, ಒಬಾತಾಲಾ ದೇವರು ಸೃಷ್ಟಿಯ ಸೌಮ್ಯತೆಯ ಸಾರವಾದರೆ, ಸೃಜನಶೀಲ ಪ್ರೇರಣೆ ಮತ್ತು ಸ್ವತಃ ಸೃಜನಶೀಲ ಸಹಜ ಪ್ರವೃತ್ತಿಯೇ ತಾನಾದ ಸೃಜನಶೀಲತೆಯ ಸಾಕ್ಷಾತ್ ಸಾರವೇ ಒಗುನ್.

ವಸಾಹತುವಾದದ ತರುವಾಯ ಮೂಡಿ ಬಂದ ಬರಹಗಾರರ ಕೃತಿಗಳಲ್ಲಿ ಅವರ ಮೇಲೆ ಪ್ರಭಾವ ಬೀರಿರುವ ಸಂಸ್ಕೃತಿ ಹಾಗೂ ಮಿಥಕಗಳ ಕಲಸು ಮೇಲೋಗರಕ್ಕೆ ಕೊನೆಯಿಲ್ಲ; ಈ ಪ್ರಭಾವವು ಅವರ ಬರಹಗಳಲ್ಲಿ ಅಲ್ಲಲ್ಲಿ ಅಡ್ಡಾದಿಡ್ಡಿಯಾಗಿ ಕಂಡುಬರುತ್ತದೆ. ಉದಾಹರಣೆಗೆ ಕೀನ್ಯಾದ ಗೂಗಿ ವಾ ಥಿಯಾಂಗೋ ಅವರು ಸ್ವಿಫ್ಟ್ ಕಾನ್ರಾಡ್ ಹಾಗೂ ಕಾಫ್ಕಾರವರಿಂದ ಎರವಲು ಪಡೆದು ಅದನ್ನು ಆಫ್ರಿಕಾದ ಸನ್ನಿವೇಶಕ್ಕೆ ಜೋಡಿಸಿದ್ದಾರೆ. ವಸಾಹತುವಾದಿ ಶಿಕ್ಷಣದ ಅಂಗವಾಗಿದ್ದ ಬೈಬಲ್‌ನಿಂದ ಮೊದಲಿನ ಮಾದರಿಯಾಗಿ ಮೊಸಸ್ ಅನ್ನು ಆಫ್ರಿಕಾದ ಪ್ರಕರಣಗಳಲ್ಲಿ ಉಪಯೋಗಿಸಿಕೊಂಡಿದ್ದಾರೆ(ಉದಾಹರಣೆಗೆ ಇಸ್ರೇಲಿನವರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವ ನಾಯಕನ ಪಾತ್ರ). ಈ ರೀತಿಯಾಗಿ ವರ್ತಮಾನವನ್ನು ಪೂರ್ವದ ಸಂಕೇತಗಳ ಮೂಲಕ ಚಿತ್ರಿಸುವುದೂ ವಸಾಹತು ಸ್ವಾತಂತ್ರ್ಯ ಪ್ರಾಪ್ತಿಯ ಒಂದು ತಂತ್ರ.

ಸಂಸ್ಕೃತಿಯ ಯಥಾರ್ಥತೆ, ಬೆರಕೆ ಹಾಗೂ ಪ್ರತಿರೋಧಕ್ಕೆ ಸಂಬಂಧಪಟ್ಟ ವಸಾಹತು ಪಾಶ್ಚಾತ್ಯ ಚರ್ಚೆಗಳ ಕ್ಲಿಷ್ಟಾಂಶವನ್ನು ನಾವು ಪ್ರಧಾನವಾಗಿ ಭಾಷೆಯ ಬಳಕೆಯಲ್ಲಿ ಕಾಣುತ್ತೇವೆ. 'ಭಾಷೆಯನ್ನು ಬಳಸುವುದೆಂದರೆ, ಸಂಸ್ಕೃತಿಯನ್ನು ಅಂಗೀಕರಿಸುವುದು' ಎಂದು ಫಾನನ್ ಹೇಳುತ್ತಾರೆ. ಆದ ಕಾರಣ ತನ್ನ ಮಾತೃಭಾಷೆಯೊಂದಿಗೆ ಸಂಪರ್ಕ ಕಳೆದು ಕೊಳ್ಳುವುದೆಂದರೆ, ತನ್ನ ಸಾಂಸ್ಕೃತಿಕ ಮೂಲಗಳೊಂದಿಗೆ ಸಂಬಂಧವನ್ನು ಕಳೆದುಕೊಂಡು ಅದರ ಆಘಾತದಿಂದ ನಷ್ಟವನ್ನು ಸೂಚಿಸುತ್ತದೆ. ಇದಕ್ಕೆ ಪ್ರತಿಕ್ರಿಯೆಯಾಗಿ ಹಾಗೂ ತಾವು ಆರಂಭದಲ್ಲಿ ಕೆಲವು ಇಂಗ್ಲಿಷ್ ಕಾದಂಬರಿಗಳನ್ನು ಬರೆದುದರಿಂದ ಆದ ಈ ನಷ್ಟವನ್ನು ಭರ್ತಿ ಮಾಡಿಕೊಳ್ಳಲೆಂದು ಗೂಗಿ ವಾಥಿಯಾಂಗೋ ಅವರು ಇನ್ನು ಮುಂದೆ ತಾವು ಕೇವಲ ತಮ್ಮ ಮಾತೃಭಾಷೆಯಾದ ಗಿಕುಯು ಭಾಷೆಯಲ್ಲಿ ಮಾತ್ರ ಬರೆಯಬೇಕೆಂದು ನಿರ್ಧರಿಸಿದ್ದಾರೆ.

ಈ ಸಮಸ್ಯೆಯನ್ನು ನಿಭಾಯಿಸುವಲ್ಲಿ ಕೆಲವು ಬರಹಗಾರರು ಬೇರೆ ವಿಧಾನಗಳನ್ನು

ಕಂಡುಕೊಂಡಿದ್ದಾರೆ. ಚಿನೂವಾ ಆಚಿಬೆ, ಗೇಬ್ರಿಯಲ್ ಒಕಾರಾ, ನುರುದ್ದೀನ್ ಫರಾಹ, ಏಯ್ ಕ್ವೇಯ್ ಅರ್ಮಾಹ್‌ರಂತಹ ಕಾದಂಬರಿಕಾರರು ತಮ್ಮ ಭಾಷೆಯ ಒಳಭೇದದ ನುಡಿಗಟ್ಟುಗಳನ್ನು ಇದ್ದಕ್ಕಿದ್ದ ಹಾಗೆ ಇಂಗ್ಲಿಷ್‌ಗೆ ಲಿಪ್ಯಂತರ ಮಾಡಿದ್ದಾರೆ. ಈ ಸಾಹಿತಿಗಳು ಸುಲಭಸಾಧ್ಯವಾಗಿ ಸಾಮಾನ್ಯ ಭಾಷೆಗೆ ತಿರುಗಿಸಲಾಗದಂತಹ ಧ್ವನಿಗಳ ಕಲಕಲವನ್ನು ಇಂಗ್ಲಿಷ್ ಭಾಷೆಯ ಒಳಗೆ ಸೇರಿಸಿದ್ದಾರೆ. ದಕ್ಷಿಣ ಆಫ್ರಿಕಾದ ಐ.ಎಂ.ಕೋಟ್ ಜೀಯಂತಹ ಬರಹಗಾರರು ಯುರೋಪಿಯನ್ ಚಿಂತನ ಕ್ರಮಗಳನ್ನು ವಸಾಹತುವಾದಿ ಪ್ರಪಂಚವನ್ನು ಸಂಘಟಿಸಿದ್ದ ನೋಟವನ್ನೂ ಅದರ ತೀರ್ಮಾನಗಳನ್ನು ಬುಡಮೇಲು ಮಾಡುವುದನ್ನು ಕಲಿತಿದ್ದಾರೆ.

'ರಾಬಿಸನ್ ಕ್ರೂಸೋ'ನ ಪುನಾರಚನೆಯಾಗಿರುವ ಐ.ಎಂ.ಕೊಟ್‌ಜೀಯವರ ಕಾದಂಬರಿ 'ಫೋ'(೧೯೮೦)ವನ್ನು ನಾವು ಆವಶ್ಯಕವಾಗಿ ಪಾಶ್ಚಾತ್ಯ ಆಧುನಿಕ ಕಾದಂಬರಿಯೆನ್ನಬಹುದು. ಬಿಳಿಯನ ಭಾಷೆಯನ್ನರಿಯದ ಫ್ರೈಡ್ ಈ ಸಮಸ್ಯೆಯನ್ನು ಪಕ್ಕಕ್ಕಿಟ್ಟು ಸುಲಭವಾಗಿ ಗುರುತಿಸಲಸಾಧ್ಯವಾಗುವಂತಹ ಅರ್ಥಗಳನ್ನು ಸೃಷ್ಟಿಸಲಾರಂಭಿಸುತ್ತಾನೆ. ವಸಾಹತುವಾದಿ ಪಶ್ಚಾತ್ಯಾ ಬರಹಗಳಲ್ಲಿ ಅನುಕರಣ ನಿಪುಣರು ವಸಾಹತುವಾದಿಯ ಮೇಲೆ ಪ್ರತಿಬಿಂಬಿತವಾಗಿ ಅವನ ಕುರಿತಾದ ವಿರೂಪ ಬಿಂಬವನ್ನು ನಮಗೆ ನೀಡಿದ್ದಾರೆ.

ವಸಾಹತುವಾದಿ ಪಾಶ್ಚಾತ್ಯ ಬರವಣಿಗೆಯನ್ನು ನಾವು ಬಹು ಪ್ರಕಾರದ ವಿವಿಧ ಸಂಸತಿಗಳನ್ನು ಹಾಗೂ ಅನೇಕ ತತ್ವಗಳನ್ನು ಆವರಿಸಿರುವ ದಿಗ್ಭ್ರಾಂತಗೊಳಿಸುವಷ್ಟು ಉಡಿಗೆ-ತೊಡಿಗೆಗಳಿಂದಾವೃತ್ತವಾದ ಪಠ್ಯವೆಂದು ವರ್ಣಿಸಬಹುದು. ಆಧುನಿಕ ಪಾಶ್ಚಾತ್ಯ ಮತ್ತು ವಸಾಹತು ಪಾಶ್ಚಾತ್ಯ ವ್ಯಾಖ್ಯಾನಗಳೆರಡೂ ಸೇರಿ ವಸಾಹತು ಪಾಶ್ಚಾತ್ಯ ವಿಮರ್ಶೆಯ ಬೆಳವಣಿಗೆಗೆ ಸಹಾಯಕವಾಗಿವೆ. ಈ ವಿಮರ್ಶೆಯು ತನ್ನ ಸಿದ್ಧಾಂತಕ್ಕೆ ಹೊಂದಿಕೊಳ್ಳುವ ಕಥನಗಳ ಪರವಾಗಿ ವಾದಿಸುತ್ತದೆ. ವಸಾಹತು ಪಾಶ್ಚಾತ್ಯ ವಿಮರ್ಶೆಯು 'ಮಹಾನ್' ಕಥನಗಳ ದುರ್ಬಲತೆಯನ್ನು ನಿದರ್ಶಿಸಿ ಅತಿಶಯವಾದ ಅಧಿಕಾರದ ಕಲ್ಪನೆಯನ್ನು ಪ್ರಶ್ನಿಸುತ್ತದೆ. ಭೂಗೋಳದಾದ್ಯಂತ ಶಕ್ತಿ ಕೇಂದ್ರಗಳನ್ನು ಕೆಡವಿ ಹಾಕುವುದು ವಸಾಹತ್ತಿನ ಸ್ವಾತಂತ್ರ್ಯ ಪ್ರಾಪ್ತಿಯ ಒಂದು ವಿಧಾನವಾಗಿದೆ. ಆಫ್ರಿಕಾದ ಸಾಹಿತ್ಯವು ಸ್ಥಳೀಯ ಮೂಲ ಹೊಂದಿ, ತನ್ನದೇ ಆದ ಅನನ್ಯ, ವಿಶಿಷ್ಟ ದೃಷ್ಟಿಕೋನವನ್ನು ಹೊಂದಿರುವ ಕಾರಣ, ವಸಾಹತು ಪಾಶ್ಚಾತ್ಯ ಓದುಗರು ಇತರ ಸಂಸ್ಕೃತಿಗಳಿಂದ ಮೂಡಿ ಬರುವ ಪಠ್ಯಗಳಿಗೆ ಪಠ್ಯೇತರ ಸಂಶೋಧನೆಯ ರೂಪದಲ್ಲಿ ಅಲ್ಲಿನ ಮೌಖಿಕ ಸಂಪ್ರದಾಯ, ಸಂಸ್ಕಾರಗಳ, ಜನಪ್ರಿಯ ಹಾಗೂ ಇನ್ನಿತರ ಜ್ಞಾನಗಳಿಂದ ಚೈತನ್ಯ ಪಡೆಯಬೇಕಾಗುತ್ತದೆಂಬುದನ್ನು ಮನಗಾಣಬೇಕು. ವಿಮರ್ಶೆಯ ವಿಭಿನ್ನ ಗ್ರಂಥಪಾಠದ ಸನ್ನಿವೇಶಗಳಲ್ಲಿ ಉದ್ಯುಕ್ತವಾಗಬೇಕು.

ಆಫ್ರಿಕಾದ ಸಿದ್ಧಾಂತದ ಕುರಿತಾಗಿ ಎರಡು ವಿಭಿನ್ನ ಪಂಥಗಳ ನಡುವೆ ಉಗ್ರ ವಿವಾದ ನಡೆದಿದೆ. ಡೇವಿಡ್ ಡಯೊಪ್, ನಗೂಗಿ ಹಾಗೂ ಫಾನನ್ ಮತ್ತು ಚಿನ್ ವೀಜುರಂತಹ ವಿಮರ್ಶಕರು ಆಫ್ರಿಕನ್ ಸಾಹಿತ್ಯ ಹಾಗೂ ರಾಜಕೀಯ ಚರ್ಚೆಗಳ ಮಧ್ಯೆ ಸಂಬಂಧದ ಪರವಾಗಿ ವಾದಿಸಿ, ಇದು ಆಫ್ರಿಕಾಗೇ ಸೀಮಿತವಾಗಿರುವ ವಿಶೇಷ ಸನ್ನಿವೇಶ ಎನ್ನುತ್ತಾರೆ.

ಆದರೆ ಸೊಯಿಂಕಾರಂತಹ ವಿಮರ್ಶಕರು ಆಫ್ರಿಕಾದ ಸಾಂಸ್ಕೃತಿಕ ಅನುಭವದಲ್ಲಿ ಬಹುತತ್ವಗಳತ್ತ ಬೊಟ್ಟು ತೋರಿಸಿದ್ದಾರೆ. ಸೊಯಿಂಕಾ ಅವರು ಯೊರಾಬಾ ಮಿಥಕವನ್ನೂ, ಆಫ್ರಿಕನ್ ಜಗತ್ತಿನೊಂದಿಗೆ ಅದರ ಸಂಬಂಧವನ್ನೂ ಪುನರ್ ಸೃಷ್ಟಿಸಿದರೆ, ಅಚಿಬೆಯವರು ಯೊರೂಬಾ ಸಂಸ್ಕೃತಿಗೆ ಭಿನ್ನವಾಗಿರುವ ಅದಕ್ಕಿಂತಲೂ ಹೆಚ್ಚು ಪ್ರಜಾಪ್ರಭುತ್ವವಾದಿಯಾದ ಇಬೋ ಸಂತತಿಯನ್ನು ಪುನರಾವರ್ತಿಸುತ್ತಾರೆ. ಪೂರ್ವ ಆಫ್ರಿಕಾದಲ್ಲಿ ಕೀನ್ಯಾದ ಗೂಗಿ ಯವರ ಹೆಸರನ್ನು ಸೋಮಾಲಿಯಾದ ಕಾದಂಬರಿಕಾರ ನುರುದ್ದಿನ್ ಫರಾಹ ಅವರ ಹೆಸರಿನೊಂದಿಗೆ ಸೇರಿಸಲಾಗದು.

ಪೂರ್ವ ಆಫ್ರಿಕಾದ ಪದ್ಯವನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕು. ಉಗಾಂಡದ ವರಾದ ತಬನ್‌ಲೆ ಲಿಯಾಂಗ್ ಹಾಗೂ ಒಕೊಲ್ ಪಿ ಬೆಟಿಕ್ ಇವರೀರ್ವರೂ ಪೂರ್ವ ಆಫ್ರಿಕಾದ ಕಾವ್ಯ ಪ್ರಪಂಚದ ತದ್ವಿರುದ್ಧವಾದ ಎರಡು ಧ್ರುವಗಳು. ಲಿಯೊಂಗ್ ಅವರು ಇಪ್ಪತ್ತನೇ ಶತಮಾನದ ಯುರೋಪಿಯನ್ ಆಧುನಿಕ ಕವಿತೆಗಳ ವಿಧಾನಗಳನ್ನು ಶ್ರದ್ಧೆ ಯಿಂದ ಅನುಕರಿಸುವ ಯುರೋ ಆಧುನಿಕರು(ಯುರೋ ಮಾಡರ್ನಿಸ್ಟ್). ಪಿಬೆಟ್ ಕರು ಆಫ್ರಿಕಾದ ಕಾವ್ಯದಿಂದ ಮೂಲ ಸಂಪತ್ತನ್ನು ಪಡೆದು, ಮಾರ್ಪಡಿಸಲಾದ ಆಂಗ್ಲ ಭಾಷೆಯನ್ನು ಅದಕ್ಕೆ ಅಳವಡಿಸಿರುವ ಸಂಪ್ರದಾಯಶರಣರು. ಪಿಬೆಟಿಕ್‌ರು ಆಫ್ರಿಕಾದ ದೃಶ್ಯ ಶಬ್ದಗಳನ್ನೂ ಸಾಂಪ್ರದಾಯಿಕ ಕಾವ್ಯರೂಪಗಳನ್ನೂ ಗಾದೆಗಳನ್ನೂ ಉಪಯೋಗಿಸಿ ಕೊಂಡು ತಮ್ಮ ದನಿಗೆ ಅನನ್ಯ ವೈವಿಷ್ಟ್ಯತೆಯನ್ನು ತಂದುಕೊಂಡಿದ್ದಾರೆ. ಅತ್ಯಂತ ಹೆಚ್ಚಿನ ಖ್ಯಾತಿ ಪಡೆದ ಪದ್ಯಗಳಾದ 'ಲಾನಿನೋಳ ಹಾಡು' ಹಾಗೂ 'ಒಕೊಲ್ ನ ಹಾಡು' (ಸಾಂಗ್ ಆಫ್‌ಲಾವಿನೊ ಮತ್ತು ಸಾಂಗ್ ಆಫ್ ಒಕೊಲ್)ಗಳನ್ನು ಅವರದೇ ಆದ ಮಾತುಗಳಲ್ಲಿ ವರ್ಣಿಸಬೇಕೆಂದರೆ 'ಅವುಗಳನ್ನು ಹಾಡಬಹುದು, ಆಡಬಹುದು ಅಥವಾ ಬರೆಯುಬಹುದು.' 'ಲಾವಿನೋಳ ಹಾಡು' ಮತ್ತು 'ಒಕೊಲ್‌ನ ಹಾಡು'ಗಳಲ್ಲಿ ಒಕೊಲ್ ಎಂಬ ಅಕೋಲಿಯ ಮನುಷ್ಯನೇ ಕೇಂದ್ರ ಬಿಂದು. ಅಕೋಲಿಯ ಸಂಪ್ರದಾಯ ಹಾಗೂ ಜೀವನ ಶೈಲಿಗಳನ್ನು ತಿರಸ್ಕರಿಸಿ ತನ್ನದಾಗಿಸಿಕೊಂಡಿರುವ ಒಕೊಲಿಯ ಹೆಂಡತಿ ಲಾವಿನೋ ಆಫ್ರಿಕನ್ ಜೀವನ ಶೈಲಿಯು ಮೂರ್ತ ಸ್ವರೂಪ. ಕವಿ ಮತ್ತು ಅವನಿಂದ ಸೃಷ್ಟಿಯಾದ ಈ ಪಾತ್ರಗಳ ನಡುವಣ ಘರ್ಷಣೆಯಲ್ಲಿಯೇ ಈ ಪದ್ಯಗಳ ಅರ್ಥ ಮೋಹಕತೆ ಅಡಗಿದೆ. ಒಕೊಲನ ಹೆಂಡತಿ ಲಾವಿನೊಳ ಕುರಿತಾಗಿ ಹಾಗೂ ಅಕೋಲಿಯ ಸಾಂಪ್ರದಾಯಿಕ ಜೀವನದ ಸೌಂದರ್ಯ ಹಾಗೂ ಅದರ ಸಮಂಜಸತೆಯ ಕುರಿತಾಗಿ ಓದುಗರ ಮನಸ್ಸಿನಲ್ಲಿ ಸಂವೇದನೆ ಮೂಡುವಂತೆ ಕವಿ ಜಾಣ್ಮೆಯಿಂದ ಕಾರ್ಯ ನಿರ್ವಹಿಸಿದ್ದಾರೆ. ಒಕೊಲ್ ಹಾಗೂ ಆತನ ಆಡಂಬರವನ್ನು ಲಾವಿನೋ ಸದಾ ಅಪಹಾಸ್ಯ ಮಾಡುತ್ತಿರುತ್ತಾಳೆ.

ನಾಟಕೀಯ ಸ್ವಗತ ಭಾಷಣ ಹಾಗೂ ಸಾಂಪ್ರದಾಯಿಕ ಹಾಡುಗಳ ಬೆಸುಗೆಯಲ್ಲಿ ಈ ಹಾಡುಗಳ ನವೀನತೆ ಅಡಗಿದೆ. ಆರಂಭದಲ್ಲಿ ಅದರ ಪರಿಣಾಮ ಸ್ಪಷ್ಟ ಹಾಗೂ ಸರಳವೆನಿಸುತ್ತದೆ; ಎರಡೂ ಹಾಡುಗಳು ಓದುಗರ ಒಕೊಲ್ ಹಾಗೂ ಆತನ ಪಾಶ್ಚಾತ್ಯ ರೀತಿ ನೀತಿಗಳನ್ನು ಅಪಹಾಸ್ಯ ಮಾಡಿ ಅಕೋಲಿ ಗ್ರಾಮ್ಯ ಜೀವನವನ್ನು ಹೊಗಳುವಂತೆ

ಮಾಡುತ್ತವೆ. ಆದರೆ ಹೊರನೋಟಕ್ಕೆ ವ್ಯಕ್ತವಾಗುವ ಈ ಸರಳತೆ ನಮ್ಮನ್ನು ತಪ್ಪು ದಾರಿಗೆಳೆಯಬಲ್ಲದು; ಕಾರಣ ಈ ಪಾತ್ರಗಳೇ ಸ್ವತಃ ಜಟಿಲವಾದ ಪಾತ್ರಗಳು. ಈ ಪದ್ಯಗಳು ನವೀನ ಆಕಾರವನ್ನು ಹೊಂದಿದ್ದು, ಇಂಗ್ಲಿಷ್‌ನಲ್ಲಿ ಬರೆಯಲ್ಪಟ್ಟಿವೆಯಾದರೂ ಇವು ವಿನೋದದ ಮೂಲಕ ಎಳೆಯರಿಗೆ ನೀತಿ ಪಾಠ ಮಾಡುವ, ಬುಡಕಟ್ಟಿನ ಮೌಲ್ಯ ಹಾಗೂ ರೂಢಿಗಳನ್ನು ಎಳೆಯರಿಗೆ ಪರಿಚಯಿಸುವ ಗ್ರಾಮ್ಯ ಪದ್ಯಗಳ ಮತ್ತು ಜಾನಪದ ಕಥೆಗಳ ಸಾಂಪ್ರದಾಯಿಕ ಕರ್ತವ್ಯವನ್ನು ನಿರ್ವಹಿಸುತ್ತವೆ.

ಲಾವಿನೋಳ ಹಾಡಿನಲ್ಲಿ ಹೊಗಳಿಕೆಯ ಹಾಗೂ ತೆಗಳಿಕೆಯ ಹಾಡುಗಳೂ, ಜೋಗುಳವೂ, ಸಾಂಪ್ರದಾಯಿಕ ಗಾದೆಗಳೂ ಸೇರಿಕೊಂಡಿವೆ. ಹಾಡಿಗೆ ಅಂತರ್ಭಾವವನ್ನು ನೀಡುವ ಪ್ರಮುಖ ಗಾದೆ ಹೀಗಿದೆ

ಹಳೆ ಹೊಲಮನೆಯಲ್ಲಿರುವ ಕುಂಬಳಕಾಯಿಯನ್ನು
ಬೇರು ಸಮೇತ ಕೀಳಕೂಡದು

ದಕ್ಷಿಣ ಆಫ್ರಿಕಾದ ಸಾಹಿತ್ಯವು ಸಾಂಪ್ರದಾಯಿಕ ಆಫ್ರಿಕಾದ ವಾಗ್ಮೀಯತೆಯಿಂದ ಕೂಡ ಎರವಲು ಪಡೆದಿದೆ. ದಕ್ಷಿಣ ಆಫ್ರಿಕಾದಲ್ಲಿ ಮೂರು ವಿಧದ ವಾಗ್ಮೀಯತೆಗಳಿವೆ.

೧. ದೇವರನ್ನು ಆರಾಧಿಸುವ ಹಾಡುಗಳು - ಇವು ಸಂವಾದ ಗೀತ ಗುಚ್ಛಗಳು ಹಾಗೂ ಭಾವಗೀತೆಗಳ ವೈಲಕ್ಷಣ್ಯ ಹೊಂದಿವೆ. ಎದುರಾಳಿಯ ಕುರಿತಾದ ಭಯ-ಭಕ್ತಿ ತುಂಬಿದ ಬೇಟೆ ಹಾಡುಗಳು; ವಿಜಯ ಪ್ರಾಪ್ತಿಯ ಆನಂದಭರಿತ ಹಾಡುಗಳು; ಅಥವಾ ತನ್ನನ್ನು ಮೀರಿಸಿದ ಎದುರಾಳಿಯ ಕುರಿತಾದ ಮಾತ್ಸರ್ಯದ ಹಾಡುಗಳು; ಹೆಂಗಸರ ಗೃಹಕೃತ್ಯಗಳನ್ನು ಪುರುಷರ ವೀರ್ಯವತ್ತಾದ ಕಾರ್ಯಗಳನ್ನು ವರ್ಣಿಸುವ ಹಾಡುಗಳು, ಸಮರ ಗೀತೆಗಳು, ಶೃಂಗಾರ ಗೀತೆಗಳು ಮತ್ತು ಯುದ್ಧ ಹಾಗೂ ಸಾವುಗಳ ಕುರಿತಾದ ಹಾಡುಗಳು.

೨. ಮೂಲಭೂತವಾಗಿ ಸ್ತುತಿಗಳನ್ನು ಗಾದೆಗಳನ್ನೂ ಅಭಿಶಾಪ ಮತ್ತು ಒಗಟುಗಳನ್ನೊಳಗೊಂಡ ಸಾರೋಕ್ತಿಗಳು(ಅಪೋರಿಸಂ)

೩. ಬುಡಕಟ್ಟಿನ ಮೌಲ್ಯಗಳನ್ನು ಮುಂದುವರಿಸಿಕೊಂಡು ಹೋಗುವಂತೆ ಉಪದೇಶ ನೀಡುವ ಉದ್ದೇಶಭರಿತ ಕಥನಗಳು. ಮಿಥಕಗಳಲ್ಲೂ, ನೀತಿಕಥೆಗಳಲ್ಲೂ, ಜಾನಪದ ಕಥೆಗಳಲ್ಲೂ ಈ ಕಥನ ರೂಪಗಳು ಸೇರಿ ಹೋಗಿವೆ.

ವಿಮರ್ಶೆಯ ಕ್ಷೇತ್ರದಲ್ಲಿ ಚೀಕಾ ಅಂಟಾ ಡಯೋಪ್ ಅವರು ಆಫ್ರಿಕಾದ ನೈಲ್ ಪ್ರಾಂತ್ಯವನ್ನು ಸಮಗ್ರ ಆಫ್ರಿಕಾದ ವಸಾಹತುವಾದಿ ಕಥನಗಳ ಸಾಂಸ್ಕೃತಿಕ ಕೇಂದ್ರವೆಂದು ಎತ್ತಿಹಿಡಿದರು. ಆಫ್ರಿಕಾದ ನೈಲ್ ಕಣಿವೆಯ ಅಕ್ಷರಸ್ಥ ಸಂಸತಿಗಳು ಮೆಡಿಟರೆನಿಯನ್ ಸಂಸ್ಕೃತಿಗೆ ಅಕ್ಷರ ಜ್ಞಾನ ನೀಡಿದರೆಂಬುದು ಅವರ ವಾದ. ಹೀಗೆ ರಾಜಕೀಯವಾಗಿ ವಿಚ್ಛಿದ್ರಗೊಂಡ ಆಫ್ರಿಕಾದ ಸಾಂಸ್ಕೃತಿಕ ರಾಜ್ಯಗಳನ್ನು ರಾಜಕೀಯವಾಗಿ ಪ್ರೇರಿತಗೊಂಡ

ಭಾಷಾ ಸಂಬಂಧವಾದ ಕಾರ್ಯಸೂಚಿಯ ಮೂಲಕ ಸ್ವತಂತ್ರ 'ಎಲ್ಲಾ ಆಫ್ರಿಕನರು' ವಾದವನ್ನು(ಪ್ಯಾನ್ ಆಫ್ರಿಕನ್) ಪುನಃ ಸ್ಥಾಪಿಸುವ ಶತಪ್ರಯತ್ನ ನಡೆಸಿದರು.

ಆಫ್ರಿಕಾದ ಅತ್ಯಂತ ಪ್ರಭಾವಶಾಲಿ ತಾತ್ವಿಕರಾದ ಫ್ರಾನ್‌ಟ್ಜ್ ಫಾನನ್ ಹಾಗೂ ಅವರ ಕೃತಿ 'ದಿ ರಿಚೆಡ್ ಆಫ್ ದಿ ಅರ್ತ್' ಅನ್ನು ಪಾಶ್ಚಾತ್ಯ ನಾಗರಿಕತೆಯ ಅತ್ಯಂತ ಪ್ರಮುಖ ವಿಮರ್ಶೆ ಎಂದು ಸಮರ್ಥಿಸಬಹುದು. ಕರಿಯತನವನ್ನು ವಿಚಾರಣಾಧಿಕಾರಿ/ ವಿಚಾರಣೆ ಗೊಳಪಟ್ಟವನು, ಶ್ರೀಮಂತಿಕೆ/ಬಡತನ ಹಾಗೂ ಸ್ವ ಈಡೇರಿಕೆ/ ನಿರಾಕರಣೆಗಳಂತಹ ವಿರೋಧಗಳಂತಹ ವಿರೋಧಗಳ ನಿದರ್ಶನಗಳನ್ನು ಮರೆ ಮಾಚಿದ ಬಿಳಿಯ ಅನ್ವಯ ಎಂದು ಅವರು ಸಾಧಿಸಿದರು. ಭದ್ರವಾಗಿ ತಳವೂರಿರುವ ಶಕ್ತಿಗಳನ್ನು ಸಾಮಾನ್ಯ ಭಾಷೆ ಯಲ್ಲಿ ಅರ್ಥ ಮಾಡಿಕೊಂಡು ಸಾಂಸ್ಕೃಕ ಕೇಂದ್ರಗಳನ್ನು ಪುನರ್‌ಸ್ಥಾಪಿಸಿ ಮುಕ್ತಾಯ ಗೊಂಡು ಸ್ಥಾಯಿಯಾಗಿರುವ ವಸಾಹತುವಾದಿ ವ್ಯಾಖ್ಯಾನಗಳನ್ನು ನಿಶ್ಯಕ್ತಗೊಳಿಸುವ ಅಗತ್ಯಕ್ಕೆ ಅವರು ಒತ್ತು ಕೊಡುತ್ತಾರೆ.

ಕ್ರಾಂತಿಕಾರಿ, ರಾಷ್ಟ್ರೀಯತಾವಾದಿ ಸೌಂದರ್ಯೋಪಾಸನೆಯನ್ನು ದೃಢಪಡಿಸುವ ವಿರೋಧಗಳೊಂದೆಡೆ ಹಾಗೂ ಇನ್ನೊಂದೆಡೆ ಸಾಂಸ್ಕೃತಿಕ ಬಹುತತ್ವ - ಇವು ವಸಾಹತುಗಳ ಹಾಗೂ ವಸಾಹತುವಾದಿಗಳ ಐತಿಹಾಸಿಕ ವಿರೋಧಕ್ಕೆ ಪ್ರತಿಕ್ರಿಯೆಗಳಾಗಿವೆ. ಈ ಪ್ರತಿಕ್ರಿಯೆ ಗಳು ಭಾಗಶಃ ಪ್ರಧಾನ ವ್ಯಾಖ್ಯಾನದಿಂದ ನಿರ್ಧರಿತಗೊಳ್ಳುತ್ತವೆ. ವಿಮೋಚನ ಪಠ್ಯಗಳು ಭಾಗಶಃ ತಾವು ವಿಕೇಂದ್ರೀಕರಿಸಿ ಹೊಸದಾಗಿ ಸೃಷ್ಟಿಸುವ ನೂತನ ಕೇಂದ್ರಗಳ ಶಕ್ತಿಕೇಂದ್ರ ದಿಂದ ನಿರ್ಧರಿತಗೊಳ್ಳುತ್ತವೆ. ತನ್ನ ಇತಿಹಾಸದ ಸ್ತಂಭದಿಂದ ರಕ್ಷಿಸಲ್ಪಟ್ಟ ಭಾಷೆಯ ಈ ಪರಿಸ್ಥಿತಿ ಎಲ್ಲಾ ಸಾಹಿತ್ಯಗಳಲ್ಲೂ ಕಂಡುಬರುತ್ತದೆ.

ಒಟ್ಟಾರೆ ಹೇಳಬೇಕೆಂದರೆ, ವಸಾಹತು ಪಾಶ್ಚಾತ್ಯ ವ್ಯಾಖ್ಯಾನಗಳನ್ನು ಹಿಂದಿನ ವಸಾಹತು ವಾದಿ ಸಂಸತಿಗಳಿಗೆ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಇತಿಹಾಸಗಳ ಪುನರ್ ನಿರ್ಣಯಗಳನ್ನು ಪ್ರಕಟಿಸುವ, ತಾವು ಹುಟ್ಟಿ ಬಂದ ಭಾಷೆಗಳನ್ನು ಪುನಾರಚಿಸುವ ಅರ್ಥ ವಿವರಣೆ ನೀಡುವ ವ್ಯಾಖ್ಯಾನಗಳೆಂದು ಕರೆಯಬಹುದು.

**ಪರಾಮರ್ಶನ ಗ್ರಂಥಗಳು**

೧. ಆಲಿವರ್ ಆರ್ ಮತ್ತು ಅಟೆಮೋರ್ ಎ., ೧೯೬೭. **ಆಫ್ರಿಕಾ ಸಿನ್ಸ್**, ಆಕ್ಸ್‌ಫರ್ಡ್: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.

೨. ವಿಲ್ಸನ್ ಮೊನಿಕಾ ಮತ್ತು ಲಿಯೋನಾಡ್‌ನ ಥೋಮ್ಸನ್(ಸಂ), ೧೯೭೧. **ಆಕ್ಸ್‌ಫರ್ಡ್ ಹಿಸ್ಟರಿ ಆಫ್ ಸೌತ್ ಆಫ್ರಿಕಾ**, ಸಂ.೨, ಲಂಡನ್: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.

೩. ಅಬ್ರಹಾಂ ಡಬ್ಲ್ಯು.ಇ., ೧೯೬೨. **ದಿ ಮೈಂಡ್ ಆಫ್ ಆಫ್ರಿಕಾ.**

೫

# ಆಫ್ರಿಕಕ್ಕಾಗಿ ಕಿತ್ತಾಟ

ಕೆ. ಮೋಹನ್‌ಕೃಷ್ಣ ರೈ

ಆಫ್ರಿಕಾದ ವಿಭಜನೆಗಾಗಿ ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ಯುರೋಪಿನ ರಾಷ್ಟ್ರಗಳ ನಡುವೆ ನಡೆದ ಕಿತ್ತಾಟ ಯುರೋಪಿನ ಸಾಮ್ರಾಜ್ಯಶಾಹಿ ಮಹತ್ವಾಕಾಂಕ್ಷೆಗೆ ಉತ್ತಮ ಉದಾಹರಣೆಯಾಗಿದೆ. ಬಂಡವಾಳ ಶೇಖರಣೆಯಷ್ಟೇ ಮೂಲ ಉದ್ದೇಶವಾಗಿರುವ ಬಂಡವಾಳಶಾಹಿ ವ್ಯವಸ್ಥೆ ಎಂದಿಗೂ ಸ್ತಬ್ಧ ವ್ಯವಸ್ಥೆಯಾಗಿರುವುದಿಲ್ಲ. ಅದು ಸದಾ ಬದಲಾಗುತ್ತಲೇ ಇರುತ್ತದೆ. ಉತ್ಪಾದನೆ ಮತ್ತು ವಿತರಣೆಗಳ ಕುರಿತ ಹಳೆ ವಿಧಾನಗಳನ್ನು ಬದಿಗೊತ್ತುತ್ತಾ, ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳುತ್ತಾ, ತನ್ನ ಗಡಿಯನ್ನು ಸದಾ ವಿಸ್ತರಿಸಿಕೊಳ್ಳುತ್ತಾ ಸಾಗುತ್ತದೆ. ದುರ್ಬಲ ಸಮುದಾಯಗಳನ್ನು ತನ್ನ ಉದ್ದೇಶಗಳಿಗೆ ಅನುಗುಣವಾಗಿ ದುಡಿಸಿಕೊಳ್ಳುತ್ತದೆ. ವ್ಯಾಪಾರ ಮತ್ತು ರಾಜ್ಯವಿಸ್ತಾರದ ಧೋರಣೆಯ ಉದ್ದೇಶದ ಈಡೇರಿಕೆಗಾಗಿ ಅವಿರತ ಸಂಶೋಧನೆ ಹಾಗೂ ವಿಸ್ತರಣೆಗಳಲ್ಲಿ ಈ ವ್ಯವಸ್ಥೆ ಮುಳುಗಿರುತ್ತದೆ. ಆಫ್ರಿಕಾದ ಇತಿಹಾಸವನ್ನು ಅವಲೋಕಿಸುವಾಗ ಈ ಅಂಶ ಸತ್ಯವೆನಿಸುತ್ತದೆ. ಆಫ್ರಿಕಾದ ವಿಭಜನೆ ಯುರೋಪಿನ ರಾಷ್ಟ್ರಗಳ ಆಕ್ರಮಣಕಾರಿ ಸ್ವಭಾವದ ಪೂರ್ಣ ಪರಿಚಯವನ್ನು ಮಾಡಿಸುತ್ತದೆ. ಆಫ್ರಿಕಾದ ಇತಿಹಾಸ ಕುರಿತು ಯುರೋಪಿನ ಅನೇಕ ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ಇತಿಹಾಸಕಾರರು ಆಫ್ರಿಕಾದ ಇತಿಹಾಸವನ್ನು ಪುನರ್‌ರಚಿಸುವ ಮತ್ತು ಪುನರ್ವಿಮರ್ಶಿಸುವ ಕಾರ್ಯದಲ್ಲಿ ತೊಡಗಿ ದ್ದುಂಟು. ಆದರೂ ಹೆಚ್ಚಿನ ಅಧ್ಯಯನಗಳು ಯುರೋಪ್ ಕೇಂದ್ರಿತ ಅಧ್ಯಯನವಾಗಿದ್ದು ವಾಸ್ತವಾಂಶಗಳು ಗೌಣವೆನಿಸುವಷ್ಟು ಮಟ್ಟಿಗೆ ಪ್ರಭಾವಿಯಾಗಿವೆ.

ಯುರೋಪಿಯನ್ನರ ಪ್ರಕಾರ ಆಫ್ರಿಕಾ ಬದಲಾವಣೆ ಹೊಂದದ ನಾಗರಿಕವಲ್ಲದ ರಾಷ್ಟ್ರ. ಅಲ್ಲಿನ ಇತಿಹಾಸವೆಂದರೆ ಯೂರೋಪಿನ ಇತಿಹಾಸ. ಏಕೆಂದರೆ ಯೂರೋಪಿನ ಇತಿಹಾಸ ಕಾರರ ಪ್ರಕಾರ ಆಫ್ರಿಕಾದ ಕತ್ತಲೆಯನ್ನು ಹೋಗಲಾಡಿಸಿದವರು ಯುರೋಪಿಯನ್ನರು. ಆಫ್ರಿಕಾದ ಮಧ್ಯಭಾಗದ ರಾಷ್ಟ್ರಗಳಿಗಂತೂ ಇತಿಹಾಸವೇ ಇಲ್ಲ ಮತ್ತು ಅಲ್ಲಿನ ನೀಗ್ರೋ ಜನಾಂಗ ಸ್ಥಿರ ಸರಕಾರವನ್ನು ಕಂಡವರೇ ಇಲ್ಲ. ವರ್ಷದಿಂದ ವರ್ಷಕ್ಕೆ, ತಲೆಮಾರಿನಿಂದ

ತಲೆಮಾರಿಗೆ, ಶತಮಾನದಿಂದ ಶತಮಾನಕ್ಕೆ ಆಫ್ರಿಕಾದ ಬುಡಕಟ್ಟು ಜನರು ಅನಾಗರಿಕರಾಗಿಯೇ ಉಳಿದರೆನ್ನುವ ವ್ಯಾಖ್ಯಾನಗಳನ್ನು ನಾವು ಯುರೋಪಿನ ವಿದ್ವಾಂಸರ ಬರಹಗಳಲ್ಲಿ ಕಾಣುತ್ತೇವೆ. ಆದರೆ ನಾವಿಲ್ಲಿ ಆಫ್ರಿಕಾದ ಶ್ರೀಮಂತ ಇತಿಹಾಸವನ್ನು ತಪ್ಪಾಗಿ ಅರ್ಥೈಸಿಕೊಳ್ಳಬೇಕಾಗುತ್ತದೆ. ಬಂಡವಾಳಶಾಹಿ ರಾಷ್ಟ್ರಗಳು ವಸಾಹತುಗಳ ಇತಿಹಾಸವನ್ನು ತಮ್ಮ ಆಸಕ್ತಿಗಳಿಗನುಗುಣವಾಗಿ ನಿರ್ಮಿಸುತ್ತವೆ. ಇತ್ತೀಚಿನ ಸಂಶೋಧನೆಯ ಪ್ರಕಾರ ಪ್ರಪಂಚದ ಇತರ ಎಲ್ಲಾ ಖಂಡಗಳಿಗಿಂತಲೂ ದೀರ್ಘವಾದ ಮಾನವ ಇತಿಹಾಸವಿರುವುದು ಆಫ್ರಿಕಾದಲ್ಲಿ ಎನ್ನುವ ಅಂಶ ತಿಳಿದುಬಂದಿದೆ. ಏಷ್ಯವನ್ನು 'ನಾಗರಿಕತೆಯ ತೊಟ್ಟಿಲು' ಎಂಬುದಾಗಿ ಕರೆದರೆ ಆಫ್ರಿಕಾ ಮಾನವನ ಜನ್ಮಸ್ಥಳವೇ ಆಗಿದೆ. ಆಫ್ರಿಕಾದ ವಿಭಜನೆ ಅಥವಾ ಆಫ್ರಿಕಾವನ್ನು ತಮ್ಮಲ್ಲೇ ಹಂಚಿಕೊಳ್ಳುವುದಕ್ಕಾಗಿ ಯುರೋಪಿನ ರಾಷ್ಟ್ರಗಳ ನಡುವೆ ನಡೆದ ಕಿತ್ತಾಟ ಇತಿಹಾಸಕಾರರಿಗಂತೂ ಹೊಸ ಅನುಭವಗಳನ್ನು ನೀಡಿದೆ. ಇದು ಒಮ್ಮಿಂದೊಮ್ಮೆಗೆ ನಡೆದ ಘಟನೆಯಾಗಿರದೆ ದೀರ್ಘ ಪ್ರಕ್ರಿಯೆಯಾಗಿದೆ. ಆಫ್ರಿಕಾಕ್ಕೆ ಪ್ರವೇಶಿಸುವ ಮೊದಲು ಯುರೋಪಿನ ರಾಷ್ಟ್ರಗಳಿಗೆ ನಿರ್ದಿಷ್ಟ ಪ್ರದೇಶದ ಪರಿಚಯವಾಗಲಿ ಅಥವಾ ಇಂತದ್ದೇ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂಬ ಖಚಿತತೆಯಾಗಲಿ ಇರಲಿಲ್ಲ. ಆದರೂ ಯುರೋಪಿನ ರಾಜಕೀಯ ಮತ್ತು ಆರ್ಥಿಕ ಅಂಶಗಳು ಇಲ್ಲಿ ಪ್ರಮುಖ ಪಾತ್ರ ವಹಿಸಿದವು.

ಹೊಸ ಯಂತ್ರಗಳ ಆವಿಷ್ಕಾರದಿಂದಾಗಿ ಯುರೋಪಿನ ಒಟ್ಟು ಪರಿಸ್ಥಿತಿಯಲ್ಲಿ ಕ್ರಾಂತಿಕಾರಿ ಬದಲಾವಣೆಗಳು ಉಂಟಾದವು. ಹತ್ತೊಂಬತ್ತನೇ ಶತಮಾನದ ಪ್ರಮುಖ ಲಕ್ಷಣಗಳಲ್ಲಿ ಪ್ರಪಂಚವನ್ನು ಯುರೋಪೀಕರಣಗೊಳಿಸುವುದೂ ಒಂದು. ಸುಮಾರು ಹದಿನೈದನೇ ಶತಮಾನದಿಂದಲೇ ಈ ಪ್ರಕ್ರಿಯೆ ಪ್ರಾರಂಭಗೊಂಡರೂ ಕೈಗಾರಿಕಾ ಕ್ರಾಂತಿಯ ನಂತರ ಅದೊಂದು ಸಿದ್ಧಾಂತವಾಗಿ ರೂಪುಗೊಂಡಿತು. ವಸಾಹತುಶಾಹಿ ಧೋರಣೆ ಪ್ರಮುಖವಾಗಿ ಆಫ್ರಿಕಾ ಮತ್ತು ಏಷ್ಯಾದ ರಾಷ್ಟ್ರಗಳನ್ನು ನೇರವಾಗಿ ಯುರೋಪ್ ಕೇಂದ್ರಿತ ವ್ಯವಸ್ಥೆಯ ಹತೋಟಿಗೆ ತಂದಿತು. ಬ್ರಿಟಿಷ್, ಫ್ರೆಂಚ್, ಪೋರ್ಚುಗೀಸ್, ಸ್ಪೈನ್ ಹಾಗೂ ಡಚ್ಚರು ಈ ಬೆಳವಣಿಗೆಯ ಪ್ರಮುಖ ಸೂತ್ರಧಾರಿಗಳು. ನೆಪೋಲಿಯನ್ ಬೊನಾಪಾರ್ಟಿಯ ಅವನತಿಯಿಂದ ಪ್ರಥಮ ಜಾಗತಿಕ ಯುದ್ಧದವರೆಗಿನ ಅವಧಿಯಲ್ಲಿ, ಯುರೋಪಿಯನ್ನರು ಹೆಚ್ಚು ಸಂಖ್ಯೆಯಲ್ಲಿ ಸಮುದ್ರದಾಚೆಯ ಪ್ರದೇಶಗಳಿಗೆ ವಲಸೆ ಹೋಗಿ ತಮ್ಮ ಪ್ರಭುತ್ವವನ್ನು ಸ್ಥಾಪಿಸುವ ಕಾರ್ಯದಲ್ಲಿ ತೊಡಗಿದರು. ಇಲ್ಲಿ ವಸಾಹತುಶಾಹಿಯ ಉಗಮಕ್ಕೆ ಅನೇಕ ಕಾರಣಗಳನ್ನು ಗುರುತಿಸಬಹುದು. ಲೆನಿನ್ ಅವರ ಪ್ರಕಾರ ಆರ್ಥಿಕ ಅಂಶಗಳೇ ವಸಾಹತುಶಾಹಿಯ ಉಗಮಕ್ಕೆ ಪ್ರಮುಖ ಕಾರಣ. ಆದರೆ ಎಲ್ಲಾ ಸಂದರ್ಭದಲ್ಲಿಯೂ ಇದು ಸರಿಯೆನಿಸುವುದಿಲ್ಲ. ಏಕೆಂದರೆ ಫ್ರಾನ್ಸ್‌ನ ಉದ್ದೇಶ ಹೊರನಾಡಿನಿಂದ ಸಂಪನ್ಮೂಲಗಳನ್ನು ತರುವುದೇ ಆಗಿರಲಿಲ್ಲ. ಇಲ್ಲಿ ದೇಶದ ಘನತೆ ಮತ್ತು ರಾಜಕೀಯ ಪ್ರತಿಷ್ಠೆಯೂ ಬಹುಮುಖ್ಯವಾದ ಸಂಗತಿಯಾಗಿದೆ. ಆಫ್ರಿಕಾ ಖಂಡದಲ್ಲಿ

ವಸಾಹತುಶಾಹಿ ಧೋರಣೆ ಅನುಷ್ಠಾನಗೊಳ್ಳುವಲ್ಲಿ ಯುರೋಪಿನ ಭೂಶೋಧಕರ ಪಾತ್ರವೂ ಹಿರಿದಾದದ್ದು.

**ಹೊಸ ಅನ್ವೇಷಣೆಗಳು**

ಹತ್ತೊಂಬತ್ತನೆಯ ಶತಮಾನವನ್ನು ಅನ್ವೇಷಣೆಯ ಯುಗವೆಂದೂ ಕರೆಯಲಾಗಿದೆ. ಆರಂಭದ ಅವಧಿಯಲ್ಲಿ ಆಫ್ರಿಕಾದ ಕರಾವಳಿ ಪ್ರದೇಶದ ಪರಿಚಯ ಮಾತ್ರವಿಲ್ಲ ಯೂರೋಪಿಯನ್ನರಿಗೆ ಅನ್ವೇಷಣೆಯಿಂದಾಗಿ ಒಳಭಾಗಕ್ಕೂ ಪ್ರವೇಶ ಪಡೆಯಲು ಸಾಧ್ಯವಾಯಿತು. ಅಮೆರಿಕ, ಆಸ್ಟ್ರೇಲಿಯಾ ಹಾಗೂ ಏಷ್ಯಾದ ಹಲವಾರು ಪ್ರದೇಶಗಳನ್ನು ಅದೇ ಹೊತ್ತಿಗೆ ಕಂಡುಹಿಡಿಯಲಾಯಿತು. ಆಫ್ರಿಕಾದ ಪ್ರಸಿದ್ಧ ನೈಲ್ ನದಿಯ ಕುರಿತು ಇಂಗ್ಲೆಂಡಿನ ಅನ್ವೇಷಕ ಸ್ಪೀಕೇ ಎನ್ನುವಾತ ೧೮೫೮ರಲ್ಲಿ ಹೊಸ ಮಾಹಿತಿಗಳನ್ನು ನೀಡಿದ. ನೈಲ್ ಪರಿಸರದಲ್ಲಿ ಒಂದು ಸರೋವರವನ್ನು ಪತ್ತೆ ಮಾಡಿ ಅದಕ್ಕೆ ವಿಕ್ಟೋರಿಯಾ ನ್ಯಾಸಾ ಎಂದು ಹೆಸರಿಸಿದ. ಆರು ವರ್ಷಗಳ ತರುವಾಯ ಸರ್ ಸ್ಯಾಮ್‌ವೆಲ್ ಬೇಕರ್ ಎಂಬಾತ ಮತ್ತೊಂದು ಸರೋವರವನ್ನು ಕಂಡುಹಿಡಿದು ಅದಕ್ಕೆ ಆಲ್ಬರ್ಟ್ ನ್ಯಾಸಾ ಎಂದು ಹೆಸರಿಟ್ಟ. ಆಫ್ರಿಕಾದ ವಿವಿಧ ಭೂಪ್ರದೇಶಗಳನ್ನು ಕಂಡುಹಿಡಿದವರಲ್ಲಿ ಇಬ್ಬರು ಪ್ರಮುಖರು. ಅವರೆಂದರೆ ಹೆನ್ರೀ ಹೆಚ್.ಸ್ಟೇನ್ ಲೀ ಮತ್ತು ಡೇವಿಡ್ ಲಿವಿಂಗ್ ಸ್ಟೋನ್ ೧೮೪೦ರಲ್ಲಿ ಆಫ್ರಿಕಾದ ಅನ್ವೇಷಣೆಯಲ್ಲಿ ತೊಡಗಿದರು. ೧೮೭೩ರವರೆಗೆ ಅಂದರೆ ಅವರ ಸಾವಿನವರೆಗೂ ಆಫ್ರಿಕಾದ ವಿವಿಧ ಭಾಗಗಳಲ್ಲಿ ಸಂಚರಿಸಿ ಹೊರಪ್ರಪಂಚಕ್ಕೆ ಅನೇಕ ಕುತೂಹಲಕಾರಿ ಅಂಶಗಳನ್ನು ಹೊರಗೆಡವಿದರು. ಆಫ್ರಿಕಾದ ಮಧ್ಯಭಾಗವನ್ನು ಅಂದರೆ ಕಾಂಗೋ ಪ್ರದೇಶವನ್ನು ಪ್ರವೇಶಿಸಿ ಜಾಂಬೆಸೀ ನದಿಯ ಕುರಿತು ಶೋಧ ಪ್ರಾರಂಭಿಸಿದರು. ಟಾಂಗಾನ್ಯಿಕಾ ಮತ್ತು ನ್ಯಾಸಾ ಸರೋವರಗಳನ್ನೂ ಕಂಡುಹಿಡಿದರು. ಸಮುದ್ರದಿಂದ ಸಮುದ್ರಕ್ಕೆ ಆಫ್ರಿಕಾವನ್ನು ದಾಟಿ ಪ್ರಪಂಚಕ್ಕೆ ಆಫ್ರಿಕಾದ ಶ್ರೀಮಂತ ಭೂಪ್ರದೇಶಗಳ ಕುರಿತು ಮಾಹಿತಿಗಳನ್ನು ಒದಗಿಸಿದರು. ಆದರೆ ಲಿವಿಂಗ್ ಸ್ಟೋನ್ ಅವರ ಸುಳಿವೇ ಸಿಕ್ಕದ ಕಾರಣ ಹೆನ್ರೀ ಸ್ಟೇನ್ ಲೀ ಅವರನ್ನು ಆಫ್ರಿಕಾಕ್ಕೆ ಕಳುಹಿಸಲಾಯಿತು. ೧೮೭೨ರಲ್ಲಿ ಸ್ಟೇನ್ ಲೀಯು ಲಿವಿಂಗ್ ಸ್ಟೋನ್ ಅವರನ್ನು ಭೇಟಿಯಾದ.

ಸ್ಟೇನ್ ಲೀ ಮತ್ತು ಲಿವಿಂಗ್ ಸ್ಟೋನ್‌ರವರ ಅನ್ವೇಷಣೆಯ ಉದ್ದೇಶಗಳು ಬೇರೆ ಬೇರೆಯದಾಗಿತ್ತು. ಲಿವಿಂಗ್ ಸ್ಟೋನ್ ಕುತೂಹಲದಿಂದ ಆಫ್ರಿಕಾದ ವಿವಿಧ ಭಾಗಗಳಿಗೆ ಸಂಚರಿಸಿದರೆ, ಸ್ಟೇನ್ಲೀ ರಾಜಕೀಯ ಹಾಗೂ ಆರ್ಥಿಕ ಉದ್ದೇಶಗಳಿಗಾಗಿ ಸೂಕ್ತ ಪ್ರದೇಶಗಳ ಹುಡುಕಾಟವನ್ನು ಆರಂಭಿಸಿದ. ಆಫ್ರಿಕಾದಲ್ಲಿ ತಾನು ಕಂಡುಹಿಡಿದ ಹೊಸ ಪ್ರದೇಶಗಳ ಮಾಹಿತಿಯನ್ನು ಬೆಲ್ಜಿಯಂನ ಅರಸ ಎರಡನೆಯ ಲಿಯೋಪೋಲ್ಡ್‌ಗೆ ಕಳುಹಿಸುತ್ತಿದ್ದ. ಮಧ್ಯ ಆಫ್ರಿಕಾವನ್ನು ಬೆಲ್ಜಿಯಂನ ಅಧೀನಕ್ಕೆ ತರುವ ನಿರ್ಧಾರವನ್ನು ಲಿಯೋಪೋಲ್ಡ್ ಹೊಂದಿದ್ದ. ಸ್ಟೇನ್ಲಿಯ ಮಹತ್ವದ ಸಾಧನೆಯೆಂದರೆ ಕಾಂಗೋ ನದಿಯ ಕುರಿತಾಗಿ ಮಾಡಿದ ಅನ್ವೇಷಣೆ ಹಾಗೂ ಅದರ ಉಪಯುಕ್ತತೆಯ ಬಗ್ಗೆ ಕೊಟ್ಟಿರುವ ಮಾಹಿತಿ. ಆಫ್ರಿಕಾದ

ಅನ್ವೇಷಣೆಯ ಸಂದರ್ಭದಲ್ಲಿ ಮುಖ್ಯವಾಗಿ ನಾಲ್ಕು ನದಿಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿತ್ತು. ಅವುಗಳೆಂದರೆ ನೈಗರ್, ಜಾಂಬೆಸ್ಸೀ, ನೈಲ್ ಮತ್ತು ಕೀಂಗೋ. ನೈಗರ್ ನದಿಯ ಕುರಿತು ಮುನ್ ಗೋ ಪಾರ್ಕ್, ಹ್ಯೂಗ್ ಕ್ಲಾಪ್ಪರ್ ಟನ್, ಲಾಂಡರ್ ಸಹೋದರರು, ವಿಲ್ಯಮ್ ಬೈಕೀ, ರೇನೀ ಕೈಲೀ, ಫ್ರೆಂಚ್ ಮತ್ತು ಜರ್ಮನ್ ಅನ್ವೇಷಕರು ಶೋಧನೆ ನಡೆಸಿದರು. ಡೇವಿಡ್ ಲಿವಿಂಗ್ ಸ್ಟೋನ್ ಜಾಂಬೆಸ್ಸೀ ನದಿಯನ್ನು ಕಂಡುಹಿಡಿದರು. ರಿಚರ್ಡ್ ಬರ್ಟನ್, ಜೋನ್ ಹ್ಯಾನಿಂಗ್ ಸ್ಪೀಕೇ ಮತ್ತು ಸ್ಯಾಮ್ ವೆಲ್ ಬೇಕರ್ ನೈಲ್ ನದಿಯನ್ನು ಕಂಡುಹಿಡಿದರೆ, ಸ್ಟೇನ್ಲೀ ಕಾಂಗೋ ನದಿಯನ್ನು ಪತ್ತೆ ಮಾಡಿದ. ಇದೇ ರೀತಿ ಜರ್ಮನಿಯ ಗೆರ್ ಹಾರ್ಡ್ ರೋಲ್ಫ್, ಕಾರ್ಲ್‌ಪೀಟರ್, ಪೋರ್ಚುಗೀಸರ ಸೆರ್ಪಾ ಪಿಂಟೋ, ಫ್ರಾನ್ಸ್ ದೇಶದ ಡಿ ಬ್ರಾಸ್ಸಾ ಮುಂತಾದವರು ಮಧ್ಯ ಆಫ್ರಿಕಾದ ಕುರಿತು ಯೂರೋಪಿನಾದ್ಯಂತ ಹೆಚ್ಚಿನ ಆಸಕ್ತಿ ಮತ್ತು ಕುತೂಹಲವನ್ನು ಮೂಡಿಸಿದ್ದು ಸ್ಟೇನ್ಲೀಯವರು ಕೃತಿಗಳು. ಅವುಗಳೆಂದರೆ ಹೌ ಐ ಫೌಂಡ್ ಲಿವಿಂಗ್ ಸ್ಟೋನ್ ತ್ರೂ ದ ಡಾರ್ಕ್ ಕಾಂಟಿನೆಂಟ್ ಮತ್ತು ಇನ್ ಡಾರ್ಕೆಸ್ಟ್ ಆಫ್ರಿಕಾ. ಈ ಎಲ್ಲಾ ಅನ್ವೇಷಕರು ತಮ್ಮ ಭಾಷಣಗಳಲ್ಲಿ, ಲೇಖನಗಳಲ್ಲಿ ಮತ್ತು ಗ್ರಂಥಗಳಲ್ಲಿ ತಾವು ಕಂಡುಕೊಂಡ ಹೊಸ ವಿಷಯಗಳ ಕುರಿತು ಪ್ರಚಾರ ಮಾಡಿದ್ದರಿಂದಾಗಿ ಯುರೋಪಿನಾದ್ಯಂತ ಆಫ್ರಿಕಾ ಒಂದು ಅಧ್ಯಯನದ ವಸ್ತುವಾಯಿತು.

### ಸುಯೇಜ್ ಕಾಲುವೆಯ ನಿರ್ಮಾಣ

ಆಫ್ರಿಕಕ್ಕಾಗಿ ಯುರೋಪಿನ ರಾಷ್ಟ್ರಗಳ ನಡುವೆ ನಡೆದ ಕಿತ್ತಾಟದ ಬಗ್ಗೆ ಚರ್ಚಿಸುವಾಗ ಈಜಿಪ್ಟ್ ಬಹುಮುಖ್ಯವಾದ ಅಧ್ಯಾಯವಾಗುತ್ತದೆ. ಈಜಿಪ್ಟ್‌ನ ಇತಿಹಾಸದ ಕುರಿತು ಚರ್ಚಿಸುವಾಗ ಅದು ಆಫ್ರಿಕಾಕ್ಕೆ ಸಂಬಂಧಪಟ್ಟಿಲ್ಲವೇನೋ ಎಂಬ ರೀತಿಯಲ್ಲಿ ಕೆಲ ಇತಿಹಾಸಕಾರರು ವ್ಯಾಖ್ಯಾನಿಸುತ್ತಾರೆ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಈಜಿಪ್ಟ್ ಹಿಂದಿನಿಂದಲೂ ಮೆಡಿಟರೇನಿಯನ್ ಮತ್ತು ಏಷ್ಯಾದೊಡನೆ ಹೆಚ್ಚಿನ ಸಂಪರ್ಕವನ್ನು ಇಟ್ಟುಕೊಂಡಿದೆ. ಆದರೆ ಇದೇ ರೀತಿ ದಕ್ಷಿಣದ ನೀಗ್ರೋ ಜನಾಂಗದೊಡನೆಯೂ ಸಂಪರ್ಕವನ್ನು ಇಟ್ಟುಕೊಂಡಿದೆ. ಈಜಿಪ್ಟ್‌ಗೆ ಯುರೋಪಿನ ರಾಷ್ಟ್ರಗಳು ಆಗಮಿಸುವ ಮೊದಲೇ ಅಂದರೆ ಕ್ರಿ.ಶ.೧೫೧೭ರಲ್ಲಿಯೇ ಅಟ್ಟೋಮಾನ್ ಟರ್ಕರು ಈಜಿಪ್ಟನ್ನು ವಶಪಡಿಸಿಕೊಂಡಿದ್ದರು. ಹತ್ತೊಂಬತ್ತನೇ ಶತಮಾನದಲ್ಲಿ ಈಜಿಪ್ಟ್‌ನಲ್ಲಿ ಪ್ರಾರಂಭಗೊಂಡ ರಾಷ್ಟ್ರೀಯ ಚಳುವಳಿಯು ಯುರೋಪಿನ ರಾಷ್ಟ್ರಗಳನ್ನು ವಿರೋಧಿಸುವುದಕ್ಕಿಂತ ಮುಂಚಿತವಾಗಿ ಟರ್ಕಿಯನ್ನು ವಿರೋಧಿಸಿತ್ತು ಎನ್ನುವ ಅಂಶವನ್ನು ನಾವು ಗಮನಿಸ ಬೇಕಾಗುತ್ತದೆ. ಯುರೋಪಿಯನ್ ರಾಷ್ಟ್ರಗಳ ಗಮನ ಈಜಿಪ್ಟ್‌ನತ್ತ ಸೆಳೆಯಲು ಪ್ರಮುಖ ಕಾರಣ ನೆಪೋಲಿಯನ್ ಬೊನಾಪಾರ್ಟೆಯ ೧೭೯೮-೯೯ರ ಈಜಿಪ್ಟ್‌ನ ದಂಡಯಾತ್ರೆ. ಈ ದಂಡ ಯಾತ್ರೆಯ ಉದ್ದೇಶ ಹಲವಾರಿದ್ದರೂ ಬ್ರಿಟಿಷರನ್ನು ಸದೆಬಡಿಯುವುದೇ ಪ್ರಮುಖವಾಗಿತ್ತು. ಈಜಿಪ್ಟ್‌ನಲ್ಲಿ ನಡೆದ ಯುದ್ಧದ ದೃಷ್ಟಿಯಿಂದ ವಿಶ್ಲೇಷಿಸಿದರೆ ಇದೊಂದು ದೊಡ್ಡ ದುರಂತ.

ಆದರೂ ಇದರ ಪರಿಣಾಮ ಮಹತ್ವದ ಬೆಳವಣಿಗೆಗೆ ಕಾರಣವಾಯಿತು. ಈಜಿಪ್ಟ್‌ನ ಅಧಿಕಾರವನ್ನು ವಹಿಸಿಕೊಂಡ ಅಲ್ಬೇನಿಯಾದ ಮೆಹೆಮತ್ ಆಲಿಯು ನೆಪೋಲಿಯನ್ ಬೊನಾಪಾರ್ಟೆಯ ಸುಧಾರಣೆಗಳನ್ನೇ ಜಾರಿಗೆ ತರಲು ನಿರ್ಧರಿಸಿದ. ಇದೇ ಹೊತ್ತಿಗೆ ಸೂಡಾನ್ ಮತ್ತು ಸಿರಿಯಾವನ್ನು ಈಜಿಪ್ಟ್‌ಗೆ ಸೇರಿಸಿಕೊಳ್ಳಲಾಯಿತು. ಈಜಿಪ್ಟ್‌ನ್ನು ಆಧುನೀಕರಿಸುವ ಯೋಜನೆಯನ್ನು ಕೈಗೊಂಡು ಅದರ ಈಡೇರಿಕೆಗೆ ಫ್ರೆಂಚ್ ಅನುಭವಿಗಳನ್ನು ನೇಮಿಸಿಕೊಂಡ. ಈಜಿಪ್ಟ್ ಫ್ರಾನ್ಸ್ ನೊಡನೆ ಉತ್ತಮ ಸಂಬಂಧವನ್ನು ಹೊಂದಿರುವುದರಿಂದಾಗಿ ಬ್ರಿಟನ್ ಈಜಿಪ್ಟ್‌ನ ವಿರುದ್ಧ ಪಿತೂರಿ ನಡೆಸಲು ಪ್ರಾರಂಭಿಸಿತು. ಇದೇ ಉದ್ದೇಶದಿಂದ ಬ್ರಿಟನ್ನಿನ ವಿದೇಶಾಂಗ ಕಾರ್ಯದರ್ಶಿ ಪಾಮರ್ ಸ್ಟನ್ ೧೮೪೦ರಲ್ಲಿ ರಷ್ಯಾ, ಪ್ರಷ್ಯಾ ಮತ್ತು ಆಸ್ಟ್ರಿಯಾದೊಡನೆ ಮೈತ್ರಿ ಸಂಪಾದಿಸಿಕೊಂಡು ಮೆಹೆಮತ್ ಆಲಿಯ ಅಧಿಕಾರವನ್ನು ಕುಂಠಿತಗೊಳಿಸಲು ಮತ್ತು ಟರ್ಕಿಯ ಅರಸರಿಗೆ ಸಹಾಯ ಮಾಡಲು ನಿರ್ಧರಿಸಿದ. ಈ ಅವಧಿಯಲ್ಲಿ ಕ್ರಿಮಿಯಾ ಯುದ್ಧವೂ ನಡೆಯುತ್ತಿತ್ತು. ೧೮೫೪ರಲ್ಲಿ ಅಬ್ಬಾಸ್ ಅಧಿಕಾರಕ್ಕೆ ಬಂದಾಗ ಹೆಚ್ಚು ಚರ್ಚೆಗೆ ಈಡಾದ ಅಂಶವೆಂದರೆ ಸುಯೇಜ್ ಕಾಲುವೆಯ ನಿರ್ಮಾಣದ ಕುರಿತು ಉದ್ಭವಿಸಿದ ಸಮಸ್ಯೆ.

ಸುಯೇಜ್ ಕಾಲುವೆಯ ನಿರ್ಮಾಣ ಬ್ರಿಟನ್ ಮತ್ತು ಫ್ರಾನ್ಸ್‌ಗೆ ಪ್ರತಿಷ್ಠೆಯ ಪ್ರಶ್ನೆಯಾಗಿದ್ದು, ಎರಡೂ ರಾಷ್ಟ್ರಗಳು ನೇರವಾಗಿ ಭಾಗವಹಿಸಿದವು. ಈಜಿಪ್ಟ್‌ನಲ್ಲಿ ಏಕಸಾಮ್ಯವನ್ನು ಸ್ಥಾಪಿಸುವುದೇ ಎರಡೂ ರಾಷ್ಟ್ರಗಳ ಉದ್ದೇಶವಾಗಿತ್ತು. ಸುಯೇಜ್ ಕಾಲುವೆಗೆ ಇಂಗ್ಲೆಂಡ್ ಪ್ರಾಮುಖ್ಯತೆಯನ್ನು ಕೊಡಲು ಅನೇಕ ಕಾರಣಗಳಿದ್ದವು. ಈ ಕಾಲುವೆಯ ಮೂಲಕ ಬ್ರಿಟನ್ನಿನ ಸುಮಾರು ಶೇಕಡಾ ಎಂಬತ್ತೆರಡರಷ್ಟು ವ್ಯಾಪಾರ ಹಾದುಹೋಗುತ್ತಿತ್ತು. ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್‌ನಲ್ಲಿದ್ದ ಬ್ರಿಟನ್ನಿನ ವಸಾಹತು ಸಾಮ್ರಾಜ್ಯಕ್ಕೂ ಈ ಕಾಲುವೆಯೇ ಪ್ರಮುಖ ಹಾದಿಯಾಗಿತ್ತು. ಭಾರತ, ಸಿಲೋನ್, ಬರ್ಮಾ ಹಾಗೂ ಚೀನಾ ದೇಶಗಳಿಗೆ ಈ ಕಾಲುವೆಯ ಮೂಲಕವೇ ಹಾದುಹೋಗಬೇಕಾಗಿತ್ತು. ಈ ಕಾರಣದಿಂದಾಗಿಯೇ ಫ್ರಾನ್ಸ್ ಮತ್ತು ಇಂಗ್ಲೆಂಡಿನ ನಡುವಿನ ಸಂಬಂಧದಲ್ಲಿ ಬಿರುಕು ಉಂಟಾಯಿತು. ಅಬ್ಬಾಸ್‌ನ ಮರಣದ ನಂತರ ಅಧಿಕಾರಕ್ಕೆ ಬಂದ ಇಸ್ಮಾಯಿಲ್ ಸುಯೇಜ್ ಕಾಲುವೆಗಾಗಿ ನಡೆಯುತ್ತಿದ್ದ ವಾದ-ವಿವಾದಗಳಲ್ಲಿ ಭಾಗಿಯಾಗಬೇಕಾಯಿತು. ೧೮೬೯ರಲ್ಲಿ ಸುಯೇಜ್ ಕಾಲುವೆಯ ಕಾಮಗಾರಿ ಫ್ರಾನ್ಸ್‌ನ ನೆರವಿನಿಂದಾಗಿ ಪೂರ್ಣಗೊಂಡಿತು. ಬ್ರಿಟನ್ ಇದನ್ನು ವಿರೋಧಿಸಿ ಇಸ್ಮಾಯಿಲ್‌ನ ಮೇಲೆ ಅನೇಕ ಒತ್ತಡಗಳನ್ನು ಹೇರಿತು. ಇಲ್ಲಿ ಎರಡೂ ರಾಷ್ಟ್ರಗಳು ಈಜಿಪ್ಟ್‌ನ ಆರ್ಥಿಕ ಪರಿಸ್ಥಿತಿಯ ಕುರಿತು ಹೆಚ್ಚಿನ ನಿಗಾ ವಹಿಸಿದವು. ೧೮೮೨ರಲ್ಲಿ ಈಜಿಪ್ಟ್ ಬ್ರಿಟನ್ನಿನ ಅಧೀನಕ್ಕೆ ಬಂತು. ಇದರ ಜತೆಗೇ ಸುಯೇಜ್ ಕಾಲುವೆಯ ಮೇಲಿನ ಅಧಿಕಾರವೂ ಬಂದಿತು.

ಅಪಾರವಾದ ಹಣವನ್ನು ಸುಯೇಜ್ ಕಾಲುವೆಯ ಕಾಮಗಾರಿಗೆ ವಿನಿಯೋಗಿಸಿದ್ದರಿಂದಾಗಿ ಫ್ರಾನ್ಸ್‌ನ ಆರ್ಥಿಕ ಪರಿಸ್ಥಿತಿ ತುಂಬಾ ಹದಗೆಟ್ಟಿತ್ತು. ಇದೇ ಸಂದರ್ಭವನ್ನು

ಉಪಯೋಗಿಸಿಕೊಂಡು ಬ್ರಿಟನ್ ಈಜಿಪ್ಟ್‌ನ ಮೇಲೆ ಸೈನಿಕ ದಾಳಿಯನ್ನು ನಡೆಸಿತು. ಯೂರೋಪಿನ ಇತರ ರಾಷ್ಟ್ರಗಳು ಬ್ರಿಟನ್ನಿನ ಸಾಮ್ರಾಜ್ಯಶಾಹಿ ನೀತಿಯನ್ನು ಖಂಡಿಸಿದವು. ಆದರೂ ಪಾಮರ್‌ಸ್ಟನ್, ಡಿಸ್ ರೈಲೀ, ಗೋಸ್ಚನ್ ಗ್ಲಾಡ್‌ಸ್ಟೋನ್ ಮತ್ತು ಚರ್ಚಿಲ್‌ರ ಯೋಜನೆಗಳಿಂದಾಗಿ ಬ್ರಿಟನ್ ಯುದ್ಧದಲ್ಲಿ ಜಯಶಾಲಿಯಾಯಿತು. ಇದರೊಡನೆ ಸುಯೇಜ್ ಕಾಲುವೆಗಾಗಿ ಬ್ರಿಟನ್ ಮತ್ತು ಫ್ರಾನ್ಸ್‌ನ ನಡುವೆ ನಡೆಯುತ್ತಿದ್ದ ಹೋರಾಟ ಮುಕ್ತಾಯಗೊಂಡಿತು. ೧೯೦೪ರಲ್ಲಿ ಎರಡೂ ರಾಷ್ಟ್ರಗಳೊಡನೆ ಒಡಂಬಡಿಕೆ ಏರ್ಪಟ್ಟಿತು. ಈಜಿಪ್ಟ್‌ನಲ್ಲಿ ಬ್ರಿಟನ್ ಮತ್ತು ಫ್ರಾನ್ಸ್ ತಮ್ಮ ವೈಯಕ್ತಿಕ ಹಿತಾಸಕ್ತಿಗಳ ಈಡೇರಿಕೆಗಾಗಿ ನಡೆಸಿದ ಹೋರಾಟ ಅಷ್ಟಕ್ಕೇ ಸೀಮಿತವಾಗಿರದೆ ಇಡೀ ಆಫ್ರಿಕಾ ಖಂಡಕ್ಕೆ ಹರಡಿತು. ಆಫ್ರಿಕಾದ ವಿಭಜನೆಯ ಪ್ರಥಮ ಹಂತ ಇಲ್ಲಿಂದಲೇ ಪ್ರಾರಂಭಗೊಂಡಿತು. ಜೆ.ಎ. ಹೋಬ್ಸನ್‌ರ ಪ್ರಕಾರ ಈಜಿಪ್ಟ್‌ನಲ್ಲಾದ ರಾಜಕೀಯ ಹಾಗೂ ಆರ್ಥಿಕ ಬದಲಾವಣೆಗಳು ಸಾಮ್ರಾಜ್ಯಶಾಹಿ ಧೋರಣೆಯ ಎಲ್ಲಾ ಅಂಶಗಳನ್ನೂ ಒಳಗೊಂಡಿವೆ ಮತ್ತು ಹಣಕಾಸಿನ ಪ್ರಶ್ನೆಯೇ ಮುಖ್ಯವಾಗಿರದೆ ರಾಜಕೀಯ ಉದ್ದೇಶವೂ ಬೆಸೆದುಕೊಂಡಿದೆ.

### ಪಶ್ಚಿಮ ಆಫ್ರಿಕಾ

ಪಶ್ಚಿಮ ಆಫ್ರಿಕಾಕ್ಕೆ ಯೂರೋಪಿನ ಬಹುತೇಕ ಎಲ್ಲಾ ರಾಷ್ಟ್ರಗಳೂ ಪ್ರವೇಶಿಸಿ ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಂಡು, ತಮ್ಮ ವ್ಯಾಪಾರದ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಪರಸ್ಪರ ಕಿತ್ತಾಟ ಪ್ರಾರಂಭಿಸಿದವು. ಪಶ್ಚಿಮ ಆಫ್ರಿಕಾದಲ್ಲಿ ಹೆಚ್ಚು ಪ್ರದೇಶಗಳನ್ನು ಬ್ರಿಟನ್ ಸ್ವಾಧೀನಪಡಿಸಿಕೊಂಡಿತ್ತು. ಬ್ರಿಟನ್ ಗಿನಿಯಾ ಕಿನಾರೆಯ ಮೂಲಕ ವೆಸ್ಟ್ ಇಂಡೀಸ್‌ನೊಡನೆ ವ್ಯಾಪಾರ ಸಂಪರ್ಕವನ್ನು ಇಟ್ಟುಕೊಂಡಿತ್ತು. ಇದು ತನ್ನ ವಸಾಹತು ನೆಲೆಯಾದ ಲಾಗೋಸ್‌ನ್ನು ನೈಗರ್‌ನೊಡನೆ ಸೇರಿಸಿಕೊಂಡು ೧೮೬೫ರಲ್ಲಿ ಉತ್ತರದ ಕಡೆಗೆ ಸಾಮ್ರಾಜ್ಯ ವಿಸ್ತರಿಸಿ ನೈಜೀರಿಯಾವನ್ನು ವಶಪಡಿಸಿಕೊಂಡಿತು. ಆದರೆ ಫ್ರೆಂಚರು ಸೆನೆಗಲ್‌ನಲ್ಲಿ ಬಲಿಷ್ಠವಾಗಿದ್ದರಿಂದಾಗಿ ಗಾಂಬಿಯಾವನ್ನು ಸಂಪೂರ್ಣವಾಗಿ ಸ್ವಾಧೀನಕ್ಕೆ ತರಲು ಸಾಧ್ಯವಾಗಲಿಲ್ಲ. ೧೮೫೦ ಮತ್ತು ೧೮೭೨ರಲ್ಲಿ ಕೇಪ್‌ಕೋಸ್ಟ್ ಮತ್ತು ಡಚ್ಚರ ಅನೇಕ ವ್ಯಾಪಾರಿ ನೆಲೆಗಳನ್ನು ವಶಪಡಿಸಿಕೊಳ್ಳಲಾಯಿತು. ಗೋಲ್ಡ್ ಕೋಸ್ಟ್ ಬ್ರಿಟನ್ನಿನ ಪ್ರಮುಖ ವ್ಯಾಪಾರದ ಸ್ಥಳವಾಗಿತ್ತು. ಇಲ್ಲಿನ ಸ್ಥಳೀಯ ಪಾಂತಿ ಜನಾಂಗದವರು ಬ್ರಿಟೀಷರೊಡನೆ ಉತ್ತಮ ಸಂಬಂಧವನ್ನು ಹೊಂದಿದ್ದರೂ ಅವರದ್ದೇ ಆದ ಅಶಾಂತಿ (ಇದೊಂದು ಬುಡಕಟ್ಟಿನ ಹೆಸರು) ಒಕ್ಕೂಟದೊಡನೆ ನೇರ ಭಾಗಿಗಳಾಗಿದ್ದರು. ಅಶಾಂತಿ, ಮೊದಲು ಸೀಮಿತ ಜನಾಂಗದ ಒಕ್ಕೂಟವಾಗಿದ್ದು ಕ್ರಮೇಣ ಬಲಿಷ್ಠ ಒಕ್ಕೂಟವಾಗಿ, ಪಶ್ಚಿಮ ಆಫ್ರಿಕಾದ ಬಲಿಷ್ಠ ರಾಜ್ಯವಾಗಿ ರೂಪುಗೊಂಡಿತು. ಅಶಾಂತಿ ಒಕ್ಕೂಟದ ರಾಜಧಾನಿ ಕುಮಾಸಿ ಗೋಲ್ಡ್ ಕೋಸ್ಟನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳಲು ಅಶಾಂತಿ ಒಕ್ಕೂಟ ಪ್ರಯತ್ನಿಸುತ್ತಿತ್ತು. ಆದರೆ ಬ್ರಿಟೀಷರೂ ಗೋಲ್ಡ್‌ಕೋಸ್ಟಿನ ಮೇಲೆ ಆಸಕ್ತಿ ಹೊಂದಿದ್ದರಿಂದಾಗಿ ಅದು ಸುಲಭದ ಕೆಲಸವಾಗಿರಲಿಲ್ಲ. ಇದರಿಂದಾಗಿ ಪ್ರಥಮ

ಅಶಾಂತಿ ಯುದ್ಧ ೧೮೨೦ರಲ್ಲಿ ಪ್ರಾರಂಭಗೊಂಡಿತು. ಪ್ರಾರಂಭದಲ್ಲಿ ಬ್ರಿಟನ್ ಸೋತರೂ ೧೮೨೬ರಲ್ಲಿ ಅಶಾಂತಿಯನ್ನು ಸೋಲಿಸಿ ತಮ್ಮ ಅಧೀನಕ್ಕೆ ತಂದರು. ಆದರೆ ಡಚ್ಚರು ಕೆಲವು ವ್ಯಾಪಾರದ ಸ್ಥಳಗಳನ್ನು ಬ್ರಿಟಿಷರಿಗೆ ಹಸ್ತಾಂತರಿಸಿದ್ದು ಇನ್ನೊಂದು ಅಶಾಂತಿ ಯುದ್ಧಕ್ಕೆ ಕಾರಣವಾಯಿತು. ೧೮೭೩ರಲ್ಲಿ ಬ್ರಿಟಿಷರ ಕಾರ್‌ನೆಟ್ ಓಲ್ಸ್ ಲೀ ಎಂಬಾತ ಅಶಾಂತಿ ಒಕ್ಕೂಟವನ್ನು ಸೋಲಿಸಿದ. ಈ ಘಟನೆ ಬ್ರಿಟನ್ನಿನ ಸಾಮ್ರಾಜ್ಯಶಾಹಿ ಧೋರಣೆಯನ್ನು ತಿಳಿಸುತ್ತದೆ. ವ್ಯಾಪಾರ ಮತ್ತು ಸಾಮ್ರಾಜ್ಯದ ವಿಸ್ತರಣೆ ಮಾತ್ರ ಬ್ರಿಟನ್ನಿನ ಉದ್ದೇಶವಾಗಿದ್ದು ಪಶ್ಚಿಮ ಆಫ್ರಿಕಾ ಈ ಪ್ರಕ್ರಿಯೆಗೆ ಸಾಧನವಾಗಬೇಕಾಯಿತು.

ಪಶ್ಚಿಮ ಆಫ್ರಿಕಾದಲ್ಲಿ ವ್ಯಾಪಾರ ಮತ್ತು ರಾಜ್ಯವಿಸ್ತಾರದ ಧೋರಣೆಯನ್ನು ಹೊಂದಿದ್ದ ಯುರೋಪಿನ ಇನ್ನೊಂದು ರಾಷ್ಟ್ರವೆಂದರೆ ಫ್ರಾನ್ಸ್. ಗಾಂಬಿಯಾದ ಕುರಿತು ಫ್ರಾನ್ಸ್ ಮತ್ತು ಬ್ರಿಟನ್ ೧೮೬೧ರಲ್ಲಿ ಒಪ್ಪಂದವನ್ನು ಮಾಡಿಕೊಂಡವು. ಗಾಂಬಿಯಾ ಫ್ರಾನ್ಸ್‌ಗೆ ಹೆಚ್ಚು ಉಪಯುಕ್ತವಾಗಿದ್ದು ಅದನ್ನು ಸೆನೆಗಲ್‌ನೊಡನೆ ಸೇರಿಸಿಕೊಳ್ಳಲು ಪ್ರಯತ್ನ ನಡೆಸುತ್ತಿತ್ತು. ಆದರೆ ಗಾಂಬಿಯಾ ಬ್ರಿಟನ್ನಿನ ಅಧೀನದಲ್ಲಿತ್ತು. ೧೯೦೪ರಲ್ಲಿ ಆಂಗ್ಲೋ-ಫ್ರೆಂಚ್ ಒಪ್ಪಂದ ಏರ್ಪಟ್ಟಿತು. ಫ್ರೆಂಚರ ಜನರಲ್ ಪೆಡೆರ್ಬ್ ಸೆನೆಗಲ್‌ನ ಗವರ್ನರ್ ಆಗಿ ನೇಮಕಗೊಂಡ. ಇದೇ ಸಂದರ್ಭದಲ್ಲಿ ಬ್ರಿಟನ್ನಿನ ಗೋಲ್ಡೀಯ ನೇತೃತ್ವದಲ್ಲಿ ನ್ಯಾಷನಲ್ ಆಫ್ರಿಕನ್ ಕಂಪೆನಿ ಹುಟ್ಟಿಕೊಂಡಿತು. ೧೮೮೨ರಲ್ಲಿಯೇ ಈ ಕಂಪೆನಿ ಅಧಿಕೃತವಾಗಿ ಕಾರ್ಯ ಪ್ರಾರಂಭಿಸಿತು. ೧೮೭೧ರ ಸೆಡಾನ್ ಯುದ್ಧದಲ್ಲಿ ಫ್ರಾನ್ಸ್‌ನ ಅರಸ ಮೂರನೇ ನೆಪೋಲಿಯನ್ ಸೋತಾಗ ಫ್ರಾನ್ಸ್‌ನ ವಸಾಹತುಗಳೂ ಅದರ ಪರಿಣಾಮವನ್ನು ಎದುರಿಸಬೇಕಾಗಿ ಬಂತು. ಆದರೆ ಜೂಲಿಸ್ ಪೆರ್ರಿಯ ನೇತೃತ್ವದಲ್ಲಿ ಫ್ರಾನ್ಸ್ ಮತ್ತೊಮ್ಮೆ ಬಲಿಷ್ಠಶಕ್ತಿಯಾಗಿ ರೂಪುಗೊಂಡು ಆಫ್ರಿಕಾದ ವಿಭಜನೆಯಲ್ಲಿ ಪಾಲ್ಗೊಂಡಿತು. ಪೆರ್ರಿಯ ಮಹತ್ವಾಕಾಂಕ್ಷೆಯ ಯೋಜನೆಯೆಂದರೆ ಸೆನೆಗಲ್, ಅಲ್ಜೀರಿಯಾ ಮತ್ತು ನೈಗರ್‌ಗಳಿಗೆ ರೈಲ್ವೇ ಮೂಲಕ ನೇರ ಸಂಪರ್ಕ ಕಲ್ಪಿಸುವುದು. ಸಿಯಾರಾ ಲಿಯೋನಿನಿಂದ ಕಾಂಗೋದವರೆಗಿನ ಎಲ್ಲಾ ಪ್ರಾಂತ್ಯಗಳನ್ನು ಫ್ರಾನ್ಸ್ ತನ್ನ ಹತೋಟಿಗೆ ತಂದಿತು. ೧೮೩೩ರಲ್ಲಿ ಫ್ರಾನ್ಸ್ ಪೊರ್ಟೋನೋವೊದ ಮೇಲೆ ತನ್ನ ಪಾಲಕಪ್ರಭುತ್ವ(protectorate)ವನ್ನು ಸ್ಥಾಪಿಸಿತು. ಇದರ ಮುಖ್ಯ ಉದ್ದೇಶ ಲಾಗೋಸ್‌ನಿಂದ ಗೋಲ್ಡ್‌ಕೋಸ್ಟ್‌ವರೆಗಿನ ಪ್ರದೇಶದಲ್ಲಿ ಬ್ರಿಟಿಷರ ಪ್ರಭಾವವನ್ನು ತಡೆಗಟ್ಟುವುದೇ ಆಗಿತ್ತು.

ಪಶ್ಚಿಮ ಆಫ್ರಿಕಾದ ಇತಿಹಾಸದಲ್ಲಿಯೇ ಕಾಂಗೋ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವ ಪ್ರದೇಶ. ಯುರೋಪಿನ ಎಲ್ಲಾ ರಾಷ್ಟ್ರಗಳೂ ಕಾಂಗೋದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸುವ ಸಲುವಾಗಿ ಪರಸ್ಪರ ಕಿತ್ತಾಡಿಕೊಂಡವು. ಕಾಂಗೋದ ಪ್ರಮುಖ ವ್ಯಾಪಾರಸ್ಥರು ಡಚ್ಚರು. ಆದರೆ ಪೋರ್ಚುಗೀಸರು ಹದಿನೈದನೇ ಶತಮಾನದ ಅಂತಿಮ ಭಾಗದಲ್ಲಿಯೇ ಕಾಂಗೋಗೆ ಪ್ರವೇಶಿಸಿದ್ದರು. ಕಾಂಗೋದ ಜನರಿಗೆ ಯುರೋಪಿನ ಪರಿಚಯವನ್ನು ಮಾಡಿಸಿಕೊಟ್ಟವರೇ ಪೋರ್ಚುಗೀಸರು. ಕ್ರಮೇಣ ಬ್ರೆಜಿಲ್‌ನ ಕಡೆಗೆ

ಆಕರ್ಷಿತರಾಗಿದ್ದರಿಂದ ಕಾಂಗೋದೊಡನೆ ನೇರ ಸಂಪರ್ಕವನ್ನು ಹೊಂದಲು ಸಾಧ್ಯವಾಗಲಿಲ್ಲ. ಆದರೆ ಹತ್ತೊಂಬತ್ತನೇ ಶತಮಾನದಲ್ಲಿ ಯುರೋಪಿನ ರಾಷ್ಟ್ರಗಳು ಕಾಂಗೋಗೆ ಹೆಚ್ಚಿನ ಮಹತ್ವವನ್ನು ಕೊಟ್ಟಾಗ ಪೋರ್ಚುಗಲ್ ಮತ್ತೊಮ್ಮೆ ತನ್ನ ಹಿಂದಿನ ಸಂಬಂಧವನ್ನು ಮುಂದುವರಿಸಲು ಪ್ರಯತ್ನಿಸಿತು. ಬ್ರಿಟನ್ನಿನ ವಿರೋಧದಿಂದಾಗಿ ಈ ಯೋಜನೆ ಯಶಸ್ವಿಯಾಗಲಿಲ್ಲ. ಈ ಎಲ್ಲಾ ಸಂಗತಿಗಳೊಡನೆ ಹೊಸದಾಗಿ ಸೇರ್ಪಡೆಗೊಂಡ ಅಂಶವೆಂದರೆ ಬೆಲ್ಜಿಯಂನ ಅರಸ ಎರಡನೇ ಲಿಯೋಪೋಲ್ಡ್‌ನ ಕಾಂಗೋದ ಕುರಿತ ಮಹತ್ವಾಕಾಂಕ್ಷೆ. ೧೮೬೦ರಿಂದಲೇ ಲಿಯೋಪೋಲ್ಡ್ ಆಫ್ರಿಕಾದಲ್ಲಿ ತನ್ನ ವಸಾಹತು ಸಾಮ್ರಾಜ್ಯವನ್ನು ಸ್ಥಾಪಿಸುವ ಕನಸು ಕಂಡಿದ್ದ. ಇದೇ ಉದ್ದೇಶಕ್ಕಾಗಿ ೧೮೭೬ರಲ್ಲಿ ಬ್ರುಸೆಲ್ಸ್‌ನಲ್ಲಿ ಅಂತಾರಾಷ್ಟ್ರೀಯ ಸಮ್ಮೇಳನವನ್ನು ಕರೆದು ಅಲ್ಲಿಗೆ ಅನ್ವೇಷಕರು, ಭೂಗೋಳಶಾಸ್ತ್ರಜ್ಞರನ್ನು ಆಹ್ವಾನಿಸಲಾಯಿತು. ಈ ಸಮ್ಮೇಳನದ ಫಲವಾಗಿ ಅಂತಾರಾಷ್ಟ್ರೀಯ ಆಫ್ರಿಕಾ ಸಂಸ್ಥೆಯೊಂದು ಹುಟ್ಟಿಕೊಂಡಿತು. ಈ ಸಂಸ್ಥೆಯ ಅಧ್ಯಕ್ಷನಾಗಿ ಲಿಯೋಪೋಲ್ಡ್ ನೇಮಕಗೊಂಡ. ಈ ಸಂಸ್ಥೆ ಆಫ್ರಿಕಾದ ಅನೇಕ ಬುಡಕಟ್ಟು ನಾಯಕರೊಡನೆ ಸಂಪರ್ಕವನ್ನು ಇಟ್ಟುಕೊಂಡಿತು. ಲಿಯೋಪೋಲ್ಡ್‌ನ ಉದ್ದೇಶಕ್ಕೆ ಸ್ಟೇನ್ಲಿ ಸಹಾಯ ನೀಡಿದ. ೧೮೮೩ರಲ್ಲಿ ಅಂತಾರಾಷ್ಟ್ರೀಯ ಕಾಂಗೋ ಸಂಸ್ಥೆ ಹುಟ್ಟಿಕೊಂಡಿತು. ಆರಂಭದಲ್ಲಿ ಮಾಡಿಕೊಂಡ ವಾಣಿಜ್ಯ ಒಪ್ಪಂದಗಳು ಕ್ರಮೇಣ ರಾಜಕೀಯ ಒಪ್ಪಂದಗಳಾಗಿ ಮಾರ್ಪಾಡಾದವು. ಲಿಯೋಪೋಲ್ಡ್‌ನ ಈ ಯೋಜನೆ ಯುರೋಪಿನ ಇತರ ರಾಷ್ಟ್ರಗಳಿಗೆ ಆಫ್ರಿಕಾದ ಭೂಪ್ರದೇಶಗಳಿಗೆ ಸಂಬಂಧಪಟ್ಟಂತೆ ಯೋಜನೆ ರೂಪಿಸಲು ಸಹಕಾರಿಯಾಯಿತು.

ಕಾಂಗೋದಲ್ಲಿನ ಅಪಾರ ಸಂಪತ್ತನ್ನು ಗಮನದಲ್ಲಿಟ್ಟುಕೊಂಡು ಫ್ರಾನ್ಸ್ ೧೮೭೬ರಲ್ಲಿ ರಾಷ್ಟ್ರೀಯ ಕಮಿಟಿಯೊಂದನ್ನು ಹುಟ್ಟು ಹಾಕಿತು. ಫ್ರಾನ್ಸ್‌ನ ಅನ್ವೇಷಕ ಬ್ರಾಸ್ಸಾ ಈ ಯೋಜನೆಯ ರೂವಾರಿಯಾಗಿದ್ದ. ಬ್ರಾಸ್ಸಾ ಆಫ್ರಿಕಾದ ಬುಡಕಟ್ಟು ನಾಯಕ ಮೆಕಾಕೊ ನೊಡನೆ ಒಪ್ಪಂದ ಮಾಡಿಕೊಂಡು ಕಾಂಗೋದಲ್ಲಿನ ವ್ಯಾಪಾರದಲ್ಲಿ ಫ್ರಾನ್ಸ್ ಲಾಭ ಗಳಿಸುವಂತೆ ಮಾಡಿದ. ಈ ಒಪ್ಪಂದ ಬ್ರಿಟನ್ನಿನ ಮೇಲಿನ ನೇರ ಆಕ್ರಮಣವೂ ಆಗಿತ್ತು. ಇದೇ ಸಂದರ್ಭದಲ್ಲಿ ಬ್ರಿಟನ್ ಪೋರ್ಚುಗೀಸರೊಡನೆ ಕಾಂಗೋಗೆ ಸಂಬಂಧ ಪಟ್ಟಂತೆ ಒಪ್ಪಂದವನ್ನು ಮಾಡಿಕೊಂಡಿತು. ಈ ಒಪ್ಪಂದದ ಮುಖ್ಯ ಉದ್ದೇಶವೆಂದರೆ ಕಾಂಗೋ ಪ್ರಶ್ನೆಯನ್ನು ಅಂತಾರಾಷ್ಟ್ರೀಯಗೊಳಿಸುವುದು ಮತ್ತು ಫ್ರಾನ್ಸ್ ಕಾಂಗೋದಲ್ಲಿ ಲಾಭ ಗಳಿಸದಂತೆ ನೋಡಿಕೊಳ್ಳುವುದು. ಈ ಸಂದರ್ಭದಲ್ಲಿ ಜರ್ಮನಿಯ ಆಟ್ಟೋವಾನ್ ಬಿಸ್ಮಾರ್ಕ್ ಮಧ್ಯ ಪ್ರವೇಶಿಸಿದ. ಕಾಂಗೋದ ಸಮಸ್ಯೆಯ ಕುರಿತು ಚರ್ಚೆ ನಡೆಸಲು ೧೮೮೪ರಲ್ಲಿ ಬರ್ಲಿನ್‌ನಲ್ಲಿ ಸಭೆಯನ್ನು ಕರೆಯಲಾಯಿತು. ಬಿಸ್ಮಾರ್ಕ್ ಸಭೆಯ ನೇತೃತ್ವ ವಹಿಸಿದ. ಈ ಸಭೆಯಲ್ಲಿ ಅಮೆರಿಕವೂ ಭಾಗವಹಿಸಿತು. ಈ ಸಭೆಯು ಕಾಂಗೋಗೆ ಸಂಬಂಧಪಟ್ಟಂತೆ ಕೆಲವು ಮಹತ್ವದ ನಿರ್ಣಯಗಳನ್ನು ಕೈಗೊಂಡಿತು. ಅವುಗಳೆಂದರೆ ಕಾಂಗೋವನ್ನು ಅಂತಾರಾಷ್ಟ್ರೀಯ ರಾಜ್ಯವನ್ನಾಗಿ ಪರಿವರ್ತಿಸುವುದು ಮತ್ತು ಯುರೋಪಿನ

ಶಕ್ತಿಗಳಿಗೆ ಅಂತರಾಷ್ಟ್ರೀಯ ನೀತಿಸಂಹಿತೆಯನ್ನು ರೂಪಿಸುವುದು. ಬರ್ಲಿನ್ ಕಾಯಿದೆಯ ಪ್ರಕಾರ ಯುರೋಪಿನ ಯಾವುದೇ ಒಂದು ರಾಷ್ಟ್ರಕ್ಕೂ ಕಾಂಗೋದ ಮೇಲಿನ ಅಧಿಕಾರವಿರುವುದಿಲ್ಲ. ಎಲ್ಲಾ ರಾಷ್ಟ್ರಗಳ ವ್ಯಾಪಾರಸ್ಥರು ಕಾಂಗೋದಲ್ಲಿ ಮುಕ್ತವಾಗಿ ವ್ಯಾಪಾರವನ್ನು ನಡೆಸಬಹುದು. ಕಾಂಗೋ ನದಿಯನ್ನು ಅಂತಾರಾಷ್ಟ್ರೀಯಗೊಳಿಸಲಾಯಿತು. ಬ್ರಿಟನ್ ನೈಗರ್‌ನ ಮೇಲೆ ಹೊಂದುವ ಅಧಿಕಾರದ ಕುರಿತೂ ತೀರ್ಮಾನವನ್ನು ಕೈಗೊಳ್ಳಲಾಯಿತು. ಇಲ್ಲಿ ವಿಪರ್ಯಾಸವೆಂದರೆ ಸ್ಥಳೀಯ ಜನರ ಮೇಲೆ ಈ ಕಾಯಿದೆ ಯಾವ ರೀತಿಯ ಪ್ರಭಾವವನ್ನು ಬೀರಿತು ಎನ್ನುವುದು ಯಾವ ರಾಷ್ಟ್ರಕ್ಕೂ ಪ್ರಾಮುಖ್ಯವಾಗಿರಲಿಲ್ಲ.

ಬರ್ಲಿನ್ ಕಾಯಿದೆಯ ನಂತರ ಬ್ರಿಟನ್ ಮತ್ತು ಜರ್ಮನಿಯ ನಡುವೆ ಕೇಪ್ ಪ್ರಾಂತ್ಯ ಮತ್ತು ಪೋರ್ಚುಗೀಸರ ವಸಾಹತು ಅಂಗೋಲಾದ ಕುರಿತಾಗಿ ಮನಸ್ತಾಪ ಉಂಟಾಯಿತು. ೧೮೭೮ರಲ್ಲಿ ಬ್ರಿಟನ್ ಅಂಗೋಲಾದ ಪ್ರಾಂತ್ಯವೊಂದನ್ನು ವಶಪಡಿಸಿಕೊಂಡಿತು. ಇಲ್ಲಿನ ಬರ್ಲಿನ್ ಕಾಯಿದೆಯ ನಿರ್ಣಯಗಳನ್ನು ಎರಡೂ ರಾಷ್ಟ್ರಗಳು ಅನುಸರಿಸಲಿಲ್ಲ. ಬ್ರಿಟನಿನ ವಿರುದ್ಧ ಜರ್ಮನಿ ತನಿಖೆಯನ್ನು ಆರಂಭಿಸಿತು. ಆದರೆ ಜರ್ಮನಿಯೂ ಅದೇ ಪ್ರಾಂತ್ಯವನ್ನು ಸ್ವಾಧೀನಪಡಿಸಲು ಹಾತೊರೆಯುತ್ತಿತ್ತು. ಇದನ್ನರಿತ ಕೇಪ್ ಸರಕಾರ ಕೇಪ್‌ನಿಂದ ಅಂಗೋಲಾದವರೆಗಿನ ಯಾವುದೇ ಪ್ರದೇಶದಲ್ಲಿ ಯುರೋಪಿನ ರಾಷ್ಟ್ರಗಳು ವ್ಯಾಪಾರ ನಡೆಸುವುದನ್ನು ವಿರೋಧಿಸಿತು. ಜರ್ಮನಿ ಮತ್ತು ಬ್ರಿಟನ್ನಿನ ಸಂಬಂಧ ಹದಗೆಡುವುದಕ್ಕೆ ಇನ್ನೊಂದು ಕಾರಣ ಕೇಮ್‌ರೂನ್. ಬ್ರಿಟನ್ ಬಹಳ ವರ್ಷಗಳ ಹಿಂದೆಯೇ ಕೇಮ್‌ರೂನ್‌ನಲ್ಲಿ ವ್ಯಾಪಾರ ನಡೆಸುತ್ತಿತ್ತು ಮತ್ತು ಸ್ಥಳೀಯ ಜನರೂ ಬ್ರಿಟನ್ನಿನ ವ್ಯಾಪಾರದೊಡನೆ ಸೇರಿಕೊಂಡಿದ್ದರು. ೧೮೮೦ರಲ್ಲಿ ಜರ್ಮನಿಯೂ ಕೇಮ್‌ರೂನ್‌ಗೆ ಪ್ರವೇಶ ಪಡೆಯಿತು. ಈ ರಾಜಕೀಯ ಬದಲಾವಣೆಯಲ್ಲಿ ಬ್ರಿಟನ್ ಜಯಶಾಲಿಯಾಗಿ ಸ್ಥಳೀಯ ಜನರು ಬ್ರಿಟನ್ನಿನೊಡನೆ ಒಪ್ಪಂದವನ್ನು ಮಾಡಿಕೊಂಡರು.

ಇತಿಹಾಸಕಾರರ ಪ್ರಕಾರ ಆಫ್ರಿಕಕ್ಕಾಗಿ ಯುರೋಪಿನ ರಾಷ್ಟ್ರಗಳ ನಡುವೆ ಕಿತ್ತಾಟ ಪ್ರಾರಂಭವಾಗಿರುವುದೇ ಪಶ್ಚಿಮ ಆಫ್ರಿಕಾದಲ್ಲಿ. ಬ್ರಿಟನ್, ಫ್ರಾನ್ಸ್, ಪೋರ್ಚುಗೀಸ್, ಡಚ್, ಜರ್ಮನಿ, ಬೆಲ್ಜಿಯಂ ಮುಂತಾದ ರಾಷ್ಟ್ರಗಳು ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ಆಫ್ರಿಕಾದ ಬೇರೆ ಬೇರೆ ಪ್ರದೇಶಗಳನ್ನು ಆಯ್ದುಕೊಂಡರು. ಆಫ್ರಿಕಾವನ್ನು ತಮ್ಮ ಆಸಕ್ತಿಗಳಿಗನುಗುಣವಾಗಿ ವಿಭಜಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಿದವರು ಬ್ರಿಟಿಷರು. ಹತ್ತೊಂಬತ್ತನೇ ಶತಮಾನದಲ್ಲಿ ಕೈಗಾರಿಕಾ ದೇಶವಾಗಿ ರೂಪುಗೊಂಡ ಬ್ರಿಟನ್ ಸಂಪನ್ಮೂಲಗಳ ಹುಡುಕಾಟವನ್ನು ಪ್ರಾರಂಭಿಸಿ ಆಫ್ರಿಕಾವನ್ನು ಯುರೋಪಿನ ರಾಷ್ಟ್ರಗಳಿಗೆ ಪರಿಚಯಿಸಿತು. ೧೮೭೩ರಲ್ಲಿ ಯುರೋಪಿನಲ್ಲಿ ಕಾಣಿಸಿಕೊಂಡ ಆರ್ಥಿಕ ಮುಗ್ಗಟ್ಟನ್ನು ಹೋಗಲಾಡಿಸಲು ಆಫ್ರಿಕಾದ ಅನಿವಾರ್ಯತೆ ಇತ್ತು. ಪಶ್ಚಿಮ ಆಫ್ರಿಕಾದಲ್ಲಿ ವಿವಿಧ ಪ್ರದೇಶಗಳನ್ನು ಹಂಚಿಕೊಳ್ಳುವಲ್ಲಿ ಯುರೋಪಿನ ರಾಷ್ಟ್ರಗಳು ನಡೆಸಿದ ಹೋರಾಟ ಹೆಚ್ಚಾಗಿ ರಕ್ಷಣೆಗೆ ಸಂಬಂಧಪಟ್ಟದ್ದು. ತಮ್ಮ ವ್ಯಾಪಾರದ ಹಿತಾಸಕ್ತಿಗಳನ್ನು ಹೊಸದಾಗಿ

ಪ್ರವೇಶಿಸುವ ರಾಷ್ಟ್ರಗಳ ಅಥವಾ ಸ್ಪರ್ಧೆಯ ವಿರುದ್ಧ ಕಾಪಾಡುವುದೇ ಮುಖ್ಯ ಉದ್ದೇಶವಾಗಿತ್ತು. ಯುರೋಪಿನ ರಾಷ್ಟ್ರಗಳ ವ್ಯಾಪಾರ ಮತ್ತು ರಾಜ್ಯವಿಸ್ತಾರದ ಧೋರಣೆ ಪಶ್ಚಿಮ ಆಫ್ರಿಕಾವನ್ನು ತುಂಡುತುಂಡಾಗಿ ವಿಂಗಡಿಸಿ ಕ್ರಮೇಣ ರಾಷ್ಟ್ರೀಯ ಚಳುವಳಿ ರೂಪುಗೊಳ್ಳುವಂತೆ ಮಾಡಿತು.

## ಪೂರ್ವ ಆಫ್ರಿಕಾ

ಪಶ್ಚಿಮ ಆಫ್ರಿಕಾದಂತೆ ಪೂರ್ವ ಆಫ್ರಿಕಾದಲ್ಲೂ ಯುರೋಪಿನ ರಾಷ್ಟ್ರಗಳು ತಮ್ಮ ವ್ಯಾಪಾರಕ್ಕೆ ಭವ್ಯವಾದ ನೆಲೆಗಳನ್ನು ಕಂಡುಹಿಡಿಯುವ ಕಾರ್ಯದಲ್ಲಿ ತೊಡಗಿದವು. ಬ್ರಿಟನ್, ಜರ್ಮನಿ, ಸ್ಪೈನ್, ಇಟಲಿ ಮತ್ತು ಫ್ರಾನ್ಸ್ ಪೂರ್ವ ಕರಾವಳಿಯುದ್ದಕ್ಕೂ ತಮ್ಮ ಪ್ರಭಾವಿ ನೆಲೆಗಳನ್ನು ಸ್ಥಾಪಿಸಿಕೊಂಡವು. ಆಫ್ರಿಕಾದ ಪೂರ್ವಕರಾವಳಿ ಭಾರತದೊಡನೆ ಸಂಪರ್ಕವನ್ನು ಇಟ್ಟುಕೊಂಡಿತ್ತು. ಯುರೋಪಿಯನ್ನರು ಕೇಪ್ ಹಾದಿಯ ಮೂಲಕ ಭಾರತಕ್ಕೆ ಬರಬೇಕಾಗಿತ್ತು. ಸುಯೇಜ್ ಕಾಲುವೆಯ ಕಾಮಗಾರಿ ಮುಗಿಯುವಲ್ಲಿಯವರೆಗೆ ಅಂದರೆ ೧೮೬೯ರವರೆಗೆ ಕೇಪ್ ಮಾರ್ಗವೇ ಪ್ರಮುಖ ಸಮುದ್ರ ಮಾರ್ಗವಾಗಿತ್ತು. ಬ್ರಿಟನ್ನಿನ ಪಶ್ಚಿಮ ಆಫ್ರಿಕಾದಲ್ಲಿದ್ದಷ್ಟು ವ್ಯಾಪಾರ ಸಂಪರ್ಕ ಪೂರ್ವ ಅಫ್ರಿಕಾದಲ್ಲಿ ಇರಲಿಲ್ಲ. ೧೮೭೩ರಲ್ಲಿ ಬ್ರಿಟನ್ ಜಾನ್ ಸಿಬಾರ್‌ನ ಸುಲ್ತಾನನೊಡೆನೆ ಒಡಂಬಡಿಕೆಯನ್ನು ಏರ್ಪಡಿಸಿಕೊಂಡಿತು. ಸುಲ್ತಾನನಿಗೆ ಸೈನಿಕ ಸಹಾಯವನ್ನು ನೀಡಿ ಅತನನ್ನು ತಮ್ಮ ಕಕ್ಷೆಗೆ ತರುವಲ್ಲಿ ಬ್ರಿಟನ್ ಸಫಲವಾಯಿತು. ಕಿಲಿಮಾಂಜರೋ ಪರ್ವತದ ಸುತ್ತಲಿನ ಪ್ರದೇಶ ಮತ್ತು ಬುಗಾಂಡಾವನ್ನು ತಮ್ಮ ಸ್ವಾಧೀನಕ್ಕೆ ತರಲು ೧೮೭೭ರಲ್ಲಿ ಬ್ರಿಟನ್ ಯೋಜನೆಯೊಂದನ್ನು ರೂಪಿಸಿತು. ಈ ಯೋಜನೆಯ ಪ್ರಕಾರ ಸುಲ್ತಾನನ ಹೆಸರಿನಲ್ಲಿ ಎಲ್ಲಾ ಪ್ರದೇಶಗಳನ್ನು ತಾವೇ ನೋಡಿಕೊಳ್ಳುವುದಾಗಿತ್ತು. ಆದರೆ ಈ ಯೋಜನೆ ಕಾರ್ಯಗತವಾಗಲಿಲ್ಲ. ಇದರಿಂದಾಗಿ ಬ್ರಿಟನ್ನಿನ ವಿದೇಶ ಕಾರ್ಯದರ್ಶಿ ಲಾರ್ಡ್ ಸ್ಯಾಲಿಸ್ ಬ್ಯೂರಿ ಮತ್ತು ವಿಲ್ಯಮ್ ಗ್ಲಾಡ್ ಸ್ಟೋನ್ ಅವರಿಗೆ ಮುಖಭಂಗವಾದಂತಾಯಿತು. ಪೂರ್ವ ಆಫ್ರಿಕಾದಲ್ಲಿ ಸಾಮ್ರಾಜ್ಯ ವಿಸ್ತರಣೆಯ ಧೋರಣೆಯನ್ನು ಗ್ಲಾಡ್‌ಸ್ಟೋನ್ ಬಲವಾಗಿ ವಿರೋಧಿಸಿದ. ಏಕೆಂದರೆ ಇದರಿಂದ ಆರ್ಥಿಕ ಲಾಭ ಇರಲಿಲ್ಲ ಮತ್ತು ಜರ್ಮನಿ ಬ್ರಿಟನ್ನಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿ ಪೂರ್ವ ಆಫ್ರಿಕಾದಲ್ಲಿ ಕಾರ್ಯ ನಿರ್ವಹಿಸುತ್ತಿತ್ತು. ಪೂರ್ವ ಆಫ್ರಿಕಾದಲ್ಲಿದ್ದ ಬ್ರಿಟನ್ನಿನ ವ್ಯಾಪಾರಸ್ಥರ ಹಿತಾಸಕ್ತಿಗಳನ್ನು ಕಾಪಾಡುವುದೂ ಬ್ರಿಟಿಷ್ ಸರಕಾರಕ್ಕೆ ಆರ್ಥಿಕವಾಗಿ ಹೊರೆಯೇ ಆಗಿತ್ತು.

ಜರ್ಮನಿ ಜಾನ್ ಸಿಬಾರ್‌ನ ಸುಲ್ತಾನನೊಡನೆ ಮಾತುಕತೆ ನಡೆಸಿ ವ್ಯಾಪಾರದ ಸವಲತ್ತುಗಳನ್ನು ಪಡೆದುಕೊಂಡಿತು. ಜರ್ಮನಿಯ ಅನ್ವೇಷಕ ಕಾರ್ಲ್‌ಪೀಟರ್ ಪೂರ್ವ ಆಫ್ರಿಕಾಕ್ಕೆ ತೆರಳಿ ಅಲ್ಲಿನ ಸ್ಥಳೀಯ ನಾಯಕರೊಡನೆ ಒಪ್ಪಂದಗಳನ್ನು ಏರ್ಪಡಿಸಿಕೊಂಡ. ಇದರಿಂದ ಕಳವಳಗೊಂಡ ಬ್ರಿಟಿಷ್ ವ್ಯಾಪಾರಸ್ಥರು ರಕ್ಷಣೆಗಾಗಿ ಸರಕಾರದ ಮೇಲೆ ಒತ್ತಡವನ್ನು ತಂದರು. ಸುಲ್ತಾನನ ಅಧಿಕಾರವನ್ನು ಮೊಟಕುಗೊಳಿಸಲು ೧೮೮೫ರಲ್ಲಿ

ಬ್ರಿಟನ್, ಜರ್ಮನಿ ಮತ್ತು ಫ್ರಾನ್ಸ್ ರಾಷ್ಟ್ರಗಳು ಯೋಜನೆಯೊಂದನ್ನು ರೂಪಿಸಿದವು. ೧೮೬೬ರಲ್ಲಿ ಸುಲ್ತಾನ್ ಮೈತ್ರಿಕೂಟವನ್ನು ವಿಶ್ವಾಸಕ್ಕೆ ತೆಗೆದುಕೊಂಡು ತನ್ನ ಸಾಮ್ರಾಜ್ಯದ ಗಡಿರೇಖೆಗಳನ್ನು ಪುನರ್‌ರಚಿಸಲು ಒಪ್ಪಿಕೊಂಡ. ಅದೇ ರೀತಿ ಕರಾವಳಿ ಪ್ರದೇಶವನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡ ಕೀನ್ಯಾ ಮತ್ತು ಉಗಾಂಡವನ್ನು ಬ್ರಿಟನ್ನಿಗೆ ಮತ್ತು ಟಾಂಗಾನ್ಯಕಾವನ್ನು ಜರ್ಮನಿಯ ಸ್ವಾಧೀನಕ್ಕೆ ಬಿಟ್ಟುಕೊಡಲಾಯಿತು. ಬ್ರಿಟಿಷ್ ಈಸ್ಟ್ ಆಫ್ರಿಕಾ ಕಂಪೆನಿಯು ೧೮೮೮ರಲ್ಲಿ ಅಸ್ತಿತ್ವಕ್ಕೆ ಬಂತು. ಆದರೆ ಈ ಕಂಪೆನಿ ಪೂರ್ವ ಆಫ್ರಿಕಾದಲ್ಲಿ ತೀವ್ರ ಹಣಕಾಸಿನ ಸಮಸ್ಯೆಯನ್ನು ಎದುರಿಸಬೇಕಾಗಿ ಬಂತು. ಇದೇ ರೀತಿ ಜರ್ಮನಿಯ ಕೆಲವೊಂದು ಸಂಸ್ಥೆಗಳೂ ದಿವಾಳಿಯಾದವು. ಪೂರ್ವ ಆಫ್ರಿಕಾದಲ್ಲಿ ವ್ಯಾಪಾರದಲ್ಲಿ ಲಾಭ ಗಳಿಸಬೇಕಾದರೆ ಸಾಕಷ್ಟು ಹಣವನ್ನು ವ್ಯಯಮಾಡಬೇಕಾಗಿತ್ತು. ಪೂರ್ವ ಆಫ್ರಿಕಾದಲ್ಲಿ ಹತ್ತಿ ಮತ್ತು ಕಾಫಿ ಪ್ರಮುಖ ಉತ್ಪಾದನೆಯಾಗಿದ್ದು ಇದರಿಂದ ವಿದೇಶಿ ಕಂಪೆನಿಗಳಿಗೆ ಲಾಭ ದೊರೆಯುತ್ತಿರಲಿಲ್ಲ. ಬ್ರಿಟಿಷ್ ಈಸ್ಟ್ ಆಫ್ರಿಕಾ ಕಂಪೆನಿ ದಿವಾಳಿಯಾಗಲು ಮತ್ತೊಂದು ಕಾರಣ ಪ್ರಸಿದ್ಧ ಉಗಾಂಡಾ ರೈಲ್ವೇ ಯೋಜನೆ. ಈ ಉದ್ದೇಶಿತ ಯೋಜನೆ ಮೊಂಬಾಸಾದಿಂದ ವಿಕ್ಟೋರಿಯಾ ಸರೋವರದವರೆಗಿತ್ತು. ವ್ಯಾಪಾರದಲ್ಲಿ ಲಾಭ ಗಳಿಸಲು ರೈಲ್ವೆಯ ಅಗತ್ಯವಿದ್ದರೂ ಸಾಕಷ್ಟು ಪ್ರಮಾಣದಲ್ಲಿ ಲಾಭ ಬರುತ್ತಿರಲಿಲ್ಲ. ಬ್ರಿಟನ್ ನಿಜವಾಗಿಯೂ ಚಿಂತೆಯಲ್ಲಿ ಮುಳುಗಿತು. ಬ್ರಿಟನ್ನಿನ ಪೂರ್ವ ಆಫ್ರಿಕಾದಲ್ಲಿದ್ದ ವಿದೇಶಾಂಗ ಕಾರ್ಯದರ್ಶಿ ಸಾಲಿಸ್‌ಬ್ಯೂರಿ ಹತಾಶನಾಗಿ ಬ್ರಿಟನ್ನಿಗೆ ಮರಳಿದ.

ಪೂರ್ವ ಆಫ್ರಿಕಾದಲ್ಲಿನ ರಾಜಕೀಯ ಪರಿಸ್ಥಿತಿಯನ್ನು ಬದಲಾಯಿಸಲು ಯುರೋಪಿನ ರಾಷ್ಟ್ರಗಳು ಪರಸ್ಪರ ಒಪ್ಪಂದ ಮಾಡಿಕೊಳ್ಳಲು ತೀರ್ಮಾನಿಸಿದವು. ಇದೇ ಪ್ರಕಾರ ಬ್ರಿಟನ್ ೧೮೯೦ರಲ್ಲಿ ಜರ್ಮನಿಯೊಡನೆ ಒಪ್ಪಂದ ಮಾಡಿಕೊಂಡಿತು. ಜರ್ಮನಿಯ ಬಿಸ್ಮಾರ್ಕ್ ಬ್ರಿಟನ್ನಿನೊಡನೆ ಶಾಂತಿಯುತವಾಗಿ ವ್ಯವಹರಿಸಿದ. ಈ ಒಪ್ಪಂದದ ಪ್ರಕಾರ ಜರ್ಮನಿಯು ಜಾನ್ ಸಿಬಾರ್‌ನ ಮೇಲೆ ಬ್ರಿಟಿಷರ ಪಾಲಕಪ್ರಭುತ್ವವನ್ನು ಅಂಗೀಕರಿಸಿತು. ಇದಕ್ಕೆ ಪ್ರತಿಯಾಗಿ ಪಶ್ಚಿಮ ಆಫ್ರಿಕಾದಲ್ಲಿ ಕೆಲವೊಂದು ಪ್ರದೇಶಗಳನ್ನು ಜರ್ಮನಿಗೆ ಬಿಟ್ಟುಕೊಡಲಾಯಿತು. ಅವುಗಳೆಂದರೆ ಕ್ಯಾಪ್ರಿವಿ ಸ್ಟ್ರಿಪ್ ಮತ್ತು ಹೊಲಿಗೋಲ್ಯಾಂಡ್. ಇದೇ ಪ್ರಕಾರ ಫ್ರಾನ್ಸ್ ಜಾನ್‌ಸಿಬಾರ್‌ನ ಮೇಲೆ ಬ್ರಿಟಿಷರ ಪಾಲಕಪ್ರಭುತ್ವವನ್ನು ಒಪ್ಪಿಕೊಂಡಿತು. ಇದಕ್ಕಾಗಿ ಮಡಗಾಸ್ಕರ್‌ನ ಸಂಪೂರ್ಣ ಅಧಿಕಾರವನ್ನು ಫ್ರಾನ್ಸ್‌ಗೆ ಬಿಟ್ಟುಕೊಡಲಾಯಿತು. ಮನೋನಾಲ್ಯಾಂಡ್ ಮತ್ತು ನ್ಯಾಸಾಲ್ಯಾಂಡ್‌ಗಳು ಬ್ರಿಟಿಷರ ಅಧೀನಕ್ಕೆ ಬಂದವು. ಇದೇ ಸಂದರ್ಭದಲ್ಲಿ ಉಗಾಂಡಾದ ಕುರಿತಾಗಿ ಬ್ರಿಟನ್ ಮತ್ತು ಜರ್ಮನಿಯ ಸಂಬಂಧದ ನಡುವೆ ಬಿರುಕು ಉಂಟಾಯಿತು. ಆಂಗ್ಲೋ-ಜರ್ಮನ್ ಒಪ್ಪಂದಗಳು ಏರ್ಪಟ್ಟರೂ ಸಮಸ್ಯೆ ಬಗೆಹರಿಯಲಿಲ್ಲ. ಇಂಗ್ಲೆಂಡಿನ ಈಸ್ಟ್ ಆಫ್ರಿಕಾ ಕಂಪೆನಿಯು ಆರ್ಥಿಕ ದಿವಾಳಿತನವನ್ನು ಎದುರಿಸುತ್ತಿದ್ದರೂ ನೈಜೀರಿಯಾದ ಗವರ್ನರ್

ಕ್ಯಾಪ್ಟನ್ ಲುಗಾರ್ಡ್‌ನನ್ನು ಉಗಾಂಡಕ್ಕೆ ಕಳುಹಿಸಿಕೊಟ್ಟಿತು. ಈ ನಿರ್ಧಾರವನ್ನು ಬ್ರಿಟನ್ನಿನ ಸರಕಾರವೇ ಕೈಗೊಂಡಿತ್ತು. ಜರ್ಮನಿಯ ಅನ್ವೇಷಕ ಕಾರ್ಲ್‌ಪೀಟರ್ ಉಗಾಂಡದುದ್ದಕ್ಕೂ ಸಂಚರಿಸಿ ಅಲ್ಲಿನ ಜನರ ವಿಶ್ವಾಸವನ್ನು ಗಳಿಸಿಕೊಂಡಿದ್ದ. ಉಗಾಂಡಾ ಬ್ರಿಟನ್ ಮತ್ತು ಜರ್ಮನಿಗೆ ಆರ್ಥಿಕ ಪ್ರಶ್ನೆ ಮಾತ್ರ ಆಗಿರದೆ ಪ್ರತಿಷ್ಠೆಯ ಪ್ರಶ್ನೆಯೂ ಆಗಿತ್ತು. ಬ್ರಿಟನ್ನಿನ ವ್ಯಾಪಾರಸ್ಥರು ಲುಗಾರ್ಡನ ನೀತಿಯನ್ನು ವಿರೋಧಿಸಿದರೂ ಬ್ರಿಟನ್ನಿನ ವಿದೇಶ ಕಾರ್ಯದರ್ಶಿ ಲಾರ್ಡ್ ರೋಸಿಬೆರಿ ಈ ನೀತಿಯನ್ನು ಸಮರ್ಥಿಸಿಕೊಂಡ. ರೋಸಿಬೆರಿ ಸಾಮ್ರಾಜ್ಯಶಾಹಿ ನೀತಿಯನ್ನು ಬಲವಾಗಿ ಪ್ರತಿಪಾದಿಸುವ ವ್ಯಕ್ತಿಯಾಗಿದ್ದು ಆಫ್ರಿಕಾದಲ್ಲಿನ ಬ್ರಿಟನ್ನಿನ ವಸಾಹತುಗಳನ್ನು ರಕ್ಷಿಸುವ ಕಾರ್ಯದಲ್ಲಿ ಮಗ್ನನಾದ. ರೋಸಿಬೆರಿಯ ರಾಜತಾಂತ್ರಿಕ ನೀತಿಯ ಫಲವಾಗಿ ೧೮೯೪ರಲ್ಲಿ ಬ್ರಿಟನ್ ಉಗಾಂಡಾದ ಮೇಲೆ ತನ್ನ ಪಾಲಕಪ್ರಭುತ್ವವನ್ನು ಸ್ಥಾಪಿಸಿತು.

### ದಕ್ಷಿಣ ಆಫ್ರಿಕಾ

ದಕ್ಷಿಣ ಆಫ್ರಿಕಾದ ಸನ್ನಿವೇಶ ಪೂರ್ವ ಮತ್ತು ಪಶ್ಚಿಮ ಆಫ್ರಿಕಾಗಳಿಗಿಂತ ಭಿನ್ನ ವಾದದ್ದಾಗಿತ್ತು. ಭೌಗೋಳಿಕವಾಗಿ ಎಲ್ಲ ಲಕ್ಷಣಗಳು ಯುರೋಪಿನ ರಾಷ್ಟ್ರಗಳಿಗೆ ಸಹಕಾರಿಯಾಗಿಯೇ ಇದ್ದುವು. ಅಲ್ಲಿನ ಮೂಲ ನಿವಾಸಿಗಳಾದ ಬುಶ್‌ಮೆನ್ ಮತ್ತು ಹಾಟೆನ್‌ಟೋಸ್ ಹೆಚ್ಚಿನ ಸಂಖ್ಯೆಯಲ್ಲಿ ಇರಲಿಲ್ಲ. ಸುಮಾರು ಹದಿನೈದನೇ ಶತಮಾನ ದಿಂದಲೇ ಪೋರ್ಚುಗೀಸ್, ಡಚ್ ಮತ್ತು ಫ್ರೆಂಚರು ದಕ್ಷಿಣ ಆಫ್ರಿಕಾಕ್ಕೆ ಬರಲು ಪ್ರಾರಂಭಿಸಿದ್ದರು. ಬಂಟು ಭಾಷೆಯನ್ನಾಡುವ ನೀಗ್ರೋ ಜನಾಂಗದವರೂ ದಕ್ಷಿಣ ಆಫ್ರಿಕಾಕ್ಕೆ ಪ್ರವೇಶಿಸಿದರು. ಇವರು ಮೊದಲು ಪಶ್ಚಿಮ ಆಫ್ರಿಕಾದ ಅಡವಿಗಳಲ್ಲಿ ವಾಸಿಸುತ್ತಿದ್ದರು. ದಕ್ಷಿಣ ಆಫ್ರಿಕಾದ ಬೊಯಿರ್ ಜನಾಂಗದವರು ಯುರೋಪಿಯನ್ನರ ಆಗಮನವನ್ನು ವಿರೋಧಿಸಿದರು. ಬಂಟು ಜನರು ಕೀನ್ಯಾ ಮತ್ತು ತಾಂಜಾನಿಯಾಗಳಲ್ಲಿ ನೆಲೆಸಿದರು. ದಕ್ಷಿಣ ಆಫ್ರಿಕಾದ ನಿವಾಸಿಗಳಾದ ಜುಲೂಸ್ ಮತ್ತು ಕಾಫಿರ್ಸ್ ತಮ್ಮ ಪ್ರಾಂತ್ಯಗಳ ಗಡಿಸಮಸ್ಯೆಯಿಂದಾಗಿ ಪರಸ್ಪರ ಹೋರಾಡುತ್ತಿದ್ದರು. ಆದರೆ ಯುರೋಪಿನ ವಸಾಹತುಶಾಹಿ ಆಳ್ವಿಕೆ ದಕ್ಷಿಣ ಆಫ್ರಿಕಾದಲ್ಲೂ ಪ್ರಾರಂಭಗೊಂಡಾಗ, ಅಲ್ಲಿನ ಮೂಲನಿವಾಸಿಗಳ ಹೋರಾಟದ ಸ್ವರೂಪವೇ ಬದಲಾಯಿತು.

ನೆಪೋಲಿಯನ್ ಬೊನಾಪಾರ್ಟೆಯ ಯುದ್ಧಗಳ ಸಂದರ್ಭದಲ್ಲಿಯೇ ಬ್ರಿಟನ್ ದಕ್ಷಿಣ ಆಫ್ರಿಕಾದ ಕೇಪ್ ಗುಡ್‌ಹೋಪ್‌ನ್ನು ಸ್ವಾಧೀನಪಡಿಸಿಕೊಂಡಿತು. ಅಲ್ಲಿನ ನಿವಾಸಿಗಳಾದ ಬೊಯಿರ್ ಜನರು ಬ್ರಿಟನ್ನಿನ ಆಂಗ್ಲೀಕರಣ ನೀತಿಯನ್ನು ಬಲವಾಗಿ ವಿರೋಧಿಸಿದರು. ದಕ್ಷಿಣ ಆಫ್ರಿಕಾದಲ್ಲಿ ಹೆಚ್ಚು ಚರ್ಚೆಗೆ ಆಸ್ಪದ ಮಾಡಿಕೊಟ್ಟಿರುವ ಪ್ರದೇಶಗಳೆಂದರೆ ಟ್ರಾನ್ಸ್ ವಾಲ್ ಮತ್ತು ಆರೆಂಜ್ ಫ್ರೀ ಸ್ಟೇಟ್. ೧೮೪೩ರಲ್ಲಿ ಬ್ರಿಟನ್ ನಾಟಾಲನ್ನು ವಶಪಡಿಸಿಕೊಂಡಿತು. ೧೮೫೪ರಲ್ಲಿ ಟ್ರಾನ್ಸ್ ವಾಲ್ ಮತ್ತು ಆರೆಂಜ್ ಫ್ರೀ ಸ್ಟೇಟ್‌ಗಳಿಗೆ ಸ್ವಾತಂತ್ರ್ಯವನ್ನು ನೀಡಲಾಯಿತು. ಆದರೂ ಬೊಯಿರ್ ಮತ್ತು ಬ್ರಿಟಿಷರ

ನಡುವಿನ ಅಸಮಾಧಾನ ಕೊನೆಗೊಳ್ಳಲಿಲ್ಲ. ದಕ್ಷಿಣ ಆಫ್ರಿಕಾದಲ್ಲಿ ಉದ್ಭವಿಸಿದ ಸಮಸ್ಯೆಗೆ ಪರಿಹಾರ ಕಂಡುಹಿಡಿಯಲು ಡಿಸ್ರೈಲೀ ಸರಕಾರದ ವಸಾಹತು ಕಾರ್ಯದರ್ಶಿ ಲಾರ್ಡ್ ಕಾರ್ನೇವಾರ್ನ್ ಯೋಜನೆಯೊಂದನ್ನು ರೂಪಿಸಿದ. ಇವನ ಯೋಜನೆಯೆಂದರೆ ದಕ್ಷಿಣ ಆಫ್ರಿಕಾದ ನಾಲ್ಕು ದೇಶಗಳಾದ ಕೇಪ್ ಕಾಲೋನಿ, ನೆಟಾಲ್, ಟ್ರಾನ್ಸ್‌ವಾಲ್ ಮತ್ತು ಆರೆಂಜ್ ಫ್ರೀ ಸ್ಟೇಟ್‌ಗಳನ್ನು ಒಟ್ಟುಗೂಡಿಸುವುದು. ಆದರೆ ಈ ಯೋಜನೆ ಕಾರ್ಯರೂಪಕ್ಕೆ ಬರಲಿಲ್ಲ. ಈ ಯೋಜನೆ ವಿಫಲವಾಗುವುದಕ್ಕೆ ಜುಲೂ ಜನರು ಪ್ರಮುಖ ಕಾರಣ. ಜುಲೂ ಜನರು ಪ್ರಬಲ ಸೈನ್ಯವನ್ನು ಹೊಂದಿದ್ದರು. ಅನೇಕ ತಿಂಗಳುಗಳ ಕಾಲ ನಡೆದ ಯುದ್ಧದಲ್ಲಿ ಜುಲೂ ಸೈನ್ಯ ಬ್ರಿಟಿಷರಿಗೆ ಸೋಲಬೇಕಾಯಿತು. ಜುಲೂಸ್ ಸಮರ್ಥರಾಗಿದ್ದಷ್ಟು ಸಮಯ ಬೊಯಿರ್ ಜನರು ತಟಸ್ಥರಾಗಿದ್ದರು. ೧೮೮೧ರಲ್ಲಿ ಬೊಯಿರ್ ಸೇನೆ ಮಜುಬಾ ಪರ್ವತ ಪ್ರದೇಶದಲ್ಲಿ ಬ್ರಿಟಿಷರ ಸೇನೆಯನ್ನು ಸೋಲಿಸಿತು. ಬ್ರಿಟನ್ ಬೊಯಿರ್ ಜನರು ತಟಸ್ಥರಾಗಿದ್ದರು. ೧೮೮೧ರಲ್ಲಿ ಬೊಯಿರ್ ಸೇನೆ ಮಜುಬಾ ಪರ್ವತ ಪ್ರದೇಶದಲ್ಲಿ ಬ್ರಿಟಿಷರ ಸೇನೆಯನ್ನು ಸೋಲಿಸಿತು. ಬ್ರಿಟನ್ ಬೊಯಿರ್ ಸೇನೆಯೊಡನೆ ಎರಡು ಒಪ್ಪಂದಕ್ಕೆ ಸಹಿ ಹಾಕಿತು. ಅವುಗಳೆಂದರೆ ೧೮೮೧ರ ಪ್ರಿಟೋರ್ಯ ಒಪ್ಪಂದ ಮತ್ತು ೧೮೮೪ರ ಲಂಡನ್ ಒಪ್ಪಂದ. ಈ ಒಪ್ಪಂದದ ಪ್ರಕಾರ ಬ್ರಿಟನ್ ಟ್ರಾನ್ಸ್‌ವಾಲ್‌ನ್ನು ಸ್ವಾಧೀನಪಡಿಸಿಕೊಂಡಿತು. ಇದು ದಕ್ಷಿಣ ಆಫ್ರಿಕಾದಲ್ಲಿ ಬ್ರಿಟನ್ನಿನ ಮಹತ್ವಪೂರ್ಣ ವಸಾಹತು ರಾಜ್ಯ ವಿಸ್ತರಣೆಯಾಗಿದೆ.

ದಕ್ಷಿಣ ಆಫ್ರಿಕಾದಲ್ಲಿ ಬ್ರಿಟನ್ನಿನ ವಸಾಹತು ಧೋರಣೆಯ ಕುರಿತು ಚರ್ಚಿಸುವಾಗ ಗೋಚರಿಸುವ ಪ್ರಮುಖ ಸಂಗತಿಯೆಂದರೆ, ಸಿಸಿಲ್ ಜೋನ್ ರೋಡ್ಸ್‌ನ ಮಹತ್ವಾಕಾಂಕ್ಷೆಯ ಯೋಜನೆಗಳು. ರೋಡ್ಸ್ ದಕ್ಷಿಣ ಆಫ್ರಿಕಾದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಕನಸು ಕಂಡಿದ್ದ. ೧೮೭೦ರಲ್ಲಿ ದಕ್ಷಿಣ ಆಫ್ರಿಕಾಕ್ಕೆ ಆಗಮಿಸಿದ ರೋಡ್ಸ್ ನೆಟಾಲ್ ಮತ್ತು ಕಿಂಬರ್ಲಿಯಲ್ಲಿ ಹೆಚ್ಚಿನ ಸಮಯವನ್ನು ಕಳೆದ. ಸಿಸಿಲ್ ರೋಡ್ಸ್‌ನ ಯೋಜನೆಯಂತೆ ೧೮೮೫ರಲ್ಲಿ ಬ್ರಿಟನ್ ಬೆಚ್ಚುನಾಲ್ಯಾಂಡ್‌ನ್ನು ವಶಪಡಿಸಿಕೊಂಡಿತು. ರೋಡ್ಸ್‌ನ ಪ್ರಕಾರ ಬೆಚ್ಚುನಾಲ್ಯಾಂಡ್ ದಕ್ಷಿಣ ಆಫ್ರಿಕಾದ ಸುಯೇಜ್ ಕಾಲುವೆ. ೧೮೮೬ರಲ್ಲಿ ಬಂಗಾರದ ನಿಕ್ಷೇಪದ ಕುರಿತಾಗಿ ಬೊಯಿರ್ ಮತ್ತು ಬ್ರಿಟಿಷರಿಗೆ ಮನಸ್ತಾಪ ಉಂಟಾಯಿತು. ಬ್ರಿಟನ್ ವಿಟ್‌ವಾಟರ್ಸ್‌ಲ್ಯಾಂಡ್‌ನಲ್ಲಿ ಬಂಗಾರದ ಹುಡುಕಾಟ ಪ್ರಾರಂಭಿಸಿತು. ಬೊಯಿರ್ ಜನರು ಪೌಲ್ ಕ್ರುಗೇರ್‌ನ ನೇತೃತ್ವದಲ್ಲಿ ಬ್ರಿಟಿಷರ ನೀತಿಯನ್ನು ವಿರೋಧಿಸಿದರು. ಆದರೆ ರೋಡ್ಸ್‌ನ ಸಮರ್ಥ ನೇತೃತ್ವದಲ್ಲಿ ಬ್ರಿಟನ್ ದಕ್ಷಿಣ ಆಫ್ರಿಕಾದಲ್ಲಿ ಗಣಿಗಾರಿಕೆಯನ್ನು ಪ್ರಾರಂಭಿಸಿತು. ಬಂಗಾರ ಮತ್ತು ವಜ್ರದ ಲಭಿಸುವಿಕೆಯಿಂದಾಗಿ ಬ್ರಿಟನ್ ಪ್ರಬಲ ವಸಾಹತು ಶಕ್ತಿಯಾಗಿ ದಕ್ಷಿಣ ಆಫ್ರಿಕಾದಲ್ಲಿ ಕಾರ್ಯ ನಿರ್ವಹಿಸಲು ಪ್ರಾರಂಭಿಸಿತು. ಇದಾದ ನಂತರ ರೋಡ್ಸ್ ಟ್ರಾನ್ಸ್‌ವಾಲ್‌ನ ಉತ್ತರಭಾಗದಲ್ಲಿರುವ ಪ್ರದೇಶಗಳಾದ ಮಶೋನಾಲ್ಯಾಂಡ್ ಮತ್ತು ಮೆಟಾಬಿಲಿಸ್ಯಾಂಡ್ ಗಳತ್ತ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿದ. ಸ್ಥಳೀಯ ನಿವಾಸಿಗಳು

ಅವರ ಮುಖಂಡ ಲೊಬಿನ್ ಗುಲಾನ ನೇತೃತ್ವದಲ್ಲಿ ಬ್ರಿಟನ್‌ನ ನೀತಿಯನ್ನು ವಿರೋಧಿಸಲು ಪ್ರಾರಂಭಿಸಿದರು. ಮಶೋನಾಲ್ಯಾಂಡ್ ಮತ್ತು ಮೆಟಾಬಿಲಿಲ್ಯಾಂಡ್‌ಗಳಲ್ಲಿ ಅಪಾರ ಚಿನ್ನದ ನಿಕ್ಷೇಪಗಳಿದ್ದವು. ಲೊಬಿನ್‌ಗುಲಾ ಪೋರ್ಚುಗೀಸ್, ಜರ್ಮನ್, ಬ್ರಿಟನ್ ಮತ್ತು ಬೊಯಿರ್ ಜನರ ಪ್ರದೇಶವನ್ನು ಈ ಪ್ರದೇಶಗಳಿಗೆ ನಿಷೇಧಿಸಿದ. ಆದರೂ ಬ್ರಿಟನ್ನಿಗೆ ಕೆಲವೊಂದು ರಿಯಾಯಿತಿಗಳಿದ್ದವು. ಏಕೆಂದರೆ ಲೊಬಿನ್ ಗುಲಾ ಬ್ರಿಟನ್ನಿನ ಬಗ್ಗೆ ತಪ್ಪು ತಿಳುವಳಿಕೆಯನ್ನು ಹೊಂದಿದ್ದ. ಅದೇನೆಂದರೆ ಬ್ರಿಟನ್ನಿನ ಉದ್ದೇಶ ಖನಿಜ ಸಂಪನ್ಮೂಲಗಳೇ ಹೊರತು ಭೂಮಿಯನ್ನು ಆಕ್ರಮಿಸುವುದಿಲ್ಲ ಎನ್ನುವ ನಂಬಿಕೆ. ರೋಡ್ಸ್ ಈ ಪ್ರದೇಶಗಳಿಗೆ ರೊಡೇಶಿಯಾ ಎಂಬುದಾಗಿ ನಾಮಕರಣ ಮಾಡಿದ. ಆದರೆ ಬೊಯಿರ್ ಜನರ ವೈರುತ್ವವಿದ್ದುದರಿಂದಾಗಿ ರೊಡೇಶಿಯಾದ ವ್ಯಾಪಾರ ಹೆಚ್ಚು ಲಾಭದಾಯಕವಾಗಿರಲಿಲ್ಲ. ೧೮೮೭ರಲ್ಲಿ ಬೊಯಿರ್ ಮತ್ತು ಲೊಬಿನ್‌ಗುಲಾನ ನಡುವೆ ಕಲಹ ಏರ್ಪಟ್ಟಿತು. ಅನಿವಾರ್ಯವಾಗಿ ಲೊಬಿನ್‌ಗುಲಾ ಬ್ರಿಟಿಷರ ಸಹಾಯವನ್ನು ಯಾಚಿಸಬೇಕಾಯಿತು. ಇವರುಗಳ ನಡುವೆ ಒಡಂಬಡಿಕೆ ಏರ್ಪಟ್ಟಿತು. ಇದನ್ನು ರುಡ್ಡ್ ರಿಯಾಯಿತಿ ಎಂಬುದಾಗಿ ಕರೆಯಲಾಗಿದೆ. ಇದರ ಪ್ರಕಾರ ಬ್ರಿಟನ್ನಿಗೆ ಖನಿಜಗಳ ಎಲ್ಲಾ ಹಕ್ಕುಗಳನ್ನೂ ಬಿಟ್ಟುಕೊಡಲಾಯಿತು.

ಸಿಸಿಲ್ ರೋಡ್ಸ್ ೧೮೯೦ರಲ್ಲಿ ಕೇಪ್‌ನ ಪ್ರಧಾನಮಂತ್ರಿಯಾಗಿ ನೇಮಕಗೊಂಡ. ಆ ಹೊತ್ತಿಗಾಗಲೇ ರೋಡ್ಸ್‌ಗೆ ಬ್ರಿಟನ್ನಿನಲ್ಲಿ ಅನೇಕ ವಿರೋಧಿ ಬಣಗಳು ಹುಟ್ಟಿಕೊಂಡಿದ್ದವು ಮತ್ತು ದಕ್ಷಿಣ ಆಫ್ರಿಕಾದಲ್ಲಿ ರೋಡ್ಸ್‌ನ ಅಸ್ತಿತ್ವ ಬೊಯಿರ್ ಜನಾಂಗದ ರಾಜಕೀಯವನ್ನು ಅವಲಂಬಿಸಿಕೊಂಡಿತ್ತು. ಬ್ರಿಟನ್ನಿನ ಅನೇಕ ವ್ಯಾಪಾರಿ ಕಂಪೆನಿಗಳು ಲಾಭಕ್ಕಾಗಿ ಪರಸ್ಪರ ವೈರತ್ವವನ್ನು ಬೆಳೆಸಿಕೊಂಡಿದ್ದವು. ರೋಡ್ಸ್ ತನ್ನದೇ ಆದ ಚಾರ್ಟರ್ಡ್ ಕಂಪೆನಿಯನ್ನು ಹೊಂದಿದ್ದ. ಬ್ರಿಟನ್ನಿನ ಇತರ ವ್ಯಾಪಾರಿ ಕಂಪೆನಿಗಳು ರೋಡ್ಸ್‌ನ ಚಾರ್ಟರ್ಡ್ ಕಂಪೆನಿಯನ್ನು ಸಂಶಯದಿಂದಲೇ ನೋಡುತ್ತಿದ್ದವು. ಇದರಿಂದಾಗಿ ರೋಡ್ಸ್ ತನ್ನ ಚಾರ್ಟರ್ಡ್ ಕಂಪೆನಿ ಮತ್ತು ರೊಡೇಶ್ಯಾದ ಬಗ್ಗೆ ಭಯಪಡಬೇಕಾಯಿತು. ಬ್ರಿಟನ್ ಸರಕಾರ ಜೋಸೆಫ್ ಚೇಂಬರ್ಲಿನ್ ಎಂಬಾತನನ್ನು ದಕ್ಷಿಣ ಆಫ್ರಿಕಾಕ್ಕೆ ವಿದೇಶಾಂಗ ಕಾರ್ಯದರ್ಶಿಯನ್ನಾಗಿ ನೇಮಿಸಿತು. ಬದಲಾದ ರಾಜಕೀಯ ಪರಿಸ್ಥಿತಿಯಿಂದಾಗಿ ರೋಡ್ಸ್ ಕೇಪ್‌ನ ಪ್ರಧಾನಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಬೇಕಾಯಿತು. ಇದೇ ಸಂದರ್ಭದಲ್ಲಿ ಯುರೋಪಿನ ಇತರ ರಾಷ್ಟ್ರಗಳೂ ದಕ್ಷಿಣ ಆಫ್ರಿಕಾದಲ್ಲಿನ ಬ್ರಿಟನ್ನಿನ ಆಸಕ್ತಿಯನ್ನು ಗಂಭೀರವಾಗಿ ಚಿಂತಿಸಲು ಪ್ರಾರಂಭಿಸಿದವು. ಬೊಯಿರ್‌ನ ಮುಖಂಡ ಕ್ರುಗೇರ್ ಜರ್ಮನಿಯ ಎರಡನೆಯ ಕೈಸರ್ ವಿಲ್ಯಮ್‌ನ ಸಹಾಯದಿಂದ ಬ್ರಿಟನ್ನಿನ ಸಾಮ್ರಾಜ್ಯಶಾಹಿ ನೀತಿಯನ್ನು ಖಂಡಿಸಿ ೧೮೯೯ರಲ್ಲಿ ಯುದ್ಧ ಪ್ರಾರಂಭಿಸಿದ. ಬೊಯಿರ್ ಗಣರಾಜ್ಯವನ್ನು ಸ್ಥಾಪಿಸುವುದೇ ಕ್ರುಗೇರ್‌ನ ಮುಖ್ಯ ಉದ್ದೇಶವಾಗಿತ್ತು. ೧೮೯೯ರಲ್ಲಿ ಪ್ರಾರಂಭಗೊಂಡ ಆಂಗ್ಲೋ-ಬೋಯಿರ್ ಯುದ್ಧ ೧೯೦೨ರಲ್ಲಿ ಕೊನೆಗೊಂಡಿತು. ಬೊಯಿರ್ ಸೈನ್ಯ ಗೆರಿಲ್ಲಾ

ಯುದ್ಧ ತಂತ್ರವನ್ನು ಅನುಸರಿಸಿದ್ದರಿಂದಾಗಿ ಬ್ರಿಟನ್ ಅನೇಕ ರೀತಿಯ ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಗಿ ಬಂತು. ೧೯೦೨ರಲ್ಲಿ ವೆರೀನಿಜಿಂಗ್ ಒಪ್ಪಂದದೊಡನೆ ಯುದ್ಧ ಕೊನೆಗೊಂಡಿತು. ಬ್ರಿಟನ್ ಯುದ್ಧದಲ್ಲಿ ಜಯಗಳಿಸಿದರೂ ಯುರೋಪಿನಾದ್ಯಂತ ಬ್ರಿಟನ್ ವಿರೋಧಿ ಭಾವನೆಗಳು ಪ್ರಾರಂಭವಾದ್ದರಿಂದ ದಕ್ಷಿಣ ಆಫ್ರಿಕಾಕ್ಕೆ ಜವಾಬುದಾರಿಕೆಯ ಸರಕಾರವನ್ನು ನೀಡಲಾಯಿತು. ಆರೆಂಜ್ ಫ್ರೀ ಸ್ಟೇಟ್ ಮತ್ತು ಟ್ರಾನ್ಸ್‌ವಾಲ್‌ಗಳನ್ನು ಬೋಯಿರ್ ಜನರಿಗೆ ಬಿಟ್ಟುಕೊಡಲಾಯಿತು. ಇವು ೧೯೦೭ರಲ್ಲಿ ನೆಟಾಲ್ ಮತ್ತು ಕೇಪ್ ಕಾಲೋನಿಯೊಡನೆ ವಿಲೀನಗೊಂಡು ಸಂಯುಕ್ತ ಒಕ್ಕೂಟವೊಂದನ್ನು ರಚಿಸಿಕೊಂಡವು. ಬ್ರಿಟನ್ ದಕ್ಷಿಣ ಆಫ್ರಿಕಾದಲ್ಲಿ ನಡೆಸಿದ ಯುದ್ಧ ಯುರೋಪಿನ ಪ್ರಜ್ಞಾವಂತ ಜನವರ್ಗಕ್ಕೆ ಚರ್ಚೆಯ ವಸ್ತುವಾಯಿತು. ಇದು ನವಸಾಮ್ರಾಜ್ಯಶಾಹಿ ನೀತಿಯಾಗಿದ್ದು ಬ್ರಿಟನ್ನಿನ ಉದಾರವಾದಿ ಜನಸಮೂಹ ಲೋಯಿಲ್ಡ್ ಜ್ಯೋರ್ಜ್‌ನ ನೇತೃತ್ವದಲ್ಲಿ ವಿರೋಧಿಸಿತು. ಇವರು ಬೋಯಿರ್ ಗಣರಾಜ್ಯಕ್ಕೆ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಬ್ರಿಟನ್ನಿನ ದಕ್ಷಿಣ ಆಫ್ರಿಕಾದ ಸಾಮ್ರಾಜ್ಯದ ಬಗ್ಗೆ ಕನಸು ಕಂಡಿದ್ದ ರೋಡ್ಸ್ ೧೯೦೨ರಲ್ಲಿ ಅಸುನೀಗಿದ. ಇವನ ಯೋಜನೆಗಳು ಬ್ರಿಟನ್ನಿನ ವಸಾಹತುಶಾಹಿ ನೀತಿಗೆ ಪೂರಕವಾಗಿದ್ದರೂ ಅನೇಕ ವಿರೋಧಾಭಾಸಗಳಿಂದ ಕೂಡಿತ್ತು. ಆದರೂ ರೋಡ್ಸ್ ಹುಟ್ಟುಹಾಕಿದ ವ್ಯಾಪಾರಿ ಸಂಸ್ಥೆ ೧೯೨೩ರವರೆಗೆ ದಕ್ಷಿಣ ಆಫ್ರಿಕಾದಲ್ಲಿ ಕಾರ್ಯ ನಿರ್ವಹಿಸುತ್ತಿತ್ತು.

### ಫಾಶೋಡಾ ಘಟನೆ

ಆಫ್ರಿಕಾ ಖಂಡವನ್ನು ಯುರೋಪಿನ ರಾಷ್ಟ್ರಗಳು ವಿಂಗಡಿಸುವ ಸಂದರ್ಭದಲ್ಲಿ ಉಂಟಾದ ಮತ್ತೊಂದು ಸಮಸ್ಯೆಯೆಂದರೆ ಫಾಶೋಡಾ ಘಟನೆ. ಇದೊಂದು ಅಂತಾರಾಷ್ಟ್ರೀಯ ಸಮಸ್ಯೆಯಾಗಿದ್ದು ಪ್ರತಿಷ್ಠೆಯ ಪ್ರಶ್ನೆಯೂ ಆಗಿತ್ತು. ಯುರೋಪಿಯನ್ನರು ಈಜಿಪ್ಟ್‌ಗೆ ಆಗಮಿಸಿದಾಗಲೇ ಸುಡಾನ್‌ನಲ್ಲಿ ಸಮಸ್ಯೆ ತಲೆದೋರಿತ್ತು. ಈ ಕಿತ್ತಾಟದಲ್ಲಿ ಬ್ರಿಟನ್ ಮತ್ತು ಫ್ರಾನ್ಸ್ ಭಾಗವಹಿಸಿದ್ದವು. ಬ್ರಿಟನ್ ೧೮೮೫ರ ನಂತರವೂ ಈಜಿಪ್ಟ್‌ನ ಮೇಲೆ ಪರೋಕ್ಷ ವಾಗಿ ಹತೋಟಿ ಸಾಧಿಸಿತ್ತು. ಬ್ರಿಟನ್ನಿನಂತೆ ಫ್ರಾನ್ಸ್‌ಗೆ ಆಫ್ರಿಕಾದಲ್ಲಿ ಭದ್ರವಾದ ನೆಲೆ ಇರಲಿಲ್ಲ. ನೈಲ್ ನದಿಯ ಮೇಲಿನ ಭಾಗದಲ್ಲಿ ಇತರ ರಾಷ್ಟ್ರಗಳು ವ್ಯವಹರಿಸುವುದನ್ನು ಬ್ರಿಟನ್ ಸಂಪೂರ್ಣವಾಗಿ ವಿರೋಧಿಸಿತು. ಆದರೆ ಫ್ರಾನ್ಸ್ ಮೇಜರ್ ಮರ್ಚೆಂಡ್‌ನ ನೇತೃತ್ವದಲ್ಲಿ ಸೆನೆಗಲ್‌ನಿಂದ ಕೆಂಪು ಸಮುದ್ರದವರೆಗೆ ಫ್ರೆಂಚ್ ವ್ಯಾಪಾರಿ ಮಾರ್ಗವನ್ನು ಹೊಂದುವ ಯೋಜನೆ ಹಾಕಿತು. ಅದೇ ರೀತಿ ಬ್ರಿಟನ್ ಕೇಪ್ ಗುಡ್‌ಹೋಪ್‌ನಿಂದ ಕೈರೋದವರೆಗೆ ಬ್ರಿಟನ್ನಿನ ವ್ಯಾಪಾರದ ಮಾರ್ಗವನ್ನು ಹೊಂದುವ ಕನಸು ಕಂಡಿತು. ಫ್ರೆಂಚರ ಮರ್ಚೆಂಡ್ ೧೮೯೬ರಿಂದ ೧೮೭೮ರ ಮಧ್ಯೆ ಕಾಂಗೋದಿಂದ ಫಾರೋಡಾಕ್ಕೆ ಸಂಚರಿಸಿದ. ಇದು ಬ್ರಿಟಿಷರ ಉದ್ದೇಶಕ್ಕೆ ವಿರುದ್ಧವಾಗಿತ್ತು. ಏಕೆಂದರೆ ಫಾಶೋಡಾ ನೈಲ್ ನದಿಯ ಮೇಲಿನ ಭಾಗದ ಖಾರ್ಟೋಂಮ್‌ನ ಹತ್ತಿರವಿರುವ ಪ್ರದೇಶ. ಇದು ಬ್ರಿಟಿಷರ

ಅಧೀನದಲ್ಲಿತ್ತು. ಬ್ರಿಟನ್ ಸುಡಾನನ್ನು ತನ್ನ ಕಕ್ಷೆಗೆ ತರುವುದಕ್ಕೋಸ್ಕರ ಜನರಲ್ ಕಿಚನೀರ್‌ನನ್ನು ನೇಮಿಸಿತು.

ಕಿಚನೀರ್ ೧೮೯೬ರಲ್ಲಿ ಸುಡಾನ್‌ಗೆ ರೈಲ್ವೇ ಮಾರ್ಗ ಕಲ್ಪಿಸುವ ಯೋಜನೆ ಹಾಕಿ ವಿಫಲನಾದ. ಆದರೆ ೧೮೯೮ರಲ್ಲಿ ಬ್ರಿಟನ್ ಸುಡಾನಿನ ಅಧಿಕಾರವನ್ನು ಪಡೆಯುವಲ್ಲಿ ಯಶಸ್ವಿಯಾಯಿತು. ಆದರೂ ಈಜಿಪ್ಟ್ ಸರಕಾರದ ಹೆಸರಿನಲ್ಲಿಯೇ ಆಡಳಿತ ನಡೆಸಬೇಕೆಂದು ಕಿಚನೀರ್‌ಗೆ ಬ್ರಿಟನ್ ಆದೇಶ ನೀಡಿತ್ತು. ಫ್ರಾನ್ಸ್ ಮರ್ಚೆಂಡ್‌ನ ನೇತೃತ್ವದಲ್ಲಿ ಫಾಶೋಡಾಕ್ಕೆ ಸೈನ್ಯವನ್ನು ಕಳುಹಿಸಿಕೊಟ್ಟಿತ್ತು. ಆದರೆ ಎರಡೂ ಸರಕಾರ ರಾಜತಾಂತ್ರಿಕ ನೀತಿಯನ್ನು ಅನುಸರಿಸಿದವು. ಬ್ರಿಟನ್ ಯುದ್ಧಕ್ಕೆ ಸಿದ್ಧವಾಗಿದ್ದರೂ ಫ್ರಾನ್ಸ್ ಒಡಂಬಡಿಕೆಯನ್ನೇ ಮುಂದಿಟ್ಟಿತು. ಏಕೆಂದರೆ ಯುರೋಪಿನಲ್ಲಿ ಜರ್ಮನಿಯ ವಿರುದ್ಧ ತನ್ನ ಸ್ಥಾನವನ್ನು ಭದ್ರವಾಗಿಸಿಕೊಳ್ಳುವುದು ಫ್ರಾನ್ಸ್‌ಗೆ ಅಂದು ಅನಿವಾರ್ಯವಾಗಿತ್ತು. ೧೮೯೯ರಲ್ಲಿ ಫ್ರಾನ್ಸ್ ಬ್ರಿಟನ್‌ನೊಡನೆ ಒಪ್ಪಂದ ಮಾಡಿಕೊಂಡು ಸುಡಾನನ್ನು ಬ್ರಿಟನ್ನಿಗೆ ಬಿಟ್ಟುಕೊಟ್ಟಿತು. ಇದರಿಂದಾಗಿ ಸುಡಾನ್ ಬ್ರಿಟನ್ನಿನ ಅಧೀನಕ್ಕೆ ಬಂತು. ಸುಡಾನ್‌ನ ಸ್ವಾಧೀನದೊಡನೆ ಆಫ್ರಿಕಾದ ವಿಭಜನೆ ಹೆಚ್ಚು ಕಡಿಮೆ ಮುಗಿದಂತೆಯೇ ಸರಿ. ಆದರೂ ಫ್ರಾನ್ಸ್ ಈಜಿಪ್ಟ್‌ನಲ್ಲಿ ತನಗಾದ ಅನ್ಯಾಯವನ್ನು ಸರಿಪಡಿಸಲು ಮೊರಾಕ್ಕೋದ ಮೇಲೆ ದೃಷ್ಟಿ ಹಾಯಿಸಿತು. ಈ ಕುರಿತು ೧೯೦೪ರಲ್ಲಿ ಆಂಗ್ಲೋ ಫ್ರೆಂಚ್ ಒಪ್ಪಂದಗಳು ಏರ್ಪಟ್ಟವು. ಈ ಒಪ್ಪಂದದ ಪ್ರಕಾರ ಬ್ರಿಟನ್ ಈಜಿಪ್ಟ್‌ನಲ್ಲಿ ಸ್ವತಂತ್ರವಾಗಿ ವ್ಯವಹರಿಸಿದರೆ ಫ್ರಾನ್ಸ್ ಮೊರಾಕ್ಕೋದಲ್ಲಿ ಸ್ವತಂತ್ರವಾಗಿ ವ್ಯವಹರಿಸಬಹುದಾಗಿತ್ತು. ಈ ಒಪ್ಪಂದದಿಂದಾಗಿ ಬ್ರಿಟನ್ ಮತ್ತು ಫ್ರಾನ್ಸ್‌ನ ಸಂಬಂಧ ಉತ್ತಮಗೊಂಡಿತು. ೧೯೧೪ರಲ್ಲಿ ಪ್ರಾರಂಭಗೊಂಡ ಪ್ರಥಮ ಜಾಗತಿಕ ಯುದ್ಧದಲ್ಲಿ ಬ್ರಿಟನ್, ಫ್ರಾನ್ಸ್ ಮತ್ತು ರಷ್ಯಾ ಮೈತ್ರಿಯನ್ನು ಸಂಪಾದಿಸಿಕೊಂಡು ಆಸ್ಟ್ರಿಯಾ ಮತ್ತು ಜರ್ಮನಿಯ ವಿರುದ್ಧ ಯುದ್ಧ ಸಾರಿದವು. ಜರ್ಮನಿಯು ಮೊರಾಕ್ಕೋದ ಮೇಲೆ ಆಸಕ್ತಿಯನ್ನು ಹೊಂದಿರುವುದೂ ಯುದ್ಧಕ್ಕೆ ಒಂದು ಕಾರಣವಾಯಿತು. ಅಂದರೆ ಪ್ರಥಮ ಜಾಗತಿಕ ಯುದ್ಧಕ್ಕೆ ಯುರೋಪಿನ ರಾಷ್ಟ್ರಗಳ ಆಫ್ರಿಕಾದ ರಾಜಕೀಯವೂ ಕಾರಣವಾಯಿತು.

ಈ ಮೇಲೆ ವಿವರಿಸಿದಂತೆ ಆಫ್ರಿಕಾ ಖಂಡವನ್ನು ಯುರೋಪಿನ ರಾಷ್ಟ್ರಗಳು ತಮ್ಮ ಹಿತಾಸಕ್ತಿಗಳಿಗನುಗುಣವಾಗಿ ವಿಂಗಡಿಸಿಕೊಂಡವು. ಆಫ್ರಿಕಾ ಖಂಡವನ್ನು ಕೇಕಕಂಡಂತೆ ಯುರೋಪಿನ ರಾಷ್ಟ್ರಗಳು ವಿಭಜಿಸಿಕೊಂಡವು. ಇವುಗಳ ವಿವರಗಳನ್ನು ಈಗಾಗಲೇ ಚರ್ಚಿಸಲಾಗಿದೆ. ಬ್ರಿಟನ್ ತನ್ನ ಸ್ವಾಧೀನಕ್ಕೆ ತಂದ ಪ್ರದೇಶಗಳೆಂದರೆ ಈಜಿಪ್ಟ್, ಸುಡಾನ್, ಗ್ಯಾಂಬಿಯಾ, ಗೋಲ್ಡ್‌ಕೋಸ್ಟ್, ಕೇಪ್ ಗುಡ್‌ಹೋಪ್, ಬ್ರಿಟಿಷ್ ಪೂರ್ವ ಆಫ್ರಿಕಾ, ಸೊಮಾಲಿಲ್ಯಾಂಡ್, ನೈಜೀರಿಯಾ, ಉತ್ತರ ಮತ್ತು ದಕ್ಷಿಣ ರೊಡೇಶಿಯಾ, ಉಗಾಂಡ, ಬೆಚ್ಚುನಾಲ್ಯಾಂಡ್, ನ್ಯಾಸಾಲ್ಯಾಂಡ್, ಸೀರಾ ಲಿಯೋನೆ ಮುಂತಾದ ಪ್ರದೇಶಗಳು. ಫ್ರಾನ್ಸ್ ಮುಖ್ಯವಾಗಿ ಮೊರಾಕ್ಕೊ, ಟ್ಯೂನಿಸ್, ಅಲ್ಜೀರಿಯಾ ಫ್ರೆಂಚ್ ಉತ್ತರ ಮತ್ತು ಪಶ್ಚಿಮ ಆಫ್ರಿಕಾ, ಗೇಬನ್, ಸಹಾರಾ, ಮಡಗಾಸ್ಕರ್, ಸೆನೆಗಲ್, ಐವರಿ

ಕೋಸ್ಟ್, ಕಾಂಗೋ ಮುಂತಾದ ಪ್ರದೇಶಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿಕೊಂಡಿತು. ನೈರುತ್ಯ ಆಫ್ರಿಕಾ, ಆಗ್ನೇಯ ಆಫ್ರಿಕಾ, ಕೇಮ್‌ರೂನ್ ಮತ್ತು ಟೊಗೋಲ್ಯಾಂಡ್ ಜರ್ಮನಿಯ ಪಾಲಾದವು. ಸ್ಪೈನ್ ವಾಯುವ್ಯ ಆಫ್ರಿಕಾದ ಕೆಲವು ಪ್ರದೇಶಗಳು ಮತ್ತು ಜಿಬ್ರಾಲ್ಟರನ್ನು ವಶಪಡಿಸಿಕೊಂಡಿತು. ಇಟಲಿ ದೇಶವು ತಡವಾಗಿ ಆಗಮಿಸಿದರೂ ಸೊಮಾಲಿಲ್ಯಾಂಡ್ ಇರಿಟ್ರ್ಯ, ನೈಲ್ ಪ್ರದೇಶ, ಟ್ರಿಪೋಲಿ, ಸಿರಿನೈಕಾ, ಅಬಿಸಿನೀಯಾ ಮತ್ತು ಲಿಬಿಯಾದ ಮೇಲಿನ ಹಿಡಿತವನ್ನು ಸಾಧಿಸಿತ್ತು. ಪೋರ್ಚುಗೀಸರು ಅಂಗೋಲಾ, ಗಿನಿಯಾ, ಮೊಜಾಂಬಿಕ್ ಮತ್ತು ಇನ್ನಿತರ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದರು. ಬೆಲ್ಜಿಯಂ ಕಾಂಗೋದ ಮೇಲೆ ಆಸಕ್ತಿಯನ್ನು ಹೊಂದಿತ್ತು. ಆದರೆ ಈ ಎಲ್ಲಾ ರಾಷ್ಟ್ರಗಳ ಗಡಿರೇಖೆಗಳು ಬದಲಾಗುತ್ತಲೇ ಇದ್ದವು. ಸಾಮ್ರಾಜ್ಯಶಾಹಿ ವ್ಯವಸ್ಥೆಯಲ್ಲಿ ಇದು ಅನಿವಾರ್ಯವೂ ಆಗಿತ್ತು.

ಸಾಮ್ರಾಜ್ಯಶಾಹಿಯ ದೀರ್ಘ ಚರಿತ್ರೆಯಲ್ಲಿ ಆಫ್ರಿಕಾದ ವಿಭಜನೆ ಪ್ರಮುಖ ಅಧ್ಯಾಯ ವಾಗುತ್ತದೆ. ಆಫ್ರಿಕಾದ ವಿಭಜನೆಯಲ್ಲಿ ಸಾಮ್ರಾಜ್ಯಶಾಹಿಯ ಪಾತ್ರದ ಕುರಿತು ಜೆ.ಎ.ಹೋಬ್ಸನ್, ಲೆನಿನ್, ರಾಬಿನ್‌ಸನ್ ಮತ್ತು ಗೆಲಗರ್ ಮುಂತಾದ ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ಹೋಬ್ಸನ್ ಅವರ ಪ್ರಕಾರ

> ಹತ್ತೊಂಬತ್ತನೇ ಶತಮಾನದ ಕೊನೆಯ ಅವಧಿಯಲ್ಲಿ ಯುರೋಪಿನ ವಸಾಹತು ಸಾಮ್ರಾಜ್ಯ ಹೆಚ್ಚಿನ ಆರ್ಥಿಕ ಲಾಭವನ್ನು ಗಳಿಸಲು ಸಾಧ್ಯ ವಾಗಲಿಲ್ಲ. ಏಕೆಂದರೆ ಅಲ್ಲಿ ರಾಷ್ಟ್ರೀಯ ಆಸಕ್ತಿಯ ಬದಲು ಸೀಮಿತ ಗುಂಪುಗಳ ಆಸಕ್ತಿಯೇ ಅಂತಿಮವಾಗಿತ್ತು. ಈ ಅಂಶವನ್ನು ನಾವು ಆಫ್ರಿಕಾದ ವಿಭಜನೆಯಲ್ಲಿ ಕಾಣಲು ಸಾಧ್ಯ. ಲೆನಿನ್ ಪ್ರಕಾರ ಆಫ್ರಿಕಾದ ವಿಭಜನೆಯಲ್ಲಿ ಪ್ರಮುಖ ಪಾತ್ರ ವಹಿಸಿರುವುದು ಬಂಡಾವಳ-ಬಂಡವಾಳಶಾಹಿಯ ಅತ್ಯುನ್ನತ ಮಟ್ಟವೇ ಸಾಮ್ರಾಜ್ಯಶಾಹಿ ವ್ಯವಸ್ಥೆ.

ರೋಬಿನ್ ಸನ್ ಮತ್ತು ಗೆಲಗರ್ ಆಫ್ರಿಕಾದ ವಿಭಜನೆಯನ್ನು ಪೌರ್ವಾತ್ಯ ಪ್ರಶ್ನೆಯ ಮುಂದುವರಿಕೆ ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ಸಾಮ್ರಾಜ್ಯಶಾಹಿ ವ್ಯವಸ್ಥೆ ಆಫ್ರಿಕಾದಲ್ಲಿ ಗಟ್ಟಿಯಾಗಿ ನೆಲೆಯಾಗಲು ಇನ್ನೊಂದು ಕಾರಣ ಆಫ್ರಿಕಾದಲ್ಲಿ ಅಸ್ತಿತ್ವಕ್ಕೆ ಬರುತ್ತಿದ್ದ ಅನೇಕ ಇಸ್ಲಾಂ ಸಂಘಟನೆಗಳನ್ನು ವಿರೋಧಿಸುವುದೂ ಆಗಿತ್ತು ಎನ್ನುವ ವಾದವೂ ಇದೆ. ಆಫ್ರಿಕಾದ ವಿಭಜನೆಯಲ್ಲಿ ಯುರೋಪಿಯನ್ನರ ಪಾತ್ರದ ಕುರಿತು ವಿವೇಚಿಸುವಾಗ ಈ ಅಂಶವೂ ಮುಖ್ಯವೆನಿಸುತ್ತದೆ. ಯುರೋಪಿನ ರಾಷ್ಟ್ರಗಳ ನಡುವಿನ ಸ್ಪರ್ಧೆ ಮಿಲಿಟರಿ ಹಸ್ತಕ್ಷೇಪ ಮಾತ್ರವಾಗಿರದೆ ಹಳೆಯ ಮತ್ತು ಹೊಸ ಪ್ರದೇಶಗಳ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸುವ ಉದ್ದೇಶದಿಂದ ಪ್ರಾರಂಭಗೊಂಡ ರಾಜಕೀಯ ಮತ್ತು ಆರ್ಥಿಕ ಹಸ್ತಕ್ಷೇಪವೂ ಆಗಿದೆ. ಆದರೆ ಆಫ್ರಿಕಾದ ವಿವಿಧ ಜನಾಂಗಗಳು ಪರಸ್ಪರ ಸ್ಪರ್ಧೆ, ಕಿತ್ತಾಟಗಳಲ್ಲಿ ತೊಡಗಿರುವ ಸಾಮ್ರಾಜ್ಯವಾದೀ ಶಕ್ತಿಗಳ ಬೆಳವಣಿಗೆಯನ್ನು ತಡೆಗಟ್ಟುವ ಸಾಮರ್ಥ್ಯವನ್ನು ಹೊಂದಿರಲಿಲ್ಲ.

ಯೂರೋಪಿನ ರಾಷ್ಟ್ರಗಳ ಯಜಮಾನಿಕೆಯಿಂದಾಗಿ ಆಫ್ರಿಕಾದ ದೇಶಗಳ ಶ್ರೀಮಂತ ಸಂಸ್ಕೃತಿ ಮತ್ತು ಇತಿಹಾಸ ಯುರೋಪ್ ಕೇಂದ್ರಿತ ಅಧ್ಯಯನಕ್ಕೆ ಒಂದು ವಸ್ತುವಾಗಿ ಮಾತ್ರ ಪರಿಗಣಿಸಲ್ಪಟ್ಟಿತು. ಒಟ್ಟಾರೆಯಾಗಿ ಆಫ್ರಿಕಾ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿದೇಶಿ ರಾಷ್ಟ್ರಗಳ ಸಾಮ್ರಾಜ್ಯವಾದದ ಆಕ್ರಮಣಕಾರಿ ಉದ್ದೇಶವನ್ನು ಈಡೇರಿಸುವ ಸಾಧನವಾಗಿ ಪರಿವರ್ತನೆ ಹೊಂದಲು ಪ್ರಮುಖ ಕಾರಣ, ಯುರೋಪಿನ ರಾಷ್ಟ್ರಗಳ ಸಾಮ್ರಾಜ್ಯವಾದದ ಆಕ್ರಮಣಕಾರಿ ಸ್ವಭಾವ. ಆದರೆ ಈ ಬೆಳವಣಿಗೆಯೇ ಇಪ್ಪತ್ತನೆಯ ಶತಮಾನದ ಪ್ರಥಮಾರ್ಧದಲ್ಲಿ ಆಫ್ರಿಕಾದಲ್ಲಿ ರಾಷ್ಟ್ರೀಯ ವಿಮೋಚನಾ ಚಳುವಳಿ ಪ್ರಾರಂಭವಾಗುವಂತೆ ಮಾಡಿತು.

**ಪರಾಮರ್ಶನ ಗ್ರಂಥಗಳು**


೧. ಆಲಿವರ್, ಆರ್ ಮತ್ತು ಆಲಿವರ್ ಸಿ.(ಸಂ), ೧೯೬೫. **ಆಫ್ರಿಕಾ ಇನ್ ದ ಡೇಸ್ ಆಫ್ ಎಕ್ಸ್ ಪ್ಲೋರೇಷನ್ ಪ್ರಿಂಟ್ಯಸ್ ಹಾಲ್, ಸ್ಪೆಕ್ಟ್ರಮ್ ಬುಕ್ಸ್.**

೨. ಬೇಸಿಲ್ ಡೇವಿಡ್ಸನ್, ೧೯೭೦. **ಓಲ್ಡ್ ಆಫ್ರಿಕಾ ರಿಡಿಸ್ಕವರ್ಡ್**, ಲಾಂಗ್ ಮನ್.

೩. ಜೋನ್ ಫ್ಲಿಂಟ್(ಸಂ), ೧೯೭೫. **ದ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಆಫ್ರಿಕಾ**, ಲಂಡನ್: ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್.

೪. ಚೇಂಬರ್ಲಿನ್ ಎಂ.ಇ., ೧೯೭೪. **ದ ಸ್ಕ್ರಾಂಬಲ್ ಫಾರ್ ಆಫ್ರಿಕಾ**, ಇಂಗ್ಲೆಂಡ್: ಲಾಂಗ್‌ಮೇನ್ ಗ್ರೂಪ್ ಲಿಮಿಟೆಡ್.

೫. ಆಲಿವರ್ ಆರ್ ಮತ್ತು ಅಟೆಮೋರ್ ಎ., ೧೯೬೭. **ಆಫ್ರಿಕಾ ಸಿನ್ಸ್ ೧೮೦೦**, ಲಂಡನ್: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.

೬. ಲಿಮೇ, ಜಿ. ಹೆಚ್., ೧೯೬೫. **ಬ್ರಿಟಿಷ್ ಸುಪ್ರಿಮೆಸೀ ಇನ್ ಸೌತ್ ಆಫ್ರಿಕಾ, ೧೮೯೯-೧೯೦೭**, ಆಕ್ಸ್‌ಫರ್ಡ್: ಕ್ಲೇರೆನ್‌ಡನ್ ಪ್ರೆಸ್.

೭. ಹೋಬ್ಸನ್ ಜೆ.ಎ., ೧೯೩೮. **ಇಂಪೀರಿಯಲಿಸಂ: ಎ ಸ್ಟಡಿ**, ಲಂಡನ್: ಆಲೆನ್ ಮತ್ತು ಅನ್‌ವಿನ್.

೬

# ವಸಾಹತುಶಾಹಿತ್ವ ಮತ್ತು ರಾಷ್ಟ್ರೀಯ ಚಳವಳಿ

**ಕೆ. ಮೋಹನ್‌ಕೃಷ್ಣ ರೈ**

ಆಫ್ರಿಕಾದಲ್ಲಿ ಬಂಡವಾಳ ಹೂಡಿಕೆಯ ಅವಕಾಶವಿರುವ ಪ್ರದೇಶಗಳಲ್ಲಿ ನಿಯಂತ್ರಣ ಸಾಧಿಸಲು ಮತ್ತು ಅವುಗಳ ಏಕಸ್ವಾಮ್ಯಕ್ಕಾಗಿ ಯುರೋಪಿನ ಬಲಿಷ್ಠ ದೇಶಗಳು ಸ್ಪರ್ಧೆ ನಡೆಸಿದವು. ಈ ಅಂಶ ಸಾಮ್ರಾಜ್ಯವಾದದ ಗುಣಲಕ್ಷಣಗಳಲ್ಲಿ ಒಂದಾಗಿದೆ. ಹಾಗೆಯೇ ಈ ಅಂಶಕ್ಕೆ ಬಂಡವಾಳವಾದಿ ದೇಶಗಳ ನಡುವೆ ಒಮ್ಮತವಿರಲಿಲ್ಲ ಎನ್ನುವುದೂ ಗಮನಾರ್ಹವಾದ ಸಂಗತಿಯಾಗಿದೆ. ವ್ಯಾಪಾರದಲ್ಲಿ ಲಾಭ ಹಾಗೂ ರಾಜ್ಯವಿಸ್ತಾರದ ಧೋರಣೆಯನ್ನು ತಳೆದಿದ್ದ ರಾಷ್ಟ್ರಗಳೊಳಗೆ ಸಂಘರ್ಷ ನಡೆಯುತ್ತಲೇ ಇತ್ತು. ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿನ ಆಫ್ರಿಕಾ ಖಂಡ ಯುರೋಪಿನ ಸಾಮ್ರಾಜ್ಯಶಾಹಿ ವಸಾಹತುಶಾಹಿತ್ವದ ಆಕ್ರಮಣಕಾರಿ ಸ್ವಭಾವಕ್ಕೆ ಉತ್ತಮ ನಿದರ್ಶನ. ನೆಪೋಲಿಯನ್ ಬೊನಾಪಾರ್ಟೆಯ ಈಜಿಪ್ಟ್ ಯುದ್ಧದಿಂದ ಪ್ರಾರಂಭಗೊಂಡ ಆಫ್ರಿಕಾದ ವಿಭಜನೆ, ೧೯೦೪ರಲ್ಲಿ ಬ್ರಿಟನ್ ಮತ್ತು ಫ್ರಾನ್ಸ್‌ನ ನಡುವೆ ನಡೆದ ಒಪ್ಪಂದದಲ್ಲಿಯವರೆಗೆ ಮುಂದುವರೆಯಿತು. ಸಾಮ್ರಾಜ್ಯಶಾಹಿ ಶಕ್ತಿಗಳು ಆಫ್ರಿಕಾವನ್ನು ತಮ್ಮ ಹಿತಾಸಕ್ತಿಗಳಿಗನುಗುಣವಾಗಿ ವಿಂಗಡಿಸಿಕೊಂಡವು. ಪ್ರಥಮ ಜಾಗತಿಕ ಯುದ್ಧದ ಸಮಯದಲ್ಲಿ ಯುರೋಪಿನ ರಾಷ್ಟ್ರಗಳು ತಮ್ಮ ಸೈನಿಕ ಖರ್ಚುಗಳಲ್ಲಿ ಹೆಚ್ಚಿನ ಭಾಗವನ್ನು ತಮ್ಮ ಪ್ರಧಾನ ವಸಾಹತುಗಳ ಮೇಲೆ ಹೊರಿಸಿದವು. ಇದರಿಂದಾಗಿ ಆಫ್ರಿಕಾದ ಶೋಷಣೆ ಮತ್ತಷ್ಟು ತೀವ್ರವಾಯಿತು. ಯುದ್ಧದ ಸಂದರ್ಭದಲ್ಲಿ ಜಗತ್ತಿನ ಆರ್ಥಿಕ ಸಂಬಂಧಗಳಲ್ಲಿ ಅವ್ಯವಸ್ಥೆ ಉಂಟಾಯಿತು. ಬ್ರಿಟನ್, ಫ್ರಾನ್ಸ್, ಜರ್ಮನಿ, ಇಟಲಿ, ಪೋರ್ಚುಗಲ್, ಬೆಲ್ಜಿಯಂ ಮುಂತಾದ ಯುರೋಪಿನ ರಾಷ್ಟ್ರಗಳು ಆಫ್ರಿಕಕ್ಕಾಗಿ ನಡೆದ ಕಿತ್ತಾಟದಲ್ಲಿ ಪಾಲ್ಗೊಂಡವು. ಬಂಡವಾಳಶಾಹಿ ಬೆಳವಣಿಗೆಯ ಮಾರ್ಗ ಹಿಡಿದಿದ್ದ ಯುರೋಪಿಯನ್ನರು ಆಫ್ರಿಕಾವನ್ನು ಸಂಪತ್ತನ್ನು ಗಳಿಸಿಕೊಳ್ಳುವ ಆಕರವನ್ನಾಗಿ ಮಾತ್ರ ಕಂಡುಕೊಂಡರು. ಇದೇ ಸಂದರ್ಭದಲ್ಲಿ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಯು ನಿಧಾನವಾಗಿ ಆದರೆ ಗಟ್ಟಿಯಾಗಿ ಕಾಣಿಸಿಕೊಳ್ಳಲಾರಂಭಿಸಿತು.

ಪ್ರಥಮ ಜಾಗತಿಕ ಯುದ್ಧದ ಬಳಿಕ ಕಾಣಿಸಿಕೊಂಡ ತೀವ್ರ ಮಾರುಕಟ್ಟೆ ಕುಸಿತದಿಂದಾಗಿ ಆಫ್ರಿಕಾ ತೀರಾ ಪ್ರತಿಕೂಲವಾದ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಬಂಡವಾಳಶಾಹಿ ದೇಶಗಳೂ ಇದರಿಂದಾಗಿ ಕಂಗೆಟ್ಟವು. ಇಪ್ಪತ್ತನೆಯ ಶತಮಾನದ ಮೂವತ್ತರ ದಶಕದಲ್ಲಿ ಕಾಣಿಸಿಕೊಂಡ ಈ ಮಾರುಕಟ್ಟೆ ಕುಸಿತ ಅನೇಕ ಬೆಳವಣಿಗೆಗಳಿಗೆ ಕಾರಣವಾಯಿತು. ಈ ಬಿಕ್ಕಟ್ಟಿನಿಂದ ತಪ್ಪಿಸಿಕೊಳ್ಳಲು ಬಂಡವಾಳಶಾಹಿ ದೇಶಗಳು ಹೊರ ಮಾರುಕಟ್ಟೆಗಳ ಹುಡುಕಾಟ ಪ್ರಾರಂಭಿಸಿದವು. ಆದರೆ ಇದು ಸುಲಭದ ಕೆಲಸವಾಗಿರಲಿಲ್ಲ. ಆದ್ದರಿಂದ ಮಾರುಕಟ್ಟೆ ಕುಸಿತದ ಹೊರೆಯನ್ನು ಆಫ್ರಿಕಾದ ದೇಶಗಳಿಗೆ ವರ್ಗಾಯಿಸಿ ಬಿಡುವ ಪ್ರಯತ್ನವನ್ನು ಮಾಡಿದವು. ಆಫ್ರಿಕಾದಲ್ಲಿ ರಾಷ್ಟ್ರೀಯ ಚಳುವಳಿ ಪ್ರಾರಂಭವಾಗುವುದಕ್ಕೆ ಇದು ಮುಖ್ಯ ಕಾರಣವಾಗಿದೆ. ಆಫ್ರಿಕಾದ ಕೈಗಾರಿಕಾ ಕಾರ್ಮಿಕರು, ಕೃಷಿಕರು ಹಾಗೂ ಇನ್ನಿತರ ಜನಸಮೂಹದವರು ಯುರೋಪಿನ ರಾಷ್ಟ್ರಗಳ ಧೋರಣೆಯನ್ನು ವಿರೋಧಿಸಿ ಚಳುವಳಿ ನಡೆಸಲಾರಂಭಿಸಿದರು.

ಪ್ರಥಮ ಜಾಗತಿಕ ಯುದ್ಧದ ನಂತರ ಏರ್ಪಟ್ಟ ಪ್ಯಾರಿಸ್ ಶಾಂತಿ ಒಪ್ಪಂದದ ಪ್ರಕಾರ ಆಫ್ರಿಕಾದ ಭೂಪಟವನ್ನು ಪುನಾರಚಿಸುವ ಕಾರ್ಯದಲ್ಲಿ ಮೈತ್ರಿಕೂಟ ಮಗ್ನವಾಯಿತು. ಆದರೆ ಇದು ವಿದೇಶೀ ಸಾಮ್ರಾಜ್ಯವಾದದ ಮತ್ತು ಆಗ ತಾನೇ ಉದಯಿಸುತ್ತಿರುವ ಆಫ್ರಿಕಾದ ರಾಷ್ಟ್ರೀಯಪ್ರಜ್ಞೆಯ ನಡುವೆ ವಿರೋಧಾಭಾಸಗಳನ್ನು ಹುಟ್ಟುಹಾಕಿತು. ಸಾಮ್ರಾಜ್ಯಶಾಹಿ ನೀತಿಯನ್ನು ವಿರೋಧಿಸಿ ಆಫ್ರಿಕಾದ್ಯಂತ ಚಳುವಳಿಗಳು ಪ್ರಾರಂಭಗೊಂಡವು. ಬಂಡವಾಳಶಾಹಿ ರಾಷ್ಟ್ರಗಳ ವಿರುದ್ಧ ಕಾರ್ಮಿಕ ಚಳುವಳಿಗಳು ಹುಟ್ಟಲಾರಂಭಿಸಿದವು. ಬಂಡವಾಳಶಾಹಿಗಳಿಂದ ನಿರಂತರವಾಗಿ ಶೋಷಣೆಗೊಳಪಟ್ಟಿದ್ದ ರೈತರು ಹಳ್ಳಿಯನ್ನು ತೊರೆದು ನಗರ ಪ್ರದೇಶಗಳಿಗೆ ವಲಸೆ ಬಂದರು. ನಗರ ಕಾರ್ಮಿಕರೊಡನೆ ಬೆರೆತು ಹೊಸ ಚಿಂತನೆಗಳಿಂದ ಪ್ರೇರೇಪಿತಗೊಂಡು ಸಾಮ್ರಾಜ್ಯಶಾಹಿ ವಿರೋಧಿ ನೀತಿಯನ್ನು ಶಿಸ್ತುಬದ್ಧಗೊಳಿಸಿದರು. ೧೯೧೯ರಲ್ಲಿ ಪ್ರಥಮ ಬಾರಿಗೆ ಪ್ಯಾರಿಸ್‌ನಲ್ಲಿ ಆಫ್ರಿಕಾದ ಕುರಿತು ಚರ್ಚೆಯನ್ನು ನಡೆಸಲು ಸಭೆ ಕರೆಯಲಾಯಿತು. ಆಫ್ರಿಕಾದ ಪರ ಚಿಂತನೆಗಳನ್ನು ಹೊಂದಿರುವ ಈ ಸಭೆ ಪ್ಯಾರಿಸ್ ಶಾಂತಿ ಒಪ್ಪಂದದ ಸಂಘಟಕರಿಗೆ ಒತ್ತಡವನ್ನು ಹೇರಿತು. ಇವರ ಮುಖ್ಯ ಬೇಡಿಕೆಯೆಂದರೆ ಆಫ್ರಿಕಾದ ವಿವಿಧ ಪ್ರದೇಶಗಳ ಆಳ್ವಿಕೆಗೆ ಸರಕಾರವನ್ನು ರಚಿಸುವಾಗ ಸ್ಥಳೀಯರನ್ನು ಸೇರಿಸಿಕೊಳ್ಳಬೇಕು. ಏಕೆಂದರೆ ಸ್ಥಳೀಯ ಜನರ ಸಮಸ್ಯೆಗಳ ಬಗ್ಗೆ ಸಾಮ್ರಾಜ್ಯವಾದಿ ಶಕ್ತಿಗಳಿಗೆ ಅರಿವು ಇರುವುದಿಲ್ಲ. ಅದೇ ರೀತಿ ಗುಲಾಮ ಪದ್ಧತಿಯನ್ನು ರದ್ದುಗೊಳಿಸುವುದು. ಈ ಉದ್ದೇಶ ಈಡೇರಿಕೆಗಾಗಿಯೇ ೧೯೨೧, ೧೯೨೩ ಮತ್ತು ೧೯೨೭ರಲ್ಲಿ ಆಫ್ರಿಕಾ ಪರ ಕಾಂಗ್ರೆಸ್‌ಗಳು ನಡೆದವು. ಇವೆಲ್ಲದರ ಫಲವಾಗಿ ಆಫ್ರಿಕಾದ ರಾಷ್ಟ್ರೀಯ ವಿಮೋಚನಾ ಚಳುವಳಿ ಹೆಚ್ಚು ವ್ಯಾಪಕವಾಗಿ ಬೆಳೆಯಿತು. ಬ್ರಿಟನ್, ಫ್ರಾನ್ಸ್, ಇಟಲಿ, ಬೆಲ್ಜಿಯಂ, ಪೋರ್ಚುಗಲ್ ಮತ್ತು ಸ್ಪೈನಿನ ಆಳ್ವಿಕೆಗೊಳಪಟ್ಟಿದ್ದ ಪ್ರದೇಶಗಳಲ್ಲಿ ವಿಮೋಚನಾ ಚಳುವಳಿ ಪ್ರಾರಂಭಗೊಂಡಿತು.

## ಬ್ರಿಟಿಶ್ ವಿರೋಧಿ ಹೋರಾಟಗಳು

ಬ್ರಿಟನ್ನಿನ ಅಧೀನವಲ್ಲಿದ್ದ ಈಜಿಪ್ಟ್, ಸುಡಾನ್, ನೈಜೀರಿಯಾ, ಗೋಲ್ಡ್ ಕೋಸ್ಟ್, ಗ್ಯಾಂಬಿಯಾ, ಲಿಯೋನ್, ಸೊಮಾಲಿಯಾ, ಕಿನ್ಯಾ, ಉಗಾಂಡ, ನ್ಯಾಸಾಲ್ಯಾಂಡ್, ದಕ್ಷಿಣ ಮತ್ತು ಉತ್ತರ ರೊಡೇಶಿಯಾ, ತಾಂಗಾನ್ಯಕಾ ಮತ್ತು ಜಾನ್ ಸಿಬಾರ್, ಬ್ರಿಟನ್ ದಕ್ಷಿಣ ಆಫ್ರಿಕಾಗಳಲ್ಲಿ ವಿವಿಧ ಕಾಲಘಟ್ಟದಲ್ಲಿ ಚಳುವಳಿ ಪ್ರಾರಂಭಗೊಂಡಿತು. ಈಜಿಪ್ಟ್‌ನಲ್ಲಿ ಬ್ರಿಟನ್ ವಿರೋಧಿ ದಂಗೆಗಳು ೧೯೧೯ರ ನಂತರದ ಅವಧಿಯಲ್ಲಿ ಪ್ರಾರಂಭಗೊಂಡಿತು. ಪ್ರಾರಂಭಿಕ ಹಂತದಲ್ಲಿ ಬ್ರಿಟನ್ ಈಜಿಪ್ಟ್‌ನ ಕ್ರಾಂತಿಕಾರಿ ಸಂಘಟನೆಗಳನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾಯಿತು. ರಷ್ಯಾದಲ್ಲಿ ನಡೆದ ಕ್ರಾಂತಿಯಿಂದ ಸ್ಫೂರ್ತಿಗೊಂಡ ಈಜಿಪ್ಟ್‌ನ ಕೈಗಾರಿಕಾ ಕಾರ್ಮಿಕರು ಬ್ರಿಟನ್ನಿನ ಪ್ರಬಲ ಶತ್ರುಗಳಾಗಿ ರೂಪುಗೊಂಡರು. ೧೯೨೦ರಲ್ಲಿ ಈಜಿಪ್ಟ್‌ನಲ್ಲಿ ಸಮಾಜವಾದಿ ಪಕ್ಷ ರಚನೆಗೊಂಡಿತು. ೧೯೨೨ರಲ್ಲಿ ಅದನ್ನು ಕಮ್ಯುನಿಸ್ಟ್ ಪಕ್ಷ ಎಂಬುದಾಗಿ ಮರುನಾಮಕರಣಗೊಳಿಸಲಾಯಿತು. ಕಾರ್ಮಿಕ ಸಂಘಟನೆಗಳ ವಿರೋಧವನ್ನು ಸುಲಭವಾಗಿ ಹತ್ತಿಕ್ಕಿದ ಬ್ರಿಟನ್ ಚಾಣಾಕ್ಷತನವನ್ನು ತೋರಿಸಿ, ೧೯೨೨ ರಲ್ಲಿ ಈಜಿಪ್ಟ್ ಸ್ವತಂತ್ರದೇಶ ಎಂಬ ಘೋಷಣೆಯನ್ನು ಹೊರಡಿಸಿತು. ಆದರೆ ಅಲ್ಲಿ ಪರೋಕ್ಷವಾಗಿ ಬ್ರಿಟಿಷರೇ ಆಡಳಿತವನ್ನು ನಡೆಸುತ್ತಿದ್ದರು.

ಈಜಿಪ್ಟ್‌ನ ವಫದ್ ಪಾರ್ಟಿಯ ನಾಯಕ ಜಗಲುಲ್ ಪಾಷಾ ಹೊಸ ಸರಕಾರದ ನೇತೃತ್ವವನ್ನು ವಹಿಸಿದ. ತನ್ನ ಸರಕಾರವನ್ನು ಭದ್ರಪಡಿಸುವುದಕ್ಕೋಸ್ಕರ ೧೯೨೪ರಲ್ಲಿ ಕಮ್ಯೂನಿಸ್ಟ್ ಪಾರ್ಟಿಯನ್ನು ಸಂಪೂರ್ಣವಾಗಿ ನಾಶಪಡಿಸಿದ. ಕಾರ್ಮಿಕ ಸಂಘಟನೆಗಳನ್ನು ರದ್ದುಗೊಳಿಸಲಾಯಿತು. ಅಲೆಗ್ಸಾಂಡ್ರಿಯಾ ಮತ್ತು ಕೈರೋದಲ್ಲಿ ನಡೆದ ಈ ಆಂತರಿಕ ಸಮಸ್ಯೆಯಿಂದಾಗಿ ಬ್ರಿಟಿಷರು ನೇರ ಹಸ್ತಕ್ಷೇಪ ನಡೆಸುವಂತಾಯಿತು. ೧೯೨೪ರಿಂದ ೧೯೩೦ರವರೆಗೆ ಸುಮಾರು ಹತ್ತು ಬಾರಿ ಈಜಿಪ್ಟ್‌ನ ಸರಕಾರವನ್ನು ಬದಲಾಯಿಸಲಾಯಿತು. ಸುಡಾನ್ ದೇಶವನ್ನು ಸ್ವಾಧೀನಪಡಿಸಿಕೊಳ್ಳುವ ವಿಷಯದಲ್ಲಿ ಬ್ರಿಟನ್ ಮತ್ತು ಈಜಿಪ್ಟ್ ಪರಸ್ಪರ ಕಿತ್ತಾಟ ಪ್ರಾರಂಭಿಸಿದವು. ಈ ಹಿನ್ನೆಲೆಯಲ್ಲಿಯೇ ಬ್ರಿಟಿಷರ ನಾಯಕ ಲೀಸ್ಟಾರ್ಕ್‌ನನ್ನು ಕೈರೋದಲ್ಲಿ ಕೊಲೆ ಮಾಡಲಾಯಿತು. ಇದರ ಪರಿಣಾಮವಾಗಿ ಜುಗಲ್ ಪಾಷಾ ತನ್ನ ಅಧಿಕಾರವನ್ನು ಕಳೆದುಕೊಳ್ಳಬೇಕಾಯಿತು. ೧೯೩೦ರಲ್ಲಿ ಈಜಿಪ್ಟ್‌ನ ಅರಸ ಸಿದ್ಧಕೀ ಪಾಷಾ ಹೊಸ ಸಂವಿಧಾನವನ್ನು ಜಾರಿಗೆ ತಂದ. ಇದು ಪಾರ್ಲಿಮೆಂಟಿನ ಅಧಿಕಾರವನ್ನು ಮೊಟಕುಗೊಳಿಸಿ ಅರಸನಿಗೆ ಹೆಚ್ಚಿನ ಅಧಿಕಾರವನ್ನು ನೀಡಿತು. ಆದರೆ ಇದನ್ನು ವಿರೋಧಿಸಿ ೧೯೩೧ರಲ್ಲಿ ವಫದ್ ಪಾರ್ಟಿ ಮುಷ್ಕರ ನಡೆಸಿತು. ೧೯೩೬ರವರೆಗೆ ಈಜಿಪ್ಟ್‌ನಲ್ಲಿ ಮುಷ್ಕರ ನಡೆದು ಹೊಸ ಚುನಾವಣೆ ನಡೆಯಿತು. ಈ ಚುನಾವಣೆಯಲ್ಲಿ ವಫದ್ ಪಾರ್ಟಿ ಮತ್ತೊಮ್ಮೆ ಜಯಗಳಿಸಿ ಮುಸ್ತಾಫ್ ನಹಾಸೌ ಹೊಸ ಮುಖಂಡನಾಗಿ ನೇಮಕಗೊಂಡ. ಬ್ರಿಟನ್ ಅನೇಕ ಬೇಡಿಕೆಗಳನ್ನು ಹೊಸ ಸರಕಾರದ ಮುಂದಿಟ್ಟಿತು. ಮುಖ್ಯವಾಗಿ ಸುಯೇಜ್ ಕಾಲುವೇ ವಲಯದಲ್ಲಿ ಬೃಹತ್ ಸೈನ್ಯವನ್ನು ಹೊಂದುವುದು. ವಫದ್ ಪಾರ್ಟಿ

ಅನಿವಾರ್ಯವಾಗಿ ಈ ಒಪ್ಪಂದಕ್ಕೆ ಸಹಿ ಮಾಡಬೇಕಾಯಿತು. ಇದು ಈಜಿಪ್ಟ್‌ನ ಜನರಲ್ಲಿ ವಫದ್ ಪಾರ್ಟಿಯ ಬಗ್ಗೆ ಕೆಟ್ಟ ಭಾವನೆಯನ್ನು ಮೂಡಿಸಿತು. ಇದರಿಂದಾಗಿಯೇ ೧೯೩೮ರ ಚುನಾವಣೆಯಲ್ಲಿ ವಫದ್ ಪಾರ್ಟಿ ಸೋಲಬೇಕಾಯಿತು. ಈ ಎಲ್ಲಾ ಬೆಳವಣಿಗೆಗಳು ಈಜಿಪ್ಟ್‌ನಲ್ಲಿ ಬ್ರಿಟನ್ ವಿರೋಧಿ ನೀತಿಯನ್ನು ಹುಟ್ಟುಹಾಕಿದವು.

ನೈಜೀರಿಯಾ, ಗ್ಯಾಂಬಿಯಾ, ಗೋಲ್ಡ್‌ಕೋಸ್ಟ್ ಮತ್ತು ಸೀರಾ ಲಿಯೋನೆ ಬ್ರಿಟನ್ನಿನ ಪಶ್ಚಿಮ ಆಫ್ರಿಕಾದ ವಸಾಹತು ನೆಲೆಗಳು. ೧೯೨೦ರಲ್ಲಿ ನೈಜೀರಿಯಾದಲ್ಲಿ ಬ್ರಿಟಿಷ್ ಪಶ್ಚಿಮ ಆಫ್ರಿಕಾದ ರಾಷ್ಟ್ರೀಯ ಕಾಂಗ್ರೆಸ್‌ನ ವಿಭಾಗವೊಂದು ಅಸ್ತಿತ್ವಕ್ಕೆ ಬಂತು. ೧೯೨೨ರಲ್ಲಿ ನೈಜೀರಿಯಾದ ರಾಷ್ಟ್ರೀಯ ಪ್ರಜಾಪ್ರಭುತ್ವ ಪಾರ್ಟಿಯನ್ನು ರಚಿಸಲಾಯಿತು. ಸಾಮ್ರಾಜ್ಯಶಾಹಿ ವಿರೋಧಿ ನೀತಿಯೇ ಈ ಪಾರ್ಟಿಯ ಮುಖ್ಯ ಪ್ರಣಾಳಿಕೆಯಾಗಿತ್ತು. ೧೯೩೮ರಲ್ಲಿ ನೈಜೀರಿಯನ್ ಯೂತ್ ಮೂವ್‌ಮೆಂಟ್ (ಯನ್.ವೈ.ಎಂ) ಅಸ್ತಿತ್ವಕ್ಕೆ ಬಂತು. ಇದರ ಉದ್ದೇಶವೆಂದರೆ ನೈಜೀರಿಯಾವನ್ನು ಸ್ವತಂತ್ರ ರಾಷ್ಟ್ರವನ್ನಾಗಿ ಘೋಷಿಸುವುದು. ಇದೇ ಮಾದರಿಯಲ್ಲಿ ಗೋಲ್ಡ್ ಕೋಸ್ಟ್, ಗ್ಯಾಂಬಿಯಾ ಮತ್ತು ಸೀರಾ ಲಿಯೋನೆಗಳಲ್ಲೂ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ೧೯೨೦ರಲ್ಲಿ ಗೋಲ್ಡ್‌ಕೋಸ್ಟ್‌ನಲ್ಲಿ ಬೃಹತ್ ಸಮ್ಮೇಳನವೊಂದನ್ನು ಏರ್ಪಡಿಸಲಾಯಿತು. ಈ ಸಮ್ಮೇಳನದಲ್ಲಿ ನೈಜೀರಿಯಾ, ಗ್ಯಾಂಬಿಯಾ ಮತ್ತು ಸೀರಾ ಲಿಯೋನೆಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಸಮ್ಮೇಳನದ ಒಮ್ಮತದ ತೀರ್ಪಿನಂತೆ ಬ್ರಿಟಿಷ್ ಪಶ್ಚಿಮ ಆಫ್ರಿಕಾದ ರಾಷ್ಟ್ರೀಯ ಕಾಂಗ್ರೆಸ್ಸನ್ನು ರಚಿಸಲಾಯಿತು. ಕೀನ್ಯಾ, ಉಗಾಂಡ, ಜಾನ್‌ಸಿಬಾರ್ ಮತ್ತು ತಾಂಗಾನ್ಯಕಾ ಗಳಲ್ಲೂ ಬ್ರಿಟಿಷ್ ವಿರೋಧಿ ಮುಷ್ಕರಗಳು ಪ್ರಾರಂಭಗೊಂಡವು. ೧೯೨೧ರಲ್ಲಿ ಬ್ರಿಟನ್ ಆಫ್ರಿಕಾದ ಈ ಪ್ರದೇಶಗಳನ್ನು ಒಟ್ಟು ಸೇರಿಸಿ ಒಂದು ಸಂಯುಕ್ತ ಒಕ್ಕೂಟವನ್ನು ರಚಿಸುವ ಯೋಜನೆ ಹಾಕಿತು. ಆದರೆ ಈ ಯೋಜನೆಗೆ ಪ್ರಬಲ ವಿರೋಧವಿದ್ದುದರಿಂದಾಗಿ ಕೈಬಿಡಬೇಕಾಯಿತು. ೧೯೩೦ರಲ್ಲಿ ಕೀನ್ಯಾದಲ್ಲಿ ಅನೇಕ ಬೇಡಿಕೆಗಳನ್ನು ಒಳಗೊಂಡು ಕೇಂದ್ರೀಯ ರೆಕುಯೂ ಸಂಸ್ಥೆಯೊಂದು ಸ್ಥಾಪನೆಗೊಂಡಿತು. ಕೀನ್ಯಾದ ಜನತೆಗೆ ಎಲ್ಲಾ ಕ್ಷೇತ್ರಗಳಲ್ಲೂ ಸಮಾನ ಹಕ್ಕನ್ನು ನೀಡಬೇಕೆನ್ನುವುದೇ ಈ ಸಂಸ್ಥೆಯ ಬೇಡಿಕೆಯಾಗಿತ್ತು. ಎರಡನೇ ಜಾಗತಿಕ ಯುದ್ಧದ ಪ್ರಾರಂಭದವರೆಗೂ ಈ ಸಂಸ್ಥೆ ಬ್ರಿಟನ್ ಸರಕಾರಕ್ಕೆ ಒತ್ತಡವನ್ನು ಹೇರುತ್ತಲೇ ಇತ್ತು. ೧೯೨೧ರಲ್ಲಿ ಉಗಾಂಡಾದಲ್ಲಿ ರೈತರ ಸಂಸ್ಥೆಯೊಂದು ರಚನೆಗೊಂಡರೆ ೧೯೨೯ರಲ್ಲಿ ಟಾಂಗಾನ್ಯಕಾದಲ್ಲೂ ಇದೇ ಮಾದರಿಯ ಸಂಸ್ಥೆಯೊಂದು ಹುಟ್ಟಿಕೊಂಡಿತು. ೧೯೨೯-೩೩ರಲ್ಲಿ ಪ್ರಪಂಚದಾದ್ಯಂತ ಕಾಣಿಸಿಕೊಂಡ ಆರ್ಥಿಕ ಬಿಕ್ಕಟ್ಟಿನ ಸಂದರ್ಭದಲ್ಲಿ ಟಾಂಗಾನ್ಯಕಾದಲ್ಲಿ ಅನೇಕ ಕಾರ್ಮಿಕ ಸಂಘಟನೆಗಳು ಕಾಣಿಸಿಕೊಂಡವು. ಆದರೂ ಈ ಸಂಘಟನೆಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವಂತಿರಲಿಲ್ಲ.

ಬೆಚ್ಚುನಾಲ್ಯಾಂಡ್, ಬಸುಟೋಲ್ಯಾಂಡ್ ಮತ್ತು ಸ್ವಾಸಿಲ್ಯಾಂಡ್‌ಗಳು ಬ್ರಿಟನ್‌ನ 'ಪಾಲನ ಪ್ರಭುತ್ವಕ್ಕೆ' ಒಳಪಟ್ಟಿದ್ದವು. ಈ ದೇಶಗಳಲ್ಲಿ ಬ್ರಿಟನ್ ಪರೋಕ್ಷವಾಗಿ ಆಳ್ವಿಕೆ

ನಡೆಸುತ್ತಿತ್ತು. ಬೆಚ್ಚುನಾಲ್ಯಾಂಡ್‌ನಲ್ಲಿ ೧೯೨೩ರಿಂದ ೧೯೨೮ರವರೆಗೆ ಅಧಿಕಾರಕ್ಕಾಗಿ ಹೋರಾಟ ನಡೆಯುತ್ತಿತ್ತು. ಈ ದೇಶಗಳಲ್ಲಿನ ವಸಾಹತು ವಿರೋಧಿ ಚಳುವಳಿ ಅತ್ಯಂತ ತೀವ್ರ ಸ್ವರೂಪವನ್ನು ಪಡೆದುಕೊಂಡಿತು. ಪ್ರಥಮ ಜಾಗತಿಕ ಯುದ್ಧದ ನಂತರ ಬ್ರಿಟನ್ ಉತ್ತರ ಮತ್ತು ದಕ್ಷಿಣ ರೊಡೇಶಿಯಾದ ಮೇಲಿನ ತನ್ನ ಸ್ಥಾನಮಾನಗಳನ್ನು ಬದಲಿಸಿಕೊಂಡಿತು. ೧೯೨೨ರಲ್ಲಿ ದಕ್ಷಿಣ ರೊಡೇಶಿಯಾವು ಬಿಳಿಯರ ವಸಾಹತುವಾದರೂ ಪಾರ್ಲಿಮೆಂಟನ್ನು ಹೊಂದಿತ್ತು. ಇದೇ ರೀತಿಯ ವ್ಯವಸ್ಥೆ ಉತ್ತರ ರೊಡೇಶಿಯಾದಲ್ಲೂ ಜಾರಿಗೆ ಬಂತು. ಆದರೂ ಎರಡೂ ದೇಶಗಳಲ್ಲಿ ಬ್ರಿಟಿಷರ ಪಾಲನ ಪ್ರಭುತ್ವ ರೀತಿಯ ವಸಾಹತು ಸರಕಾರವನ್ನು ರಚಿಸಲಾಯಿತು. ಎರಡು ಜಾಗತಿಕ ಯುದ್ಧಗಳ ನಡುವೆ ಉತ್ತರ ಮತ್ತು ದಕ್ಷಿಣ ರೊಡೇಶಿಯಾದಲ್ಲಿ ಗಣಿಗಾರಿಕಾ ಉದ್ಯಮ ಅಭಿವೃದ್ಧಿಗೊಂಡಿತು. ಇದು ಬ್ರಿಟನ್ನಿನ ಸ್ವಂತ ಆಸಕ್ತಿಯಾಗಿದ್ದು ಸ್ಥಳೀಯ ರೈತರು ಮತ್ತು ಕಾರ್ಮಿಕರು ಬ್ರಿಟನ್ನಿನ ನೀತಿಯನ್ನು ವಿರೋಧಿಸಿ ೧೯೩೫ರಲ್ಲಿ ಬೃಹತ್ ಪ್ರಮಾಣದಲ್ಲಿ ಮುಷ್ಕರ ನಡೆಸಿದರು. ದಕ್ಷಿಣ ರೊಡೇಶಿಯಾದಲ್ಲಿ ಕೈಗಾರಿಕಾ ಮತ್ತು ವಾಣಿಜ್ಯ ಕಾರ್ಮಿಕರ ಒಕ್ಕೂಟ ಮತ್ತು ರೊಡೇಶಿಯಾದ ಬಂಟು ಮತದಾರರ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಆಫ್ರಿಕಾದಲ್ಲಿ ಬ್ರಿಟನ್ನಿನ ಮತ್ತೊಂದು ಪ್ರಮುಖ ವಸಾಹತು ನೆಲೆಯೆಂದರೆ ದಕ್ಷಿಣ ಆಫ್ರಿಕಾದ ಒಕ್ಕೂಟ. ಬ್ರಿಟಿಷರ ನಾಲ್ಕು ವಸಾಹತು ಪ್ರದೇಶಗಳಾದ ನೆಟಾಲ್ ಮತ್ತು ಕೇಪ್ ಕಾಲೋನಿ ಹಾಗೂ ಆರೆಂಜ್ ಫ್ರೀ ಸ್ಟೇಟ್ ಮತ್ತು ಟ್ರಾನ್ಸ್‌ವಾಲ್‌ಗಳನ್ನು ಒಟ್ಟು ಸೇರಿಸಿ ದಕ್ಷಿಣ ಆಫ್ರಿಕಾದ ಒಕ್ಕೂಟವನ್ನು ರಚಿಸಲಾಯಿತು. ಸಿಸಿಲ್ ರೋಡ್ಸ್ ಪ್ರಥಮ ಜಾಗತಿಕ ಯುದ್ಧದ ಮೊದಲೇ ಈ ಪ್ರದೇಶದಲ್ಲಿ ಬ್ರಿಟಿಷ್ ಸಾಮ್ರಾಜ್ಯವನ್ನು ಸ್ಥಾಪಿಸುವ ಕನಸು ಕಂಡಿದ್ದ.

### ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್

ದಕ್ಷಿಣ ಆಫ್ರಿಕಾದಲ್ಲಿ ರಾಜಕೀಯ ಚಟುವಟಿಕೆಗಳು ಚುರುಕುಗೊಳ್ಳುವಲ್ಲಿ ಮೋಹನ್ ದಾಸ್ ಕರಮ್‌ಚಂದ್ ಗಾಂಧಿಯವರ ಪಾತ್ರವೂ ಹಿರಿದಾದದ್ದು. ಅಲ್ಲಿ ಅವರು ಭಾರತೀಯ ದೇಶಾಂತರವಾಸಿಗಳ ಹಕ್ಕುಗಳ ರಕ್ಷಣೆಗಾಗಿ ಹೋರಾಟ ಪ್ರಾರಂಭಿಸಿದರು. ಭಾರತೀಯ ದೇಶಾಂತರ ವಾಸಿಗಳು ಅಲ್ಲಿ ಕ್ರೂರ ವರ್ಣ ಪಕ್ಷಪಾತಕ್ಕೆ ಗುರಿಯಾಗಿದ್ದರು. ಬ್ರಿಟಿಷ್ ವಸಾಹತುವಾದದ ವಿರುದ್ಧ ಅಹಿಂಸಾತ್ಮಕ ಪ್ರತಿರೋಧದ ಅಥವಾ ಸತ್ಯಾಗ್ರಹದ ಸೂತ್ರಗಳನ್ನು ಆಚರಣೆಯಲ್ಲಿ ತರಲು ಪ್ರಯತ್ನಿಸಿದರು. ೧೯೦೮ರಲ್ಲಿ ದಕ್ಷಿಣ ಆಫ್ರಿಕಾದಲ್ಲಿ ವಸಾಹತು ಆಡಳಿತವು ಜಾರಿಗೆ ತಂದಿದ್ದ ವರ್ಣ ಪಕ್ಷಪಾತ ಕಾನೂನುಗಳನ್ನು ಉಲ್ಲಂಘಿಸುವ ಚಳುವಳಿಯನ್ನು ಸಂಘಟಿಸಿದರು. ಗಾಂಧಿಯವರು ಅಹಿಂಸಾತ್ಮಕ ಚಟುವಟಿಕೆಗಳಲ್ಲಿ ಎಷ್ಟು ಅಂಟಿಕೊಂಡಿದ್ದರೆಂಬುದಕ್ಕೆ ಉತ್ತಮ ನಿದರ್ಶನ ೧೯೦೬ರಲ್ಲಿ ನಡೆದ ಘಟನೆ. ಅದೇನೆಂದರೆ ಜುಲೂ ಜನಾಂಗದವರು ಹಿಂಸಾತ್ಮಕ ಪ್ರವೃತ್ತಿಯನ್ನು ತೋರಿದಾಗ ಅವರ ಬಂಡಾಯವನ್ನು ಹತ್ತಿಕ್ಕಲು ಹೋದ ವಸಾಹತು ದಳಗಳ ಪರವಾಗಿ ಗಾಂಧಿ ಕೆಲಸ ಮಾಡಿದರು. ದಕ್ಷಿಣ ಆಫ್ರಿಕಾದಲ್ಲಿ ೧೯೧೨ರಲ್ಲಿ ಆಫ್ರಿಕನ್ ರಾಷ್ಟ್ರೀಯ

ಕಾಂಗ್ರೆಸ್ ಹುಟ್ಟಿಕೊಳ್ಳುವುದಕ್ಕೆ ಗಾಂಧಿಯವರಿಂದ ಸ್ಥಾಪನೆಗೊಂಡ ನೆಟಾಲ್‌ನ ಭಾರತೀಯ ಕಾಂಗ್ರೆಸ್ ಸಂಸ್ಥೆಯೇ ಪ್ರಮುಖ ಕಾರಣ. ನೆಟಾಲ್ ಮತ್ತು ಟ್ರಾನ್ಸ್‌ವಾಲ್‌ಗಳಲ್ಲಿ ಭಾರತೀಯರ ವಿರುದ್ಧ ಹೊರಡಿಸಲಾದ ಕಾನೂನುಗಳನ್ನು ಗಾಂಧಿ ವಿರೋಧಿಸಿದರು. ಈ ಉದ್ದೇಶಕ್ಕಾಗಿಯೇ ನೆಟಾಲ್‌ನ ಭಾರತೀಯ ಕಾಂಗ್ರೆಸ್ಸನ್ನು ಸ್ಥಾಪಿಸಲಾಯಿತು.

ದಕ್ಷಿಣ ಆಫ್ರಿಕಾದಲ್ಲಿ ೧೯೧೨ರಲ್ಲಿ ಸ್ಥಾಪನೆಗೊಂಡ ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ ಬ್ರಿಟನ್ನಿನ ಸಾಮ್ರಾಜ್ಯಶಾಹಿ ನೀತಿಯನ್ನು ವಿರೋಧಿಸಲು ಸ್ಥಳೀಯ ಸಂಘಟನೆಗಳಾದ ಕೈಗಾರಿಕಾ ಕಾರ್ಮಿಕರ ಸಂಘ, ಕೈಗಾರಿಕಾ ಮತ್ತು ವಾಣಿಜ್ಯ ಕಾರ್ಮಿಕರ ಆಫ್ರಿಕನ್ ಒಕ್ಕೂಟ, ಕಾರ್ಮಿಕ ಸಂಘಟನೆಗಳು ಮತ್ತು ದಕ್ಷಿಣ ಆಫ್ರಿಕಾದ ಕಮ್ಯೂನಿಸ್ಟ್ ಪಾರ್ಟಿಯ ಸದಸ್ಯರ ಸಭೆಯನ್ನು ಕರೆಯಿತು. ಇದು ಕೆಲವೊಂದು ನಿರ್ಣಯಗಳನ್ನು ಕೈಗೊಂಡಿತು. ಅವುಗಳೆಂದರೆ; ಆಫ್ರಿಕಾದ ರೈತರಿಗೆ ಭೂಮಿಯನ್ನು ನೀಡುವುದು, ಜನಾಂಗೀಯ ಕಲಹಗಳನ್ನು ನಿಲ್ಲಿಸುವುದು, ಗುಲಾಮಿ ವ್ಯಾಪಾರ ಪದ್ಧತಿಯನ್ನು ರದ್ದುಪಡಿಸುವುದು. ೧೯೧೯ ಮತ್ತು ೧೯೨೦ರಲ್ಲಿ ಮುಷ್ಕರ ಯಶಸ್ವಿಗೊಂಡರೆ ೧೯೨೨ನೆಯ ಮಾರ್ಚ್‌ನಲ್ಲಿ ಮುಷ್ಕರವನ್ನು ಹತ್ತಿಕ್ಕಲಾಯಿತು. ಮುಷ್ಕರದಲ್ಲಿ ಪಾಲ್ಗೊಂಡ ನಾಯಕರನ್ನು ಗಲ್ಲಿಗೇರಿಸಲಾಯಿತು. ಈ ಘಟನೆಯನ್ನು ಕೆಂಪು ಕ್ರಾಂತಿ ಎಂಬುದಾಗಿಯೂ ಕರೆಯಲಾಗಿದೆ. ೧೯೨೯-೧೯೩೩ರಲ್ಲಿ ಉದ್ಭವಿಸಿದ ಆರ್ಥಿಕ ಬಿಕ್ಕಟ್ಟಿನ ಸಂದರ್ಭದಲ್ಲಿ ಕೈಗಾರಿಕಾ ಕಾರ್ಮಿಕರು ಮತ್ತು ರೈತರು ಎಡಪಂಥೀಯ ಸಂಘಟನೆಗಳ ಜೊತೆಗೂಡಿ ಉಗ್ರಹೋರಾಟವನ್ನು ನಡೆಸಿದರು. ಇವರ ಫಲವಾಗಿ ೧೯೩೭ರ ವೇಳೆಗೆ ಕೈಗಾರಿಕಾ ಕಾರ್ಮಿಕರಿಗೆ ಮತ್ತು ರೈತರಿಗೆ ಅನುಕೂಲವಾಗುವ ಕಾನೂನು ಕಾಯಿದೆಗಳನ್ನು ಜಾರಿಗೆ ತರಲಾಯಿತು.

ದಕ್ಷಿಣ ಆಫ್ರಿಕಾದಲ್ಲಿನ ಅನೇಕ ಪಕ್ಷಗಳು ೧೯೩೩-೧೯೩೪ರಲ್ಲಿ ದಕ್ಷಿಣ ಆಫ್ರಿಕಾದ ಒಕ್ಕೂಟದೊಡನೆ ವಿಲೀನಗೊಂಡು ದಕ್ಷಿಣ ಆಫ್ರಿಕಾದ ಸಂಯುಕ್ತ ಪಾರ್ಟಿಯನ್ನು ರಚಿಸಿಕೊಂಡವು. ಈ ಸಮ್ಮಿಶ್ರ ಸರಕಾರದ ಪ್ರಧಾನಮಂತ್ರಿಯಾಗಿ ಹರ್ಟ್‌ಸೊಂಗ್‌ನನ್ನು ನೇಮಿಸಲಾಯಿತು. ತೀವ್ರ ರಾಷ್ಟ್ರೀಯವಾದಿಗಳು ರಾಷ್ಟ್ರೀಯವಾದಿ ಪಕ್ಷವನ್ನು ರಚಿಸಿಕೊಂಡರು. ಈ ಪಕ್ಷ ಫಾಸಿಸ್ಟ್ ತತ್ವವನ್ನು ಒಳಗೊಂಡಿತ್ತು. ಆಂಗ್ಲೋ ಜರ್ಮನ್ ಯುದ್ಧದಲ್ಲಿ ಬ್ರಿಟನ್ ಸೋತು ದಕ್ಷಿಣ ಆಫ್ರಿಕಾದ ಮೇಲಿನ ಹಿಡಿತ ಸಡಿಲಗೊಳ್ಳಬಹುದೆಂಬ ನಂಬಿಕೆಯನ್ನು ರಾಷ್ಟ್ರೀಯವಾದಿ ಪಕ್ಷ ಹೊಂದಿತ್ತು. ದಕ್ಷಿಣ ಆಫ್ರಿಕಾದ ಮಧ್ಯಮವರ್ಗದ ಜನರು ಮತ್ತು ಬೊಯರ್ ಭೂಮಾಲೀಕರು ಈ ಪಕ್ಷಕ್ಕೆ ಬೆಂಬಲ ನೀಡಿದರು. ೧೯೪೦ರವರೆಗೆ ದಕ್ಷಿಣ ಆಫ್ರಿಕಾದಲ್ಲಿ ಈ ರೀತಿಯ ರಾಜಕೀಯ ಬೆಳವಣಿಗೆಗಳು ನಡೆಯುತ್ತಿದ್ದವು. ಬ್ರಿಟನ್ನಿನ ಅಧೀನದಲ್ಲಿದ್ದ ಈ ಎಲ್ಲಾ ರಾಷ್ಟ್ರಗಳಲ್ಲಿ ಪ್ರಥಮ ಜಾಗತಿಕ ಯುದ್ಧದಿಂದ ದ್ವಿತೀಯ ಜಾಗತಿಕ ಯುದ್ಧದವರೆಗೆ ಅನೇಕ ಚಳುವಳಿಗಳು ನಡೆದರೂ ಸಾಮ್ರಾಜ್ಯವಾದಿ ಶಕ್ತಿಗಳ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ೧೯೪೫ರ ನಂತರ ಬದಲಾದ ರಾಜಕೀಯ ಪರಿಸ್ಥಿತಿಯಿಂದಾಗಿ ಬ್ರಿಟನ್ನಿನ ಆಳ್ವಿಕೆಗೆ ಒಳಪಟ್ಟಿದ್ದ ಆಫ್ರಿಕಾದ ದೇಶಗಳು ಸ್ವತಂತ್ರಗೊಳ್ಳುವ ಹಂತಕ್ಕೆ ತಲುಪಿದವು.

## ಫ್ರೆಂಚ್ ವಿರೋಧಿ ಹೋರಾಟಗಳು

ಪ್ರಥಮ ಜಾಗತಿಕ ಯುದ್ಧದ ನಂತರ ಫ್ರೆಂಚರ ಆಫ್ರಿಕಾದ ಮೇಲಿನ ಹಿಡಿತ ಬಲಗೊಂಡಿತು ಮತ್ತು ವಿಸ್ತಾರಗೊಳ್ಳಲಾರಂಭಿಸಿತು. ಯುದ್ಧದ ಸಂದರ್ಭದಲ್ಲಿ ಫ್ರಾನ್ಸ್‌ನ ವಸಾಹತು ಪ್ರದೇಶಗಳಲ್ಲಿನ ಆಫ್ರಿಕನ್ನರು ಫ್ರೆಂಚರ ಪರವಾಗಿ ಹೋರಾಡಿದರು. ೧೯೧೯ರಲ್ಲಿ ಯುದ್ಧ ಕೊನೆಗೊಂಡಾಗ ತಾಯ್ನಾಡಿಗೆ ಮರಳಿ ಸೈನಿಕರು ಸ್ವಲ್ಪಮಟ್ಟಿಗೆ ಯುರೋಪಿನ ಹೊಸ ಚಿಂತನೆಗಳಿಂದ ಪ್ರೇರೇಪಿತಗೊಂಡಿದ್ದರು. ಇದು ಆಫ್ರಿಕಾದಲ್ಲೂ ಪುನರಾವರ್ತನೆಗೊಳ್ಳುವ ಸೂಚನೆ ಕಂಡುಬಂತು. ರಷ್ಯಾ ದೇಶದಲ್ಲಾದ ಕ್ರಾಂತಿಕಾರಿ ಬದಲಾವಣೆ ಆಫ್ರಿಕನ್ನರ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಪ್ರಥಮ ಜಾಗತಿಕ ಯುದ್ಧದ ಸಂದರ್ಭದಲ್ಲಿ ಸಹರಾ, ಮೌರಿಟಾನ್ಯಾ, ಫ್ರೆಂಚ್ ಸುಡಾನ್ ಮುಂತಾದ ಪ್ರದೇಶಗಳಲ್ಲಿ ಪ್ರಾರಂಭಗೊಂಡ ಮುಷ್ಕರ, ದಂಗೆಗಳು ಎರಡನೇ ಜಾಗತಿಕ ಯುದ್ಧದವರೆಗೂ ಮುಂದುವರೆದವು. ಫ್ರೆಂಚರ ಗಿನ್ನ್ಯಾದಲ್ಲಿ ಕೈಗಾರಿಕಾ ಕಾರ್ಮಿಕರು, ಬಂದರು ಕಾರ್ಮಿಕರು ಹಾಗೂ ಇನ್ನಿತರ ಕೆಲಸಗಾರರು ಫ್ರೆಂಚರ ವಿರುದ್ಧ ದಂಗೆ ಎದ್ದರು. ೧೯೧೯ರಲ್ಲಿ ಸೆನೆಗಲ್‌ನಲ್ಲಿ ರೈಲ್ವೆ ಕಾರ್ಮಿಕರು ಫ್ರೆಂಚರ ಆಡಳಿತದ ವಿರುದ್ಧ ಮುಷ್ಕರ ನಡೆಸಿದರು. ಸ್ಥಳೀಯ ಮುಖಂಡರುಗಳ ಅಧಿಕಾರವನ್ನು ಕುಂಠಿತಗೊಳಿಸಿ ಫ್ರೆಂಚ್ ಅಧಿಕಾರಿಗಳು ನೇರ ಆಡಳಿತವನ್ನು ನಡೆಸುತ್ತಿದ್ದರು.

ಫ್ರೆಂಚರ ಆಳ್ವಿಕೆಗೆ ಒಳಪಟ್ಟಿದ್ದ ಆಫ್ರಿಕಾದ ದೇಶಗಳು ಸಂಪೂರ್ಣವಾಗಿ ಶೋಷಣೆಗೊಳಪಟ್ಟಿದ್ದವು. ಆಫ್ರಿಕಾದಲ್ಲಿನ ಸಂಪನ್ಮೂಲಗಳನ್ನು ಫ್ರಾನ್ಸ್‌ಗೆ ರಫ್ತು ಮಾಡಲಾಗುತ್ತಿತ್ತು. ಅದೇ ರೀತಿ ಸುಡಾನ್, ವೊಲ್ಟಾ, ಮಧ್ಯ ಕಾಂಗೋ ಪ್ರದೇಶಗಳು ಫ್ರೆಂಚರ ವ್ಯಾಪಾರಕ್ಕೆ ಅನುಕೂಲವಾಗಿರುವ ರೈಲು ಮತ್ತು ಭೂಮಾರ್ಗ ರಚನೆಗೆ ಬೇಕಾದ ಮಾನವಶಕ್ತಿಯನ್ನು ಒದಗಿಸಿಕೊಟ್ಟಿತು. ಸೆನೆಗಲ್, ಕೇಮ್‌ರೂನ್, ಐವರಿಕೋಸ್ಟ್, ಗೇಬನ್ ಮುಂತಾದ ಪ್ರದೇಶಗಳಲ್ಲಿ ಫ್ರೆಂಚ್ ವ್ಯಾಪಾರಸ್ಥರು ಮತ್ತು ಅಧಿಕಾರಿಗಳು ಸೂಚಿಸಿದ ಬೆಳೆಯನ್ನೇ ಬೆಳೆಯಬೇಕಾಗಿತ್ತು. ಈ ರೀತಿಯ ಒತ್ತಡ ಹೇರುವ ಕಾನೂನುಗಳನ್ನು ಜಾರಿಗೆ ತರಲಾಗುತ್ತಿತ್ತು. ಫ್ರೆಂಚರ ಈ ನೀತಿಯನ್ನು ವಿರೋಧಿಸಿ ೧೯೨೨ ಮತ್ತು ೧೯೨೭ರಲ್ಲಿ ಫ್ರೆಂಚ್ ವಿರೋಧಿ ಗಲಭೆಗಳು ಪ್ರಾರಂಭಗೊಂಡವು. ಈ ಗಲಭೆಗಳಲ್ಲಿ ಗೇಬನ್, ಸೆನೆಗಲ್, ಟೊಗೋ, ಕೇಮ್‌ರೂನ್ ಮುಂತಾದ ಪ್ರದೇಶಗಳ ರೈತರು ಭಾಗವಹಿಸಿದ್ದರು.

ಆಫ್ರಿಕಾದ ಪ್ರಜ್ಞಾವಂತ ಜನವರ್ಗ ತಮ್ಮ ಬರವಣಿಗೆಯ ಮೂಲಕ ಫ್ರೆಂಚ್ ವಸಾಹತು ನೀತಿಯನ್ನು ಬಲವಾಗಿ ಖಂಡಿಸಿತು. ಸೆನೆಗಲ್ ಮತ್ತು ಫ್ರೆಂಚ್ ಸುಡಾನಿನಲ್ಲಿ ಮಾರ್ಕ್ಸ್‌ವಾದಿ ಹಿನ್ನೆಲೆಯ ಚಿಂತಕರು ಫ್ರೆಂಚ್ ಕಮ್ಯೂನಿಸ್ಟ್ ಪಾರ್ಟಿಯ ಚಿಂತನೆಗಳನ್ನು ಅಳವಡಿಸಿಕೊಂಡು ವಸಾಹತು ಆಳ್ವಿಕೆಯ ಸ್ವರೂಪದ ಕುರಿತು ಜನರಿಗೆ ಅರಿವು ಮೂಡಿಸುವ ಕಾರ್ಯದಲ್ಲಿ ಮಗ್ನರಾದರು. ಇದರಿಂದಾಗಿ ೧೯೩೮ರ ನಂತರ ಕಾರ್ಮಿಕ ಸಂಘಟನೆಗಳು ಬಲಗೊಂಡು ಸೆನೆಗಲ್, ಐವರಿಕೋಸ್ಟ್ ಮುಂತಾದ ಪ್ರದೇಶಗಳಲ್ಲಿ ಆಗಿಂದಾಗ್ಗೆ ಮುಷ್ಕರಗಳು ಕಾಣಿಸಿಕೊಂಡವು. ಫ್ರೆಂಚರ ಇನ್ನೊಂದು ವಸಾಹತು ನೆಲೆಯಾದ ಮಡಗಾಸ್ಕರ್‌ನಲ್ಲೂ

ಕಾರ್ಮಿಕ ಸಂಘಟನೆಗಳು ಹುಟ್ಟಿಕೊಂಡು ಫ್ರೆಂಚರ ಪಾಲನಪ್ರಭುತ್ವವನ್ನು ರದ್ದುಗೊಳಿಸಲು ಪ್ರಯತ್ನಿಸಿದವು. ಮಡಗಾಸ್ಕರ್‌ನಲ್ಲಿ ನಡೆದ ಮಹತ್ವದ ಘಟನೆಯೆಂದರೆ ೧೯೪೭ರ ಮೇ ೧೯ರಲ್ಲಿ ನಡೆದ ಸಾಮ್ರಾಜ್ಯಶಾಹಿ ವಿರುದ್ಧದ ಸಮಾವೇಶ. ಇದು ಫ್ರೆಂಚರ ಆಳ್ವಿಕೆಯನ್ನು ಕೊನೆಗೊಳಿಸುವಲ್ಲಿ ವಿಫಲವಾದರೂ, ಜನರಲ್ಲಿ ತಮ್ಮ ತಾಯ್ನಾಡಿನ ಬಗ್ಗೆ ಪ್ರೀತಿ ಮತ್ತು ಅರಿವನ್ನು ಮೂಡಿಸುವಲ್ಲಿ ಯಶಸ್ವಿಯಾಯಿತು.

## ಪೋರ್ಚುಗೀಸ್ ವಿರೋಧಿ ಹೋರಾಟಗಳು

ಪೋರ್ಚುಗಲ್ ಆಫ್ರಿಕಾದ ಕೆಲಭಾಗಗಳಲ್ಲಿ ತನ್ನ ಪ್ರಭಾವಿ ನೆಲೆಗಳನ್ನು ಸ್ಥಾಪಿಸಿ ಕೊಂಡಿತ್ತು. ಮೊಜಾಂಬಿಕ್, ಅಂಗೋಲಾ, ಗಿನ್ನಾ ಮುಂತಾದ ಪ್ರದೇಶಗಳು ಪೋರ್ಚುಗೀಸರ ವಸಾಹತುಗಳಾಗಿದ್ದವು. ಈ ಪ್ರದೇಶಗಳು ಪೋರ್ಚುಗೀಸರ ಆಳ್ವಿಕೆಗೆ ಒಳಪಟ್ಟಿದ್ದರೂ ಬ್ರಿಟಿಷರ ಸಾಮಾಜ್ಯಶಾಹಿ ನೀತಿಯಿಂದಾಗಿ ಬ್ರಿಟಿಷರ ಹತೋಟಿಗೂ ಒಳಪಡಬೇಕಾಯಿತು. ಪೋರ್ಚುಗಲ್ ವ್ಯಾಪಾರಸ್ಥರು ಯುರೋಪಿನ ಇತರ ರಾಷ್ಟ್ರಗಳ ವ್ಯಾಪಾರಸ್ಥರಂತೆ ಶ್ರೀಮಂತರಾಗಿರಲಿಲ್ಲ. ಈ ಕಾರಣಕ್ಕಾಗಿ ಬ್ರಿಟನ್ ಮತ್ತು ಜರ್ಮನಿಯಿಂದ ಬಂಡವಾಳವನ್ನು ಪಡೆದುಕೊಂಡರು. ಬಂಡವಾಳದ ಮರುಪಾವತಿಯ ಪ್ರಶ್ನೆ ಬಂದಾಗ ತಮ್ಮ ವಸಾಹತುಗಳಿಂದ ಹೆಚ್ಚುವರಿ ತೆರಿಗೆಯನ್ನು ವಿಧಿಸಿ ಹಣವನ್ನು ಸಂಗ್ರಹಿಸುತ್ತಿದ್ದರು. ಗುಲಾಮ ವ್ಯಾಪಾರ ಪದ್ಧತಿ ಹಿಂದಿನಂತೆಯೇ ಮುಂದುವರಿಯಿತು. ಮೊಜಾಂಬಿಕ್‌ನಿಂದ ದಕ್ಷಿಣ ಆಫ್ರಿಕಾದ ಒಕ್ಕೂಟ ಮತ್ತು ದಕ್ಷಿಣ ರೊಡೋಶಿಯಾಕ್ಕೆ ಕೆಲಸಗಾರರನ್ನು ರಫ್ತು ಮಾಡಲಾಗುತ್ತಿತ್ತು. ಪ್ರಥಮ ಜಾಗತಿಕ ಯುದ್ಧದ ಸಂದರ್ಭದಲ್ಲಿ ಪೋರ್ಚುಗೀಸರ ವಸಾಹತುಗಳಲ್ಲಿ ದಂಗೆಗಳು ಪ್ರಾರಂಭಗೊಂಡವು. ಗಿನಿಯಾದಲ್ಲಿ ೧೯೧೭, ೧೯೨೫ ಮತ್ತು ೧೯೩೬ರಲ್ಲಿ ಮೂರು ಬಾರಿ ದಂಗೆ ಏರ್ಪಟ್ಟಿತು. ೧೯೨೫ರಲ್ಲಿ ಮೊಜಾಂಬಿಕ್, ೧೯೨೪ ಮತ್ತು ೧೯೨೫ರಲ್ಲಿ ಅಂಗೋಲದಲ್ಲಿ ಕಾರ್ಮಿಕರು ಮತ್ತು ರೈತರು ಪೋರ್ಚುಗೀಸ್ ಆಳ್ವಿಕೆಯ ವಿರುದ್ಧ ಮುಷ್ಕರ ನಡೆಸಿದರು. ೧೯೨೯ರಲ್ಲಿ ಅಂಗೋಲಾದಲ್ಲಿ ರಾಷ್ಟ್ರೀಯ ಆಫ್ರಿಕನ್ ಲೀಗ್ ಮತ್ತು ಸ್ಥಳೀಯರ ಪ್ರಾದೇಶಿಕ ಸಂಸ್ಥೆಗಳು ಸ್ಥಾಪನೆಗೊಂಡವು. ಈ ಸಂಸ್ಥೆಗಳು ಶೈಕ್ಷಣಿಕ ಚಟುವಟಿಕೆಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟವು. ೧೯೩೦ರಲ್ಲಿ ಪೋರ್ಚುಗಲ್ ವಸಾಹತು ಕಾಯಿದೆಯೊಂದನ್ನು ಜಾರಿಗೊಳಿಸಿ ವಸಾಹತುಗಳ ಮೇಲಿನ ನೇರ ಆಡಳಿತವನ್ನು ಸಮರ್ಥಿಸಿಕೊಂಡಿತು. ಈ ಕಾಯಿದೆಯ ಪ್ರಕಾರ ಆಫ್ರಿಕನ್ನರು ಅನಾಗರಿಕರು ಮತ್ತು ಪೋರ್ಚುಗೀಸರು ನಾಗರಿಕರು. ೧೯೩೦ ಮತ್ತು ೧೯೩೯ರಲ್ಲಿ ಅಂಗೋಲದಲ್ಲಿಯೂ ಪೋರ್ಚುಗೀಸರ ವಿರುದ್ಧ ಕ್ರಾಂತಿ ಉಂಟಾಯಿತು.

ಆಫ್ರಿಕಾದ ವಿಭಜನೆಯಲ್ಲಿ ಪಾಲ್ಗೊಂಡ ಯುರೋಪಿನ ರಾಷ್ಟ್ರಗಳಲ್ಲಿ ಇಟಲಿ ಕಡೆಯ ರಾಷ್ಟ್ರ. ಇಟಲಿ ದೇಶದ ವಸಾಹತುಗಳಾಗಿದ್ದ ಸೊಮಾಲಿಯಾ, ಇರಿಟ್ರ್ಯ, ನೈಲ್ ಪ್ರದೇಶ, ಟ್ರಿಪೋಲಿ, ಅಬಿಸೀನಿಯಾ ಮತ್ತು ಲಿಬಿಯಾಗಳಲ್ಲಿ ೧೯೧೪ರಿಂದ ೧೯೪೦ರವರೆಗೆ ಅನೇಕ ಕ್ರಾಂತಿಕಾರಿ ಬೆಳವಣಿಗೆಗಳು ಉಂಟಾದವು. ಸೊಮಾಲಿಯಾವನ್ನು ಬ್ರಿಟನ್, ಫ್ರಾನ್ಸ್ ಮತ್ತು ಇಟಲಿ ದೇಶಗಳು ಹಂಚಿಕೊಂಡಿದ್ದವು. ೧೯೨೫ ರಿಂದ ೧೯೨೭ರವರೆಗೆ ಮಹಮ್ಮದ್

ಹಸನ್‌ನ ನೇತೃತ್ವದಲ್ಲಿ ಸೊಮಾಲಿಯಾದಲ್ಲಿ ಇಟಲಿ ವಿರೋಧಿ ಕ್ರಾಂತಿಗಳು ನಡೆದವು. ಇದೇ ರೀತಿಯ ಬೆಳವಣಿಗೆಗಳನ್ನು ನಾವು ಇಟಲಿಯ ಅಧೀನದಲ್ಲಿದ್ದ ಇತರ ಪ್ರದೇಶಗಳಲ್ಲಿಯೂ ಕಾಣಬಹುದು. ಇಪ್ಪತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಈ ಪ್ರದೇಶಗಳು ಸ್ವತಂತ್ರಗೊಂಡವು. ಆಫ್ರಿಕಾದ ಕಾಂಗೋ ಪ್ರದೇಶದ ಮೇಲೆಯೇ ತನ್ನ ಗಮನವನ್ನು ಕೇಂದ್ರೀಕರಿಸಿಕೊಂಡಿದ್ದ ಬೆಲ್ಜಿಯಂ ಇನ್ನಿತರ ಪ್ರದೇಶಗಳನ್ನು ತನ್ನ ಆಳ್ವಿಕೆಗೆ ಸೇರಿಸಿಕೊಂಡಿತು. ಇವುಗಳಲ್ಲಿ ರುವಾಂಡಾ ಮತ್ತು ಉರುಂಡಿಗಳು ಪ್ರಮುಖವಾದವು. ಪ್ರಥಮ ಜಾಗತಿಕ ಯುದ್ಧದ ನಂತರ ಬೆಲ್ಜಿಯಂ ಕಾಂಗೋದಲ್ಲಿ ಗಣಿಗಾರಿಕೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿತು. ಅದೇ ರೀತಿ ತಮ್ಮ ಆಸಕ್ತಿ ಮತ್ತು ಬೇಡಿಕೆಗೆ ಅನುಗುಣವಾದ ವ್ಯವಸಾಯ ಪದ್ಧತಿಯನ್ನು ಕಾಂಗೋದಲ್ಲಿ ಜಾರಿಗೆ ತರಲಾಯಿತು. ಕೈಗಾರಿಕಾ ಕ್ಷೇತ್ರದಲ್ಲೂ ಕಾಂಗೋದ ಕಾರ್ಮಿಕರು ವಸಾಹತುಗಾರರನ್ನೇ ಆಶ್ರಯಿಸಬೇಕಿತ್ತು. ಬೆಲ್ಜಿಯಂನ ವಸಾಹತು ಕೌನ್ಸಿಲ್‌ನಲ್ಲಿ ಕಾಂಗೋದ ಪ್ರತಿನಿಧಿಗಳಿಗೆ ಸ್ಥಾನವಿರಲಿಲ್ಲ. ನಗರ ಪ್ರದೇಶಗಳಲ್ಲಿಯೂ ಆಫ್ರಿಕನ್ನರು ಮುಖ್ಯ ಕೇಂದ್ರಗಳಲ್ಲಿ ವಾಸಿಸುತ್ತಿದ್ದರೆ ಆಫ್ರಿಕನ್ನರು ಕೊಳಚೆ ಪ್ರದೇಶಗಳಲ್ಲಿ ವಾಸಿಸಬೇಕಾಗಿತ್ತು.

**ಕಿಂಬಾಂಗು ಚಳವಳಿ**

ಕಾಂಗೋದಲ್ಲಿ ವಸಾಹತುಶಾಹಿ ಆಳ್ವಿಕೆಯ ವಿರುದ್ಧ ನಡೆದ ಪ್ರಮುಖ ಘಟನೆಯೆಂದರೆ ಕಿಂಬಾಂಗು ಚಳುವಳಿ. ಇದೊಂದು ಧಾರ್ಮಿಕ ಸಂಘಟನೆಯಾಗಿದ್ದು ಸ್ಥಳೀಯ ಧಾರ್ಮಿಕ ಮುಖಂಡ ಕಿಂಬಾಂಗು ಇದರ ನೇತೃತ್ವವನ್ನು ವಹಿಸಿದ. "ಕಾಂಗೋ ಕಾಂಗೋದ ಜನರಿಗೆ" ಎನ್ನುವುದು ಈ ಚಳುವಳಿಯ ಮುಖ್ಯ ಪ್ರಣಾಳಿಕೆಯಾಗಿತ್ತು. ಕೃಷಿಕರು ಮತ್ತು ಕೈಗಾರಿಕಾ ಕಾರ್ಮಿಕರು ಈ ಚಳುವಳಿಯಲ್ಲಿ ಪಾಲ್ಗೊಂಡರು. ಬೆಲ್ಜಿಯಂನ ವ್ಯಾಪಾರ ಮತ್ತು ರಾಜ್ಯವಿಸ್ತಾರದ ಧೋರಣೆಯ ಕುರಿತು ಜನರಲ್ಲಿ ಅರಿವು ಮೂಡಿಸುವ ಉದ್ದೇಶವನ್ನು ಕಿಂಬಾಂಗು ಚಳುವಳಿಯು ಹೊಂದಿತ್ತು. ಅದೇ ರೀತಿ ಬಿಳಿಯರ ಧಾರ್ಮಿಕ ನೀತಿಯನ್ನು ತಡೆಗಟ್ಟುವ ಯೋಜನೆಯನ್ನು ಈ ಚಳುವಳಿ ಹಾಕಿಕೊಂಡಿತು. ಆದರೆ ೧೯೨೧ರಲ್ಲಿ ಬೆಲ್ಜಿಯಂ ಸರಕಾರ ಕಿಂಬಾಂಗು ಚಳುವಳಿಯನ್ನು ಹತ್ತಿಕ್ಕಿತು. ಈ ಚಳುವಳಿಯ ಮುಖಂಡ ಕಿಂಬಾಂಗುವನ್ನು ಸೆರೆಹಿಡಿದು ಜೀವಾವಧಿ ಶಿಕ್ಷೆ ವಿಧಿಸಲಾಯಿತು. ಕಿಂಬಾಂಗು ಚಳುವಳಿಯ ಮಾದರಿಯ ಇನ್ನಿತರ ಚಳುವಳಿಗಳು ಪ್ರಾರಂಭಗೊಂಡರೂ ಬೆಲ್ಜಿಯಂನ ಸಾಮ್ರಾಜ್ಯಶಾಹಿ ನೀತಿಗೆ ಸಿಲುಕಿ ವಿಫಲಗೊಂಡವು. ೧೯೩೧ರಲ್ಲಿ ಕಾಂಗೋ ಪ್ರದೇಶದಲ್ಲಿ ನಡೆದ ಗಲಭೆ ರಕ್ತಪಾತದಲ್ಲಿ ಕೊನೆಗೊಂಡಿತು. ಪ್ರಥಮ ಜಾಗತಿಕ ಯುದ್ಧದ ನಂತರ ಏರ್ಪಟ್ಟ ಪ್ಯಾರಿಸ್ ಶಾಂತಿ ಒಪ್ಪಂದದ ಪ್ರಕಾರ ರುವಾಂಡಾ ಮತ್ತು ಉರುಂಡಿಯನ್ನು ಬೆಲ್ಜಿಯಂನ ಆಧೀನಕ್ಕೆ ಬಿಟ್ಟುಕೊಡಲಾಯಿತು. ೧೯೨೫ರಲ್ಲಿ ಬೆಲ್ಜಿಯಂ ಹೊರಡಿಸಿದ ಕಾಯಿದೆಯ ಪ್ರಕಾರ ರುವಾಂಡಾ ಮತ್ತು ಉರುಂಡಿಗಳನ್ನು ಬೆಲ್ಜಿಯಂನ ಕಾಂಗೋದೊಡನೆ ವಿಲೀನಗೊಳಿಸಲಾಯಿತು. ಈ ಎರಡೂ ಪ್ರದೇಶಗಳಲ್ಲಿನ ಶ್ರೀಮಂತವರ್ಗ ಬೆಲ್ಜಿಯಂ ಸರಕಾರದ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸಿದ್ದೇ ವಸಾಹತು ಆಳ್ವಿಕೆ ಬಲಗೊಳ್ಳುವುದಕ್ಕೆ ಮೂಲ ಕಾರಣ.

ಆಫ್ರಿಕಾ ಖಂಡವನ್ನು ತಮ್ಮ ಉದ್ದೇಶ ಈಡೇರಿಕೆಗಾಗಿ ವಿಭಜಿಸಿಕೊಂಡ ಯುರೋಪಿನ ರಾಷ್ಟ್ರಗಳು ಎರಡು ಜಾಗತಿಕ ಯುದ್ಧಗಳ ನಡುವಿನ ಅವಧಿಯಲ್ಲಿ ಅನೇಕ ರೀತಿಯ ಕಷ್ಟ-ನಷ್ಟಗಳನ್ನು ಎದುರಿಸಬೇಕಾಗಿ ಬಂತು. ಈ ಅವಧಿಯಲ್ಲಿ ಆಫ್ರಿಕನ್ನರಲ್ಲಿ ತಮ್ಮ ತಾಯ್ನಾಡಿನ ಬಗ್ಗೆ ಪ್ರೀತಿ ಮತ್ತು ಅರಿವು ಮೂಡಲಾರಂಭಿಸಿತು. ಆಫ್ರಿಕಾದ ಎಲ್ಲ ಭೂಪ್ರದೇಶಗಳಲ್ಲಿಯೂ ತಮ್ಮ ನೇರ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸುವ ದೃಢ ವಿಶ್ವಾಸವನ್ನು ಯುರೋಪಿನ ರಾಷ್ಟ್ರಗಳು ಹೊಂದಿದ್ದವು. ಇದೇ ಹಿನ್ನೆಲೆಯಲ್ಲಿ ಕಂದಾಯದ ದರವನ್ನು ಹೆಚ್ಚಿಸಲಾಯಿತು. ಇದರಿಂದಾಗಿ ಕಾರ್ಮಿಕರ ಸ್ಥಿತಿ ಹಿಂದಿಗಿಂತಲೂ ಕೀಳಾಯಿತು. ಅರಸು ಮನೆತನಗಳ ಸ್ಥಾನವನ್ನು ಸಾಮಾನ್ಯ ಪ್ರಜೆಯ ಮಟ್ಟಕ್ಕೆ ನೀಡಬೇಕೆಂದು ಗೊತ್ತುಪಡಿಸಲಾಯಿತು. ಈ ಕಾರಣಕ್ಕಾಗಿಯೇ ೧೯೧೪ರಿಂದ ೧೯೪೦ರ ಅವಧಿಯಲ್ಲಿ ರೈತ ಹೋರಾಟಗಳು, ಕೈಗಾರಿಕಾ ಕಾರ್ಮಿಕರ ಮುಷ್ಕರಗಳೂ, ಬುಡಕಟ್ಟು ಜನರ ಬಂಡಾಯಗಳು ಆಗಾಗ್ಗೆ ಜರುಗತೊಡಗಿದವು ಮತ್ತು ಈ ಉದ್ದೇಶಕ್ಕಾಗಿ ಅನೇಕ ಸಂಘ-ಸಂಸ್ಥೆಗಳು ಹುಟ್ಟಿಕೊಂಡವು. ವಸಾಹತು ಆಡಳಿತದ ವಿರುದ್ಧ ಭುಗಿಲೆದ್ದ ಈ ಎಲ್ಲಾ ಆಂದೋಲನಗಳು. ಯುರೋಪಿಯನ್ನರ ವಿರುದ್ಧ ಆಫ್ರಿಕಾದ ಜನರಲ್ಲಿ ದ್ವೇಷ ಭಾವನೆ ಎಷ್ಟು ಆಳವಾಗಿ ಬೇರು ಬಿಟ್ಟಿದ್ದಿತೆಂಬುದನ್ನು ತಿಳಿಸುತ್ತದೆ. ಇದು ಆಫ್ರಿಕಾದ ರಾಷ್ಟ್ರೀಯ ವಿಮೋಚನಾ ಚಳುವಳಿಯ ಪ್ರಾಥಮಿಕ ಹಂತವಾಗಿದ್ದು ಎರಡನೆಯ ಜಾಗತಿಕ ಯುದ್ಧದ ನಂತರ ಆಫ್ರಿಕಾದ ದೇಶಗಳು ಸ್ವತಂತ್ರಗೊಂಡವು.

**ಪರಾಮರ್ಶನ ಗ್ರಂಥಗಳು**


೧. ಪೀಟರ್ ಮಾನ್ಸ್‌ಫೀಲ್ಡ್, ೧೯೭೧. ದಿ ಬ್ರಿಟಿಷ್ ಇನ್ ಈಜಿಪ್ಟ್, ವ್ಹಿಡನ್ ಫೀಲ್ಡ್ ಮತ್ತು ನಿಕೋಲ್‌ಸನ್.

೨. ರೋಬರ್ಟ್ಸ್, ಎ.ಡಿ., ೧೯೭೫. ದಿ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಆಫ್ರಿಕಾ ೧೯೦೫, ೧೯೪೦, ಕೇಂಬ್ರಿಡ್ಜ್: ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್.

೩. ಜಾನ್ ಆರ್ಮ್‌ಸ್ಟ್ರಾಂಗ್ ಎ., ೧೯೮೨. ನೇಶನ್ಸ್ ಬಿಫೋರ್ ನೇಶನಲಿಸಂ, ಚಾಪೆಲ್ ಹಿಲ್; ಯೂನಿವರ್ಸಿಟಿ ಆಫ್ ಎನ್.ಪಿ. ಪ್ರೆಸ್.

೪. ಲೇಪಿಂಗ್ ಬ್ರಿಯಾನ್, ೧೯೮೬. ಎಪಾರ್‌ತೈಡ್ ಎ ಹಿಸ್ಟರಿ, ಲಂಡನ್: ಕೋಲಿನ್ಸ್ ಪಬ್ಲಿಷಿಂಗ್ ಗ್ರೂಪ್.

೫. ಡೆವನ್‌ಪೋರ್ಟ್ ಟಿ.ಆರ್., ೧೯೮೪. ಸೌತ್ ಆಫ್ರಿಕಾ, ಎ ಮಾಡರ್ನ್ ಹಿಸ್ಟರಿ, ಮೆಕ್ ಮಿಲನ್.

೬. ಮೊನಿಕಾ ವಿಲ್ಸನ್ ಮತ್ತು ಲಿಯೋನಾರ್ಡ್ ಥೋಮ್ಸನ್ (ಸಂ), ೧೯೭೧. ಆಕ್ಸ್‌ಫರ್ಡ್ ಹಿಸ್ಟರಿ ಆಫ್ ಸೌತ್ ಆಫ್ರಿಕಾ, ಸಂಪುಟ ೨, ೧೮೭೦-೧೯೬೬, ಆಕ್ಸ್‌ಫರ್ಡ್: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.

೭

# ಎರಡನೆಯ ಮಹಾಯುದ್ಧದ ನಂತರ ಆಫ್ರಿಕಾ

ಎ. ರಾಮೇಗೌಡ

ಸುಮಾರು ಮುಕ್ಕಾಲು ಶತಮಾನದ ಕಾಲ ಆಫ್ರಿಕನ್ನರು ಯುರೋಪಿಯನ್ನರ ಆಳ್ವಿಕೆಗೆ ಒಳಪಟ್ಟಿದ್ದರೂ ಎರಡನೇ ಮಹಾಯುದ್ಧದ ಕೊನೆಯಲ್ಲಿ ಯೂರೋಪಿನ ಹಿಡಿತದ ವಿರುದ್ಧ ಆಫ್ರಿಕನ್ನರು ದಂಗೆ ಎದ್ದರು. ಹತ್ತೊಂಬತ್ತನೇ ಶತಮಾನದ ಕೊನೆಯ ಎರಡು ದಶಕಗಳಲ್ಲಿ ಯುರೋಪಿಯನ್ನರು ಆಫ್ರಿಕಾದ ಸಂಪೂರ್ಣ ಭಾಗವನ್ನು ಆಕ್ರಮಿಸತೊಡಗಿದರು. ಆಫ್ರಿಕಾದ ವಿಷಯಗಳು ಯುರೋಪಿನಲ್ಲಿ ಚರ್ಚಿತವಾಗುತ್ತಿದ್ದುದು ಸಾಮಾನ್ಯವಾಗಿತ್ತು. ೧೯೩೦ರ ಹೊತ್ತಿಗೆ ಈ ರೀತಿಯ ಧೋರಣೆ ಸಂಪ್ರದಾಯವಾಗಿ ಹೋಗಿತ್ತು. ಆಫ್ರಿಕಾದ ಕೆಲ ದೇಶಪ್ರೇಮಿಗಳು ಈ ರೀತಿಯ ಪರಿಸ್ಥಿತಿಯಿಂದಾಗಿ ಕುದಿಯತೊಡಗಿದರು. ಎರಡು ಮಹಾಯುದ್ಧಗಳ ಪ್ರಭಾವದಿಂದಾಗಿ ಆಫ್ರಿಕನ್ನರು ಸ್ವಂತದ ನಿರ್ದಿಷ್ಟವಾದ ನಿರ್ಧಾರವನ್ನು ಕಂಡುಕೊಂಡರು. ೧೯೪೫ರಲ್ಲಿ ದಕ್ಷಿಣ ಆಫ್ರಿಕಾವನ್ನು ಹೊರತುಪಡಿಸಿ ಈಜಿಪ್ಟ್, ಲೈಬಿರಿಯಾ ಮತ್ತು ಇಥಿಯೋಪಿಯಾ ಇವು ಯುರೋಪಿನ ಹಿಡಿತದಲ್ಲಿದ್ದವು. ಕಳೆದ ಎಪ್ಪತ್ತು ವರ್ಷಗಳಿಂದಲೂ ಆಫ್ರಿಕಾದ ಜನಜೀವನ ಯೂರೋಪಿನ ರಾಷ್ಟ್ರಗಳ ಹಿಡಿತದಲ್ಲಿತ್ತು. ಆಫ್ರಿಕಾದ ರಾಷ್ಟ್ರೀಯತೆ ಎಚ್ಚೆತ್ತ ಹದಿನೈದು ವರ್ಷಗಳಲ್ಲೇ ಆಫ್ರಿಕಾವು ಯುರೋಪಿಯನ್ನರ ನೇರ ಸಾರ್ವಭೌಮತ್ವವನ್ನು ಇದೇ ಖಂಡದಲ್ಲಿ ಮುಕ್ತಿಗೊಳಿಸಿತು.

**ಪಶ್ಚಿಮ ಆಫ್ರಿಕಾ**

ಎರಡನೇ ಮಹಾಯುದ್ಧದ ನಂತರ ಪಶ್ಚಿಮ ಆಫ್ರಿಕಾದ ಮೇಲಿದ್ದ ಇತರ ದೇಶಗಳ ಹಿಡಿತ ಮುಕ್ತವಾಗತೊಡಗಿತು. ಈ ಮಹಾಯುದ್ಧವು ನೇರವಾಗಿ ಪಶ್ಚಿಮ ಆಫ್ರಿಕಾದಲ್ಲಿ ಬ್ರಿಟಿಷರಿಗಿಂತ ಫ್ರೆಂಚರಿಗೆ ಹೆಚ್ಚಿನ ಪೆಟ್ಟು ನೀಡಿತು. ೧೯೪೨ರವರೆಗೆ ಫ್ರೆಂಚರ ಪಶ್ಚಿಮ ಆಫ್ರಿಕಾವು ವಿಚೆಯ ಆಡಳಿತಕ್ಕೆ ಒಳಪಟ್ಟಿತು. ಇದು ಆತನ ಅಧಿಕಾರವನ್ನು ಹೆಚ್ಚಿಸಿತ್ತು.

ಬಲವಂತದ ದುಡಿಮೆ ಆಫ್ರಿಕನ್ನರ ಶೋಷಣೆ ಇಂತಹ ಪೈಶಾಚಿಕ ವರ್ತನೆಗಳು ೧೯೩೦ರಲ್ಲಿ ಆಫ್ರಿಕನ್ನರು ಪ್ಯಾರಿಸ್‌ನಲ್ಲಿ ಹಲವು ರಾಜಕೀಯ ಸಂಘಗಳನ್ನು ಸೇರುವಂತೆ ಮಾಡಿತು.

೧೯೪೬ರ ಹೊತ್ತಿಗೆ ಫ್ರೆಂಚರ ಪಶ್ಚಿಮ ಆಫ್ರಿಕಾದಲ್ಲಿದ್ದ ಆಫ್ರಿಕಾದ ನಾಯಕರು ಫ್ರೆಂಚರೊಂದಿಗೆ ಸಮಾನ ನಾಗರಿಕ ಹಕ್ಕು ಬೇಕೆಂದು ಮತ್ತು ಬಲವಂತದ ದುಡಿಮೆಯನ್ನು ಅನುಸರಿಸತೊಡಗಿದರು. ಜನವರಿ ೮, ೧೯೫೦ರಲ್ಲಿ ಒಂದು ಸಾಧಾರಣವಾದ ಮುಷ್ಕರ ಪ್ರಾರಂಭವಾಯ್ತು. ಗವರ್ನರನ್ನು ತುರ್ತುಪರಿಸ್ಥಿತಿಯನ್ನು ಹೇರಿ ನುಕ್ರುಮ್ ಮತ್ತು ಆತನ ಸಂಗಡಿಗರನ್ನು ಬಂಧಿಸಿದನು. ತುರ್ತುಪರಿಸ್ಥಿತಿ ಕೊನೆಗೊಂಡು ಮಾರ್ಚ್ ೧೯೫೦ರಲ್ಲಿ ನುಕ್ರುಹನ್ ಉಪನಾಯಕನಾಗಿ ಮುಷ್ಕರವನ್ನು ಮುಂದುವರೆಸಿದನು. ಕೌಸೇ ಸಂವಿಧಾನದ ನೇತೃತ್ವದಲ್ಲಿ ಮೊದಲ ಚುನಾವಣೆಯು ೧೯೫೧ರ ಫೆಬ್ರವರಿಯಲ್ಲಿ ಪ್ರಾರಂಭವಾಯಿತು. ನುಕ್ರುವ್ ಬಂದಿಖಾನೆಯಲ್ಲಿದ್ದಾಗಲೇ ಚುನಾವಣೆಯಲ್ಲಿ ಗೆದ್ದ ಆತನನ್ನು ಬಿಡುಗಡೆಗೊಳಿಸಲಾಯಿತು. ೧೯೫೨ರಲ್ಲಿ ಆತನೇ ಪ್ರಧಾನಮಂತ್ರಿಯಾದನು.

೧೯೫೧ರ ಚುನಾವಣೆಯ ನಂತರ ಎರಡು ವರ್ಷಗಳ ಅವಧಿಯಲ್ಲಿ ಅಂದರೆ ೧೯೫೩ರ ಅವಧಿಯ ಹೊತ್ತಿಗೆ ನುಕ್ರುಮ್ ಜವಾಬ್ದಾರಿಯುತ ಉತ್ತಮ ಸರ್ಕಾರವನ್ನು ನೀಡಿದ. ಇಲ್ಲಿಂದ ಮುಂದೆ ಬ್ರಿಟಿಷ್ ಸರ್ಕಾರ ಸ್ವಾತಂತ್ರ್ಯವನ್ನು ಕೊಡಲು ನಿರ್ಧರಿಸಿತು.

ಸಿ.ಪಿ.ಪಿ.ಯ ಅಧಿಕ ಬಹುಮತದಿಂದ ೧೯೫೪ ಮತ್ತು ೫೬ರಲ್ಲಿ ಲೆಜಿಸ್ಲೆಚರ್‌ಗಳು ಚುನಾಯಿತರಾದರು. ವಸಾಹತುಗಳ ಕಾರ್ಯದರ್ಶಿಯು ಸಮಂಜಸ ಬಹುಮತಗಳನ್ನು ಹೊಂದಿದ ಪ್ರದೇಶಕ್ಕೆ ಸ್ವಾತಂತ್ರ್ಯ ಕೊಡುವುದಾಗಿ ವಚನವಿತ್ತರು. ಅಂತೆಯೇ ವಸಾಹತು ಕಾರ್ಯದರ್ಶಿ ೧೯೫೭ರ ಮಾರ್ಚ್ ೬ರಂದು ಘಾನಾದ ಸ್ವಾತಂತ್ರ್ಯ ದಿನವೆಂದು ಘೋಷಿಸಿ ದರು. ೧೯೬೦ರಲ್ಲಿ ಘಾನಾ ಗಣರಾಜ್ಯವಾಯಿತು. 'ಘಾನಾ' ಯೂರೋಪಿಯನ್ನರಿಂದ ಮುಕ್ತಿ ಹೊಂದಿದ ಮೊದಲ ರಾಷ್ಟ್ರವಾಯಿತು. ಅಲ್ಲಿಂದಲೇ ನುಕ್ರುಮ್ ಇಡೀ ಆಫ್ರಿಕಾವನ್ನು ಬಿಳಿಯರಿಂದ ಮುಕ್ತಿಗೊಳಿಸಲು ಪ್ರತಿಧ್ವನಿಯ ಮಳೆಗರೆದನು.

ಇದರಂತೆ ನೈಜೀರಿಯಾ ಕೂಡ ೧೯೫೬ರಲ್ಲಿ ತನ್ನ ಸ್ವಂತ ಸರ್ಕಾರಕ್ಕಾಗಿ ಬೇಡಿಕೆಯಿಟ್ಟಿತು. ೫೦,೦೦೦,೦೦ ಜನಸಂಖ್ಯೆಯನ್ನು ಹೊಂದಿದ್ದ ನೈಜೀರಿಯಾವು ಆಫ್ರಿಕಾದ ದೊಡ್ಡದೇಶ. ಬೇಡಿಕೆಯ ಪರಿಣಾಮವಾಗಿ ಪೂರ್ವ ಮತ್ತು ಪಶ್ಚಿಮ ನೈಜೀರಿಯಾವು ತನ್ನ ಪ್ರತ್ಯೇಕ ಸರ್ಕಾರವನ್ನು ೧೯೫೭ರಲ್ಲಿ ಪಡೆಯಿತು. ೧೯೬೦ರ ಅಕ್ಟೋಬರ್ ೧ರಲ್ಲಿ ನೈಜೀರಿಯಾವು ಸ್ವತಂತ್ರವಾಯಿತು. ೧೯೬೩ರಲ್ಲಿ ನೈಜೀರಿಯಾವು ಸಂಯುಕ್ತವಾಗಿದ್ದರೂ ಒಳ ಆಡಳಿತದಲ್ಲಿ ಸ್ವತಂತ್ರವಾಗಿ ರೂಪುಗೊಂಡಿತು.

ಹೊಸದಾಗಿ ಆಚರಣೆಗೆ ಬಂದ ಫ್ರೆಂಚ್ ಕಮ್ಯುನಿಟಿಯು ಉಪಯೋಗಕ್ಕೆ ಬರದೆ ಅಸಮಂಜಸವಾಗಿತ್ತು. ಪಶ್ಚಿಮ ಆಫ್ರಿಕಾದ ಎಲ್ಲಾ ದಿಕ್ಕುಗಳಿಂದಲೂ ಸ್ವತಂತ್ರದ ಕೂಗು ಕೇಳುತ್ತಿತ್ತು. ೧೯೫೯ರ ಏಪ್ರಿಲ್‌ನಲ್ಲಿ ಮಾಲಿ ಫೆಡರೇಶನ್‌ನಲ್ಲಿ ಸೆನೆಗಲ್ ಮತ್ತು ಫ್ರೆಂಚ್ ಸೂಡಾನ್‌ಗಳು ಜೊತೆಯಾದವು. ಇವು ಫ್ರಾನ್ಸ್‌ನ ಸ್ವಾತಂತ್ರ್ಯ ಕೇಳುವ ಪ್ರತಿನಿಧಿಗಳಾದವು.

ಫ್ರೆಂಚ್ ಮಾಲಿನಲ್ಲಿ ೧೯೬೦ರಲ್ಲಿ ಅಲ್ಲಿಯ ಸಮುದಾಯಕ್ಕೆ ಮಾತ್ರ ಸ್ವತಂತ್ರ ದೊರೆಯಿತು. ೧೯೬೦ರಲ್ಲಿ ಟೋಗೋಲ್ಯಾಂಡ್ ಮತ್ತು ಕ್ಯಾಮರೂನ್‌ಗಳು ಗಣರಾಜ್ಯವಾದವು. ಇತರೆ ಕೆಲವು ಸಮುದಾಯ ರಾಜ್ಯಗಳು ಅವುಗಳ ಉದಾಹರಣೆಯನ್ನು ಪಾಲಿಸತೊಡಗಿದವು. ಜೂನ್ ೧೯೬೦ರಲ್ಲಿ ಐವರಿಕೋಸ್ಟ್, ನೈಗರ್, ಅಪ್ಪರ್ ವೋಲ್ಟ್ ಮತ್ತು ಡಾಹೋಮಿಗಳು ಸಮುದಾಯದ ಹೊರಗೂ ಸ್ವತಂತ್ರ ಕೊಡುವಂತೆ ಫ್ರಾನ್ಸ್ ಅನ್ನು ಕೇಳಿಕೊಂಡವು. ೧೯೬೦ರಲ್ಲಿ ಎಂಟು ಹೊಸ ಫ್ರೆಂಚ್ ಪಶ್ಚಿಮ ಆಫ್ರಿಕಾ ರಾಷ್ಟ್ರಗಳು ತಮ್ಮ ಸ್ಥಾನವನ್ನು ವಿಶ್ವಸಂಸ್ಥೆಯಲ್ಲಿ ಪಡೆದುಕೊಂಡವು.

### ದಕ್ಷಿಣ ಆಫ್ರಿಕಾ

ದಕ್ಷಿಣ ಆಫ್ರಿಕಾ ಮತ್ತು ಇತರೆ ಆಫ್ರಿಕಾ ದೇಶಗಳು ವಸಾಹತುಗಳಾಗಿರುವುದಕ್ಕೂ ವ್ಯತ್ಯಾಸವಿದೆ. ದಕ್ಷಿಣ ಆಫ್ರಿಕಾದ ಸರ್ಕಾರವು ಬಿಳಿಯರನ್ನು ಪ್ರತಿನಿಧಿಸಿತ್ತು. ಎರಡು ಪ್ರತ್ಯೇಕ ವಿಧಾನಗಳನ್ನೊಳಗೊಂಡ ಸರ್ಕಾರವು ಬಿಳಿಯರು ಮತ್ತು ಕರಿಯರನ್ನು ಪ್ರತ್ಯೇಕಿಸಿದ್ದರಿಂದ ಜನಾಂಗಭೇದ ಹೆಚ್ಚಿತ್ತು.

ಉತ್ತರ ರೊಡೇಶಿಯಾ, ದಕ್ಷಿಣ ರೊಡೇಶಿಯಾ ಮತ್ತು ದಕ್ಷಿಣ ಆಫ್ರಿಕಾದಲ್ಲಿ ಇಂಗ್ಲಿಷ್ ಮಾತನಾಡುವ ಜನರು ರಾಜಕೀಯಯದಲ್ಲಿ ಅಷ್ಟೊಂದು ಆಸಕ್ತರಾಗಿರಲಿಲ್ಲ. ಅವರ ಮುಖ್ಯ ಉದ್ದೇಶ ಹಣ ಗಳಿಸುವುದಾಗಿತ್ತು. ಬ್ರಿಟನ್ ಜನರಿಗೆ ಆಫ್ರಿಕಾದ ಆರಾಮದಾಯಕ ಜೀವನ ಹಿಡಿಸಿತ್ತು. ಆದರೂ ದಕ್ಷಿಣ ಆಫ್ರಿಕಾದ ಬ್ರಿಟಿಷರು ಸಾಮಾಜಿಕ ಬಿಗುವಿನಿಂದ ಮುಕ್ತರಾಗುವಂತಿರಲಿಲ್ಲ. ದೊಡ್ಡ ದೊಡ್ಡ ನಗರಗಳಲ್ಲಿ ಬಿಳಿಯ ಜನರು ಕರಿಯ ಜನರಿಂದ ದೂರವಾಗಿ ಪ್ರತ್ಯೇಕವಾಗಿ ವಾಸಿಸತೊಡಗಿದರು. ತುಪಾಕಿಯ ಜೀವನಕ್ಕೆ ಅಗತ್ಯವಾದ ವಸ್ತುವಾಗಿತ್ತು.

ಇದೇ ಸಮಯಕ್ಕೆ ವಿಶ್ವಸಂಸ್ಥೆಯು ದಕ್ಷಿಣ ಆಫ್ರಿಕಾದ ಸಂಯುಕ್ತ ಸಂಘದ ಸರ್ಕಾರಿ ನಾಯಕರನ್ನು ವರ್ಣಭೇದದ ಸಂಗತಿಗಳನ್ನು ಚರ್ಚಿಸಲು ಕರೆಯಿತು. ವಿಶ್ವಸಂಸ್ಥೆಯು ಉತ್ತರ ಮತ್ತು ದಕ್ಷಿಣ ಆಫ್ರಿಕಾದ ಬಗ್ಗೆ ಪ್ರಶ್ನೆಯನ್ನು ಎತ್ತಿದಾಗ ಹೆಚ್ಚಿನ ಸಂಖ್ಯೆಯ ಕರಿಯರು ಸಂಘದಲ್ಲಿ ಸಂಯೋಜಿತರಾಗುವ ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಈ ಜನಾಭಿಪ್ರಾಯವನ್ನು ವಿಶ್ವಸಂಸ್ಥೆಯು ತೀಕ್ಷ್ಣವಾಗಿ ಪರಿಗಣಿಸಲಿಲ್ಲ.

೧೯೫೦ ಮತ್ತು ೧೯೬೦ರಲ್ಲಿ ಉತ್ತರ ಮತ್ತು ದಕ್ಷಿಣ ಆಫ್ರಿಕಾವು ವಿಶ್ವಸಂಸ್ಥೆಯಲ್ಲಿ ಸಂಯೋಜಿತವಾಯಿತೆಂದು ಸಂಘವು ಘೋಷಿಸಿತು. ಬ್ರಿಟಿಷರು ಸಾಧಾರಣವಾಗಿ ಕೀನ್ಯಾ ಮತ್ತು ಉತ್ತರ-ದಕ್ಷಿಣ ರೊಡೇಶಿಯಾದಲ್ಲಿದ್ದರು. ಪೋರ್ಚುಗೀಸರ ವಸಾಹತುಗಳಿಂದ ಮೊಸಾಂಬಿಕ್ಯೂ ಮತ್ತು ಅಂಗೋಲದಲ್ಲಿ ಉದಾಸೀನ ಮನೋಭಾವವನ್ನು ಬಿಟ್ಟು ಈ ಪ್ರದೇಶಗಳಲ್ಲಿ ಕೆಲ ಪುಟ್ಟ ಆಫ್ರಿಕಾದ ಗಣ್ಯರನ್ನು ಬಿಳಿಯರ ಸಮಾಜಕ್ಕೆ ಸೇರಿಸಿಕೊಳ್ಳಲಾಯಿತು. ಏಕೆಂದರೆ, ಬಿಳಿ ಸ್ತ್ರೀಯರ ಸಂಖ್ಯೆ ಕಡಿಮೆಯಿತ್ತು. ಭಿನ್ನ ಜನಾಂಗಗಳ ಸಂಕರಕ್ಕೆ

ರಹದಾರಿ ನೀಡಲಾಯ್ತು. ಇಲ್ಲಿಂದ ಮುಂದೆ ದಕ್ಷಿಣ ಆಫ್ರಿಕಾದ ತುಂಬಾ ಸಾಮಾಜಿಕ ಆರ್ಥಿಕ ಉತ್ಕ್ರಾಂತಿ ಹರಡಿ ಇದು ಆಫ್ರಿಕಾದ ಎಲ್ಲಾ ಕಡೆ ಪ್ರಸಾರವಾಯ್ತು.

೧೯೫೦ ಮತ್ತು ೬೦ರಲ್ಲಿ ಕಪ್ಪು ಆಫ್ರಿಕನ್ನರು ಮಧ್ಯ ಮತ್ತು ಉತ್ತರ ಆಫ್ರಿಕಾದಲ್ಲಿ ಸ್ವತಂತ್ರ ರಾಷ್ಟ್ರಗಳನ್ನು ಹುಟ್ಟುಹಾಕತೊಡಗಿದರು. ಆದರೆ ಬಿಳಿಯರು ದಕ್ಷಿಣದಲ್ಲಿ ಕಪ್ಪು ಜನಾಂಗದವರ ರಾಷ್ಟ್ರೀಯತೆಯನ್ನು ಉತ್ತರದ ಪ್ರಭಾವಕ್ಕೆ ಒಳಗಾಗುವಂತೆ ಮತ್ತು ಬದಲಾಗದಂತೆ ತಡೆದಿದ್ದರು.

ಬಿಳಿಯ ರಾಷ್ಟ್ರೀಯವಾದಿಗಳು ನ್ಯಾಶನಲ್ ಪಾರ್ಟಿ ಎಂಬ ಹೆಸರಿನಲ್ಲಿ ನ್ಯಾಶನಲ್ ಮತ್ತು ಆಫ್ರಿಕನ್ನರ ಪಕ್ಷಗಳನ್ನು ಒಟ್ಟುಗೂಡಿಸಿದರು. ೧೯೫೧ರಲ್ಲಿ ಯೂನಿಯನ್ ಪಾರ್ಲಿಮೆಂಟನ್ನು ಪರಿಪೂರ್ಣ ಹತೋಟಿಗೆ ತೆಗೆದುಕೊಂಡರು. ಇದು ೧೯೭೦ರವರೆಗೂ ಮುಂದುವರೆದಿತ್ತು. ಹಲವಾರು ಕಾನೂನುಗಳನ್ನು ಜಾರಿಗೊಳಿಸಲಾಯ್ತು. ಅವುಗಳಲ್ಲಿ ಹಲವು ಬಿಳಿಯರ ವೈಯಕ್ತಿಕ ಸ್ವತಂತ್ರವನ್ನೂ ಸಹ ಮೊಟಕುಗೊಳಿಸಿದವು. ಈ ರೀತಿಯ ನಿರ್ಬಂಧದಿಂದಾಗಿ ಬಿಳಿಯರು ಯುರೋಪಿನ ಹೊರತಾದ ಸಮುದಾಯಕ್ಕೆ ಉಪಯುಕ್ತವಾದ ಮಾದರಿ ಜೀವನವನ್ನು ಕೇಳಿದರು. ೧೯೫೬ರಲ್ಲಿ ಕಾರ್ಮಿಕರ ಖಾತೆಯು ಕೆಲವು ಕೆಲಸಗಳನ್ನು ಬಿಳಿಯರಿಗೆಂದೇ ಮೀಸಲಿಟ್ಟಿತ್ತು. ಇದೇ ಕಾನೂನು ಬಿಳಿಯರು ಮತ್ತು ಕರಿಯರನ್ನು ಬೇರೆ ಬೇರೆ ಮಾಡಿತು. ಇದರಿಂದಾಗಿ ಕಪ್ಪು ಆಫ್ರಿಕನ್ನರು ದಂಗೆ ಏಳುವಂತಾಯ್ತು.

ಕರಿಯರು ಈ ರೀತಿಯ ವರ್ತನೆಯ ವಿರುದ್ಧ ಅಹಿಂಸಾತ್ಮಕ ದಂಗೆ ಎದ್ದು ಅವರದೇ ಆದ ಆಫ್ರಿಕನ್ ನ್ಯಾಷನ್ ಕಾಂಗ್ರೆಸ್ (ಎಎನ್‌ಸಿ) ಸಂಘವನ್ನು ಸ್ಥಾಪಿಸಿದರು. ೧೯೬೦ರಲ್ಲಿ ಟ್ರಾನ್ಸ್‌ವಾಲ್‌ನಲ್ಲಿರುವ ಶಾರ್‌ಪೆವೆಲ್ಲಿ(sharpavelle)ಯಲ್ಲಿ ಪೊಲೀಸರು ಅರವತ್ತು ಜನ ಆಫ್ರಿಕನ್ನರನ್ನು ಕೊಂದರು. ಶಾರ್‌ಪೆವೆಲ್ಲಿ ಹತ್ಯಾಕಾಂಡದಿಂದಾಗಿ ಪ್ರಪಂಚದ ಎಲ್ಲಾ ದಿಕ್ಕನಿಂದಲೂ ಬಿಳಿಯರ ವಿರುದ್ಧ ಹೇಳಿಕೆಗಳು ಬರತೊಡಗಿದವು. ಇದು ದಕ್ಷಿಣ ಆಫ್ರಿಕಾವನ್ನು ಪ್ರೇರೇಪಿಸಿತು. ೧೯೬೧ರಲ್ಲಿ ಅದು ಸ್ವತಂತ್ರ ಗಣರಾಜ್ಯವಾಯಿತು. ತಕ್ಷಣದಲ್ಲಿಯೇ ತುರ್ತು ಪರಿಸ್ಥಿತಿಯನ್ನು ಜಾರಿಗೆ ತಂದು ಸಾವಿರಾರು ಆಫ್ರಿಕನ್ನರನ್ನೂ ಅವರು ಸಹಾಯಕ್ಕೆ ನಿಂತ ಬಿಳಿಯರನ್ನೂ ಬಂಧಿಸಲಾಯಿತು.

ಪೋರ್ಚುಗೀಸರ ಆಡಳಿತಕ್ಕೊಳಪಟ್ಟ ಅಂಗೋಲ ಮತ್ತು ಮೊಸಾಂಬಿಕ್ ರಾಜನೀತಿಗಳು ದಕ್ಷಿಣ ಆಫ್ರಿಕಾದ ನೀತಿಯಂತಿರದೆ ಹಳೆಯ ಸಾಂಪ್ರದಾಯಿಕ ವಸಾಹತು ನೀತಿಗಳನ್ನು ಬಳಸುತ್ತಿದ್ದರು. ಉಳಿದೆಲ್ಲ ಯುರೋಪ್ ಶಕ್ತಿಗಳಂತೆ ಪೋರ್ಚುಗೀಸ್ ಕೂಡ ಆಫ್ರಿಕಾದಲ್ಲಿ ತಮ್ಮ ನೆಲೆ ಅಜರಾಮರವೆಂದು ಘೋಷಿಸಿತ್ತು. ಆಫ್ರಿಕನ್ನರ ರಾಷ್ಟ್ರೀಯತೆಯು ಪೋರ್ಚುಗೀಸರನ್ನು ಎಲ್ಲಿ ಅಲ್ಲಾಡಿಸುವುದೋ ಎಂದು ಅದನ್ನು ನಿಗ್ರಹಿಸಲು ಮೊಸಾಂಬಿಕ್‌ನಲ್ಲಿ ಹಾಗೂ ಆರ್ಥಿಕ ಅಭಿವೃದ್ಧಿಯಿಂದ ಅಂಗೋಲದಲ್ಲಿ ಉತ್ತಮ ಸ್ಥಿತಿಯಿತ್ತು. ರೊಡೇಶಿಯಾ ಕೂಡ ಬಿಳಿಯರ ದರ್ಬಾರನ್ನು ಹತ್ತಿಕ್ಕಲು ಹೊರಟಿತು. ೧೯೬೬ರಲ್ಲಿ ರೊಡೇಶಿಯಾವು ಲಂಡನ್ನಿನ ಎಲ್ಲಾ ಬಂಧನಗಳಿಂದ ಮುಕ್ತಿ ಹೊಂದಿ ಗಣರಾಜ್ಯವಾಯಿತು.

## ಮಧ್ಯ ಆಫ್ರಿಕಾ

ಎರಡನೇ ಮಹಾಯುದ್ಧವು ಆಫ್ರಿಕಾದ ಮಧ್ಯಭಾಗದಲ್ಲೂ ಸಾಕಷ್ಟು ಪರಿಣಾಮವನ್ನು ಬೀರಿತು. ೧೯೪೦ರಲ್ಲಿ ಬೆಲ್ಜಿಯಂ ಮತ್ತು ಫ್ರಾನ್ಸ್‌ಗಳು ನಾಜಿಗಳು ಆಳ್ವಿಕೆಯಲ್ಲಿದ್ದವು. ೧೯೪೦ರ ನವೆಂಬರ್‌ನಲ್ಲಿ ಮಧ್ಯ ಆಫ್ರಿಕಾ ಸಂಪೂರ್ಣವಾಗಿ ನಾಜಿಗಳ ವಿರುದ್ಧದವರಿಗೆ ಬೆಂಬಲಿಸಲು ತಯಾರಾಗಿತ್ತು. ಎರಡನೇ ಮಹಾಯುದ್ಧವು ಮಧ್ಯ ಆಫ್ರಿಕಾದ ರಾಜಕೀಯ, ಸಾಮಾಜಿಕ ಚಿಂತನೆಗಳಲ್ಲಿ ಬದಲಾವಣೆ ತಂದದ್ದಲ್ಲದೆ ಅಲ್ಲಿನ ಆರ್ಥಿಕ ಪರಿಸ್ಥಿತಿಯ ಮೇಲೂ ಪ್ರಭಾವ ಬೀರಿತು.

ಇಲ್ಲಿ ಬ್ರಿಟಿಷರ, ಫ್ರೆಂಚರ, ಬೆಲ್ಜಿಯನ್ನರ ವಸಾಹತು ಗುರಿಗಳು ಬೇರೆ ಬೇರೆಯಾಗಿದ್ದವು. ಫ್ರೆಂಚರು ಆಫ್ರಿಕನ್ನರನ್ನು ಕರಿಯ ಫ್ರೆಂಚರನ್ನಾಗಿ ಮಾರ್ಪಡಿಸಬೇಕೆಂದೂ, ಬೆಲ್ಜಿಯನ್ನರು ಆಫ್ರಿಕನ್ನರಿಗೆ ಶಿಕ್ಷಣ ನೀಡಿ ರೋಮನ್ ಕ್ಯಾಥೊಲಿಕ್‌ರ ಧರ್ಮಬೋಧನೆಯನ್ನು ನೀಡಬೇಕೆಂದೂ, ಬ್ರಿಟಿಷರು ಆರ್ಥಿಕ ಸಮತೋಲನವನ್ನು ಕಾಪಾಡುವಲ್ಲಿಯೂ ಮಗ್ನರಾಗಿದ್ದರು.

ಸಾಂಪ್ರಾದಾಯಿಕ ಬೆಲ್ಜಿಯಂನ ನೀತಿಗಳು ರಾಜಕೀಯ ಜ್ಞಾನವನ್ನು ಹೊಂದಿದ ಕಾಂಗೋ ಆಫ್ರಿಕನ್ ಸಮುದಾಯವನ್ನು ತೃಪ್ತಿಗೊಳಿಸಲಿಲ್ಲ. ೧೯೪೮ರಿಂದ ಆಫ್ರಿಕಾದಲ್ಲಿ ಪ್ರವರ್ಧಮಾನಕ್ಕೆ ಬಂದ ಬುದ್ಧಿವಂತ ಗಣ್ಯರು ಯುರೋಪಿಯನ್ನರಿಗೆ ನೀಡುವ ಸಂಬಳವನ್ನು ಮತ್ತು ಅವರಿಗೆ ಒದಗಿಸಿರುವಂತಹ ಅವಕಾಶವನ್ನು ತಮಗೂ ಒದಗಿಸಬೇಕೆಂದು ಕೇಳಿದರು. ಆದ್ದರಿಂದ ೧೯೪೮ರಲ್ಲಿ ಯುರೋಪಿಯನ್ನರ ಕೆಲವು ಶಾಲೆಗಳು ಪ್ರಾರಂಭವಾದವು. ೧೯೫೦ರ ಹೊತ್ತಿಗೆ ಶಾಲೆಯಲ್ಲಿನ ತಾರತಮ್ಯಗಳು ಮರೆಯಾದವು.

ಆದರೆ, ಎರಡನೇ ಮಹಾಯುದ್ಧದಿಂದ ಸಮಭಾಜಕ ರೇಖೆ ಹಾಯ್ದು ಹೋಗುವ ಫ್ರೆಂಚರಿಂದ ಆಫ್ರಿಕಾಕ್ಕೆ ಮೇಲಾದ ಪರಿಣಾಮ ಬೇರೆಯಾಗಿತ್ತು. ಇಲ್ಲಿ ರಾಜಕೀಯ ಬೆಳವಣಿಗೆ ನಿಧಾನಗತಿಯಲ್ಲಿತ್ತು. ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು ಅಧೋಗತಿಗಿಳಿದಿದ್ದವು. ಆದರೂ ಇಲ್ಲಿ ಬದಲಾವಣೆಯನ್ನು ತರುವ ಸಾಧ್ಯತೆ ಇರಲಿಲ್ಲ. ಸಾಂಪ್ರದಾಯಿಕವಾಗಿ ಯೂರೋಪಿಯನ್ನರೇ ರಾಜಕೀಯವಾಗಿ ಶಕ್ತರಾಗಿದ್ದರು.

ಎರಡನೇ ಮಹಾಯುದ್ಧದ ನಂತರ ಮಧ್ಯ ಆಫ್ರಿಕಾದತ್ತ ಪ್ಯಾರೀಸ್‌ನ ಮನೋವೃತ್ತಿ ಬದಲಾಯಿತು. ಏಕೆಂದರೆ ಆಫ್ರಿಕೀಯತೆಗಿಂತ ಅಲ್ಲಿನ ಬುಡಕಟ್ಟುಗಳು ಮುಖ್ಯವಾಗಿದ್ದವು. ೧೯೫೬ರಲ್ಲಿ ಚುನಾವಣೆಯು ಮುಂದುವರೆದಿತ್ತು. ಆದರೆ ಇದರ ಪರಿಣಾಮಗಳು ನಿಧಾನವಾಗಿದ್ದವು. ಏಕೆಂದರೆ ಮಧ್ಯ ಹಾಗೂ ಪಶ್ಚಿಮ ಆಫ್ರಿಕಾಗಳಲ್ಲಿ ಕೈಗಾರಿಕೀಕರಣವು ನಿಧಾನತೆಯಲ್ಲಿ ಸಾಗುತ್ತಿತ್ತು. ಆದರೂ, ಸ್ವಾತಂತ್ರ್ಯವನ್ನು ಪಡೆಯುವ ಹಂಬಲವಿತ್ತು.

ಮಧ್ಯ ಆಫ್ರಿಕಾವು ರಾಜಕೀಯ ಅಸ್ಥಿರತೆಯಿಂದಾಗಿ ಮತ್ತು ತನ್ನ ಒಳ ಒತ್ತಡಗಳಿಗಿಂತ ಹೆಚ್ಚಾಗಿ ಹೊರ ಒತ್ತಡಗಳಿಂದ ಸ್ವಾತಂತ್ರ್ಯವಾಯಿತು. ಯುರೋಪಿನ ಅನೇಕ ರಾಷ್ಟ್ರಗಳು ರಾಜಕೀಯ ಆಸಕ್ತಿಯನ್ನು ತಾವಾಗಿಯೇ ಕೈಬಿಟ್ಟು, ತಾಂತ್ರಿಕ ಮತ್ತು ಆರ್ಥಿಕ ವಿಷಯಗಳಲ್ಲಿ

ಮಾತ್ರ ತಮ್ಮನ್ನು ತೊಡಗಿಸಿಕೊಂಡಿದ್ದರು. ಇದರಿಂದ ರಾಜಕೀಯ ಶೂನ್ಯತೆ ಉಂಟಾಯ್ತು. ನಾಲ್ಕು ವರ್ಷಗಳಲ್ಲಿ ಸಮಭಾಜಕ ರೇಖೆಯಡಿಯಲ್ಲಿ ಹಾದುಹೋಗುವ ಫ್ರೆಂಚರ ಆಫ್ರಿಕಾ ದೇಶಗಳು ತಮ್ಮ ತಮ್ಮಲ್ಲೇ ಒಪ್ಪಂದ ಮಾಡಿಕೊಂಡವು. ೧೯೬೦ರ ನಂತರ ಇತರೆ ನಾಲ್ಕು ರಾಜ್ಯಗಳು ರಾಷ್ಟ್ರ ಕಟ್ಟುವಲ್ಲಿ ಮುನ್ನಡೆದವು.

ಇದಕ್ಕೆ ವಿರುದ್ಧವಾಗಿ ಕಾಂಗೋದ ಅನುಭವಗಳೇ ಬೇರೆಯಾಗಿದ್ದವು. ೧೯೫೦ರವರೆಗೆ ಬೆಲ್ಜಿಯನ್ನರು ಬ್ರೂಸೆಲ್ಸ್‌ನಿಂದ ನಿಯಂತ್ರಿಸಲ್ಪಟ್ಟಿದ್ದರು. ಬೆಲ್ಜಿಯನ್ನರು ಆಫ್ರಿಕನ್ನರಿಗೆ ವಿದ್ಯಾಭ್ಯಾಸವನ್ನು ಪರಿಣಾಮಕಾರಿಯಾಗಿ ಕಲಿಸಿದ್ದರಿಂದ, ಅವರು ಬುದ್ಧಿಶಕ್ತಿಯನ್ನು ಗಳಿಸಿ ಸಂಪತ್ತನ್ನು ಹೆಚ್ಚಿಸಿಕೊಂಡರು. ಇದರಿಂದಾಗಿಯೇ ಆಫ್ರಿಕನ್ನರು ಅವರ ದೇಶದ ಬಗ್ಗೆ ಚಿಂತನೆ ನಡೆಸಲು ಸಾಧ್ಯವಾಯಿತು. ಬೆಲ್ಜಿಯನ್ನರ ನೀತಿಯಿಂದಾಗಿಯೇ ಆಫ್ರಿಕಾದ ಕಾಂಗೋದಲ್ಲಿ ರಾಷ್ಟ್ರೀಯತೆ ಉದಯವಾಯಿತು.

೧೯೫೬ರಲ್ಲಿ ಕಾನ್‌ಸೈನ್ಸ್ ಆಫ್ರಿಕನ್ ಎಂಬ ಪತ್ರಿಕೆಯನ್ನು ಬಿಡುಗಡೆ ಮಾಡಲಾಯಿತು. ಈ ಪತ್ರಿಕೆ ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಿತು. ಅದರಲ್ಲಿ ಜೋಸೆಫ್ ಕಸವುಟು ಎಂಬಾತ ಮುನಿಸಿಪಾಲಿಟಿಗಳಿಗೆ ಚುನಾವಣೆಗಳನ್ನು ನಡೆಸುವಂತೆ ಒತ್ತಾಯಿಸಿದನು. ಆತನ ಪಕ್ಷವು ಅರ್ಧದಷ್ಟು ಸ್ಥಾನಗಳನ್ನು ಗೆದ್ದುಕೊಂಡಿತು. ೧೯೫೮ರಲ್ಲಿ ಆತನ ವಿರೋಧ ಪಕ್ಷವು, ಆ ಪಕ್ಷದ ನಾಯಕ ಪಟ್ರಿಸ್ ಇ. ಲ್ಯುಮಂಬಾ ರಾಷ್ಟ್ರೀಯ ಸಂಘಟನೆಯೊಂದನ್ನು ಮಾಡಿಕೊಂಡು ಕಾಂಗೋಕ್ಕೆ ಸ್ವತಂತ್ರ ತರಲು ಮುಂದಾದನು. ೧೯೫೮ರ ಅಂತ್ಯದಲ್ಲಿ ಕಾಂಗೋದಲ್ಲಿ ರಾಜಕೀಯ ಅಸ್ಥಿರತೆ ಇದ್ದಾಗ ಪೆಟ್ರಿಸ್ ಲ್ಯುಮಂಬಾ ಆಫ್ರಿಕಾದಲ್ಲಿ ಅಖಿಲ ಆಫ್ರಿಕನ್ ಸಮ್ಮೇಳನವನ್ನು ಉದ್ಘಾಟಿಸಿ ಸ್ವತಂತ್ರದ ಬಗ್ಗೆ ಭಾವನಾತ್ಮಕವಾಗಿ ಚರ್ಚಿಸಿದ. ಆತ ಲಿಯೋಪೋಲ್ಡ್‌ವಿಲಿಗೆ ವಾಪಸ್ಸಾದ ನಂತರ ತನ್ನ ಅತ್ಯಂತ ತಕ್ಷಣದ ಕೆಲಸವೆಂದರೆ ಬೆಲ್ಜಿಯನ್ನರಿಂದ ಸ್ವತಂತ್ರ ಪಡೆಯುವುದೆಂದು ಘೋಷಿಸಿದ. ಕೆಲದಿನಗಳಲ್ಲೇ ೧೯೬೦ರಲ್ಲಿ ಬ್ರೂಸೆಲ್ಸ್‌ನಲ್ಲಿ ದುಂಡುಮೇಜಿನ ಸಮ್ಮೇಳನ ವನ್ನು ಕರೆಯಲಾಯಿತು. ಅಲ್ಲಿ ಕಾಂಗೋವನ್ನು ಸ್ವತಂತ್ರವೆಂದು ಘೋಷಿಸಲಾಯಿತು. ಮುಂದೆ ಹಲವಾರು ಘರ್ಷಣೆಗೊಳಗಾದರೂ ಕೂಡ ೧೯೬೫ರಲ್ಲಿ ಜನರಲ್ ಜೋಸೆಫ್ ಡಿ. ಮೊಬೂಟೊ ಕಾಂಗೋದ ಅಧ್ಯಕ್ಷನಾದನು.

## ಪೂರ್ವ ಆಫ್ರಿಕಾ

ಎರಡನೇ ಮಹಾಯುದ್ಧದ ನಂತರ ಆಫ್ರಿಕಾದ ಇತರ ಪ್ರದೇಶಗಳಲ್ಲಿರುವಂತಹ ಯುರೋಪಿಯನ್ನರ ಹಿಡಿತ ಪೂರ್ವ ಆಫ್ರಿಕಾ ದೇಶಗಳಲ್ಲಿರಲಿಲ್ಲ. ಆದರೂ ಕೂಡ ಘರ್ಷಣೆಯ ಬೇರುಗಳು ಬೀಡು ಬಿಟ್ಟಿದ್ದವು. ರಾಜಕೀಯ ಪ್ರಜ್ಞೆಯು ಅರಿವಿಗೆ ಬಂದದ್ದು ಮಹಾಯುದ್ಧದ ನಂತರವೇ. ೧೯೪೫ರ ನಂತರ ಬ್ರಿಟಿಷರು ಕೆಲ ಆಫ್ರಿಕನ್ನರನ್ನು ಸರ್ಕಾರಿ ಮಂಡಲಿಗಳಲ್ಲಿ ನೇಮಿಸಿಕೊಂಡಿದ್ದರು. ಇದು ಯುನೈಟೆಡ್ ನೇಶನ್ಸ್ ಟ್ರಸ್ಟೀಶಿಪ್ ಕೌನ್ಸಿಲ್‌ನ ಒತ್ತಾಯದಿಂದ ಮಾತ್ರ ಸಾಧ್ಯವಾಗಿತ್ತು. ಇಂತಹುದೇ ಸಾಂವಿಧಾನಿಕ

ಅಭಿವೃದ್ಧಿಯು ಉಗಾಂಡದಲ್ಲಿ ಕಂಡಿತು. ಬಟಾಕಾ ಇಲ್ಲಿಯ ಮೊದಲ ರಾಜಕೀಯ ಪಕ್ಷ. ಇದು ಸಾಮಾಜಿಕ ಆರ್ಥಿಕ ಬದಲಾವಣೆಗಳನ್ನು ತರಲು ಕೆಲಸ ಮಾಡತೊಡಗಿತು.

ಆದರೂ ಪೂರ್ವ ಆಫ್ರಿಕಾದ ರಾಜಕೀಯದ ಮೇಲೆ ಹೆಚ್ಚು ಪ್ರಭಾವ ಬೀರಿದ ಅಂಶವೆಂದರೆ ಇಥಿಯೋಪಿಯಾದ ಸ್ಥಿತಿ. ಇಥಿಯೋಫಿಯಾ ಅಭಿವೃದ್ಧಿ ಹೊಂದದ ರಾಷ್ಟ್ರವಾದರೂ ಆ ದೇಶದ ಚಕ್ರಾಧಿಪತ್ಯ ಸ್ವದೇಶಿಯದ್ದಾಗಿತ್ತು. ಆದ್ದರಿಂದ ಎಲ್ಲಾ ರಾಷ್ಟ್ರಗಳು ಇಥಿಯೋಫಿಯಾದ ಪ್ರಭಾವಕ್ಕೆ ಒಳಗಾಗಿದ್ದವು.

ಟಾಂಗನಾಯಿತ ಮತ್ತು ಉಗಾಂಡಾ ದೇಶಗಳು ತಮ್ಮ ಸ್ವಂತ ಸರ್ಕಾರವನ್ನು ಹೊಂದುವ ಆಸಕ್ತಿ ಹೊಂದಿದ್ದವು. ಆದರೆ ಆ ರೀತಿಯ ರಾಜಕೀಯ ಬೆಳವಣಿಗೆಯಾಗಿದ್ದು ಕೀನ್ಯಾದಲ್ಲಿ. ಕೀನ್ಯಾವು ಬುಡಕಟ್ಟು ಜನಾಂಗಕ್ಕೆ ಸೇರಿದ ರಾಷ್ಟ್ರ. ಅಲ್ಲಿ ಸುಮಾರು ೨೦,೦೦೦ ಯೂರೋಪಿಯನ್ನರು ಉತ್ತಮ ಅಂತಸ್ತುಗಳನ್ನು ಹೊಂದಿದ ಸರ್ಕಾರಿ ನೌಕರಿಗಳಲ್ಲಿ ಮತ್ತು ವ್ಯಾಪಾರದಲ್ಲಿ ಮಗ್ನರಾಗಿದ್ದರು. ೧,೨೦,೦೦೦ ಏಷಿಯನ್ನರು ಮತ್ತು ೫,೦೦೦,೦೦೦ ಆಫ್ರಿಕನ್ನರು ವಾಸವಾಗಿದ್ದರು. ಆಫ್ರಿಕನ್ನರು ಸಾಧಾರಣವಾಗಿ ಬುಡಕಟ್ಟಿನ ಗುಂಪಿನಲ್ಲೇ ವಾಸವಾಗಿದ್ದು ಯುರೋಪಿಯನ್ನರ ಜಮೀನನಲ್ಲಿ ಕೆಲಸಗಾರರಾಗಿದ್ದರು.

ಯುರೋಪಿಯನ್ನರು ಬರುವ ಮುಂಚೆ ಕೇನ್ಯಾ ಜನರ ಜೀವನವು ಹಳೆಯ ಕಾಲದ ಸಂಘಟಿತವಾದ ಬುಡಕಟ್ಟು ರೇಖೆಯಲ್ಲೇ ನಡೆಯುತ್ತಿತ್ತು. ಯುರೋಪಿಯನ್ನರು ಬಂದ ನಂತರ ಮತ ಪ್ರಚಾರಕರು ಅವರ ದುಷ್ಟ ಆಚರಣೆಗಳನ್ನು ವಿಮರ್ಶಿಸಿದರು. ಮತ ಪ್ರಚಾರಕರ ಪ್ರಯತ್ನದಿಂದಾಗಿ ವಿದ್ಯೆ, ಆರೋಗ್ಯ, ಸಾಮಾನ್ಯಕಲ್ಯಾಣಗಳು ಲಭ್ಯವಾಗಿ ಅದು ಇಡೀ ಆಫ್ರಿಕಾ ಸಮಾಜವನ್ನೇ ಅಲ್ಲಾಡಿಸಿದವು. ಇದು ಅಂತ್ಯದಲ್ಲಿ ಬೇರೆ ಬೇರೆ ಜನಾಂಗಗಳ ನಡುವೆ ಒಳ್ಳೆಯ ಸಂಬಂಧ ಕಲ್ಪಿಸಲು ಸಾಧ್ಯವಾಯಿತು.

೧೯೫೨ರ ಅಕ್ಟೋಬರ್‌ನಲ್ಲಿ ಯುರೋಪಿನ ಹಿಡಿತದಲ್ಲಿದ್ದ ಕೀನ್ಯಾ ಸ್ಥಳಗಳ ಮೇಲೆ ಹಲವಾರು ಆಕ್ರಮಣಗಳು ಮೊದಲುಗೊಂಡವು. ಅಕ್ಟೋಬರ್ ೨೦ರಲ್ಲಿ ಗ್ರೇಟ್ ಬ್ರಿಟನ್ ತುರ್ತುಪರಿಸ್ಥಿತಿಯನ್ನು ಘೋಷಿಸಿ ಕೆನ್ಯಾಟ ಎಂಬ ಕ್ರಾಂತಿಕಾರಿಯನ್ನು ಆತನ ತೊಂಬತ್ತೆಂಟು ಜನ ಸಂಗಡಿಗರೊಡನೆ ಬಂಧಿಸಲಾಯಿತು. ೧೯೬೦ರ ಹೊತ್ತಿಗೆ ಅನೇಕ ಜನರು ಹತ್ಯೆಗೀಡಾದರು. ಕೀನ್ಯಾದ ಪ್ರಜೆಗಳು ತಮಗೆ ರಾಜಕೀಯ ಹಕ್ಕುಗಳನ್ನು ಕೊಡುವಂತೆ ಬಂಡೆದ್ದರು. ೧೯೬೧ರಲ್ಲಿ ಕೆನ್ಯಾಟನನ್ನು ಬಿಡುಗಡೆ ಮಾಡಲಾಯಿತು. ೧೯೬೩ರಲ್ಲಿ ಕೀನ್ಯಾದಲ್ಲಿ ಚುನಾವಣೆಗಳನ್ನು ನಡೆಸಲಾಯಿತು. ಜೊನೋ ಕೆನ್ಯಾಟ ಮೊದಲ ಅಧ್ಯಕ್ಷನಾದ.

ಕೀನ್ಯಾವು ಸ್ವತಂತ್ರ ಗಳಿಸಿದ ನಂತರ ಕೆನ್ಯಾಟನು ಈಸ್ಟ್ ಆಫ್ರಿಕನ್ ಫೆಡರೇಶನ್ ಸಂಘವನ್ನು ಕಟ್ಟುವ ಉದ್ದೇಶಕ್ಕಾಗಿ ಟಾಂಗನೀಕ ಮತ್ತು ಉಗಾಂಡಾ ಸರ್ಕಾರದೊಂದಿಗೆ ಚರ್ಚಿಸಿದ. ಇದರಿಂದ ಈಸ್ಟ್ ಆಫ್ರಿಕನ್ ಫೆಡರೇಶನ್ ಅಸ್ತಿತ್ವಕ್ಕೆ ಬಂದಿತು.

ಕೀನ್ಯಾ ಸ್ವತಂತ್ರ ಗಳಿಸಿದ ನಂತರ ಟಾಂಗನೀಕ ಕೂಡ ಸ್ವತಂತ್ರವಾಯ್ತು. ಸ್ವತಂತ್ರ ಗಳಿಸಿಕೊಟ್ಟ ಮಹಾನ್ ಪುರುಷ ಜೂಲಿಯಸ್ ನ್ಯೆರೇರೆ. ೧೯೬೧ರ ಡಿಸೆಂಬರ್ ತಿಂಗಳಿನಲ್ಲಿ

ಟಾಂಗನೀಕವು ಎಲ್ಲಾ ನಾಗರಿಕ ಹಕ್ಕುಗಳೊಂದಿಗೆ ಸ್ವತಂತ್ರವಾಯಿತು. ಬ್ರಿಟಿಷ್ ಪ್ರದೇಶಗಳಿಂದ ಜಾಂಜಿಬಾರ್ ಮತ್ತು ಪೆಂಬಾಗಳು ಟಾಂಗನೀಕದಲ್ಲಿ ವಿಲೀನವಾಗಿ ಟಾಂಜಿನಿಯಾ ಎಂಬ ಹೊಸ ರಾಷ್ಟ್ರವಾಗಿ ನೈರೇರೆ ಅಧ್ಯಕ್ಷನಾದ.

ಉಗಾಂಡಾ ಮಾತ್ರ ರಾಷ್ಟ್ರೀಯ ಧೋರಣೆಯನ್ನು ಬೆಳೆಸಿಕೊಳ್ಳದೆ ಹಾಗೆಯೇ ಉಳಿದಿತ್ತು. ಇದಕ್ಕೆ ಕಾರಣ ಅಲ್ಲಿಯ ಸಂಪ್ರದಾಯಶರಣ ಜನರು. ೧೯೬೦ರಲ್ಲಿ ಮಿಲ್ಟನ್ ಲಾಯೊಂಟ ಎಂಬುವರ ನೇತೃತ್ವದಲ್ಲಿ ಉಗಾಂಡಾ ಪೀಪಲ್ಸ್ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದಿತು. ೧೯೬೧ರಲ್ಲಿ ಉಗಾಂಡಾಕ್ಕೆ ಸ್ವತಂತ್ರ ಕೊಡಬೇಕೆಂದು ಒಪ್ಪಂದವಾಯಿತು. ೧೯೬೨ರ ಅಕ್ಟೋಬರ್ ೯ರಲ್ಲಿ ಮಿಲ್ಟನ್ ಅಬೋಟೆ ಅಧ್ಯಕ್ಷನಾದ, ಉಗಾಂಡಾ ಸ್ವತಂತ್ರ ರಾಷ್ಟ್ರವಾಯಿತು. ಪೂರ್ವ ಆಫ್ರಿಕಾದ ಎಲ್ಲಾ ಕಡೆಗಳಲ್ಲಿಯೂ ಇಟಲಿಯ ವಶದಲ್ಲಿದ್ದ ಸೋಮಾಲಿ ಲ್ಯಾಂಡ್‌ಗೆ ಬ್ರಿಟಿಷ್ ಸೋಮಾಲಿ ಲ್ಯಾಂಡ್‌ಗಳೂ ಸೇರಿ ಸಂಯುಕ್ತ ಸೋಮಾಲಿ ರಾಜ್ಯವನ್ನಾಗಿ ಮಾಡಿಕೊಂಡವು ೧೯೬೦ರಲ್ಲಿ ಅಡೆನ್ ಅಡುಲ್ಲಾ ಅಸಮನ್ ಇಟಾಲಿಯನ್ ಎಂಬುವನು ಸೋಮಾಲಿ ಲ್ಯಾಂಡ್‌ನ ಪ್ರಧಾನ ಮಂತ್ರಿಯಾದ ನಂತರ ಅವನೇ ಸೋಮಾಲಿ ಗಣರಾಜ್ಯದ ಅಧ್ಯಕ್ಷನಾದ.

### ಉತ್ತರ ಆಫ್ರಿಕಾ

ಎರಡನೆಯ ಮಹಾಯುದ್ಧದ ನಂತರ ಈಜಿಪ್ಟ್ ನಿಧಾನವಾಗಿ ಕ್ರಾಂತಿಯತ್ತ ಸಾಗಿತು. ಸೂಯೆಜ್ ಕಾಲುವೆಯ ಆವಶ್ಯಕತೆಯಿಂದಾಗಿ ಬ್ರಿಟನ್ ಈಜಿಪ್ಟನ್ನು ಬಿಟ್ಟುಕೊಡುತ್ತಿರಲಿಲ್ಲ. ಈಜಿಪ್ಟಿನ ಜನರು ಬ್ರಿಟಿಷರನ್ನು ಕೈರೋದಿಂದ ಅಲ್ಲದೆ ಈಜಿಪ್ಟ್‌ನಿಂದಲೇ ಹೊಡೆದೋಡಿಸಲು ಜರ್ಮನ್ನರಿಂದ ಮಾತ್ರ ಸಾಧ್ಯ ಎಂದು ನಂಬಿದ್ದರು. ೧೯೪೪ರಲ್ಲಿ ಈಜಿಪ್ಟಿನಲ್ಲಿ ತುಮುಲ ಉಂಟಾಯಿತು. ರಾಜ ಫರೂಕ್ ತನ್ನ ಪ್ರಭಾವಶಕ್ತಿಯುನ್ನು ಉಪಯೋಗಿಸಿ ಹೊಸ ಚುನಾವಣೆಗಳನ್ನು ನಡೆಸಲು ನಿಶ್ಚಯಿಸಿದ ೧೯೪೪ರಲ್ಲಿ ವಾಫ್ಡ್ ಸರ್ಕಾರವನ್ನು ವಿಸರ್ಜಿಸಲಾಯಿತು. ವಾಫ್ಡ್ ಗೆರಿಲ್ಲಾ ಸೈನಿಕರು ಬ್ರಿಟಿಷರ ವಿರುದ್ಧವಾಗಿ ನಿಂತು ೧೯೩೬ರ ಒಪ್ಪಂದವನ್ನು ಖಂಡಿಸಿದರು. ಸಾಮಾಜಿಕ ವ್ಯವಸ್ಥೆ ಹದಗೆಟ್ಟಿತು. ರಾಜನು ವಾಫ್ಡ್ ಸರ್ಕಾರವನ್ನು ವಿಸರ್ಜಿಸಿದ ನಂತರ ಜನರನ್ನು ಹಿಡಿತದಲ್ಲಿಡಲು ಸಾಧ್ಯವಾಗಲಿಲ್ಲ.

ಈಜಿಪ್ಟಿನಲ್ಲಿ ಕ್ರಾಂತಿಗೆ ಪ್ರಮುಖವಾಗಿ ಎರಡು ಅಡಚಣೆಗಳಿದ್ದವು. ಮೊದಲನೆಯದಾಗಿ ಸಂಪ್ರದಾಯಸ್ಥ ಈಜಿಪ್ಟ್ ಜನರು ಬದಲಾಗದಿರುವುದು. ಎರಡನೆಯದಾಗಿ ಇಸ್ಲಾಂ ಪ್ರದೇಶಗಳು ಪ್ರಗತಿ ವಿರೋಧಿಗಳಾಗಿದ್ದು ಸಾಮಾಜಿಕ ಬದಲಾವಣೆಗಳನ್ನು ಸಹಿಸದಿರುವುದು. ೧೯೫೨ರ ಜನವರಿಯಲ್ಲಿ ಕೈರೋ ದಂಗೆಯ ನಂತರ ಫರೂಕ್ ಚಕ್ರಾಧಿಪತ್ಯ ಉರುಳಲಾರಂಭಿಸಿತು. ೧೯೫೩ರ ಸೆಪ್ಟೆಂಬರ್‌ನಲ್ಲಿ ನಗೊಬಿಯಾ ಪ್ರಧಾನ ಮಂತ್ರಿಯಾದನು. ಇದರಿಂದ ಈಜಿಪ್ಟಿನಲ್ಲಿದ್ದ ಸರ್ವಾಧಿಕಾರ ಕೊನೆಯಾಯಿತು. ನಗೊಬಿಯಾ ಅಧ್ಯಕ್ಷ ಹಾಗೂ ಪ್ರಧಾನ ಮಂತ್ರಿ ಎರಡೂ ಸ್ಥಾನಗಳನ್ನೂ ಅಲಂಕರಿಸಿದ.

೧೯೫೪ರಲ್ಲಿ ನಾಸರ್ ನಗೋಬಿಯಿಂದ ಈಜಿಪ್ಟನ್ನು ವಶಪಡಿಸಿಕೊಂಡು ಇತರೆ ಶಕ್ತಿಗಳನ್ನು ದಮನಗೊಳಿಸಿದ. ಮುಸ್ಲಿಂ ಬಾಂಧವರು ಬ್ರಿಟಿಷರನ್ನು ಹೊರದೂಡಿ ದೇಶವನ್ನು ತಮ್ಮ ಹಿಡಿತದಲ್ಲಿಡುವನೆಂಬ ನಂಬಿಕೆಯಲ್ಲಿದ್ದರು. ಆದರೆ ನಾಸರ್ ಒಂದು ಜಾತ್ಯತೀತ ಗಣರಾಜ್ಯವನ್ನು ಹುಟ್ಟುಹಾಕಬೇಕೆಂದುಕೊಂಡಿದ್ದ. ಈ ವಿಚಾರವನ್ನು ಇಸ್ಲಾಂ ಸಂಘಟಕರು ಒಪ್ಪದೆ ಹೋರಾಟ ಮುಂದುವರೆಸಿದರು. ೧೯೫೬ರಲ್ಲಿ ನಾಸರ್ ಈಜಿಪ್ಟ್‌ನ ಅಧ್ಯಕ್ಷನಾಗಿ ಚುನಾಯಿತನಾದ. ಅದೇ ವರ್ಷದಲ್ಲಿ ಲಂಡನ್ ಮತ್ತು ವಾಷಿಂಗ್‌ಟನ್‌ಗಳು ಆಸವಾನ್ ಅಣೆಕಟ್ಟಿಗೆ ಹಣವನ್ನು ನೀಡುವುದನ್ನು ನಿಲ್ಲಿಸಿದವು. ಸೂಯೆಜ್ ಕಾಲುವೆಯು ರಾಷ್ಟ್ರೀಕೃತವಾಯಿತು. ಸೂಯೆಜ್ ಕಾಲುವೆಯ ವಿಷಯದಿಂದ ನಾಸರ್ ವಸಾಹತುಶಾಹಿ ನೀತಿಯನ್ನು ವಿರೋಧಿಸುವ ನಾಯಕನಾಗಿ ಕಂಗೊಳಿಸತೊಡಗಿದ. ೧೯೫೮ ರಿಂದ ೧೯೬೧ರವರೆಗೆ ಸಿರಿಯಾದೊಡನೆ ಸೇರಿ ಯುನೈಟೆಡ್ ಅರಬ್ ರಿಪಬ್ಲಿಕ್ ಅನ್ನು ತಾತ್ಕಾಲಿಕವಾಗಿ ಹುಟ್ಟು ಹಾಕಿ, ೧೯೭೦ರವರೆಗೆ ಅರಬ್ ರಾಷ್ಟ್ರಗಳ ನೇತಾರನಾದನು.

## ಪರಾಮರ್ಶನ ಗ್ರಂಥಗಳು

೧. ಅಬ್ರಹಾಂ ಡಬ್ಲ್ಯು ಇ., ೧೯೬೨. ದಿ ಮೈಂಡ್ ಆಫ್ ಆಫ್ರಿಕಾ.
೨. ಬರ್ಕ್ ಎಫ್.ಜಿ., ೧೯೬೪. ಆಫ್ರಿಕಾ ಕ್ರೈಸ್ಸ್ ಫಾರ್ ಆರ್ಡರ್.
೩. ಕಿನ್ ರಿವ್ ಎ., ೧೯೬೨. ಆಫ್ರಿಕಾ ಆ್ಯಂಡ್ ದಿ ವೆಸ್ಟ್.

೮

# ಸಮಕಾಲೀನ ಆಫ್ರಿಕಾ
# ಕೆಲವು ಟಿಪ್ಪಣಿಗಳು

**ಜೈಕುಮಾರ್**

ಆಫ್ರಿಕಾ ಖಂಡವು ಪೂರ್ವಾರ್ಧಗೋಳದಲ್ಲಿರುವ ವಿಸ್ತೀರ್ಣದಲ್ಲಿ ಏಷ್ಯಾ ಖಂಡಕ್ಕೆ ಎರಡನೆಯದು. ಇಡೀ ಜಗತ್ತಿನ ಒಟ್ಟು ಭೂಭಾಗದ ಐದನೇ ಒಂದು ಭಾಗವನ್ನು ಇದು ಆಕ್ರಮಿಸಿದ್ದು, ವಿಸ್ತೀರ್ಣದಲ್ಲಿ ಯುರೋಪಿನ ಮೂರು ಪಟ್ಟು ಇದೆ. ಉತ್ತರದಿಂದ ದಕ್ಷಿಣಕ್ಕೆ ಸುಮಾರು ೫,೦೦೦ ಮೈಲಿ ಉದ್ದವೂ ಪೂರ್ವ ಪಶ್ಚಿಮವಾಗಿ ೪,೫೦೦ ಮೈಲಿಗಳಷ್ಟು ಅಗಲವಾಗಿಯೂ ಇದೆ.

ಕಳೆದ ಮೂರು ನಾಲ್ಕು ಶತಮಾನಗಳಲ್ಲಿ ಆಫ್ರಿಕಾ ಖಂಡದ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಸಾಮ್ರಾಜ್ಯಶಾಹಿ ರಾಷ್ಟ್ರಗಳು ಲೂಟಿ ಮಾಡಿ ಅಭಿವೃದ್ಧಿಗೆ ಕಡಿವಾಣ ಹಾಕಿದ್ದರ ಫಲವಾಗಿ ಈ ಭೂಭಾಗಕ್ಕೆ ಕಗ್ಗತ್ತಲೆಯ ಖಂಡವೆಂಬ ಹಣೆಪಟ್ಟಿ ನೀಡಲಾಗಿದೆ. ಆಫ್ರಿಕಾದಲ್ಲಿ ಯಥೇಚ್ಛವಾಗಿ ದೊರೆಯುತ್ತಿದ್ದ ಚಿನ್ನ, ದಂತ, ವಜ್ರ ಮುಂತಾದ ಕಣ್ಣು ಕೋರೈಸುವ ಸಂಪತ್ತನ್ನು ದೋಚಲು ವ್ಯಾಪಾರದ ಸೋಗು ಹಾಕಿಕೊಂಡು ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರು ಈ ಭೂಖಂಡಕ್ಕೆ ಬಂದಿಳಿದರು. ಆಫ್ರಿಕಾದ ವಿವಿಧ ಜನಾಂಗ ಮತ್ತು ಬುಡಕಟ್ಟುಗಳ ನಡುವಿನ ವೈರುಧ್ಯ, ವೈಮನಸ್ಸುಗಳನ್ನು ಬಳಸಿಕೊಂಡು ಮಿಲಿಟರಿ ಬಲದಿಂದ ತಮ್ಮ ಯಜಮಾನಿಕೆಯನ್ನು ಹೇರುವಲ್ಲಿ ಯಶಸ್ವಿಯಾದರು. ಕಾಲಕ್ರಮೇಣ ವಸಾಹತುಗಳಾಗಿ ಪರಿವರ್ತಿತಗೊಂಡ ಈ ಭೂಭಾಗದಲ್ಲಿ ಪೋರ್ಚುಗೀಸರು ಪಶ್ಚಿಮ ಆಫ್ರಿಕಾದ ಕರಾವಳಿ ಪ್ರದೇಶದಲ್ಲಿ, ಫ್ರೆಂಚರು ವಾಯುವ್ಯ ಪ್ರದೇಶದಲ್ಲಿ, ಬ್ರಿಟಿಷರು ಪೂರ್ವದಲ್ಲಿ, ಡಚ್ಚರು ದಕ್ಷಿಣದಲ್ಲಿ, ಬೆಲ್ಜಿಯನ್ನರು ಮಧ್ಯ ಆಫ್ರಿಕಾದಲ್ಲಿ, ಇಟಾಲಿಯನ್ನರು ಉತ್ತರ ಆಫ್ರಿಕಾ ಪ್ರದೇಶಗಳನ್ನು ತಮ್ಮ ತೆಕ್ಕೆಯಲ್ಲಿ ಹಿಡಿದಿಟ್ಟುಕೊಂಡಿದ್ದರು. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ತೃತೀಯ ರಾಷ್ಟ್ರಗಳನ್ನು ವಸಾಹತುಗೊಳಿಸುತ್ತಾ ಬಂಡವಾಳವು ಅಗಾಧ ಮಟ್ಟದಲ್ಲಿ ಬೆಳೆಯ ತೊಡಗಿತ್ತು. ವಿಶ್ವದ ಭೂಭಾಗಗಳನ್ನು

ಹಂಚಿಕೊಳ್ಳಲು ಯುರೋಪಿನ ಬಂಡವಾಳಶಾಹಿ ರಾಷ್ಟ್ರಗಳ ನಡುವೆ ಇನ್ನಿಲ್ಲದಂಥ ಸ್ಪರ್ಧೆ ಏರ್ಪಟ್ಟಿತು. ಈ ಹಿನ್ನೆಲೆಯಲ್ಲಿ ಆಫ್ರಿಕಾದ ರಾಷ್ಟ್ರಗಳನ್ನು ವಸಾಹತುಗಳನ್ನಾಗಿ ತೀವ್ರಗತಿಯಲ್ಲಿ ಪರಿವರ್ತಿಸಲಾಯಿತು. ೧೮೭೮ರ ಹೊತ್ತಿಗೆ ಆಫ್ರಿಕಾದ ಹತ್ತನೇ ಒಂದು ಭಾಗವನ್ನು ಮಾತ್ರ ವಶಪಡಿಸಿಕೊಳ್ಳಲಾಗಿದ್ದರೆ, ೧೯೦೦ರ ಹೊತ್ತಿಗೆ ಹತ್ತನೇ ಒಂಬತ್ತರಷ್ಟು ಭಾಗವನ್ನು ವಶಪಡಿಸಿಕೊಳ್ಳಲಾಗಿತ್ತು.

## ಆಫ್ರಿಕಾ ಭೂಖಂಡ: ಹಂಚಿಕೆಗಾಗಿ ಕಾದಾಟ

ಈಜಿಪ್ಟ್ ಕೈರೋದಿಂದ ದಕ್ಷಿಣ ಅಫ್ರಿಕಾದ ಕೇಪ್ ಟೌನ್‌ವರೆಗೆ ಪೂರ್ಣಪ್ರದೇಶವನ್ನು ಆಕ್ರಮಿಸಿಕೊಳ್ಳಲು ಹವಣಿಸುತ್ತಿದ್ದ ಇಂಗ್ಲೆಂಡ್‌ನ ಆಸೆ ಮೊದಲನೇ ವಿಶ್ವ ಮಹಾಯುದ್ಧ ನಂತರವಷ್ಟೇ ಕೈಗೂಡಿತು. ಈಜಿಪ್ಟನ್ನು ಅಕ್ರಮಿಸಿಕೊಳ್ಳುವಾಗಲೇ ಪೂರ್ವ ಸೂಡಾನ್‌ನೊಳಗೂ ಇಂಗ್ಲೆಂಡ್ ಒಳನುಸುಳಿಕೊಂಡಿತು. ಪಶ್ಚಿಮ ಆಫ್ರಿಕಾದ ರಾಷ್ಟ್ರಗಳಾದ ಘಾನಾ ಮತ್ತು ನೈಜೀರಿಯಾದ ಭೂಭಾಗಗಳ ಮೇಲೆ ಇಂಗ್ಲೆಂಡ್ ಆಕ್ರಮಣಕಾರಿ ಯುದ್ಧಗಳನ್ನು ಹೂಡಿತ್ತು. ಫ್ರಾನ್ಸ್ ಕೂಡ ಆಫ್ರಿಕಾದಲ್ಲಿ ಅತಿ ದೊಡ್ಡ ವಸಾಹತು ಸಾಮ್ರಾಜ್ಯವನ್ನೇ ಹೊಂದಿತ್ತು. ಅಲ್ಜೀರಿಯಾದಿಂದ ಆರಂಭಿಸಿ ತುನಿಷಿಯಾ, ಮೊರಾಕೊ ಮತ್ತು ಸೆನೆಗಲ್‌ಗಳನ್ನು ಫ್ರಾನ್ಸ್ ವಸಾಹತುವನ್ನಾಗಿಸಿತು. ಜರ್ಮನಿಯು ಆಫ್ರಿಕಾದ ಕೆಲವು ಬುಡಕಟ್ಟು ನಾಯಕರ ಮೇಲೆ ಅಸಮ್ಮತ ಒಪ್ಪಂದಗಳನ್ನು ಹೇರಿ ಪೂರ್ವ ಅಫ್ರಿಕಾದ ಭಾಗಗಳನ್ನು ಒಳಗೊಂಡಂತೆ ಪಶ್ಚಿಮದ ಟೋಗೋ ಮತ್ತು ಕೆಮರೂನ್‌ಗಳನ್ನು ತನ್ನ ಬಗಲಿಗೆ ಹಾಕಿಕೊಂಡಿತು.

ಇಟಲಿಯೂ ಸಹ ಇಥಿಯೊಯಾ ವಿರುದ್ಧ ಯುದ್ಧ ಘೋಷಣೆಯಿಲ್ಲದೆ ಮಿಲಿಟರಿ ದಾಳಿ ನಡೆಸಿತು. ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳೊಂದಿಗೆ ಒಡಗೂಡಿ ಇಟಲಿಯು ಸೋಮಾಲಿಯಾವನ್ನು ವಿಭಜನೆ ಮಾಡಿತು. ಪೋರ್ಚುಗಲ್ ಮತ್ತು ಸ್ಪೇನ್‌ಗಳು ಆಫ್ರಿಕಾದ ಹಲವು ಸಂಖ್ಯೆಯ ಭೂಭಾಗಗಳನ್ನು ಅಕ್ರಮಿಸಿಕೊಂಡಿದ್ದವು. ಬೆಲ್ಜಿಯಂ ಕಾಂಗೋವನ್ನು ೧೯೦೮ರಲ್ಲಿ ವಸಾಹತುವನ್ನಾಗಿಸಿತು. ಮೊದಲನೇ ಮಹಾಯುದ್ಧಕ್ಕೆ ಮೊದಲು ಆಫ್ರಿಕಾದ ಎರಡು ರಾಷ್ಟ್ರಗಳಷ್ಟೇ ಇಥಿಯೊಯಾ ಮತ್ತು ಲೈಬೀರಿಯಾ ಸ್ವತಂತ್ರವಾಗಿದ್ದವು.

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದು ಹಾಗೂ ಆಫ್ರಿಕನ್ ರಾಷ್ಟ್ರಗಳ ಮಿಲಿಟರಿ ದೌರ್ಬಲ್ಯ ಮತ್ತು ಆಫ್ರಿಕನ್ನರ ಅನೈಕ್ಯತೆಯು ಯುರೋಪಿಯನ್ನರ ವಿರುದ್ಧ ಆಫ್ರಿಕನ್ನರು ಸೋತದ್ದಕ್ಕೆ ಪ್ರಮುಖ ಕಾರಣ. ಸಾಮ್ರಾಜ್ಯಶಾಹಿ ರಾಷ್ಟ್ರಗಳು ಆಫ್ರಿಕಾದ ಜನತೆಯನ್ನು ಒಬ್ಬರ ಮೇಲೆ ಮತ್ತೊಬ್ಬರನ್ನು ಎತ್ತಿಕಟ್ಟುತ್ತಿದ್ದವು. ಕೆಲವು ಪಾಳೇಗಾರಿ ದೊರೆಗಳನ್ನು ಒಮ್ಮೆ ಮೇಲೇರಿಸುತ್ತಾ ಮತ್ತೆ ಕೆಲವೊಮ್ಮೆ ಕೆಳದೊಡುತ್ತಿದ್ದವು. ಆಫ್ರಿಕಾವನ್ನು ವಿಭಜಿಸಿದ ನಂತರ ಯುರೋಪಿಯನ್ ರಾಷ್ಟ್ರಗಳು ಅದನ್ನು ಅಭಿವೃದ್ಧಿ ಪಡಿಸಲು ಶುರು ಮಾಡಿದವು. ತಮ್ಮ ರಾಷ್ಟ್ರಗಳಿಗೆ ಕೃಷಿ ಮತ್ತು ಕಚ್ಚಾ ವಸ್ತುಗಳನ್ನು ಸರಬರಾಜು ಮಾಡುವ ನೆಲೆಗಳನ್ನಾಗಿ ಆಫ್ರಿಕಾದ ವಸಾಹತುಗಳನ್ನು ಪರಿವರ್ತಿಸಲಾಯಿತು. ವಸಾಹತುಗಳ ಜನತೆಯು ಕ್ರೂರ ಶೋಷಣೆಗೆ ಬಲಿಯಾದರು.

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಆಫ್ರಿಕಾದ ವಸಾಹತು ರಾಷ್ಟ್ರದೊಳಗೆ ಬಂಡವಾಳದ ಬೃಹತ್ ಪ್ರಮಾಣದಲ್ಲಿ ಹರಿಯತೊಡಗಿತು. ಈ ಮೊದಲು ಆಫ್ರಿಕಾದ ರೈತನು ತನ್ನ ಜೀವನೋಪಾಯಕ್ಕಾಗಿ ಕೃಷಿಯ ಮೇಲೆ ಅವಲಂಬಿತನಾಗಿದ್ದನು. ವಸಾಹತು ಶಾಹಿಯ ಪ್ರವೇಶದಿಂದಾಗಿ ಆಫ್ರಿಕಾದ ಹಲವು ರಾಷ್ಟ್ರಗಳಲ್ಲಿ ಕಡಲೆಕಾಯಿ ಮತ್ತು ನೈಜೀರಿಯದಲ್ಲಿ ಕೋಕೋ ಮತ್ತು ತಾಳೆ ಎಣ್ಣೆ ಇತ್ಯಾದಿ, ದಕ್ಷಿಣ ಆಫ್ರಿಕಾದಲ್ಲಿ ಚಿನ್ನ ಮತ್ತು ವಜ್ರ ಗಣಿಗಾರಿಕೆಗೆ ಪ್ರಾಶಸ್ತ್ಯ ನೀಡಲಾಯಿತು. ಇದರಿಂದಾಗಿ ಈ ರಾಷ್ಟ್ರಗಳ ಆರ್ಥಿಕತೆಯು ವಿಶ್ವ ಆರ್ಥಿಕತೆಯೊಂದಿಗೆ ಕೊಂಡಿ ಏರ್ಪಡಿಸಿಕೊಂಡಿತು. ಆಫ್ರಿಕಾವನ್ನು ವಿಶ್ವ ಮಾರುಕಟ್ಟೆಗೆ ಎಳೆದು ತಂದು ಅಲ್ಲಿನ ಸಾರಿಗೆ ಮತ್ತು ಸಂಪರ್ಕವನ್ನು ಅದರ ಸಂಪತ್ತನ್ನು ಹೊರಸಾಗಿಸುವ ಆವಶ್ಯಕತೆಗನುಗುಣವಾಗಿ ಅಭಿವೃದ್ಧಿಗೊಳಿಸಿದವು. ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಹಿಗ್ಗಾಮುಗ್ಗಾ ದೋಚಲಾಯಿತು. ಆರಂಭದಲ್ಲಿ ಯುರೋಪಿಯನ್ ಕಬಳಿಕೆದಾರರು ೭೮೦ಲಕ್ಷ ಹೆಕ್ಟೇರ್ ಭೂಮಿಯನ್ನು ಆಕ್ರಮಿಸಿಕೊಂಡಿದ್ದರು. ಫಾರ್ಮ್‌ನೀರ್ ಕಂಪನಿಯೊಂದೇ ೧.೪ ಲಕ್ಷ ಹೆಕ್ಟೇರ್ ಭೂಮಿಯನ್ನು ಆಕ್ರಮಿಸಿಕೊಂಡಿತ್ತು. ೧೯೧೩ರ ಹೊತ್ತಿಗೆ ಮೊರಾಕ್ಕೋದಲ್ಲಿ ೧.೦ ಲಕ್ಷ ಹೆಕ್ಟೇರ್ ಭೂಮಿಯನ್ನು ವಿದೇಶಿ ಕಂಪನಿಗಳು ಕಬಳಿಸಿದವು.

ಮೊದಲನೆಯ ವಿಶ್ವ ಮಹಾಯುದ್ಧ ಜರುಗಲು ಆಫ್ರಿಕಾದಲ್ಲಿನ ವಸಾಹತುಗಳಿಗಾಗಿ ಸಾಮ್ರಾಜ್ಯಶಾಹಿ ದೇಶಗಳ ನಡುವೆ ನಡೆದ ಕಿತ್ತಾಟವೂ ಒಂದು ಪ್ರಮುಖ ಕಾರಣವಾಗಿತ್ತು. ಸೂಯೆಜ್ ಕಾಲುವೆ ನಿರ್ಮಾಣ ಮಾಡಿ ತಮ್ಮ ವ್ಯಾಪಾರಕ್ಕಾಗಿ ಈ ಜಲಮಾರ್ಗವನ್ನು ಬಳಸಿಕೊಂಡು ಬ್ರಿಟಿಷರು ಮತ್ತು ಫ್ರೆಂಚರು ವ್ಯಾಪಾರ ದ್ವಿಗುಣ ಮಾಡಿಕೊಳ್ಳಲು ಯೋಜಿಸಿದ್ದರು. ಆದರೆ ಜರ್ಮನ್ ತುರ್ಕರು ಇದನ್ನು ಬಲವಾಗಿ ವಿರೋಧಿಸಿದರೂ ಈ ಪ್ರತಿರೋಧವನ್ನು ಯಶಸ್ವಿಯಾಗಿ ಹತ್ತಿಕ್ಕಲಾಯಿತು.

ಯುದ್ಧ ಸಮಯದಲ್ಲಿ ಆಫ್ರಿಕಾವು ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳಿಗೆ ಮಾನವ ಸಂಪನ್ಮೂಲ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ಸರಬರಾಜು ಮಾಡುವ ಪ್ರಧಾನ ಆಕರವಾಗಿತ್ತು. ಈ ಸಮಯದಲ್ಲಿ ಮಿಲಿಯನ್‌ಗಟ್ಟಲೆ ಆಹಾರ ಸಾಮಗ್ರಿ ಮತ್ತು ತರಕಾರಿ ಹಾಗೂ ಖನಿಜ ವಸ್ತುಗಳನ್ನು ತಮ್ಮ ವಶದಲ್ಲಿದ್ದ ಆಫ್ರಿಕಾದಿಂದ ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳು ಸರಬರಾಜು ಮಾಡಿಕೊಂಡವು. ಆಫ್ರಿಕಾದ ವಸಾಹತುವಿನ ಐದು ಲಕ್ಷಕ್ಕೂ ಹೆಚ್ಚು ಬುಡಕಟ್ಟು ಜನರನ್ನು ಫ್ರೆಂಚ್ ಸೇನೆಯು ತನ್ನ ಸೇನೆಯಲ್ಲಿ ಹೊಂದಿತ್ತು. ಬ್ರಿಟಿಷ್ ಸೇನೆಯು ಸುಮಾರು ಮೂರು ಲಕ್ಷ ಆಫ್ರಿಕನ್ನರನ್ನು ಸಿದ್ಧಪಡಿಸಿತ್ತು. ಜರ್ಮನ್ ಸೇನೆಯು ಸುಮಾರು ೨೦,೦೦೦ ಆಫ್ರಿಕನ್ ಸೈನಿಕರು ಮತ್ತು ೨೦,೦೦೦ ಬುಡಕಟ್ಟು ಜನರನ್ನು ತನ್ನ ಬಗಲಿಗೆ ಹಾಕಿಕೊಂಡಿತ್ತು.

ವಸಹಾತುಶಾಹಿ ರಾಷ್ಟ್ರಗಳು ಯುದ್ಧದಲ್ಲಿ ತಮ್ಮ ಮೇಲೆ ಬಿದ್ದ ಅಪಾರ ಹೊರೆಯನ್ನು ಆಫ್ರಿಕಾದ ಜನತೆಯ ಮೇಲೆ ವರ್ಗಾಯಿಸಿದವು. ಶೋಷಣೆಯ ಸ್ವರೂಪ ವ್ಯಾಪಿಸ

ತೊಡಗುತ್ತಿದ್ದಂತೆ, ತೀವ್ರಗೊಂಡ ವಸಹಾತುಶಾಹಿ ರಾಷ್ಟ್ರಗಳ ದೌರ್ಜನ್ಯದ ವಿರುದ್ಧ ಜನತೆಯು ಎದಿರು ನಿಲ್ಲುವಂತೆ ಪ್ರೇರೇಪಿಸಿತು. ಬ್ರಿಟಿಷ್ ಮತ್ತು ಫ್ರೆಂಚ್ ವಸಾಹತುಗಳಲ್ಲಿ ರಾಷ್ಟ್ರೀಯ ವಿಮೋಚನಾ ಚಳುವಳಿಯು ತೀವ್ರಗೊಂಡಿತು. ಸೂಡಾನ್, ನೈಜೀರಿಯಾ, ಲಿಬಿಯಾಗಳಲ್ಲಿ ಜನರು ಬಂಡಾಯವೆದ್ದರು. ಅಲ್ಜೀರಿಯಾ, ತುನೀಷಿಯಾ, ಮೊರಾಕೊಗಳ ಜನತೆ ಫ್ರೆಂಚ್ ಸೇನೆಯ ವಿರುದ್ಧ ಕಾದಾಡತೊಡಗಿದರು.

ಪ್ರಥಮ ಮಹಾಯುದ್ಧ ಪರಿಣಾಮ ಆಫ್ರಿಕಾದ ರಾಜಕೀಯ ಭೂಪಟವನ್ನು ಪುನರ್ ರಚಿಸಲಾಯಿತು. ಈ ಮೊದಲು ಜರ್ಮನಿಯ ತೆಕ್ಕೆಯಲ್ಲಿದ್ದ ವಸಾಹತು ಪ್ರದೇಶಗಳನ್ನು ಲೀಗ್ ಆಫ್ ನೇಷನ್ ಮುಖಾಂತರ ಇಂಗ್ಲೆಂಡ್, ಫ್ರಾನ್ಸ್, ಬೆಲ್ಜಿಯಂಗಳಿಗೆ ವಹಿಸಿ ಕೊಡಲಾಯಿತು. ದಕ್ಷಿಣ ಆಫ್ರಿಕಾ ಒಕ್ಕೂಟ, ಟೋಗೋ ಮತ್ತು ಕೆಮರೂನ್‌ಗಳ ಲೀಗ್ ಆಫ್ ನೇಷನ್‌ನ ಸದಸ್ಯತ್ವವನ್ನು ರದ್ದುಗೊಳಿಸಿ ಅವುಗಳನ್ನು ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳಿಗೆ ಹಂಚಲಾಯಿತು.

ಪ್ರಥಮ ವಿಶ್ವ ಯುದ್ಧಾನಂತರ ವಿದೇಶಿ ಬಂಡವಾಳವು ಆಫ್ರಿಕಾದ ರಾಷ್ಟ್ರಗಳಲ್ಲಿ ಸ್ವೇಚ್ಛಾಚಾರದಿಂದ ಹರಿದಾಡಲಾರಂಭಿಸಿತು. ವಸಾಹತುಶಾಹಿ ರಾಷ್ಟ್ರಗಳು ಹಳೆಯ ಬಂಡವಾಳಶಾಹಿಪೂರ್ವ ಸಂಬಂಧಗಳನ್ನೇ ಮುಂದುವರಿಸಲು ಯತ್ನಿಸಿದ್ದವು. ಆ ರಾಷ್ಟ್ರಗಳಲ್ಲಿ ದೇಶೀಯ ಬಂಡವಾಳಶಾಹಿಯು ಬೆಳೆಯದಂತೆ ವ್ಯವಸ್ಥಿತವಾಗಿ ನೋಡಿಕೊಳ್ಳಲಾಯಿತು. ಪಾಳೇಗಾರಿ ಮತ್ತು ಪಾಳೇಗಾರಿಪೂರ್ವ ಶೋಷಣೆಯ ವಿಧಾನಗಳನ್ನು ಅನುಸರಿಸಲಾಯಿತು. ಗಣಿಗಾರಿಕೆ ಮತ್ತು ಸಣ್ಣ ಕೈಗಾರಿಕೆಗಳನ್ನು ಹೊರತುಪಡಿಸಿದರೆ, ಇನ್ನಾವುದೇ ಬೃಹತ್ ಕೈಗಾರಿಕಾ ರಂಗದಲ್ಲಿ ದೇಶೀಯ ಬಂಡವಾಳವು ತಲೆ ಎತ್ತದಂತೆ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಕಠಿಣ ಕ್ರಮ ಕೈಗೊಂಡವು. ಏಕಮುಖಿ ಕೃಷಿ ಮತ್ತು ಕಚ್ಚಾ ವಸ್ತು ತಯಾರಿಕೆ ಆಧಾರಿತ ಆರ್ಥಿಕತೆಯನ್ನು ವಸಾಹತುಶಾಹಿ ರಾಷ್ಟ್ರಗಳು ಬಲಗೊಳಿಸಿದವು. ಆಫ್ರಿಕಾದ ಸಮಾಜದಲ್ಲಿ ಆಂತರಿಕವಾಗಿ ಪ್ರಮುಖ ಬದಲಾವಣೆಗಳು ಜರುಗತೊಡಗಿದವು. ಅತಿ ಹೆಚ್ಚು ಹಿಂದುಳಿದ ಆಫ್ರಿಕಾದಲ್ಲಿ ಬಂಡವಾಳಶಾಹಿಪೂರ್ವದ ಅಸಂಬಂಧಗಳ ಮೇಲೆ ಪ್ರಹಾರಗಳು ಹೆಚ್ಚಾದವು. ಈ ಹಂತದಲ್ಲಿ ಬಂಡವಾಳಶಾಹಿ ವ್ಯವಸ್ಥೆಯ ಉದ್ದಿಮೆದಾರ ಮತ್ತು ಕಾರ್ಮಿಕ ವರ್ಗಗಳು ಅಸ್ತಿತ್ವಕ್ಕೆ ಬಂದವು.

### ಆಫ್ರಿಕಾದ ಸ್ವಾತಂತ್ರ್ಯ ಹೋರಾಟಗಳು

ಎರಡನೇ ಮಹಾಯುದ್ಧ ಸಮಯದಲ್ಲಿ ಗಣಿಗಾರಿಕೆ ಮತ್ತು ಉತ್ಪಾದನಾ ಕೈಗಾರಿಕೆಗಳ ಅಭಿವೃದ್ಧಿಯಾಯಿತು. ಹಲವು ವಿಧದ ಕಚ್ಚಾ ವಸ್ತುಗಳ ಉತ್ಪಾದನೆಯಾಯಿತು. ಖನಿಜ ಸಂಪತ್ತುಗಳ ಶೋಧನೆಯಾಯಿತು. ಆಫ್ರಿಕಾದಿಂದ ಹೆಚ್ಚೆಚ್ಚು ಯುದ್ಧ ಸಾಮಗ್ರಿಗಳು ಮತ್ತು ಗಣಿ ಸಂಪತ್ತುಗಳನ್ನು ಸಂಸ್ಕರಿಸಿ ಸಾಗಿಸುತ್ತಿದ್ದರಿಂದ ೧೯೪೦-೪೫ರ ಅವಧಿಯಲ್ಲಿ ಆಫ್ರಿಕಾದ ನಗರಗಳು ಮೂರುಪಟ್ಟು, ನಾಲ್ಕುಪಟ್ಟು, ಹೆಚ್ಚಾದವು. ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಆಫ್ರಿಕಾದಿಂದ ಸಾಗಣೆ ಮಾಡುವ ಸಲುವಾಗಿ ಜೀವನಕ್ಕಾಗಿ

ಕೃಷಿ ಮಾಡುತ್ತಿದ್ದ ಮತ್ತು ಸಣ್ಣ ಕೈಗಾರಿಕೆಗಳಿದ್ದ ಆಫ್ರಿಕಾದ ಆರ್ಥಿಕ ತಳಪಾಯವನ್ನು ಬೃಹತ್ ಮಟ್ಟದ ರಫ್ತು ಆಧಾರಿತ ಆರ್ಥಿಕತೆಯನ್ನಾಗಿ ಪರಿವರ್ತಿಸಲಾಯಿತು. ಈ ಮಧ್ಯೆ, ಏಷ್ಯಾದಿಂದ ಬರುತ್ತಿದ್ದ ಲಾಭಕ್ಕೆ ಪೆಟ್ಟು ಬಿದ್ದ ನಂತರ ಪ್ರಪಂಚದ ಸುಲಿಗೆಕೋರರ ದೃಷ್ಟಿ ಆಫ್ರಿಕಾ ವಸಾಹತುವಿನತ್ತ ಹೆಚ್ಚೆಚ್ಚು ಹರಿಯಿತು. ಇದರಿಂದಾಗಿ ಸಾವಿರಾರು ವರ್ಷಗಳಿಂದ ಬೆಳೆದುಬಂದ ಸಂಸ್ಕೃತಿಯನ್ನು ನಾಶಗೊಳಿಸಿ ರೈತಾಪಿಯನ್ನು ಬಲವಂತವಾಗಿ ಕೈಗಾರಿಕಾ ಕಾರ್ಮಿಕರನ್ನಾಗಿಸಲಾಯಿತು. ಹಳ್ಳಿಗರನ್ನು ಗಣಿಗಳು, ರೈಲು, ರಸ್ತೆಗಳು ಮತ್ತು ಸಂಸ್ಕರಣಾ ಘಟಕಗಳಲ್ಲಿ ಕೆಲಸ ಮಾಡಲು ಯೋಗ್ಯವಿರುವ 'ಕ್ರೂರಪಶು'ಗಳೆಂದು ಪರಿಗಣಿಸಲಾಗುತ್ತಿತ್ತು.

ಕಾರ್ಮಿಕ ಪಡೆಯನ್ನು ನಿರ್ಮಿಸಲು ಎರಡು ವಿಧಾನಗಳನ್ನು ಬಳಸಲಾಗುತ್ತಿತ್ತು. ಮೊದಲನೆಯದು, ಹೆಚ್ಚೆಚ್ಚು ತೆರಿಗೆಯನ್ನು ವಿಧಿಸಿ ಅದನ್ನು ಹಣದ ರೂಪದಲ್ಲೇ ಪಾವತಿಸುವಂತೆ ಮಾಡಿದ್ದು. ಈ ತೆರಿಗೆ ಪಾವತಿಸಲು ಹಣಕ್ಕಾಗಿ ಆಫ್ರಿಕನ್ನರು ಯುರೋಪ್ ಅಥವಾ ಅಮೆರಿಕದ ಕಂಪನಿಗಳಲ್ಲಿ ಕೆಲಸಕ್ಕಾಗಿ ನಗರಗಳಿಗೆ ವಲಸೆ ಹೋಗುತ್ತಿದ್ದರು. ಬಹುತೇಕ ವಸಾಹತುಗಳಲ್ಲಿ ಆಫ್ರಿಕನ್ನರ ಭೂಮಿ ಮೇಲಿನ ಒಡೆತನ ಶೇಕಡ ೧೦ಕ್ಕೆ ಮಾತ್ರ ಸೀಮಿತವಾಗಿತ್ತು. ಉಳಿದ ಭೂಮಿಯನ್ನು ರಫ್ತು ಆಧಾರಿತ ಬೆಳೆ ಬೆಳೆಯಲು ಅಗತ್ಯಕ್ಕಿಂತ ಅಗಾಧವಾದ ಭೂಮಿಯನ್ನು ಖಾಸಗಿ ಕಂಪನಿಗಳಿಗೆ ಮತ್ತು ವಸಾಹತುಶಾಹಿಗಳಿಗೆ ನೀಡಿದ್ದರಿಂದ ಸ್ವಾವಲಂಬಿಯಾಗಿದ್ದ ಆಫ್ರಿಕಾ ಆಹಾರಕ್ಕಾಗಿ ಆಮದು ಮಾಡಿಕೊಳ್ಳಬೇಕಾಯಿತು. ಎರಡನೆಯದು, ಬಲಾತ್ಕಾರದಿಂದ ಕಾರ್ಮಿಕರನ್ನು ನೇಮಿಸಿಕೊಳ್ಳುವುದು ಅಥವಾ ಆಧುನಿಕ ಗುಲಾಮಗಿರಿ. ಹಳ್ಳಿಗಳಿಂದ ಅಪಹರಿಸಿದ ಜನರನ್ನು ಗುತ್ತಿಗೆದಾರರ ನೆರವಿನಿಂದ ಬಲವಂತ ವಾಗಿ ಕಾರ್ಮಿಕರನ್ನಾಗಿ ದುಡಿಸಿಕೊಳ್ಳಲಾಗುತ್ತಿತ್ತು. ಆರೋಗ್ಯ ಸಂರಕ್ಷಣೆ, ನೈರ್ಮಲ್ಯ ವ್ಯವಸ್ಥೆ, ಕುಡಿಯುವ ನೀರು ಮುಂತಾದ ಅತ್ಯವಶ್ಯ ಸೌಲಭ್ಯಗಳಿಲ್ಲದೆ ಹಂದಿಗೂಡಿನಂತಹ ವಸತಿಗಳಲ್ಲಿ ವಾಸವಾಗಿದ್ದುಕೊಂಡು ದೀರ್ಘಾವಧಿ ಸಮಯ ಕೆಲಸ ಮಾಡುತ್ತಾ ಕುಟುಂಬದ ಸಂಪರ್ಕವಿಲ್ಲದೆ ಕಾರ್ಮಿಕರ ಜೀವನ ಹೀನಾಯ ಸ್ಥಿತಿಯಲ್ಲಿತ್ತು.

ಇಂಥಹ ಕ್ರೂರ ಸ್ಥಿತಿಗಳಿಂದಾಗಿ ಉತ್ತಮ ವೇತನ, ಉತ್ತಮ ದುಡಿಯುವ ವಾತಾವರಣಕ್ಕಾಗಿ ಮತ್ತು ಗುಲಾಮಗಿರಿಯನ್ನು ಕೊನೆಗಾಣಿಸಲು ಕಾರ್ಮಿಕ ಸಂಘಟನೆಗಳು ೧೯೨೦ರ ದಶಕದಲ್ಲಿ ತುನೀಷಿಯಾ, ಜಾಂಬಿಯಾ ಮತ್ತು ದಕ್ಷಿಣ ಆಫ್ರಿಕಾಗಳಲ್ಲಿ ಬೆಳೆದು ಬಂದವು. ಆರಂಭದ ಕಾರ್ಮಿಕ ಸಂಘಟನೆಗಳು ಕಾನೂನುಬಾಹಿರವಾಗಿದ್ದು ಮುಷ್ಕರಗಳನ್ನು ನಡೆಸುವವರಿಗೆ ಅವಿುಷವನ್ನೊಡ್ಡಲಾಗುತ್ತಿತ್ತು. ಇದಕ್ಕೆ ಬಗ್ಗದಿದ್ದರೆ ದಂಡನೆಗೊಳಪಡಿಸಲಾಗುತ್ತಿತ್ತು. ಮುಷ್ಕರಗಳಲ್ಲಿ ಡಜನ್‌ಗಟ್ಟಲೆ ಕಾರ್ಮಿಕರನ್ನು ಕೊಂದು ನೂರಾರು ಮಂದಿಯನ್ನು ಬಂಧಿಸಿ ಅವರನ್ನು ಮತ್ತೆ ಆಧುನಿಕ ಗುಲಾಮಗಿರಿಗೆ ದೂಡಲಾಗುತ್ತಿತ್ತು.

ಸಾಮ್ರಾಜ್ಯಶಾಹಿ ಮತ್ತು ಖಾಸಗಿ ಆಧುನಿಕ ದುರಾಸೆ ಮತ್ತು ಶೋಷಣೆ ಹೆಚ್ಚಾದಂತೆ, ದುಡಿಯುವ ಜನತೆಯ ಐಕ್ಯತೆ ಗಟ್ಟಿಗೊಂಡಿತು. ಸಾಮ್ರಾಜ್ಯಶಾಹಿ ಗುಲಾಮತನದ ವಿರುದ್ಧದ

ಹೋರಾಟದಲ್ಲಿ ಮೊದಲಿಗೆ ದೇಶೀಯ ಬಂಡವಾಳಶಾಹಿ ಮತ್ತು ಬುದ್ಧಿಜೀವಿಗಳ ನೇತೃತ್ವದಲ್ಲಿ ರಾಷ್ಟ್ರೀಯ ರಾಜಕೀಯ ಪಕ್ಷಗಳು ಮತ್ತು ಸಂಘಟನೆಗಳನ್ನು ಸ್ಥಾಪಿಸಲಾಯಿತು. ೧೯೨೦ರಲ್ಲಿ ಅಲ್ಜೀರಿಯಾ, ತುನೀಷಿಯಾ ಮತ್ತು ಮೊರಾಕೊಗಳಲ್ಲಿ ಕಮ್ಯುನಿಸ್ಟ್ ಪಕ್ಷಗಳನ್ನು ಸ್ಥಾಪಿಸಲಾಯಿತು. ಎಲ್ಲೆಡೆ ವ್ಯಾಪಿಸುತ್ತಿದ್ದ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಗಳಲ್ಲಿ ಉತ್ತರ ಆಫ್ರಿಕಾದ ರಾಷ್ಟ್ರಗಳಾದ ಈಜಿಪ್ಟ್, ಸೂಡಾನ್, ಮೊರಾಕೋ ಮುಂಚೂಣಿಯಲ್ಲಿದ್ದವು. ಪೂರ್ವ ಆಫ್ರಿಕನ್ ಒಕ್ಕೂಟವನ್ನು ಕೀನ್ಯಾದಲ್ಲಿ ಸ್ಥಾಪಿಸಲಾಯಿತು. ದಕ್ಷಿಣ ಆಫ್ರಿಕಾ ಒಕ್ಕೂಟದಲ್ಲಿ ಅಂಗೋಲಾ, ಕಾಂಗೋ, ಇಟಾಲಿಯನ್ ಸೋಮಾಲಿಲ್ಯಾಂಡ್ ಮತ್ತು ಚಡ್ ಇನ್ನಿತರ ಪ್ರದೇಶಗಳಲ್ಲಿ ರೈತಾಪಿಯ ಗಲಭೆಗಳಿಂದ ಮತ್ತು ದೊಡ್ಡ ನಗರಗಳಲ್ಲಿ ನಡೆದ ಮುಷ್ಕರ ಮತ್ತು ಪ್ರದರ್ಶನಗಳಿಂದ ಬಂಡಾಯವು ತೀವ್ರ ಸ್ವರೂಪ ವನ್ನು ಪಡೆದುಕೊಂಡು ಆಳುವ ವರ್ಗಗಳಿಂದ ಕೆಲವು ವಿನಾಯಿತಿಗಳನ್ನು ಪಡೆಯಲು ಸಾಧ್ಯವಾಗಿತ್ತು. ಇಟಲಿಯು ಇಥಿಯೋಪಿಯಾದ ಮೇಲೆ ದಾಳಿ ನಡೆಸಿದ ಸಂದರ್ಭದಲ್ಲಿ ಹಲವು ಆಫ್ರಿಕನ್ ರಾಷ್ಟ್ರಗಳಲ್ಲಿ ಪ್ರತಿಭಟನೆಗಳು ಜರುಗಿದವು.

ದ್ವಿತೀಯ ಮಹಾಯುದ್ಧ ಸಮಯದಲ್ಲಿ ಆಫ್ರಿಕಾದ ಎಲ್ಲ ರಾಷ್ಟ್ರಗಳ ಮೇಲೂ ಯುದ್ಧವನ್ನು ಹೇರಲಾಯಿತು. ೧೯೩೦ರ ದಶಕದಲ್ಲಿ ಆಫ್ರಿಕಾವು ಫ್ಯಾಸಿಸ್ಟ್ ಆಕ್ರಣವನ್ನು ಎದುರಿಸಬೇಕಾಯಿತು. ಈಜಿಪ್ಟ್, ಲಿಬ್ಯಾ, ತುನೀಷಿಯಾ, ಇಥಿಯೋಪಿಯಾ, ಸೋಮಾಲಿ ಲ್ಯಾಂಡ್, ಸೂಡಾನ್ ಮತ್ತು ಕೀನ್ಯಾ ಭೂಪ್ರದೇಶಗಳಲ್ಲಿ ಯುದ್ಧ ಚಟುವಟಿಕೆಗಳು ಜರುಗಿದವು. ಲಕ್ಷೋಪಲಕ್ಷ ಸಂಖ್ಯೆಯ ಆಫ್ರಿಕಾ ಸೈನಿಕರು ಬ್ರಿಟನ್ ಮತ್ತು ಜಪಾನ್ ಸೇನೆಯ ಭಾಗವಾಗಿ ಯುದ್ಧಗಳಲ್ಲಿ ಕಾದಾಡಿದರು. ಆಫ್ರಿಕಾದಲ್ಲಿನ ಇಟಾಲಿಯನ್ ಮತ್ತು ಜರ್ಮನ್ ಫ್ಯಾಸಿಸಂ ವಿರುದ್ಧ ನಡೆದ ಹೋರಾಟಗಳಲ್ಲಿ ಆಫ್ರಿಕಾದ ವಸಾಹತುಗಳು ಗಣನೀಯ ಮಿಲಿಟರಿ ಕೊಡುಗೆ ನೀಡಿವೆ.

ಅಮೆರಿಕ ಮತ್ತು ಯುರೋಪ್ ವಸಾಹತುಶಾಹಿ ರಾಷ್ಟ್ರಗಳಿಗೆ ಎರಡನೇ ಮಹಾಯುದ್ಧವು ನಾಜಿವಾದದ ವಿರುದ್ಧವಿದ್ದರೆ, ಆಫ್ರಿಕಾದ ಸೈನಿಕರಿಗೆ ವರ್ಣಭೇದ ನೀತಿ ಮತ್ತು ವಸಾಹತುಶಾಹಿಯ ವಿರುದ್ಧದ ಯುದ್ಧವಾಗಿತ್ತು. ಭಾರತದಲ್ಲಿ ಬ್ರಿಟಿಷರಿಗಾಗಿ ಸೇವೆ ಸಲ್ಲಿಸುತ್ತಿದ್ದ ನೈಜೀರಿಯಾದ ಸೈನಿಕನೊಬ್ಬ ೧೯೪೫ರಲ್ಲಿ ತಾನು ಮನೆಗೆ ಬರೆದ ಪತ್ರದಲ್ಲಿ ಈ ರೀತಿ ದಾಖಲಿಸಿದ್ದಾನೆ.

> ವಿದೇಶದಲ್ಲಿರುವ ನಾವೆಲ್ಲ ಸೈನಿಕರು ಹೊಸ ವಿಚಾರದೊಂದಿಗೆ ವಾಪಸ್ಸು ಬರುತ್ತಿದ್ದೇವೆ. ನಾವೆಲ್ಲರೂ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತೇವೆಂದು ನಮಗೆ ತಿಳಿಸಲಾಗಿದೆ. ನಮಗೆ ಸ್ವಾತಂತ್ರ್ಯ ಬೇಕಷ್ಟೆ.

ಬಿಳಿಯ ಸೈನಿಕರೊಂದಿಗೆ ಸರಿಸಮಾನರಾಗಿ ಆಫ್ರಿಕಾದ ಸೈನಿಕರು ಹೋರಾಡಿದರು. ದೂರ ಪ್ರದೇಶಗಳಲ್ಲಿ ಯುದ್ಧಗಳನ್ನು ಗೆದ್ದರು. ಹಲವರು ಓದಲು ಬರೆಯಲು ಕಲಿತರು, ತಾಂತ್ರಿಕ

ಪರಿಣತಿ ಪಡೆದರು. ಇದರಿಂದ ಬಿಳಿಯರು ಮಾತ್ರವೇ ಶ್ರೇಷ್ಠರೆಂಬುದು ಅಸಂಬದ್ಧವೆನಿಸಿತವರಿಗೆ. ಹೀಗಾಗಿ ಸ್ವಾತಂತ್ರ್ಯದ ವಿಚಾರಗಳನ್ನು ಅವರು ಅತ್ಯುತ್ಸಾಹದಿಂದ ಸ್ವಾಗತಿಸಿದರು.

ಕ್ರಾಂತಿಕಾರಿ ವಿಚಾರಗಳನ್ನು ಹೊಂದಿರುವ ಕಾರ್ಮಿಕರ ಪಕ್ಷ ಮಾತ್ರವೇ ಪೂರ್ಣ ಸ್ವಾತಂತ್ರ್ಯಗಳಿಸಲು ಸಾಧ್ಯವೆಂದು ಅಲ್ಜೀರಿಯಾ ಸ್ವಾತಂತ್ರ್ಯ ಹೋರಾಟಗಾರರು ನಂಬಿದ್ದರು. ಆರಂಭಿಕ ಕಾರ್ಮಿಕ ಸಂಘಟನೆಗಳ ನಾಯಕರೆಲ್ಲ ಕಮ್ಯುನಿಷ್ಟರೇ ಆಗಿದ್ದು ಯುರೋಪಿನ ಸಮಾಜವಾದಿ ಚಳುವಳಿಗಳೊಂದಿಗೆ ಸಂಪರ್ಕ ಹೊಂದಿದ್ದರು. ಭಾರತ ಸೇರಿದಂತೆ ಏಷ್ಯಾದ ಹಲವು ರಾಷ್ಟ್ರಗಳು ರಾಷ್ಟ್ರೀಯ ವಿಮೋಚನಾ ಕ್ರಾಂತಿಗಳಲ್ಲಿ ಯಶಸ್ಸು ಗಳಿಸಿದ್ದು ಮತ್ತು ರಷ್ಯಾ, ಚೀನಾ, ವಿಯೆಟ್ನಾಂ, ಉತ್ತರ ಕೊರಿಯಾಗಳು ಸಮಾಜವಾದಿ ರಾಷ್ಟ್ರಗಳಾಗಿ ಪರಿವರ್ತನೆಯಾದದ್ದು ಆಫ್ರಿಕಾದ ರಾಷ್ಟ್ರಗಳಿಗೆ ಮತ್ತಷ್ಟು ಪ್ರೇರಣೆ ನೀಡಿದವು.

ವಿಮೋಚನಾ ಹೋರಾಟ ಸಮಯದಲ್ಲಿ ಆಫ್ರಿಕಾದ ಜನತೆಯು ಒಗ್ಗೂಡಲಾರಂಭಿಸಿದರು. ಅವರ ಸಾಮಾಜಿಕ ಪ್ರಜ್ಞೆಯು ಬೆಳೆಯತೊಡಗಿತು ಮತ್ತು ಬುದ್ಧಿಮತ್ತೆಯ ಮಿಲಿಟರಿ ಕಮ್ಯಾಂಡರ್‌ಗಳು ಮತ್ತು ನಾಯಕರು ಉತ್ತುಂಗಕ್ಕೆ ಬರತೊಡಗಿದರು. ಆದರೂ ವಸಾಹತುಶಾಹಿ ಶಕ್ತಿಗಳ ಪ್ರಹಾರವನ್ನು ತಾಳಲಾರದೆ, ಆದಾಯ ಗಳಿಸುವ ಹಾದಿಗಳಿಲ್ಲದೆ ಹಸಿವು ಮತ್ತು ಹಲವು ರೋಗರುಜಿನಗಳಿಂದ ಲಕ್ಷೋಪಲಕ್ಷ ಸಂಖ್ಯೆಯ ಆಫ್ರಿಕನ್ನರು ಸಾವನ್ನಪ್ಪುತ್ತಿದ್ದರು. ರಫ್ತು ಆಧಾರಿತ ಕೈಗಾರಿಕೆಗಳು ಹೆಚ್ಚಾದಂತೆ ಕಾರ್ಮಿಕ ಸಂಖ್ಯೆಯಲ್ಲಿ ಹೆಚ್ಚಳವಾಯಿತು. ೧೯೫೦ರ ದಶಕದಲ್ಲಿ ೪.೦ ಲಕ್ಷ ಸ್ವೇಚ್ಛಾ ಕಾರ್ಮಿಕರಿದ್ದರೆ ಸುಮಾರು ೩.೮ ಲಕ್ಷ ಗುತ್ತಿಗೆ ಕಾರ್ಮಿಕರಿದ್ದರು ಎಂದು ಅಂಗೋಲಾದ ವಸಾಹತುಶಾಹಿ ಸರ್ಕಾರದ ವರದಿಗಳೇ ತಿಳಿಸುತ್ತವೆ. ಆಫ್ರಿಕಾದಾದ್ಯಂತ ಈ ಪ್ರಮಾಣದ ಗುತ್ತಿಗೆ ಕಾರ್ಮಿಕರ ಸಂಖ್ಯೆ ಸರ್ವ ಸಾಮಾನ್ಯವಾಗಿತ್ತು.

ನಿಧಾನವಾಗಿ ಆಫ್ರಿಕಾದಲ್ಲಿ ತಳವೂರಿದ್ದ ವಸಾಹತು ವ್ಯವಸ್ಥೆಯು ಶಿಥಿಲಗೊಳ್ಳ ತೊಡಗಿತು. ಫ್ಯಾಸಿಸ್ಟ್ ರಾಷ್ಟ್ರಗಳ ಕೂಟವನ್ನು ಸೋವಿಯತ್ ಸೇನೆ ಮತ್ತು ಮೈತ್ರಿಕೂಟವು ಹೀನಾಯವಾಗಿ ಸೋಲಿಸಿದ್ದು ಆಫ್ರಿಕಾವು ರಾಜಕೀಯವಾಗಿ ಜಾಗೃತಗೊಳ್ಳಲು ದೊಡ್ಡ ಮಟ್ಟದಲ್ಲಿ ಪ್ರಭಾವ ಬೀರಿತು. ದ್ವಿತೀಯ ಮಹಾಯುದ್ಧ ನಂತರದಲ್ಲಿ ವಸಾಹತು ರಾಷ್ಟ್ರಗಳಲ್ಲಿ ವಿಮೋಚನೆಗಾಗಿ ಹೋರಾಡುವ ರಾಜಕೀಯ ಪಕ್ಷಗಳು ಅಸ್ತಿತ್ವಕ್ಕೆ ಬಂದವು. ಇವುಗಳಿಗೆ ವ್ಯತಿರಿಕ್ತವಾಗಿ ವಿಮೋಚನೆಗಾಗಿ ಹೋರಾಡುವ ರಾಜಕೀಯ ಪಕ್ಷಗಳು ಅಸ್ತಿತ್ವಕ್ಕೆ ಬಂದವು. ಇವುಗಳಿಗೆ ವ್ಯತಿರಿಕ್ತವಾಗಿ ವಸಾಹತು ಪರ ಪಕ್ಷಗಳು ಮತ್ತು ಗುಂಪುಗಳನ್ನು ಸಹ ಸ್ಥಾಪಿಸಲಾಯಿತು. ಈ ಗುಂಪುಗಳು ಪ್ರಮುಖವಾಗಿ ಬಂಡವಾಳಗಾರರಾಗಿ ಪರಿವರ್ತಿತಗೊಂಡಿದ್ದ ಪಾಳೇಗಾರಿ ದೊರೆಗಳನ್ನು ಬೆಂಬಲಿಸುತ್ತಿದ್ದವು. ಆಫ್ರಿಕಾದ ರಾಷ್ಟ್ರಗಳಲ್ಲಿ ಸ್ವಾತಂತ್ರ್ಯ ಹೋರಾಟವು ವಿವಿಧ ರೂಪಗಳಲ್ಲಿತ್ತು. ಬಹುತೇಕ ವಸಾಹತುಗಳಲ್ಲಿ ಅದು ಪ್ರತಿಭಟನೆಗಳು, ಮುಷ್ಕರ ಮತ್ತು ನಾಗರಿಕ ಅಸಹಕಾರ ಚಳುವಳಿಯ ರೂಪದಲ್ಲಿತ್ತು. ಇನ್ನೂ ಕೆಲವು ರಾಷ್ಟ್ರಗಳಲ್ಲಿ ಬಂಡಾಯಗಳು, ಗೆರಿಲ್ಲಾ ಹೋರಾಟಗಳು ನಡೆದವು. ಈಜಿಪ್ಟ್‌ನಲ್ಲಿ ಸಶಸ್ತ್ರ ಹೋರಾಟಗಳು ಜರುಗಿದವು.

ಆಫ್ರಿಕಾದ ವಿಮೋಚನೆಯಲ್ಲಿ ಪ್ರಧಾನ ಪಾತ್ರ ವಹಿಸಿದ ಅಂಶವೆಂದರೆ ಕಾರ್ಮಿಕ ಸಂಘಟನೆಗಳ ಬೆಳವಣಿಗೆ ಮತ್ತು ಅಭಿವೃದ್ಧಿ. ೨೦ನೇ ಶತಮಾನದ ಪ್ರಾರಂಭದಲ್ಲಿ ವಸಾಹತುಶಾಹಿ ಶೋಷಣೆಯ ಸಂಕಷ್ಟಮಯ ಪರಿಸ್ಥಿತಿಯಿಂದಾಗಿ ಆಫ್ರಿಕಾದ ಕಾರ್ಮಿಕ ಸಂಘಟನೆಗಳು ಸೆಟೆದೆದ್ದು ಬಂದವು. ಮೊರಾಕೋ ಮತ್ತು ತುನೀಷಿಯಗಳಲ್ಲಿ ಬೆಳೆದು ಬಂದ ಸಶಸ್ತ್ರ ಚಳುವಳಿಯಿಂದಾಗಿ ೧೯೫೬ರಲ್ಲಿ ಫ್ರೆಂಚ್ ಸರ್ಕಾರವು ಸ್ವಾತಂತ್ರ್ಯ ಘೋಷಿಸಬೇಕಾಯಿತು. ಇಟಲಿಯ ವಸಾಹತುವಾಗಿದ್ದ ಲಿಬ್ಯಾವನ್ನು ನಂತರ ಬ್ರಿಟಿಷ್ ಸೇನೆಗಳು ವಶಪಡಿಸಿಕೊಂಡವು. ಏಳು ವರ್ಷಗಳವರೆಗೆ ಸ್ವಾತಂತ್ರಕ್ಕಾಗಿ ನಡೆದ ಹೋರಾಟದಲ್ಲಿ ೧೫ ಲಕ್ಷ ಜನರನ್ನು ಕಳೆದುಕೊಂಡಿದ್ದ ಅಲ್ಜೀರಿಯಾ ಅಂತಿಮವಾಗಿ ೧೯೬೨ರಲ್ಲಿ ಯಶಸ್ಸು ಗಳಿಸಿತು.

ಜ್ಯೂಲಿಯಸ್ ನೈರೇರೆಯವರು ಟಾಂಜೇನಿಯ ದೇಶದಲ್ಲಿ ತಾಂಗಾನಿಕಾ ಆಫ್ರಿಕನ್ ನ್ಯಾಷನಲ್ ಯೂನಿಯನ್ ಒಂದನ್ನು ಸಂಘಟಿಸಿ ಸ್ವಾತಂತ್ರ್ಯ ಹೋರಾಟಕ್ಕೆ ನಾಯಕತ್ವ ನೀಡಿದರು. ಅವರು ಆ ದೇಶದ ಮೊದಲ ಅಧ್ಯಕ್ಷರೂ(೧೯೬೨-೧೯೮೫) ಆಗಿದ್ದರು. ಇಡೀ ಆಫ್ರಿಕಾಕ್ಕೆ ಸ್ವಾತಂತ್ರ್ಯ ಹೋರಾಟದಲ್ಲಿ ನಾಯಕತ್ವ ನೀಡಿದರು. ಜಿಂಬಾಬ್ವೆ, ಮೊಜಾಂಬಿಕ್, ಅಂಗೋಲಾ ಮತ್ತು ಉಗಾಂಡಾದ ಸ್ವಾತಂತ್ರ್ಯ ಹೋರಾಟದ ಗೆರಿಲ್ಲಾ ನೆಲೆಗಳಿಗೆ ಸಹಾಯ ಒದಗಿಸಿದ್ದರು.

ಬೆಲ್ಜಿಯನ್ ಕಾಂಗೋ ಪ್ರಸ್ತುತ ಝ್ಯುರೇ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಮುಂಚೂಣಿ ನಾಯಕತ್ವ ನೀಡಿದವರೆಂದರೆ ಪ್ಯಾಟ್ರಿಕ್ ಲೂಮುಂಬಾರವರು. ೧೯೬೦ರಲ್ಲಿ ಬೆಲ್ಜಿಯಂ ಸರ್ಕಾರವು ಕಾಂಗೋ ದೇಶಕ್ಕೆ ಅಧಿಕಾರ ಹಸ್ತಾಂತರ ಮಾಡುವ ಸಂದರ್ಭದಲ್ಲಿ ತಮ್ಮ ಬಾಲಂಗೋಚಿಗಳಿಗೆ ನೀಡುವ ಪ್ರಯತ್ನವನ್ನು ಲೂಮುಂಬಾ ನಾಯಕತ್ವದ ಪಕ್ಷವು ವಿರೋಧಿಸಿತು. ತೀವ್ರ ಚಳುವಳಿಗಳಿಂದಾಗಿ ಚುನಾವಣೆ ನಡೆಸಲಾಯಿತು. ಚುನಾವಣೆಯಲ್ಲಿ ಅಭೂತಪೂರ್ವ ಗೆಲುವು ಸಾಧಿಸಿ ಲೂಮುಂಬಾ ಪ್ರಧಾನಮಂತ್ರಿಯಾದರೂ ಪ್ರತ್ಯೇಕತಾ ವಾದದ ದನಿಯೆತ್ತಿ ಬಂಡಾಯ ಸಾರಿದ ಕಟಂಗಾ ಪ್ರಾಂತ್ಯಕ್ಕೆ ಬೆಂಬಲವಾಗಿ ಬೆಲ್ಜಿಯನ್ ಸೇನೆ ನಿಂತಿತು. ಇದರ ವಿರುದ್ಧ ಲೂಮುಂಬಾ ವಿಶ್ವಸಂಸ್ಥೆಗೆ ದೂರಿತ್ತರೂ ಯಾವುದೇ ಪ್ರಯೋಜನವಾಗಲಿಲ್ಲ. ಅಂದಿನ ಅಧ್ಯಕ್ಷ ಈಸಬವು ಲೂಮುಂಬಾ ಸರ್ಕಾರವನ್ನು ವಜಾ ಮಾಡಿದರು. ಈ ಅವಕಾಶ ಬಳಸಿಕೊಂಡು ಮಿಲಿಟರಿ ನಾಯಕರು ಅಧಿಕಾರ ಗ್ರಹಣ ಮಾಡಿದರು. ನಂತರದಲ್ಲಿ ಲೂಮುಂಬಾರನ್ನು ಹತ್ತೆ ಮಾಡಲಾಯಿತು. ಇದರ ಹಿಂದೆ ಅಮೆರಿಕದ ಗೂಢಾಚಾರ ಸಂಸ್ಥೆ ಸಿಐಎಯ ಪ್ರಧಾನ ಪಾತ್ರವಿದೆ ಎನ್ನಲಾಗುತ್ತದೆ.

ಘಾನಾದಲ್ಲಿ ಮುಂಚೂಣಿ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಕ್ವಾಮೆ ಎನ್ ಕ್ರೂಮಾ ಅವರು ಸ್ವತಂತ್ರ ಘಾನಾದ ಅಧ್ಯಕ್ಷರಾದರು. ಅವರು ಇಡೀ ಆಫ್ರಿಕಾವನ್ನು ಸಾಮ್ರಾಜ್ಯಶಾಹಿ ವಸಾಹತುಶಾಹಿಯಿಂದ ಬಿಡುಗಡೆ ಮಾಡುವ ಉದ್ದೇಶದಿಂದ ಆಫ್ರಿಕಾದ ಐಕ್ಯತೆಗಾಗಿ ಶ್ರಮಿಸಿದರು. ಈ ನಿಟ್ಟಿನಲ್ಲಿ ಅವರು ಹಲವು ರಾಷ್ಟ್ರಗಳ ಬೆಂಬಲ ಗಳಿಸಿ ಆಫ್ರಿಕಾ ಐಕ್ಯತಾ ಸಂಘಟನೆ(ಓಎಯು)ನ್ನು ೧೯೬೩ರಲ್ಲಿ ಸ್ಥಾಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು.

೧೯೬೦ರ ಹೊತ್ತಿಗೆ ೧೭ ರಾಷ್ಟ್ರಗಳು ಸ್ವತಂತ್ರಗೊಂಡವು. ೧೯೭೦ರ ಹೊತ್ತಿಗೆ ಬಹುತೇಕ ರಾಷ್ಟ್ರಗಳು ಸ್ವಾತಂತ್ರ್ಯ ಪಡೆದವು. ೧೯೬೧ರಲ್ಲಿ ಅಂಗೋಲಾದಲ್ಲಿ, ೧೯೬೪ರಲ್ಲಿ ಜುನಿಯಾ ಮತ್ತು ೧೯೬೪ರಲ್ಲಿ ಮೊಜಾಂಬಿಕ್‌ಗಳಲ್ಲಿ ಪೋರ್ಚುಗೀಸರ ವಿರುದ್ಧ ಸಶಸ್ತ್ರ ಹೋರಾಟ ನಡೆಯಿತು.

ಆಫ್ರಿಕಾದ ದಕ್ಷಿಣ ಭಾಗದಲ್ಲಿ ಯಥೇಚ್ಛವಾದ ಖನಿಜ ಸಂಪತ್ತು ದೊರೆಯುತ್ತಿದ್ದರಿಂದ ಪಶ್ಚಿಮ ರಾಷ್ಟ್ರಗಳ ಕಣ್ಣೆಲ್ಲ ಅಲ್ಲಿತ್ತು. ೧೯೬೦ರ ದಶಕದಿಂದೀಚೆಗೆ ದಕ್ಷಿಣ ಆಫ್ರಿಕಾ ದೊಂದಿಗೆ ಹೆಚ್ಚು ಬಂಡವಾಳ ಹೂಡುವ ಮತ್ತು ವ್ಯಾಪಾರ ಬಾಂಧವ್ಯ ಹೊಂದಿದ್ದ ಬ್ರಿಟನ್, ಅಮೆರಿಕಗೆ ತನ್ನ ಸ್ಥಾನವನ್ನು ಬಿಟ್ಟುಕೊಟ್ಟಿತು. ಅಮೆರಿಕದ ಬಹುರಾಷ್ಟ್ರೀಯ ಕಂಪನಿಗಳು ಜಿಂಬಾಬ್ವೆ, ಅಂಗೋಲಾ, ಮೊಜಾಂಬಿಕ್ ಮತ್ತು ನಮೀಬಿಯಾದ ಭೂಭಾಗ ಗಳಲ್ಲಿ ತಮ್ಮ ಚಟುವಟಿಕೆಗಳನ್ನು ವಿಸ್ತರಿಸಿದ್ದವು. ಜಿಂಬಾಬ್ವೆ ಮತ್ತು ನಮೀಬಿಯಾಗಳಲ್ಲಿ ಗೆರಿಲ್ಲಾ ಯುದ್ಧ ಚಟುವಟಿಕೆಗಳು ತೀವ್ರ ಸ್ವರೂಪ ಪಡೆದುಕೊಂಡದ್ದರಿಂದ ಅಲ್ಲಿ ಚುನಾವಣೆ ನಡೆಸಲು ಅಮೆರಿಕ ಒಪ್ಪದೆ ಅನ್ಯ ಮಾರ್ಗವಿರಲಿಲ್ಲ.

೧೯೭೫ರಲ್ಲಿ ಅಂಗೋಲಾವು ಸ್ವತಂತ್ರ ಗಳಿಸಿತು. ಸ್ವಾತಂತ್ರ್ಯಗೊಂಡ ಬಳಿಕ ಅಂಗೋಲಾ ದಲ್ಲಿ ಮಾರ್ಕ್ಸ್‌ವಾದಿ ಪಕ್ಷವು ಅಧಿಕಾರಕ್ಕೆ ಬಂದಿತು. ಆದರೆ ಕೆಲವೇ ವರ್ಷಗಳಲ್ಲಿ ಜೋನಾಸ್ ಸವಿಂಬಿ ಎಂಬುವನ ನಾಯಕತ್ವದಲ್ಲಿ ಯೂನಿಟಾ ಎಂಬ ಹೆಸರಿನ ಚಳವಳಿಯು ಆರಂಭಗೊಂಡು ಹೊಸ ಸರ್ಕಾರದ ವಿರುದ್ಧ ಗೆರಿಲ್ಲಾ ಯುದ್ಧ ನಡೆಸಿತು. ಈ ಚಳವಳಿಗೆ ಬಿಳಿಯ ಜನಾಂಗದ ನೇತೃತ್ವ ಹೊಂದಿದ್ದ ದಕ್ಷಿಣ ಆಫ್ರಿಕಾ ಸರ್ಕಾರವು ಸೇರಿದಂತೆ ಅಮೆರಿಕ ಮತ್ತು ಯುರೋಪ್ ರಾಷ್ಟ್ರಗಳು ಬೆಂಬಲ ನೀಡಿದ್ದವು. ಅಂಗೋಲಾದ ಸರ್ಕಾರವನ್ನು ರಕ್ಷಿಸುವ ಸಲುವಾಗಿ ಕ್ಯೂಬಾ ಮತ್ತು ಸೋವಿಯತ್ ರಷ್ಯಾ ನೆರವು ನೀಡಿದವು. ಆದರೂ ೧೯೯೧ರ ಸಂಧಾನಗಳು ಮತ್ತು ೧೯೯೨ರ ಚುನಾವಣೆಗಳು ಕೂಡ ಈ ನಾಗರಿಕ ಯುದ್ಧವನ್ನು ಕೊನೆಗಾಣಿಸುವಲ್ಲಿ ವಿಫಲವಾದವು. ೧೯೯೮-೯೯ರ ಹೊತ್ತಿಗೆ ಅಂಗೋಲಾದ ಶೇ.೬೦ರಷ್ಟು ಪ್ರದೇಶದ ಮೇಲೆ ಯೂನಿಟಾ ಸಂಘಟನೆಯು ನಿಯಂತ್ರಣ ಹೊಂದಿದ್ದು, ಗಂಭೀರವಾದ ಹೋರಾಟಗಳು ನಡೆದು ತೀವ್ರ ಸ್ವರೂಪ ಪಡೆದುಕೊಂಡಿದ್ದವು. ಅಂಗೋಲಾದ ಸೇನೆಯು ಯೂನಿಟಾ ನೆಲೆಗಳ ಮೇಲೆ ಬೃಹತ್ ಪ್ರಮಾಣದ ದಾಳಿ ನಡೆಸಿ ಶತ್ರುಪಡೆಗಳನ್ನು ಬಹುತೇಕ ಧ್ವಂಸಗೊಳಿಸಿತು. ಆದರೂ ೨೦೦೨ರಲ್ಲಿ ಸವಿಂಬಿಯು ಮರಣಗೊಂಡ ನಂತರವಷ್ಟೆ ನಾಗರಿಕ ಯುದ್ಧವು ಅಂತ್ಯ ಕಂಡಿತು. ಯೂನಿಟಾ ಸಂಘಟನೆಯು ತನ್ನ ಸೇನೆಯನ್ನು ನಾಶ ಮಾಡಿ ತಾನೊಂದು ರಾಜಕೀಯ ಪಕ್ಷವೆಂದು ಘೋಷಿಸಿಕೊಂಡಿತು. ಅಂಗೋಲಾದಲ್ಲಿ ಕಳೆದ ೨೫ ವರ್ಷಗಳಲ್ಲಿ ನಡೆದ ನಿರಂತರ ನಾಗರಿಕ ಯುದ್ಧಗಳಿಂದಾಗಿ ೧೫ ಲಕ್ಷಕ್ಕೂ ಹೆಚ್ಚು ಮಂದಿ ಮರಣ ಹೊಂದಿದ್ದಾರೆ.

ದಕ್ಷಿಣ ಆಫ್ರಿಕಾದ ಬಿಳಿಯರ ಸರ್ಕಾರವು ನಮೀಬಿಯಾವನ್ನು ಆಕ್ರಮಿಸಿಕೊಂಡಿತ್ತು. ದಕ್ಷಿಣ ಆಫ್ರಿಕಾ ಸೇನೆಯ ವಿರುದ್ಧ ನೈರುತ್ಯ ಪೊಲೀಸ್ ಸಂಘಟನೆಯು ಸ್ವಾಮ್

ನೂಜೋಮಾ ಅವರ ನಾಯಕತ್ವದಲ್ಲಿ ಅವಿರತ ಹೋರಾಟ ನಡೆಸಿತು. ಇದರ ಫಲವಾಗಿ ಸ್ಯಾಮ್ ನೂಜೋಮಾ ಅವರು ೧೯೯೦ರಲ್ಲಿ ಸ್ವಾತಂತ್ರ್ಯ ಗಳಿಸಿದ ನಮೀಬಿಯಾದ ಅಧ್ಯಕ್ಷರಾಗಿ ಆಯ್ಕೆಯಾದರು. ನಮೀಬಿಯಾವು ಅಂಗೋಲಾ ಸರ್ಕಾರದೊಂದಿಗೆ ಒಪ್ಪಂದ ಮಾಡಿಕೊಂಡು ಅಲ್ಲಿನ ಬಂಡುಕೋರ ಯೂನಿಟಾ ಸಂಘಟನೆಯ ವಿರುದ್ಧ ಹೋರಾಡಲು ಬೆಂಬಲ ನೀಡಿತು. ಯೂನಿಟಾ ಸೇನೆಯ ಮೇಲೆ ದಾಳಿ ನಡೆಸಲು ನಮೀಬಿಯಾ ತನ್ನ ಭೂನೆಲೆಗಳನ್ನು ಅಂಗೋಲಾ ಸೇನೆಗೆ ನೀಡಿತು. ಅಂಗೋಲಾದ ಯುದ್ಧದಿಂದಾಗಿ ಸಾವಿರಾರು ಸಂಖ್ಯೆಯ ನಿರಾಶ್ರಿತರು ನಮೀಬಿಯಾದಲ್ಲಿ ಆಶ್ರಯ ಪಡೆದರು. ೨೦೦೧ರಲ್ಲಿ ಸುಮಾರು ೩೦,೦೦೦ ಅಂಗೋಲಾ ನಿರಾಶ್ರಿತರು ನಮೀಬಿಯಾದಲ್ಲಿದ್ದರು. ನಮೀಬಿಯಾದಲ್ಲಿ ಶೇ. ೨೦ರಷ್ಟು ಜನತೆ ಶೇ.೭೫ರಷ್ಟು ಭೂಮಿಯನ್ನು ಹೊಂದಿದ್ದಾರೆ. ಭೂಸುಧಾರಣೆಯ ಅತ್ಯಂತ ಪ್ರಮುಖವಾದ ವಿಷಯವಾಗಿದ್ದು, ತೀರಾ ನಿಧಾನಗತಿಯಲ್ಲಿ ಭೂಸುಧಾರಣಾ ಕಾರ್ಯವು ಸಾಗುತ್ತಿದೆ. ೨೦೦೩ರಲ್ಲಿ ಹಿಫಿಕೆಪುನ್ಯೆ ಪೊಹಂಬಾ ನಮೀಬಿಯಾದ ಅಧ್ಯಕ್ಷರಾಗಿ ಚುನಾಯಿತರಾದರು.

## ದಕ್ಷಿಣ ಆಫ್ರಿಕಾ

ವರ್ಣಭೇದ ನೀತಿಯಿರುವ ದಕ್ಷಿಣ ಆಫ್ರಿಕಾದಲ್ಲಿ ಬಿಳಿಯ ಜನಾಂಗವು ಸಾಮ್ರಾಜ್ಯಶಾಹಿ ರಾಷ್ಟ್ರಗಳಾದ ಅಮೆರಿಕ, ಇಂಗ್ಲೆಂಡ್ ಮತ್ತು ಜರ್ಮನಿಗಳಿಂದ ಬೆಂಬಲ ಪಡೆದಿತ್ತು. ದಕ್ಷಿಣ ಆಫ್ರಿಕಾದ ಸಾಮಾಜಿಕ ಮತ್ತು ಆರ್ಥಿಕ ರಚನೆ ಹೇಗಿತ್ತೆಂದರೆ ಅದು ವಸಾಹತುವಾಗಿರದಿದ್ದರೂ, ವಿದೇಶಿ ಬಿಳಿಯ ಜನಾಂಗವು ಸಣ್ಣ ಸಂಖ್ಯೆಯಲ್ಲಿದ್ದರೂ, ಬಹುಸಂಖ್ಯಾತ ಜನತೆಯನ್ನು ದಮನ ಮಾಡುತ್ತಿತ್ತು. ಆ ದೇಶವನ್ನು ನಿಯಂತ್ರಣದಲ್ಲಿಟ್ಟುಕೊಂಡದ್ದು ದೂರದಲ್ಲೆಲ್ಲೊ ಇರುವ ಅನ್ಯರಾಷ್ಟ್ರವಾಗಿರದೆ, ತನ್ನದೇ ಗಡಿಯೊಳಗಿರುವ ಬಿಳಿಯ ಜನಾಂಗವಾಗಿತ್ತು. ದಕ್ಷಿಣ ಆಫ್ರಿಕಾದ ಕಾರ್ಮಿಕರ ಸಂಖ್ಯೆಯು ಹೆಚ್ಚಳಗೊಂಡಂತೆ ಸ್ವಾತಂತ್ರ್ಯಕ್ಕಾಗಿ ಮುಷ್ಕರ ಗಳನ್ನು ನಡೆಸಲಾಯಿತು. ದಕ್ಷಿಣ ಆಫ್ರಿಕಾದ ಕಾರ್ಮಿಕರ ಸಂಖ್ಯೆಯು ಹೆಚ್ಚಳಗೊಂಡಂತೆ ಸ್ವಾತಂತ್ರ್ಯಕ್ಕಾಗಿ ಮುಷ್ಕರಗಳನ್ನು ನಡೆಸಲಾಯಿತು. ಇದರೊಂದಿಗೆ ಸ್ಟೀವ್ ಬೈಕೊ ಅವರ ಕಪ್ಪು ಜನಾಂಗದ ಪ್ರಜ್ಞೆಯ ಚಳುವಳಿ ಮತ್ತು ವಿದ್ಯಾರ್ಥಿ ನೇತೃತ್ವದ ಚಳುವಳಿಗಳು ತೀವ್ರಗೊಂಡವು. ೧೯೮೫ರಲ್ಲಿ ದಕ್ಷಿಣ ಆಫ್ರಿಕಾ ಕಾರ್ಮಿಕ ಸಂಘಟನೆಗಳ ಒಕ್ಕೂಟವನ್ನು ಕೊಸಾಟು ಸ್ಥಾಪಿಸಲಾಯಿತು. ಇದು ಸ್ವಾತಂತ್ರ್ಯ ಚಳುವಳಿಗೆ ಇನ್ನಿಲ್ಲದಂಥ ಸ್ಥೈರ್ಯ ನೀಡಿತು. ಈ ಒಕ್ಕೂಟವು ಒಂದು ಮಾದರಿ ಸಂಘಟನೆಯಾಗಿ ನಮೀಬಿಯಾ, ಜಾಂಬಿಯಾ, ಜಿಂಬಾಬ್ವೆ ಮತ್ತು ಸ್ವಾಜಿಲ್ಯಾಂಡ್‌ಗಳಲ್ಲಿನ ಕಾರ್ಮಿಕ ಸಂಘಟನೆಗಳಿಗೆ ನೇರವಾದ ನೆರವು ಮತ್ತು ನಿರ್ದೇಶನಗಳನ್ನು ನೀಡಿತು. ಆದರೂ ದಕ್ಷಿಣ ಆಫ್ರಿಕಾ ಸರ್ಕಾರದ ನಾಯಕನಾಗಿದ್ದ ಪಿ.ಡಬ್ಲ್ಯೂ ಬೋಥಾನು ಇದಕ್ಕೆ ಮಣಿಯದೆ ತುರ್ತು ಪರಿಸ್ಥಿತಿ ಹೇರಿದನು. ಧೃತಿಗೆಡದ ಕಾರ್ಮಿಕರ ನೇತೃತ್ವದಲ್ಲಿ ಜನರು ಬೀದಿಗಳಲ್ಲಿ ಹೆಚ್ಚೆಚ್ಚು ನೆರೆಯಲಾರಂಭಿಸಿದರು.

ಕಾರ್ಖಾನೆಗಳು ಮುಷ್ಕರದಿಂದ ಗರಬಡಿದಂತೆ ನಿಂತವು. ವರ್ಣಭೇದ ನೀತಿಯನ್ನು ಹತ್ತಿಕ್ಕುವಂತೆ ಮತ್ತು ಕರಿಯರಿಗೂ ಕೂಡ ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅವಕಾಶ ನೀಡುವಂತೆ ದಕ್ಷಿಣ ಆಫ್ರಿಕಾದ ಜನತೆಯೂ ಸೇರಿದಂತೆ ಪ್ರಪಂಚದ ಎಲ್ಲ ಮೂಲೆಗಳಿಂದ ಒತ್ತಡ ಬರಲಾಂಭಿಸಿತು. ಹಲವು ದೇಶಗಳು ಆರ್ಥಿಕ ದಿಗ್ಬಂಧನ ವಿಧಿಸಿದವು.

೧೯೮೯ರಲ್ಲಿ ಪಿ.ಡಬ್ಲ್ಯೂ ಬೋಥಾ ಅವರ ಸ್ಥಾನದಲ್ಲಿ ಎಫ್.ಡಬ್ಲ್ಯೂ.ಡಿ. ಕ್ಲರ್ಕ್ ಎಂಬುವನು ಅಧ್ಯಕ್ಷನಾದನು. ಒಂದೆಡೆ, ನೆಲ್ಸನ್ ಮಂಡೇಲಾ, ಆಲಿವರ್ ಟ್ಯಾಂಬೊ ಮತ್ತು ವಾಲ್ಟರ್ ಸಿಸುಲು ಅವರು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಸಂಘಟನೆಗೆ ನಾಯಕತ್ವ ನೀಡಿದ್ದರು. ೧೯೯೦ರಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಮತ್ತು ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಪಕ್ಷಗಳ ಮೇಲೆ ವಿಧಿಸಿದ್ದ ನಿರ್ಬಂಧವನ್ನು ರದ್ದುಗೊಳಿಸಲಾಯಿತು. ಇದರೊಂದಿಗೆ ಈ ಪಕ್ಷಗಳು ತಮ್ಮ ಹಿಂಸಾತ್ಮಕ ಹೋರಾಟವನ್ನು ಕೈಬಿಟ್ಟವು. ಮತ್ತೊಂದೆಡೆ, ಈ ಒತ್ತಡದ ಪರಿಣಾಮ ೧೯೯೦ರ ಹೊತ್ತಿಗೆ ವರ್ಣಭೇದ ನೀತಿಯ ವಿರುದ್ಧ ಹೋರಾಡುತ್ತಿದ್ದ ನೇತಾರ ಆಫ್ರಿಕಾದ ಮಹಾತ್ಮ ನೆಲ್ಸನ್ ಮಂಡೇಲಾರನ್ನು ಬಿಡುಗಡೆ ಮಾಡಿ ಬಹುಪಕ್ಷೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ೧೯೯೪ರಲ್ಲಿ ನಡೆದ ಚುನಾವಣೆಯಲ್ಲಿ ನೆಲ್ಸನ್ ಮಂಡೇಲಾ ನೇತೃತ್ವದ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಪಕ್ಷವು ನ್ಯಾಷನಲ್ ಪಕ್ಷ ಮತ್ತು ಇಂಕತ ಫ್ರೀಡಂ ಪಕ್ಷಗಳೊಂದಿಗೆ ಒಡಗೂಡಿ ಮೈತ್ರಿ ಸರ್ಕಾರವನ್ನು ರಚಿಸಿ ಅಧಿಕಾರದ ಚುಕ್ಕಾಣಿ ಹಿಡಿಯಿತು. ಆದರೆ ಹೊಸ ಸರ್ಕಾರವು ಜುಲು ಎಂಬ ಅಲ್ಪಸಂಖ್ಯಾತ ಜನತೆಯ ಹಿತಕಾಯಲಾರದೆಂದು ಇಂಕತ ಫ್ರೀಡಂ ಪಕ್ಷವು ೧೯೯೬ರಲ್ಲಿ ತನ್ನ ಬೆಂಬಲವನ್ನು ವಾಪಸ್ಸು ಪಡೆದುಕೊಂಡಿತು. ಈ ಪಕ್ಷದ ನಾಯಕ ಮಾಂಗೊಸುತು ಬುತೆಲೆಜಿಯ ನೇತೃತ್ವದಲ್ಲಿ ಜುಲು ಜನಾಂಗದ ಪ್ರಾಬಲ್ಯವಿರುವ ಪ್ರದೇಶಗಳಲ್ಲಿ ಜನಾಂಗೀಯ ಘರ್ಷಣೆಗಳು ನಡೆದವು. ೧೯೯೯ರಲ್ಲಿ ನಡೆದ ರಾಷ್ಟ್ರೀಯ ಚುನಾವಣೆಯಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಪಕ್ಷವು ಜಯ ಭೇರಿ ಬಾರಿಸಿ ಶೇಕಡಾ ೬೬ರಷ್ಟು ಮತಗಳಿಸಿ ಏಕೈಕ ದೊಡ್ಡ ಪಕ್ಷವಾಗಿ ಹೊರ ಹೊಮ್ಮಿತು. ತಬೋ ಮುಬೆಕಿಯವರು ಆಫ್ರಿಕಾದ ಅಧ್ಯಕ್ಷರಾಗಿ ಆಯ್ಕೆಯಾದರು. ನಂತರ ೨೦೦೪ರಲ್ಲಿ ನಡೆದ ಚುನಾವಣೆಯಲ್ಲೂ ಕೂಡ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಪಕ್ಷವು ಜಯ ಗಳಿಸಿದರೂ ಸಂವಿಧಾನಕ್ಕೆ ತಿದ್ದುಪಡಿ ತರಲು ಅವಶ್ಯವಿರುವ ಮೂರನೇ ಎರಡರಷ್ಟು ಸ್ಥಾನಗಳನ್ನು ಗಳಿಸಲು ಅದಕ್ಕೆ ಸಾಧ್ಯವಾಗಲಿಲ್ಲ. ಕಮ್ಯುನಿಸ್ಟ್ ಪಕ್ಷವು ಕಾರ್ಮಿಕ ಸಂಘಟನೆಗಳ ಚಳುವಳಿ ಮತ್ತು ಹೋರಾಟಗಳ ಮೂಲಕ ತನ್ನ ಪ್ರಭಾವವನ್ನು ವಿಸ್ತೃತಗೊಳಿಸುತ್ತಿದೆ. ವಸಾಹತು ರಾಷ್ಟ್ರಗಳು ರಾಜಕೀಯ ಸ್ವಾತಂತ್ರ್ಯ ಪಡೆದದ್ದೇನೂ ವಸಾಹತುಶಾಹಿಯು ಅಂತಿಮ ಸೋಲನುಭವಿಸಿತು ಎಂದೇನಲ್ಲ. ಆದರೆ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಹೊಸ ರೂಪದ ವಸಾಹತು ನೀತಿಯನ್ನು ಜನತೆಗಳ ಮೇಲೆ ಹರಿಯಬಿಟ್ಟಿತು. ಸಾಲ ನಿಧಿ ಮತ್ತು ಇನ್ನಿತರ

ಹೆಸರಿನಲ್ಲಿ ಆರ್ಥಿಕ ಗುಲಾಮಗಿರಿಯನ್ನು ಆಧುನಿಕ ನಾಗರಿಕ ಚೌಕಟ್ಟಿಗೆ ಅಳವಡಿಸಿತು.

ಆಫ್ರಿಕಾದ ಜನತೆಯಲ್ಲಿ ಬೇರೂರಿರುವ ಆರ್ಥಿಕ ಹಿಂದುಳಿಕೆ, ಅಸ್ಥಿರ ರಾಜಕೀಯ, ತಂತ್ರಜ್ಞರ ಕೊರತೆ ಮತ್ತು ಮಿಲಿಯಗಟ್ಟಲೆ ಜನರ ಪ್ರಜ್ಞೆಯಲ್ಲಿ ಬುಡಕಟ್ಟು ಸಿದ್ಧಾಂತದ ಪ್ರಭಾವ ಈ ದೌರ್ಬಲ್ಯಗಳನ್ನು ಬಳಸಿಕೊಂಡು ಸಾಮ್ರಾಜ್ಯಶಾಹಿ ರಾಷ್ಟ್ರಗಳು ಹೆಚ್ಚೆಚ್ಚು ಶೋಷಿಸಲಾರಂಭಿಸಿದವು. ರಾಷ್ಟ್ರೀಯ ವಿಮೋಚನಾ ಚಳುವಳಿಗಳನ್ನು ವಿಭಜಿಸಲು ಯತ್ನಿಸಿದವು. ಇದಕ್ಕೆ ಉದಾಹರಣೆಯೆಂದರೆ ಪ್ಯಾಟ್ರಿಸ್ ಲೂಮುಂಬಾ ನೇತೃತ್ವದ ಕಾಂಗೋ ಸರ್ಕಾರದ ಪ್ರಗತಿಪರ ನೀತಿಗಳ ವಿರುದ್ಧ ವಿದೇಶಿ ಶಕ್ತಿಗಳು ಆಕ್ರಮಣ ಮಾಡಿದ್ದು. ಆಫ್ರಿಕಾ ಒಕ್ಕೂಟದ ರಾಷ್ಟ್ರಗಳ ಸರ್ಕಾರವನ್ನು ನಿರಂತರವಾಗಿ ಅಸ್ಥಿರಗೊಳಿಸುತ್ತಾ ಕೈಗೊಂಬೆ ಸರ್ಕಾರಗಳನ್ನು ಸ್ಥಾಪಿಸಲು ಯತ್ನಿಸಿದವು.

ಆಂಗ್ಲೋ-ಫ್ರೆಂಚ್-ಇಸ್ರೇಲ್ ದಾಳಿ ವಿರುದ್ಧ ಈಜಿಪ್ಟಿನ ಜನತೆಯು ಜಯ ಗಳಿಸುವಲ್ಲಿ ಸೋವಿಯತ್ ಒಕ್ಕೂಟದ ಬೆಂಬಲವು ನಿರ್ಣಾಯಕವಾಗಿತ್ತು. ೧೯೭೦ರ ಹೊತ್ತಿಗೆ ಸೋವಿಯತ್ ರಷ್ಯಾವು ೩೪ ಆಫ್ರಿಕನ್ ರಾಷ್ಟ್ರಗಳೊಡನೆ ಸಂಬಂಧ ಬೆಳೆಸಿತ್ತು. ಆರ್ಥಿಕ, ತಾಂತ್ರಿಕ ಮತ್ತು ಇನ್ನಿತರ ನೆರವನ್ನು ಅದು ನೀಡಿತ್ತು. ಅದರ ನೆರವಿನಿಂದಾಗಿ ಆಫ್ರಿಕಾದಲ್ಲಿ ಸ್ವತಂತ್ರಗೊಂಡ ರಾಷ್ಟ್ರಗಳ ಅಧಿಕಾರದಡಿಯಲ್ಲಿ ಪ್ರಥಮ ಬಾರಿಗೆ ೧೨೫ ಕೈಗಾರಿಕಾ ಘಟಕಗಳು ಸೇರಿದಂತೆ ೩೨೦ ವಾಣಿಜ್ಯ ಘಟಕಗಳನ್ನು ನಿರ್ಮಿಸಲಾಯಿತು. ಆ ಸಮಯ ದಲ್ಲಿ ೫,೦೦೦ಕ್ಕೂ ಮೀರಿ ಆಫ್ರಿಕನ್ ವಿದ್ಯಾರ್ಥಿಗಳು ಸೋವಿಯತ್ ರಷ್ಯಾದಲ್ಲಿ ಅಭ್ಯಸಿಸುತ್ತಿದ್ದರು. ೧೯೭೦ರ ಹೊತ್ತಿಗೆ ಸ್ವತಂತ್ರ ಆಫ್ರಿಕನ್ ರಾಷ್ಟ್ರಗಳ ಸಂಖ್ಯೆಯು ೪೧ನ್ನು ಮುಟ್ಟಿತು.

## ಆಫ್ರಿಕಾದ ರಾಜಕೀಯ ಹಾದಿ ಮತ್ತು ಸ್ವಾತಂತ್ರ್ಯಾನಂತರದ ಆಫ್ರಿಕಾ

ಆಫ್ರಿಕಾದಲ್ಲಿ ದುಡಿಯುವ ವರ್ಗವು ಸಣ್ಣ ವಿಭಾಗವಾಗಿತ್ತು. ರಾಜಕೀಯ ಅಧಿಕಾರವು ಸಣ್ಣಪುಟ್ಟ ಬಂಡವಾಳಿಗರ ಕೈಯಲ್ಲಿತ್ತು. ಆಫ್ರಿಕಾದ ಹಲವು ದೇಶಗಳು ಪ್ರಮುಖವಾಗಿ ಮೂರು ಸೈದ್ಧಾಂತಿಕ ರಾಜಕೀಯ ಕವಲು ಹಾದಿಯಲ್ಲಿ ಮುನ್ನಡೆದವು. ಮೊದಲ ಎರಡು ವಿಭಾಗದಲ್ಲಿ ಸಮಾನತೆಯುಳ್ಳ ಸಮಾಜ ನಿರ್ಮಾಣಕ್ಕಾಗಿ ದೂರದೃಷ್ಟಿ ಹೊಂದಿದ್ದ ನಾಯಕರನ್ನು ಕಾಣಬಹುದಾಗಿದೆ. ಈ ನಾಯಕರು ಸಮಾನತೆ ಮತ್ತು ಸ್ವಾವಲಂಬನೆಗೆ ಮಹತ್ವ ನೀಡಿದರು. ತಮ್ಮ ದೇಶದ ಆರ್ಥಿಕತೆಯನ್ನು ವಸಹಾತುಶಾಹಿಯ ಸರಪಳಿಯಿಂದ ಬಂಧಮುಕ್ತಗೊಳಿಸಲು ಆಸ್ಥೆ ವಹಿಸಿದರು.

ಮೊದಲನೆಯದಾಗಿ ಆಫ್ರೋ ಮಾರ್ಕ್ಸ್‌ವಾದಿ ಸಿದ್ಧಾಂತದಲ್ಲಿ ಕೆಲಮಟ್ಟಿಗೆ ನಂಬಿಕೆ ಯಿಟ್ಟಿದ್ದ ರಾಷ್ಟ್ರಗಳೆಂದರೆ ಅಂಗೋಲಾ, ಇಥಿಯೋಪಿಯಾ, ಜಿನಿಯಾ ಬಿಸ್ಸಾವು, ಕೇಪ್ ವರ್ಡ್ ಮತ್ತು ಪ್ರಿನ್ಸಿಪ್ ದ್ವೀಪಗಳು, ಮೊಜಾಂಬಿಕ್, ಬಿನಿನ್, ಮಲಗಯ್, ಸೋಮಾಲಿಯಾ, ಬುರ್ಕಿನಾಫಾಸೋ ಮತ್ತು ಕಾಂಗೋ. ಇದರ ಪ್ರತಿಪಾದಕರು ತಮ್ಮ

ಸಿದ್ಧಾಂತವನ್ನು ವಸಾಹತುಪೂರ್ವ ಆಫ್ರಿಕಾದ ಪ್ರಮುಖವಾಗಿ ಆಸ್ತಿಯ ಮೇಲೆ ಸಾಮೂಹಿಕ ಒಡೆತನ ಹೊಂದಿದ್ದ ಆದಿಮ ಕಮ್ಯುನಿಸ್ಟ್ ಸಮಾಜದ ದೃಷ್ಟಿಕೋನ ಹೊಂದಿದ್ದರು. ಆದರೆ ವಸಾಹತುಶಾಹಿಯು ಆಫ್ರಿಕಾದ ಸಮಾಜದೊಳಗೆ ಮಾಡಿದ್ದ ಮಾರ್ಪಾಡುಗಳನ್ನು ಮತ್ತು ಸಮಾಜದ ವಿಭಜನೆಯನ್ನು ಇವರು ಕಡೆಗಣಿಸಿದ್ದರು. ಈ ಸಿದ್ಧಾಂತವು ಯಾವುದೇ ಕಾರ್ಮಿಕ ಚಳುವಳಿಯ ವಿಸ್ತರಣೆಯಾಗಿರದೆ ರಾಷ್ಟ್ರೀಯ ವಿಮೋಚನೆ, ಪ್ರಜಾಸತ್ತಾತ್ಮಕ ಚಳುವಳಿಗಳು ಮತ್ತು ವಸಾಹತುಶಾಹಿ ವಿರೋಧಿ ಚಳುವಳಿಯೊಂದಿಗೆ ಮೂಡಿಬಂದಿತು.

ಎರಡನೆಯದಾಗಿ, ಮಾರ್ಕ್ಸ್‌ವಾದಿ-ಸಮಾಜವಾದಿಗಳೆಂದು ಕರೆಯಲ್ಪಡುತ್ತಿದ್ದ ರಾಷ್ಟ್ರಗಳೆಂದರೆ ಟ್ಯಾಂಜೇನಿಯಾ(ಜೂಲಿಯಸ್ ನ್ಯೇರೇರೆ), ಘಾನಾ(ಕ್ವಾಮೆ ಎನ್‌ಕ್ರೂಮಾ), ಜಾಂಬಿಯಾ(ಕೆನೆತ್ ಕೌಂಡ), ಜಿಂಬಾಬ್ವೆ(ರಾಬರ್ಟ್ ಮುಗಾಬೆ), ಜಿನಿಯಾ(ಸಿಕಾವೊ ಟೌರೆ) ಮತ್ತು ಉಗಾಂಡಾ(ಮಿಲ್ಟನ್ ಒಬೊಟು), ಮಾರ್ಕ್ಸ್‌ವಾದಿ-ಸಮಾಜವಾದಿಗಳು ಮಾರ್ಕ್ಸ್‌ವಾದ-ಲೆನಿನ್‌ವಾದವನ್ನು ಒಪ್ಪಿ ತಮ್ಮ ನಿರ್ಣಯಗಳನ್ನು ಕೆಲಮಟ್ಟಿಗೆ ವಿಶ್ವದ ಮುಂಚೂಣಿ ಕಮ್ಯೂನಿಸ್ಟ್ ರಾಷ್ಟ್ರಗಳಾದ ಯುಎಸ್‌ಎಸ್‌ಆರ್, ಕ್ಯೂಬಾ, ವಿಯೆಟ್ನಾಂ ಮತ್ತು ಚೀನಾ ದೇಶಗಳ ನಿಲುವೆಯ ಆಧಾರದಲ್ಲಿ ಕೈಗೊಳ್ಳುತ್ತಿದ್ದವು. ೧೯೭೦ರ ದಶಕದ ಕೊನೆಯ ಹೊತ್ತಿಗೆ ಇಥಿಯೋಪಿಯಾ, ಅಂಗೋಲಾ ಮತ್ತು ಮೊಜಾಂಬಿಕ್‌ಗಳಲ್ಲಿ ಸಮಾಜವಾದಿ ಅಥವಾ ಮಾರ್ಕ್ಸ್‌ವಾದಿ ಗುಂಪುಗಳು ಜಯ ಗಳಿಸಿದ ನಂತರ ತಮ್ಮ ಹಿತಾಸಕ್ತಿಗೆ ಪೆಟ್ಟುಬೀಳುವುದೆಂದು ಪಾಶ್ಚಿಮಾತ್ಯ ದೇಶಗಳಿಗೆ ನಡುಕ ಉಂಟಾಗಿತ್ತು. ಸೋಮಾಲಿಯಾ, ನಮೀಬಿಯಾ ದಕ್ಷಿಣ ಆಫ್ರಿಕಾ ಮತ್ತು ಜಿಂಬಾಬ್ವೆ ಸಹ ಅದೇ ಹಾದಿ ತುಳಿಯುವ ಎಲ್ಲ ಸಾಧ್ಯತೆಗಳೂ ಇದ್ದವು.

ಆಫ್ರಿಕಾದ ಸಮಾಜವಾದಿಗಳು ಮತ್ತು ಮಾರ್ಕ್ಸ್‌ವಾದಿಗಳು ತಮ್ಮ ಮುಂದಿದ್ದ ಕಾರ್ಯಭಾರವನ್ನು ಮನಗಂಡಿದ್ದರು. ಸಮಾಜಕಲ್ಯಾಣ ಸೇವೆಗಳನ್ನು ವಿಸ್ತರಿಸುವುದು ಮತ್ತು ಭೂಸುಧಾರಣೆ ಜಾರಿಗೊಳಿಸಿ ಉತ್ಪಾದನೆಯನ್ನು ಆಧುನಿಕಗೊಳಿಸುವುದು ಸೇರಿದಂತೆ ಇನ್ನಿತರ ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಆಸಕ್ತಿ ಹೊಂದಿದ್ದರು. ಹೀಗೆ ಅಂಗೋಲಾ, ಮೊಜಾಂಬಿಕ್, ಇಥಿಯೋಪಿಯಾ, ಜಿನಿಯಾ ಬಿಸ್ಸಾವು ಮತ್ತು ಕಾಂಗೋ ದೇಶಗಳು ಕೃಷಿಯಲ್ಲಿ ಬದಲಾವಣೆ ತರುವುದರೊಂದಿಗೆ ಆರ್ಥಿಕಾಭಿವೃದ್ಧಿಗಾಗಿ ಮತ್ತು ಸಾರ್ವಜನಿಕ ಉದ್ದಿಮೆಗಳ ಅಭಿವೃದ್ಧಿಗಾಗಿ ಶ್ರಮಿಸಲಾರಂಭಿದ್ದವು. ಶಿಕ್ಷಣ, ಆರೋಗ್ಯ ಸೇವೆಗಳು ಮತ್ತು ಸಾಮಾಜಿಕ ಭದ್ರತೆಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರಿಂದ ವೈಯಕ್ತಿಕ ಸ್ವಾತಂತ್ರ್ಯ ಮತ್ತು ಮಾನವ ಸಂಪನ್ಮೂಲದ ಅಭಿವೃದ್ಧಿಯಾಗುತ್ತದೆಂದು ನಿರೀಕ್ಷಿಸಲಾಗಿತ್ತು.

ಆದರೆ, ಆರ್ಥಿಕತೆಯನ್ನು ಪುನಾರಚಿಸುವ ಅವರ ಯೋಜನೆಗಳೆಲ್ಲ ನಿರಂತರವಾದ ಸಮಾಜಘಾತುಕ ಚಟುವಟಿಕೆಗಳು, ಅಂತಃಕಲಹ, ಅಕ್ರಮಣ ಮತ್ತು ಬಂಡುಕೋರರ ಉಪಟಳಗಳಿಂದ ಆ ನಿಟ್ಟಿನಲ್ಲಿ ಯಾವೊಂದು ಪ್ರಗತಿಯನ್ನು ಸಹ ಕಾಣಲು ಸಾಧ್ಯವಾಗಲಿಲ್ಲ..

ಅಮೆರಿಕ ಬೆಂಬಲಿತ ವಿರೋಧಿ ಶಕ್ತಿಗಳು ಮತ್ತು ದಕ್ಷಿಣ ಆಫ್ರಿಕಾದ ವರ್ಣಭೇದ ಆಡಳಿತವು ಸಶಸ್ತ್ರ ಹೋರಾಟ ನಡೆಸಿ ಅಂಗೋಲಾ ಮತ್ತು ಮೊಜಾಂಬಿಕ್‌ಗಳ ಮಾರ್ಕ್ಸ್‌ವಾದಿ ಸರ್ಕಾರಗಳನ್ನು ಕೆಳಗುರುಳಿಸಿದವು. ಹಾಗೆಯೇ, ಇಥಿಯೋಪಿಯಾ ಮತ್ತು ಸೋಮಾಲಿಯಾಗಳು ಸಶಸ್ತ್ರ ಬಿಕ್ಕಟ್ಟು, ಅಂತಃಕಲಹ ಮತ್ತು ಪ್ರತ್ಯೇಕತಾವಾದಿಗಳ ವಿರೋಧವನ್ನು ಎದುರಿಸ ಬೇಕಾಯಿತು. ಈ ದೇಶ ವಿರೋಧಿ ಶಕ್ತಿಗಳನ್ನು ಹತ್ತಿಕ್ಕಲು ಅಲ್ಲಿನ ಸರ್ಕಾರಗಳು ಕ್ರಮ ಕೈಗೊಂಡವಾದರೂ ವಿರೋಧಿ ಶಕ್ತಿಗಳ ಕೈಮೇಲಾಗಿ ಸರ್ವಾಧಿಕಾರಿ ಪ್ರವೃತ್ತಿಗಳು ಮೂಡಿಬಂದವು.

ಮೂರನೆಯದಾಗಿ, ಸಾಮ್ರಾಜ್ಯಶಾಹಿ ಆರ್ಥಿಕತೆಯ ಜೊತೆಜೊತೆಗೆ ತಮ್ಮ ಆರ್ಥಿಕತೆ ಯನ್ನು ಮುನ್ನಡೆಸಿದಲ್ಲಿ, ಅದರೊಂದಿಗೆ ಹೆಚ್ಚೆಚ್ಚು ಸಂಬಂಧ ಹೊಂದಿದಲ್ಲಿ ತಮ್ಮ ದೇಶವೂ ಅಭಿವೃದ್ಧಿ ಹೊಂದಿದ ರಾಷ್ಟ್ರವಾಗುತ್ತದೆಂದು ಬೊಗಳೆ ಬಿಡುತ್ತಾ ವಿದೇಶಿ ಶಕ್ತಿಗಳೊಂದಿಗೆ ಶಾಮೀಲಾಗಿ ತಮ್ಮ ಸಂಪತ್ತನ್ನು ವೃದ್ಧಿಸಿಕೊಳ್ಳುತ್ತಿದ್ದ ರಾಷ್ಟ್ರೀಯವಾದಿ ನಾಯಕರು. ಈ ರಾಷ್ಟ್ರಗಳಲ್ಲಿ ಸಮಾನತೆಗಿಂತ ಹೆಚ್ಚಾಗಿ ಆರ್ಥಿಕ ಬೆಳವಣಿಗೆಗೆ ಹೆಚ್ಚು ಒತ್ತು ನೀಡಲಾಯಿತು. ಖಾಸಗಿ ಕ್ಷೇತ್ರಕ್ಕೆ ಹೆಚ್ಚಿನ ನೆರವು ನೀಡಲಾಯಿತು. ರಫ್ತು ಬೆಳೆಗಳ ಉತ್ಪಾದನೆಯನ್ನು ವಿಸ್ತರಿಸಲಾಯಿತು. ಉದಾಹರಣೆಗೆ, ಕೀನ್ಯಾದಲ್ಲಿ ಕಾಫಿ ಮತ್ತು ಟೀ ಬೆಳೆಯನ್ನು ವಿಸ್ತರಿಸಿ ಹೆಚ್ಚಿನ ಖಾಸಗಿ ಬಂಡವಾಳ ಹೂಡಿಕೆಗೆ ಅವಕಾಶ ಮಾಡಿಕೊಡಲಾಯಿತು. ಈ ರಾಷ್ಟ್ರಗಳು ಅಮೆರಿಕ ಕೆನಡಾ, ಆಸ್ಟ್ರೇಲಿಯಾ, ಜರ್ಮನಿ ಮತ್ತು ಜಪಾನ್ ದೇಶ ಗಳೊಂದಿಗೆ ಹೆಚ್ಚಿನ ಸಂಬಂಧವಿಟ್ಟುಕೊಂಡು ಸಮಯ ಬಂದಾಗಲೆಲ್ಲ ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಈ ದೇಶಗಳ ಪರ ದನಿಯೆತ್ತುತ್ತಿದ್ದವು. ಕೀನ್ಯಾ, ನೈಜೀರಿಯಾ, ಘಾನಾ, ಐವರಿ ಕೋಸ್ಟ್ ಮತ್ತು ಸೆನೆಗಲ್ ದೇಶದ ರಾಷ್ಟ್ರೀಯವಾದಿ ನಾಯಕರು ತಾವು ಅನುಸರಿಸಿದ ನೀತಿಗಳಲ್ಲಿ ದೋಷವಿದೆಯೆಂದು ಕಾಲಕ್ರಮೇಣ ಒಪ್ಪಿಕೊಳ್ಳುವ ಹಂತಕ್ಕೆ ಬಂದಿವೆ.

ಆಫ್ರಿಕಾದ ದೇಶಗಳು ರಾಜಕೀಯ ಸ್ವಾತಂತ್ರ್ಯ ಪಡೆದರೂ ಆರ್ಥಿಕ ಸ್ವಾತಂತ್ರ್ಯ ಪಡೆದವೆಂದು ಹೇಳಲಾಗದು. ಆಫ್ರಿಕಾದ ದೇಶಗಳಲ್ಲಿ ಅಧಿಕಾರವನ್ನು ಶಾಂತಿಯುತವಾಗಿ ಸಾಮ್ರಾಜ್ಯಶಾಹಿ ರಾಷ್ಟ್ರಗಳು ವರ್ಗಾಯಿಸಿದ್ದನ್ನು ನವವಸಾಹತು ಪರಿಹಾರ ಎಂಥಲೂ ಕರೆಯಲಾಗುತ್ತದೆ. ಏಕೆಂದರೆ ಹೊಸ ಸರ್ಕಾರಗಳಿಗೆ ದೊರಕಿರುವ ಆರ್ಥಿಕ ಮತ್ತು ರಾಜಕೀಯ ಸ್ವಾತಂತ್ರ್ಯದತ್ತ ಗಮನಹರಿಸಿದಾಗ ವಿದೇಶಿ ಕಂಪನಿಗಳ ಆರ್ಥಿಕ ಹಿತಾಸಕ್ತಿಗಳನ್ನು ಬಹುವಾಗಿ ಸಂರಕ್ಷಿಸಿರುವುದು ಮತ್ತು ವಿದೇಶಿ ರಾಷ್ಟ್ರಗಳ ರಾಜಕೀಯ ಹಿತಾಸಕ್ತಿಯನ್ನು ಕಾಪಾಡಿಕೊಂಡಿರುವುದು ಕಂಡುಬರುತ್ತದೆ.

ನೈಸರ್ಗಿಕ ವಿಕೋಪಗಳೊಂದಿಗೆ ಫಲವತ್ತತೆಯಿಲ್ಲದ ಭೂಮಿಗಳಲ್ಲಿ ರೈತರು ಬೇಸಾಯ ಮಾಡಬೇಕಾಗಿತ್ತು. ಜನತೆಗೆ ಅವಶ್ಯವಿರುವ ಬೆಳೆಗಳ ಬದಲು ವಿದೇಶಿ ರಾಷ್ಟ್ರಗಳಿಗೆ ಅಗತ್ಯವಿರುವ ಬೆಳೆಗಳನ್ನು ಬೆಳೆಯುವಂತೆ ಅವರನ್ನು ಬಲವಂತಗೊಳಿಸ ಲಾಗುತ್ತಿತ್ತು.

ಅಗಾಧ ತೆರಿಗೆ, ಕಡ್ಡಾಯವಾಗಿ ನಿರ್ದಿಷ್ಟ ಬೆಳೆ ಬೆಳೆಯುವುದು, ಬಲವಂತ ಕೆಲಸ ಮತ್ತು ದೈಹಿಕ ಕಿರುಕುಳಗಳಿಂದಾಗಿ ತಮ್ಮ ಭೂಮಿಯ ಫಲವತ್ತತೆ ಕಳೆದುಕೊಳ್ಳುವ ಮತ್ತು ಕ್ಷಾಮಕ್ಕೀಡಾಗುವಂತಹ ವಿದೇಶಿ ಕಂಪನಿಗಳಿಗೆ ಅವಶ್ಯವಿರುವ ಬೆಳೆಗಳನ್ನು ರೈತರು ಬೆಳೆಯಬೇಕಾಗಿತ್ತು.

ಆಫ್ರಿಕಾದ ದೇಸಿ ಸಂಸ್ಕೃತಿಯನ್ನು ವಿದೇಶಿ ಆಳ್ವಿಕೆಯು ನಾಶ ಮಾಡತೊಡಗಿತ್ತು. ಆಫ್ರಿಕಾದ ಉಪಖಂಡವನ್ನು ಫ್ರೆಂಚ್ ಮಾತನಾಡುವ ಪ್ರದೇಶ, ಇಂಗ್ಲಿಷ್ ಮಾತನಾಡುವ ಪ್ರದೇಶ ಮತ್ತು ಅರಬ್ ಮಾತನಾಡುವ ಪ್ರದೇಶಗಳೆಂದೇ ವಿಂಗಡಿಸಿ ಕರೆಯಲಾಗುತ್ತಿತ್ತು. ಸ್ವತಂತ್ರಗೊಂಡ ಆಫ್ರಿಕಾ ರಾಷ್ಟ್ರಗಳ ಜನರಲ್ಲಿ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆ ಕುರಿತಂತೆ ಗೌರವ ಮೂಡಿತ್ತು. ಏಕೆಂದರೆ, ಈ ಭಾಷೆ ಮಾತನಾಡಬಲ್ಲವರು ಅಥವಾ ಕಲಿತವರು ವಿಶೇಷ ಆರ್ಥಿಕ ಮತ್ತು ರಾಜಕೀಯ ವಿನಾಯಿತಿಗಳನ್ನು ಸುಲಭವಾಗಿ ಪಡೆಯಬಹುದಿತ್ತು.

ಸ್ವಾತಂತ್ರ್ಯಾನಂತರದಿಂದಲೂ, ಜನತೆಯ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಸಂಪೂರ್ಣ ಜವಾಬ್ದಾರಿ ಹೊರಲು ಸರ್ಕಾರಗಳು ಅಸಮರ್ಥವಾಗಿದ್ದವು. ಮಧ್ಯಮ ಕುಶಲಕರ್ಮಿಗಳು, ಶ್ರೀಮಂತ ರೈತರು, ಅಧಿಕಾರಿಗಳು ಮತ್ತು ದೇಶ ವಿದೇಶಗಳಲ್ಲಿ ಖಾಸಗಿ ಕಂಪನಿಗಳಲ್ಲಿ ದುಡಿದು ಹಣ ಗಳಿಸಿದ್ದವರಿಂದ ಖಾಸಗಿ ಬಂಡವಾಳ ಹೂಡಿಕೆಗಾಗಿ ಸರ್ಕಾರ ಯತ್ನಿಸುತ್ತಿತ್ತು. ಸ್ಥಳೀಯವಾಗಿ ದೊಡ್ಡ ಬಂಡವಾಳಿಗರಿಲ್ಲದ್ದರಿಂದ ಸಣ್ಣ ಕೈಗಾರಿಕೆಗಳು ಸ್ಥಾಪನೆಗೊಂಡು ವಿದೇಶಿ ಬಂಡವಾಳದೊಂದಿಗೆ ಕೈಜೋಡಿಸಿದವು.

ಸ್ವಾತಂತ್ರ್ಯ ಗಳಿಸಿದ ಕೆಲವೇ ವರ್ಷಗಳಲ್ಲಿ ಆಫ್ರಿಕಾ ದೇಶಗಳು ಸಂವಿಧಾನದಲ್ಲಿ ಭಾರಿ ಬದಲಾವಣೆ ಮಾಡಿದವು. ಅಧಿಕಾರವು ಪ್ರಜೆಗಳಿಂದ ಮಿಲಿಟರಿಗೆ ವರ್ಗಾವಣೆಗೊಂಡು ಸರ್ವಾಧಿಕಾರಿ ಧೋರಣೆ ಬೆಳೆದು ಬಂದಿತು. ಹಲವಾರು ಆಳುವ ನಾಯಕರು ಸಂವಿಧಾನವನ್ನು ತಿರುಚಿ ತಮ್ಮ ವೈಯಕ್ತಿಕ ನಿರಂಕುಶ ಅಧಿಕಾರವನ್ನು ಜಾರಿ ತಂದರು. ಚುನಾವಣೆಗಳನ್ನು ನಡೆಸಲಾಯಿತಾದರೂ ಅದರಲ್ಲಿ ಭಾಗವಹಿಸಿದವರಿಗೆ ಪರ್ಯಾಯವಾದ ಪ್ರಜಾಸತ್ತಾತ್ಮಕ ಆಯ್ಕೆಗಳಿರಲಿಲ್ಲ. ಉದಾಹರಣೆಗೆ, ಕೀನ್ಯಾದ ಏಕ ಪಕ್ಷದ ಆಳ್ವಿಕೆಯಲ್ಲಿ ಸರ್ಕಾರದ ನೀತಿಗಳನ್ನು ಬದಲಿಸುವ ಆಯ್ಕೆ ಮತದಾರರಿಗಿರಲಿಲ್ಲ. ಹೆಚ್ಚೆಂದರೆ ಆ ಸಮಯದಲ್ಲಿ ಆಳುತ್ತಿದ್ದ ಕೀನ್ಯಾ ಆಫ್ರಿಕನ್ ರಾಷ್ಟ್ರೀಯ ಒಕ್ಕೂಟ ಪಕ್ಷವು ನಿಲ್ಲಿಸಿದ್ದ ಅಭ್ಯರ್ಥಿಗಳಲ್ಲಿ ಯಾವ ಅಭ್ಯರ್ಥಿಯನ್ನಾದರು ಮತದಾರರು ಆಯ್ಕೆ ಮಾಡಬಹುದಿತ್ತಷ್ಟೆ.

ಬಹುತೇಕ ಆಫ್ರಿಕನ್ ರಾಷ್ಟ್ರಗಳಲ್ಲಿನ ಬಡಜನತೆಯು ಆರ್ಥಿಕ ಮತ್ತು ರಾಜಕೀಯ ಬಿಕ್ಕಟ್ಟಿನಿಂದ ತತ್ತರಿಸಿ ಹೋದರು. ಬಡತನ, ಹಸಿವು ಮತ್ತು ಅಪೌಷ್ಟಿಕತೆಯಿಂದ ಜನರು ನರಳುತ್ತಿದ್ದರು. ತೀರಾ ಕಡಿಮೆ ಅಭಿವೃದ್ಧಿ ಹೊಂದಿರುವ ವಿಶ್ವ ರಾಷ್ಟ್ರಗಳ ಪಟ್ಟಿಯಲ್ಲಿ ೩೦ರಲ್ಲಿ ೨೧ರಾಷ್ಟ್ರಗಳು ಆಫ್ರಿಕಾ ಖಂಡಕ್ಕೆ ಸೇರಿವೆ. ೧೯೭೦-೮೦ರ ದಶಕದಲ್ಲಿ ಆಫ್ರಿಕಾದ ೨೦ ರಾಷ್ಟ್ರಗಳ ಒಟ್ಟಾರೆ ಆಂತರಿಕ ಉತ್ಪನ್ನವು ಹಿಮ್ಮುಖ ದರದಲ್ಲಿತ್ತು. ೧೯೭೦ ರಿಂದೀಚೆಗೆ,

ಬಹುತೇಕ ರಾಷ್ಟ್ರಗಳ ಹಣದುಬ್ಬರದ ದರವು ಎರಡಂಕೆಯಲ್ಲಿದೆ. ತಲಾದಾಯವು ಒಂದೇ ಮಟ್ಟದಲ್ಲಿದೆ. ಯುರೋಪ್ ರಾಷ್ಟ್ರಗಳಲ್ಲಿ ಪ್ರತಿ ಹಸುವಿಗೆ ದಿನವೊಂದಕ್ಕೆ ೨ ಡಾಲರ್ ಸಹಾಯಧನ ದೊರೆಯುತ್ತದೆಯಾದರೂ ಇದು ಆಫ್ರಿಕಾದ ಪ್ರತಿ ಕುಟುಂಬದ ಆದಾಯಕ್ಕಿಂತ ಎರಡರಷ್ಟು ಉತ್ಪಾದನಾ ಅಥವಾ ಕೃಷಿ ಕ್ಷೇತ್ರದ ಬೆಳವಣಿಗೆ ನಿರಾಶ ದಾಯಕವಾಗಿದೆ. ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಪಡೆದ ಸಾಲದ ಮೊತ್ತ ೧೯೭೦ರಲ್ಲಿ ೯೦೨ ಕೋಟಿ ಅಮೆರಿಕನ್ ಡಾಲರ್‌ಗಳಷ್ಟು ಇದ್ದದ್ದು ೧೯೭೮ರಲ್ಲಿ ೪೯೬೦ ಕೋಟಿ ಡಾಲರ್ ಬೆಳೆದಿತ್ತು. ನಿರುದ್ಯೋಗವು ಶೇ.೧೦ರಿಂದ ಶೇ.೫೦ಕ್ಕೇರಿತ್ತು. ಕೆಲವು ರಾಷ್ಟ್ರಗಳಲ್ಲಿ ಶೇ.೪೦ರಷ್ಟು ಜನತೆಗೆ ವಸತಿ, ಕುಡಿಯುವ ನೀರು, ವೈದ್ಯಕೀಯ ಸೌಲಭ್ಯ ಇಂಧನ ಮತ್ತು ಶೈಕ್ಷಣಿಕ ಸೌಲಭ್ಯಗಳು ದೊರಕೇ ಇಲ್ಲ. ಉತ್ಪಾದನೆಯನ್ನು ಮತ್ತಷ್ಟು ಅಭಿವೃದ್ಧಿ ಪಡಿಸುವತ್ತ ಗಮನ ಹರಿಸದೆ ಜನತೆಯನ್ನು ಹೀರಿ ಹಿಪ್ಪೆ ಮಾಡಿ ಆಫ್ರಿಕಾದ ಸಣ್ಣ ಬಂಡವಾಳಿಗರು ಮತ್ತು ಬಹುರಾಷ್ಟ್ರೀಯ ಕಂಪನಿಗಳು ಲಾಭ ಗಳಿಸುತ್ತಿದ್ದವು.

ಆಫ್ರಿಕಾ ರಾಷ್ಟ್ರಗಳು ಈ ಹಿಂದಿನ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಮೇಲೆ ಎಂದಿನಂತೆ ಆರ್ಥಿಕವಾಗಿ ಅವಲಂಬನೆಯನ್ನು ಮುಂದುವರಿಸುವಂತಾಯಿತು. ಕೀನ್ಯಾ, ಜಾಂಬಿಯಾ ಮತ್ತು ಸೆನೆಗಲ್‌ಗಳು ಒಂದೆಡೆ ಮಾರ್ಕ್ಸ್‌ವಾದಿ ಸಿದ್ಧಾಂತವನ್ನು ಖಂಡಿಸುತ್ತಾ ತಾವು ಸಮಾಜವಾದಿಗಳೆಂದು ಘೋಷಿಸಿಕೊಂಡವು. ಆದರೆ ೧೯೮೦ರ ಹೊತ್ತಿಗೆ ಕೀನ್ಯಾದಲ್ಲಿ ಆಳುವ ಮೇಲ್‌ಸ್ತರದವರು ರಾಜಕೀಯ ಅಧಿಕಾರವನ್ನು ತಮ್ಮ ಸ್ವತ್ತಾಗಿಸಿಕೊಂಡು ಸಂಪತ್ತನ್ನು ಲೂಟಿ ಮಾಡಿದರು. ಅಧಿಕಾರಶಾಹಿ ಮತ್ತು ಸರ್ಕಾರದೊಂದಿಗೆ ಸಂಪರ್ಕವಿದ್ದ ಮೇಲ್‌ಸ್ತರದವರು ದೇಶದ ಆದಾಯದ ಬಹುತೇಕ ಪಾಲನ್ನು ಭ್ರಷ್ಟತೆಯಿಂದ ಸೂರೆ ಮಾಡಿದರು. ೧೯೮೦ ಮತ್ತು ೧೯೯೦ರ ದಶಕದಲ್ಲಿ ಕೀನ್ಯಾದಲ್ಲಿ ಪ್ರಮುಖ ರಾಜಕೀಯ ನಾಯಕರುಗಳ ಭ್ರಷ್ಟಾಚಾರ ಯಾವ ಹಂತ ತಲುಪಿತ್ತೆಂದರೆ ಇದರಿಂದ ಸರ್ಕಾರದಲ್ಲಿ ಹಣಕಾಸು ಕೊರತೆಯುಂಟಾಗಿ ಹಣದುಬ್ಬರ ತೀರಾ ದೊಡ್ಡ ಮಟ್ಟ ತಲುಪಿತು.

೧೯೭೮ ಮತ್ತು ೧೯೯೦ರ ನಡುವೆ ಆಫ್ರಿಕಾ ಖಂಡದ ಸರಾಸರಿ ತಲಾ ಆದಾಯವು ೮೫೪ ಡಾಲರ್‌ಗಳಿಂದ ೫೬೫ ಡಾಲರ್‌ಗಿಳಿಯಿತು. ೧೯೮೧ ಮತ್ತು ೧೯೯೧ರ ನಡುವೆ ಕಡಿಮೆ ಅಭಿವೃದ್ಧಿ ಹೊಂದಿರುವ ಆಫ್ರಿಕಾದ ರಾಷ್ಟ್ರಗಳ ಸಂಖ್ಯೆ ೨೧ರಿಂದ ೨೮ಕ್ಕೇರಿತು. ೧೯೭೮ ಮತ್ತು ೧೯೮೮ರ ನಡುವೆ ಒಟ್ಟಾರೆ ದೇಶೀಯ ಆಂತರಿಕ ಉತ್ಪನ್ನವು (ಜಿಡಿಪಿ) ಶೇ.೩.೦೩ರಿಂದ ಶೇ.೦.೭ಕ್ಕಿಳಿಯಿತು. ಅಕ್ಷರಸ್ಥರ ಸಂಖ್ಯೆಯು ೧೯೬೨ರಲ್ಲಿದ್ದ ೧೪೨ ಮಿಲಿಯನ್‌ನಿಂದ ೧೯೮೫ರಲ್ಲಿ ೧೬೫ ಮಿಲಿಯನ್ ಆಗಿದೆಯಷ್ಟೆ. ಆಫ್ರಿಕಾದ ಆಯವ್ಯಯ ಕೊರತೆಯು ೧೯೭೮ರಲ್ಲಿ ೩.೯ ಬಿಲಿಯನ್ ಡಾಲರ್‌ಗಳಿಂದ ೧೯೮೮ರ ಹೊತ್ತಿಗೆ ೨೦.೩ ಬಿಲಿಯನ್ ಮುಟ್ಟಿತ್ತು. ವಿದೇಶಿ ಸಾಲವು ೧೯೭೮ರಲ್ಲಿ ೪೮.೩ ಬಿಲಿಯನ್ ಡಾಲರ್‌ನಿಂದ ಏರಿಕೆ ಕಂಡು ೧೯೮೦ರಲ್ಲಿ ೨೩೦ ಬಿಲಿಯನ್ ಡಾಲರ್ ಮತ್ತು ೧೯೯೦ರ ಹೊತ್ತಿಗೆ ೨೬೦

ಬಿಲಿಯನ್ ಡಾಲರ್ ತಲುಪಿತು. ೧೯೮೦ರಲ್ಲಿ ಶೇ.೫.೩ರಷ್ಟಿದ್ದ ನಿರುದ್ಯೋಗ ದರವು ೧೯೯೦ರ ಹೊತ್ತಿಗೆ ಶೇ.೧೩ರಷ್ಟು ಹೆಚ್ಚಿತು.

ಹೀಗೆ ೧೯೭೦ರ ದಶಕದ ನಂತರ ಐಎಂಎಫ್, ವಿಶ್ವಬ್ಯಾಂಕ್ ಮತ್ತು ಬಹುರಾಷ್ಟ್ರೀಯ ಕಂಪನಿಗಳು ಹಾಗೂ ವಾಣಿಜ್ಯ ಹಣಕಾಸು ಬ್ಯಾಂಕುಗಳ ಕೂಟವು ವಸಾಹತುಶಾಹಿಯ ಸಿದ್ಧಾಂತ ಮತ್ತು ಆಕ್ರಣಗಳನ್ನು ನಡೆಸುತ್ತಾ ಬಂದಿತು. ಈ ಕೂಟವನ್ನು ನವ ವಸಾಹತುಶಾಹಿ ಎಂದು ಕರೆಯಲಾಗುತ್ತದೆ. ಅಂಗೋಲಾ, ಮೊಜಾಂಬಿಕ್, ಇಥಿಯೋಪಿಯಾ ಮತ್ತು ಇತರೆ ರಾಷ್ಟ್ರಗಳು ತಮ್ಮ ಮೇಲೆ ನೇರವಾಗಿ ಆಕ್ರಮಣ ಮಾಡುತ್ತಿರುವ ನ್ಯಾಟೋ ಶಕ್ತಿಯ ವಿರುದ್ಧ ಸೆಣಸಬೇಕಾಯಿತು. ಜೊತೆಗೆ ನವವಸಾಹತುಶಾಹಿಯಿಂದ ಹಣಕಾಸು ನೆರವು ಮತ್ತು ಶಸ್ತ್ರಾಸ್ತ್ರ ಪಡೆಯುತ್ತಿರುವ ಸಶಸ್ತ್ರಧಾರಿ ಬಂಡಾಯಗಾರರನ್ನು ಸಹ ಆ ರಾಷ್ಟ್ರಗಳು ಎದುರಿಸಬೇಕಾಯಿತು.

### ಆಫ್ರಿಕಾದಲ್ಲಿ ಬಡತನ

ಅಭಿವೃದ್ಧಿ ಹೊಂದುತ್ತಿರುವ ವಿಶ್ವದ ಇತರೆ ಪ್ರದೇಶಗಳಿಗೆ ಆಫ್ರಿಕಾದ ಅಭಿವೃದ್ಧಿ ಸೂತ್ಯಂಕಗಳನ್ನು ಹೋಲಿಸಿದರೆ ಆಘಾತಕಾರಿ ಅಂಶಗಳು ಹೊರಬೀಳುತ್ತವೆ.

| ಪ್ರದೇಶ ತಲಾ | ಆದಾಯ ಜಿಡಿಪಿಯು ಬೆಳವಣಿಗೆ ಶೇಕಡಾವಾರು | | |
|---|---|---|---|
| | ೧೯೬೫-೭೩ | ೧೯೭೩-೭೮ | ೧೯೮೦-೮೯ |
| ಆಫ್ರಿಕಾ ಖಂಡ | ೩.೨ | ೦.೧ | -೨.೨. |
| ಪೂರ್ವ ಏಷ್ಯಾ | ೫.೧ | ೪.೭ | ೬.೭ |
| ದಕ್ಷಿಣ ಏಷ್ಯಾ | ೧.೨ | ೧.೭ | ೩.೨ |
| ಲ್ಯಾಟಿನ್ ಅಮೆರಿಕ ಮತ್ತು ಕೇರಿಬೀಯನ್ | ೩.೭ | ೨.೬ | -೦.೬ |

ಮೂಲ : ವಿಶ್ವ ಅಭಿವೃದ್ಧಿ ವರದಿ ೧೯೯೦, ಬಡತನ (ವಾಷಿಂಗ್ಟನ್, ೧೯೯೦)

ಕಳೆದ ೨೫ ವರ್ಷಗಳುದ್ದಕ್ಕೂ ಆಫ್ರಿಕಾದ ಅಭಿವೃದ್ಧಿಗಾಗಿ ತಾವು ನಿರಂತರ ನೆರವು ಮತ್ತು ಅನುದಾನ ನೀಡುತ್ತಿರುವೆವೆಂದು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಮತ್ತು ವಿದೇಶಿ ಹಣಕಾಸು ಸಂಸ್ಥೆಗಳು ಬೊಗಳೆ ಹೊಡೆದರೂ ಆಫ್ರಿಕಾದ ಮುಕ್ಕಾಲು ಪಾಲು ಜನತೆ ಇನ್ನೂ ಬಡತನದ ದವಡೆಯಲ್ಲಿದ್ದಾರೆ. ಉದಾಹರಣೆಗೆ ಇಥಿಯೋಪಿಯಾದ ಒಟ್ಟಾರೆ ಜನಸಂಖ್ಯೆಯು ೧೯೯೩ರಲ್ಲಿ ೫೩.೨ ಮಿಲಿಯನ್ ಇದ್ದು, ಅದರಲ್ಲಿ ಬಡ ಜನತೆಯ ಸಂಖ್ಯೆ ೨೦ ಮಿಲಿಯನ್‌ಗೂ ಹೆಚ್ಚಿದ್ದಾರೆ. ಅದಕ್ಕೆ ನಿರಾಶ್ರಿತರು, ಭೂರಹಿತರು ಮತ್ತು ಯುದ್ಧದಿಂದ ನಿರಾಶ್ರಿತರಾದವರ ಸಂಖ್ಯೆಯನ್ನು ಸೇರಿಸಿದಲ್ಲಿ ಬಡಜನತೆಯ ಸಂಖ್ಯೆ ೫೨ ಮಿಲಿಯನ್ ಮುಟ್ಟುತ್ತದೆ. ಹೀಗೆ ಇಥಿಯೋಪಿಯಾದಲ್ಲಿ ಶೇ.೯೭ರಷ್ಟು ಬಡಜನತೆಯಿದ್ದಾರೆ. ಸಿಯಾರ್ ಲಿಯೋನ್‌ನಲ್ಲಿ ಆದಾಯ ಗಳಿಕೆಯು ಅಸಮಾನವಾಗಿದೆ.

೧೯೯೩ರ ಅಂದಾಜಿನ ಪ್ರಕಾರ ಮೂರನೇ ಎರಡರಷ್ಟು ಜನ ಬಡತನದಲ್ಲಿದ್ದು ಬಹುತೇಕ ಗ್ರಾಮೀಣ ಪ್ರದೇಶದಲ್ಲಿದ್ದಾರೆ. ವಯಸ್ಕರ ಅನಕ್ಷರತೆಯು ಶೇ.೭೯ರಷ್ಟಿದ್ದು ಇದು ಆಫ್ರಿಕಾ ಖಂಡದಲ್ಲಿ ಹೆಚ್ಚಿನ ಪ್ರಮಾಣದ್ದು. ಪ್ರಾಥಮಿಕ ಶಿಕ್ಷಣಕ್ಕೆ ಸೇರುವವರ ಸಂಖ್ಯೆ ಇಡೀ ಖಂಡದಲ್ಲೇ ಕಡಿಮೆ ಪ್ರಮಾಣದ್ದಾಗಿದೆ. ಈ ನಡುವೆ, ಶ್ರೀಮಂತ ಕೃಷಿ ಪ್ರದೇಶವನ್ನು ಹೊಂದಿದ್ದರೂ ಜನಾಂಗೀಯ ಅಂತಃಕಲಹದಿಂದಾಗಿ ಶೇ.೧೫ರಿಂದ ೨೦ರಷ್ಟು ಜನತೆ ನಿರಾಶ್ರಿತರಾಗಿದ್ದಾರೆ.

ಉಗಾಂಡಾದಲ್ಲಿ ಶೇ.೯೩ರಷ್ಟು ಬಡವರಿದ್ದು, ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಬಡತನವು ಗ್ರಾಮೀಣ ಪ್ರದೇಶದಲ್ಲಿ ವ್ಯಾಪಕವಾಗಿ ಹರಡಿದ್ದು ತೀವ್ರ ಸ್ವರೂಪದಲ್ಲಿದೆ. ಪುರುಷರ ಜೀವಿತಾವಧಿಯು ಇಡೀ ಖಂಡದಲ್ಲೇ ಕಡಿಮೆ ಪ್ರಮಾಣದಲ್ಲಿದೆ. ಇದರೊಂದಿಗೆ ದುರದೃಷ್ಟವಶಾತ್ ಏಡ್ಸ್ ರೋಗವು ಕೂಡ ಕೈಜೊಡಿಸಿ ಸಾವಿನ ಸಂಖ್ಯೆಯನ್ನು ಇಮ್ಮಡಿಗೊಳಿಸಿದೆ. ಘಾನಾದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿನ ಬಡತನವು ಪಟ್ಟಣ ಪ್ರದೇಶಗಳಿಗಿಂತ ೧೩ಪಟ್ಟು ಹೆಚ್ಚಿನದು. ಕಡಿಮೆ ಉತ್ಪಾದನಾ ಸಮಸ್ಯೆಯು ಇನ್ನೂ ಅರ್ಧ ಶತಮಾನ ಕಾಲ ಹಾಗೆಯೇ ಮುಂದುವರೆಯುತ್ತದೆಂದು ಅಭಿಪ್ರಾಯ ಪಡಲಾಗಿದೆ. ನಮೀಬಿಯಾದಲ್ಲಿ ಆದಾಯ ಹಂಚಿಕೆಯು ತೀವ್ರತರದ ಅಸಮಾನತೆಯಿಂದ ಕೂಡಿದ್ದು ಸಂಪೂರ್ಣ ಬಡತನವು ವ್ಯಾಪಕವಾಗಿ ಹಬ್ಬಿದೆ. ಅಲ್ಲಿನ ಶೇ.೫ರಷ್ಟು ಶ್ರೀಮಂತರು ಜಿಡಿಪಿಯ ಶೇ.೭೦ರಷ್ಟನ್ನು ನಿಯಂತ್ರಿಸಿದರೆ ಶೇ.೫೫ರಷ್ಟು ಬಡವರು ಬರೆ ಶೇ.೩ರಷ್ಟು ಹೊಂದಿದ್ದಾರೆ. ಮಹಿಳೆಯು ಗಂಭೀರ ಬಡತನದಿಂದ ಜರ್ಜರಿತಳಾಗಿದ್ದಾಳೆ.

ವಿಶ್ವಬ್ಯಾಂಕ್ ಬೃಹತ್ ಮಟ್ಟದಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಟಾಂಜೇನಿಯಾದ ಜೀವನ ಗುಣಮಟ್ಟ ದರವು ೧೯೬೯ ಮತ್ತು ೧೯೮೩ರ ನಡುವಿನ ವರ್ಷಗಳಲ್ಲಿ ಸರಾಸರಿ ವಾರ್ಷಿಕ ಶೇ.೨.೫ರಷ್ಟು ಇಳಿಮುಖಗೊಂಡಿತು. ಇದೇ ಅವಧಿಯಲ್ಲಿ ನಗರ ಪ್ರದೇಶದ ಕೂಲಿದರ ಶೇ.೬೫ರಷ್ಟು ಕುಸಿತ ಕಂಡಿತು. ಸಾಮಾನ್ಯ ಜನರು ಮಾಂಸ, ಡೈರಿ ಉತ್ಪನ್ನ, ತರಕಾರಿಗಳಿಂದ ದೂರಸರಿದು ಕಳಪೆ ಆಹಾರ ಪದಾರ್ಥಗಳೆಡೆಗೆ ಸರಿದರು. ಹೆಚ್ಚು ಜನಸಂಖ್ಯೆ ಹೊಂದಿದ್ದು ಶ್ರೀಮಂತ ರಾಷ್ಟ್ರವೂ ಆಗಿರುವ ನೈಜೀರಿಯಾದಲ್ಲಿ ೧೯೮೦ರಲ್ಲಿ ಆಹಾರ ಬಳಕೆಯು ಶೇ.೭ರಷ್ಟು ಕಡಿಮೆಗೊಂಡು ಅಲ್ಲಿನ ಜೀವನ ಗುಣಮಟ್ಟವು ೧೯೫೦ರ ಪ್ರಮಾಣಕ್ಕಿಂತ ಕೆಳಗಿದ್ದಿತು. ೧೯೮೦ರ ದಶಕದ ಆರ್ಥಿಕ ಬಿಕ್ಕಟ್ಟಿನ ಪರಿಣಾಮವಾಗಿ ಅಲ್ಲಿನ ಪ್ರಗತಿಯು ಕಳೆದ ೨೦ ವರ್ಷಗಳ ಹಿಂದಿನ ಮಟ್ಟ ತಲುಪಿತು. ಜಾಂಬಿಯಾದಲ್ಲಿ ಶೇ.೮೦ರಷ್ಟು ಗ್ರಾಮೀಣವಾಸಿಗಳು ಬಡತನದಲ್ಲಿದ್ದಾರೆ. ನಿರಂತರವಾಗಿ ಹಳ್ಳಿಗಾಡಿನಿಂದ ನಗರ ಪ್ರದೇಶದೆಡೆಗೆ ಮತ್ತು ವಿದೇಶಕ್ಕೆ ಹಣ ಹರಿದು ಹೋದದ್ದೇ ಬಡತನಕ್ಕೆ ಕಾರಣವಾಗಿತ್ತು. ಇದರೆ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ಹೋಲಿಸಿದಲ್ಲಿ ದಕ್ಷಿಣ ಆಫ್ರಿಕಾದ ಬಡತನ ಪ್ರಮಾಣವು ೧೯೮೦ ಮತ್ತು ೧೯೯೦ರ ದಶಕಗಳ ನಡುವೆ

ಹೆಚ್ಚಳಗೊಂಡಿತು. ಜನಸಂಖ್ಯೆ ಬೆಳೆಯತೊಡಗಿತು. ನಗರಗಳು ವಿಸ್ತರಣೆಗೊಂಡವು ಮತ್ತು ಆಹಾರ ಧಾನ್ಯಗಳಿಗಾಗಿ ವಿದೇಶದ ಮೇಲಿನ ಅವಲಂಬನೆಯು ಹೆಚ್ಚತೊಡಗಿತು.

೧೯೮೦ರ ದಶಕದಲ್ಲಿ ಆಫ್ರಿಕಾದ ಬಹುತೇಕ ಎಲ್ಲ ಬಡರಾಷ್ಟ್ರಗಳು ಸಾಲ ಮರು ಪಾವತಿಸಲಾಗದೆ ದಿವಾಳಿ ಎದ್ದಾಗ ಹಳೆ ಸಾಲ ತೀರಿಸಲು ಹೊಸ ಸಾಲ ನೀಡಲಾಯಿತು. ತಮ್ಮ ರಾಷ್ಟ್ರದ ಅಭಿವೃದ್ಧಿ ಮತ್ತು ಕಲ್ಯಾಣಕಾರ್ಯಗಳಿಗಿಂತ ಸಾಲ ಮರುಪಾವತಿಗಾಗಿ ಹೆಚ್ಚಿನ ವೆಚ್ಚ ಭರಿಸಿವೆ. ಉದಾಹರಣೆಗೆ, ದೇಶದ ಜಿಡಿಪಿಯಲ್ಲಿ ಸರಾಸರಿ ಆಫ್ರಿಕಾದ ಸಾಲ ಮರುಪಾವತಿ ಶೇಕಡಾ ೧೬ರಷ್ಟಿದ್ದರೆ, ಶಿಕ್ಷಣ, ರಕ್ಷಣೆ ಮತ್ತು ಆರೋಗ್ಯಕ್ಕೆ ಅದಕ್ಕಿಂತಲೂ ಕಡಿಮೆ ಹಣ ಹಂಚಿಕೆಯಾಗುತ್ತಿತ್ತು. ಸಾಲ ಮರುಪಾವತಿಯ ಒತ್ತಡದಿಂದಾಗಿ ಬಲಿಪಶು ಗಳಾದವರೆಂದರೆ ಮಕ್ಕಳು, ಅಂಗವಿಕಲರು ಮತ್ತು ಮಹಿಳೆಯರು. ಅಪೌಷ್ಟಿಕತೆ, ಮಾನಸಿಕ ಒತ್ತಡ, ನಿರುದ್ಯೋಗ, ಹಸಿವು ಮತ್ತು ದಾರಿದ್ರ್ಯಗಳಿಂದಾಗಿ ಈ ವರ್ಗದ ಜನತೆಗೆ ತಕ್ಷಣದ ಹೊಡೆತ ಬಿದ್ದಿತು. ಉದಾಹರಣೆಗೆ ಆಫ್ರಿಕಾದಲ್ಲಿ ಏಡ್ಸ್ ರೋಗವು ವ್ಯಾಪಕ ಪ್ರಮಾಣದಲ್ಲಿ ಹಬ್ಬಲು ವಿಶ್ವಬ್ಯಾಂಕಿನ ಆರ್ಥಿಕ ನೀತಿಗಳೇ ಕಾರಣವೆಂದು ಅಮೆರಿಕ ರೋಗ ನಿಯಂತ್ರಣ ಸಂಸ್ಥೆಯು ಒಂದೊಮ್ಮೆ ದೂರಿತ್ತು. ಆರೋಗ್ಯ ಕ್ಷೇತ್ರದಲ್ಲಿ ಒಂದೆಡೆ ಸರ್ಕಾರವು ಸಹಾಯಧನವನ್ನು ಕಡಿತಗೊಳಿಸಿ ಮತ್ತೊಂದೆಡೆ ಬಳಕೆದಾರರ ಶುಲ್ಕವನ್ನು ಹೆಚ್ಚಿಸಿದ್ದರಿಂದ ಆರೋಗ್ಯ ಮತ್ತು ಶಿಕ್ಷಣ ಸೇವೆಯನ್ನು ಬಳಸುವವರ ಸಂಖ್ಯೆ ಕುಸಿದು ಬಿದ್ದಿತು. ಮಾನವ ಸಂಪನ್ಮೂಲದ ಸರೋವರವಾಗಬೇಕಿದ್ದ ಆಫ್ರಿಕಾ ಹಿಂಸೆಯಿಂದ ನರಳುತ್ತಿರುವವರ ಕೋಪವಾಯಿತು.

## ಆಫ್ರಿಕಾದಲ್ಲಿ ಜನಾಂಗೀಯ ಘರ್ಷಣೆ

೨೦ನೆಯ ಶತಮಾನದಲ್ಲಿ ಆಫ್ರಿಕಾದಲ್ಲಿ ನಡೆದಿರುವ ಜನಾಂಗೀಯ ಕಲಹಗಳು ಆಫ್ರಿಕಾದ ಇತಿಹಾಸದಲ್ಲೇ ಕಂಡಿರದ ಮಾರಣಹೋಮಗಳನ್ನು ಮತ್ತು ಕಗ್ಗೊಲೆಗಳನ್ನು ಉಂಟು ಮಾಡಿವೆ. ವಿಶ್ವದಲ್ಲೇ ಅತಿ ಹೆಚ್ಚು ನಿರಾಶ್ರಿತರನ್ನು ಆಫ್ರಿಕಾ ಹೊಂದಿತ್ತು. ೧೯೯೨ ರಲ್ಲಿ ನಿರಾಶ್ರಿತರ ಸಂಖ್ಯೆ ೫೦ ಲಕ್ಷ ಮೀರಿತ್ತು. ೨೩ಲಕ್ಷ ಜನಸಂಖ್ಯೆಯಿರುವ ಲೈಬೀರಿಯಾ ದಂಥಹ ಚಿಕ್ಕ ದೇಶದಲ್ಲಿ ಬರೇ ೪ ವರ್ಷಗಳಲ್ಲಿ ಸುಮಾರು ೨.೫೦ಲಕ್ಷ ಜನರು ಅಂತಃ ಕಲಹದಿಂದ ಅಸು ನೀಗಿದ್ದಾರೆ. ೧೯೯೩ರಲ್ಲಿ ಘಾನಾದಲ್ಲಿ ನಡೆದ ರಕ್ತಪಾತದಲ್ಲಿ ಬುಡಕಟ್ಟು ಗುಂಪುಗಳ ೬೦೦೦ ಮಂದಿ ಹತ್ಯೆಯಾಗಿತ್ತು, ೨೦೦ ಹಳ್ಳಿಗಳು ನಾಶಗೊಂಡು ೧೫೦೦೦ ಮಂದಿ ನಿರಾಶ್ರಿತರಾಗಿದ್ದಾರೆ. ಸಿಯಾರ ಲಿಯೋನ್ ಪ್ರಾಂತ್ಯದಲ್ಲಿ ನಡೆದ ಸಶಸ್ತ್ರ ಕಾದಾಟದಿಂದ ಅಂದಾಜು ೩೫,೦೦೦ ನಿರಾಶ್ರಿತರು ಒಂದೇ ವಾರದಲ್ಲಿ ಪಕ್ಕದ ಜಿನಿಯಾ ಗಡಿಗೆ ನುಸುಳಿದ್ದಾರೆ.

೧೯೮೦ರ ದಶಕದಲ್ಲಿ ಅಂಗೋಲಾ ಮತ್ತು ಮೊಜಾಂಬಿಕ್‌ಗಳಲ್ಲಿ ನಡೆದ ವಿಶ್ವದಲ್ಲೇ ದೀರ್ಘಾವಧಿ ಜನಾಂಗೀಯ ಕಲಹದಲ್ಲಿ ೧೫ ಲಕ್ಷ ಜನ ಸಾವನ್ನಪ್ಪಿದ್ದಾರೆ. ಸೂಡಾನ್‌ನಲ್ಲಿ

ಕಳೆದ ೧೦ ವರ್ಷಗಳಲ್ಲಿ ಯುದ್ಧ ಮತ್ತು ಕ್ಷಾಮಗಳಿಂದ ೫ ಲಕ್ಷ ಜನ ಸಾವನ್ನಪ್ಪಿದ್ದಾರೆ. ೧೯೮೮ರ ಒಂದೇ ವರ್ಷದಲ್ಲಿ ೨.೫ ಲಕ್ಷ ಜನ ಸತ್ತರು. ಈ ಜನಾಂಗೀಯ ಕಲಹಗಳು ಆಫ್ರಿಕಾದ ಅಭಿವೃದ್ಧಿಗೆ ತೊಡಕಾಗಿದ್ದು, ರಾಷ್ಟ್ರೀಯ ಐಕ್ಯತೆಗೆ ಪೆಟ್ಟು ನೀಡಿವೆ.

ಈ ಜನಾಂಗೀಯ ಕಲಹಗಳು ಹಿಂದಿನ ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿ ಆಳ್ವಿಕೆಯಿಂದ ಬಳುವಳಿ ಪಡೆದುಕೊಂಡು ಬಂದಿವೆ. ಇಂತಹ ಘರ್ಷಣೆಗಳನ್ನು ಹತ್ತಿಕ್ಕಿ ಪ್ರಜಾಸತ್ತಾತ್ಮಕ ಚಳುವಳಿಯನ್ನು ರೂಪುಗೊಳಿಸುವಲ್ಲಿ ಆಫ್ರಿಕಾದ ನಾಯಕತ್ವವು ವಿಫಲ ವಾಗಿದ್ದೇಕೆಂದರೆ ವಿದೇಶಿ ಶಕ್ತಿಗಳ ನಿರಂತರ ಹಸ್ತಕ್ಷೇಪ. ನೈಜೀರಿಯಾದಲ್ಲಿ ೧೯೮೦ರಲ್ಲಿ ೬೦,೦೦೦ ಮಿಲಿಯನ್ ಡಾಲರ್‌ನಿಂದ ೧೯೮೭ರ ಹೊತ್ತಿಗೆ ೨.೦ ಲಕ್ಷ ಮಿಲಿಯನ್ ಡಾಲರ್‌ನಷ್ಟು ಬಂಡವಾಳ ಹೊರದೇಶಕ್ಕೆ ಹರಿದು ಹೋಗಿ ತೀವ್ರತರದ ಹಾನಿ ಉಂಟುಮಾಡಿತ್ತು.

೧೯೭೦ರಿಂದೀಚೆಗೆ ಆಫ್ರಿಕಾದ ವಯಸ್ಕರಲ್ಲಿ ಏಡ್ಸ್ ಪ್ರಮಾಣವು ೧ ಕೋಟಿ ಜನರಲ್ಲಿ ವ್ಯಾಪಿಸಿದೆ. ಏಡ್ಸ್ ರೋಗವು ವ್ಯಾಪಕವಾಗಿ ಹಬ್ಬಲು ಕಾರಣವೇನೆಂದರೆ, ಅಲ್ಲಿ ವಿವಿಧ ಜನಾಂಗೀಯ ಗುಂಪುಗಳ ನಡುವೆ ನಡೆಯುತ್ತಿರುವ ಕಾದಾಟಗಳು, ಕ್ಷಾಮ ಮತ್ತು ಅಂತಃ ಕಲಹ.

೧೯೭೦ರಲ್ಲಿ ಸೋಮಾಲಿಯಾದಲ್ಲಿ ಮಿಲಿಟರಿ ಆಳ್ವಿಕೆ ಬಂದಿತು. ಹಾಗೆಯೇ ಇಥಿಯೋಪಿಯಾ ೧೯೭೪ರಲ್ಲಿ ಮತ್ತು ಸೂಡಾನ್ ೧೯೮೯ರಲ್ಲಿ ಮಿಲಿಟರಿ ಆಡಳಿತದ ತೆಕ್ಕೆಗೆ ಸೇರಿದವು. ಇಥಿಯೋಪಿಯಾದಲ್ಲಿ ಮಾರ್ಕ್ಸ್‌ವಾದಿ-ಲೆನಿನ್‌ವಾದಿ ಪಕ್ಷದ ನಾಯಕ ಮೆಂಗಿಸ್ಟು ಹೈಲ್ ಮೆರಿಯಮ್ ಆಳ್ವಿಕೆಯನ್ನು ಕಿತ್ತೊಗೆದು ದೇಶ ವಿಭಜನೆ ಮಾಡಲು ಯತ್ನಿಸಲಾಯಿತು. ಅಂತಿಮವಾಗಿ ೧೯೯೧ರಲ್ಲಿ ಮೆಂಗಿಸ್ಟು ಆಳ್ವಿಕೆಯನ್ನು ಕೊನೆಗಾಣಿಸ ಲಾಯಿತು. ತನ್ನ ವಿವಾದಿತ ಗಡಿಪ್ರದೇಶಗಳನ್ನು ವಾಪಸ್ಸು ಪಡೆಯಲು ಅದೀಗ ತಾನೆ ಸ್ವತಂತ್ರ ರಾಷ್ಟ್ರವಾಗಿ ಅಸ್ತಿತ್ವಕ್ಕೆ ಬಂದಿದ್ದ ಎರಿಟ್ರಿಯಾ ದೇಶದ ಮೇಲೆ ಇಥಿಯೋಪಿಯಾವು ೧೯೯೮-೯೯ರಲ್ಲಿ ಯುದ್ಧ ಮಾಡಿತು. ೧೯೯೯ರ ಹೊತ್ತಿಗೆ, ಕೇಂದ್ರೀಯ ಸೋಮಾಲಿ ಭೂ ಪ್ರದೇಶದಲ್ಲಿ ವಾಯುವ್ಯ ಭೂಭಾಗವು ಸೋಮಾಲಿಲ್ಯಾಂಡ್ ಆಗಿ ವಿಭಜನೆಗೊಂಡು, ದಕ್ಷಿಣ ಭೂಭಾಗವು ಯುದ್ಧಕೋರರ ನಡುವೆ ಹರಿದು ಹಂಚಿಹೋಯಿತು.

ದಕ್ಷಿಣ ಸೂಡಾನ್‌ನಲ್ಲಿ ಉತ್ತರದ ಇಸ್ಲಾಮಿಕ್ ಪಂಗಡ ಮತ್ತು ದಕ್ಷಿಣ ಜನತೆಯ ನಡುವಿನ ದೀರ್ಘಾವಧಿ ಯುದ್ಧ ಇನ್ನೂ ನಡೆಯುತ್ತಲೇ ಇದೆ. ಮುಸ್ಲಿಮರು ಮತ್ತು ಕ್ರಿಶ್ಚಿಯನ್ ಧಾರ್ಮಿಕ ಅನುಯಾಯಿಗಳ ನಡುವಿನ ಘರ್ಷಣೆಯು ಜನಾಂಗೀಯ ಯುದ್ಧಕ್ಕೆ ಹೆಚ್ಚೆಚ್ಚು ಕಾರಣವಾಗಿದೆ. ಸೂಡಾನ್, ಇಥಿಯೋಪಿಯಾ ಮತ್ತು ಸೋಮಾಲಿ ಯಾಗಳಲ್ಲಿನ ಜನಾಂಗೀಯ ಘರ್ಷಣೆಗಳಿಂದಾಗಿ ಅಲ್ಲಿನ ಜನರೆಲ್ಲ ನಿರಾಶ್ರಿತ ಶಿಬಿರಗಳಲ್ಲೇ ಬಹುತೇಕ ತಮ್ಮೆಲ್ಲ ಜೀವನವನ್ನು ಕಳೆದಿದ್ದಾರೆ. ೧೯೯೪ರಲ್ಲಿ ರುವಾಂಡದಲ್ಲಿ ಘೋರವಾದ

ಜನಾಂಗೀಯ ಘರ್ಷಣೆ ನಡೆದು ಬಹುಸಂಖ್ಯಾತ ಹುಟ್ಟು ಜನಾಂಗವು ಅಲ್ಪಸಂಖ್ಯಾತ ಟುಟ್ಸಿ ಜನಾಂಗದ ಮೇಲೆ ಮಿಲಿಟರಿ ಕಗ್ಗೊಲೆ ನಡೆಸಿತು.

### ಆಫ್ರಿಕಾದ ಮಹಾಯುದ್ಧಗಳು

ಝೈರೇ ದೇಶದ(ಇಂದಿನ ಕಾಂಗೋ)ಮೇಲಿನ ನಿಯಂತ್ರಣಕ್ಕಾಗಿ ವಿವಿಧ ಪಂಗಡಗಳ ನಡುವೆ ಈ ಮಹಾಯುದ್ಧಗಳು ಜರುಗಿದವು. ಇದರಲ್ಲಿ ಪ್ರಮುಖವಾಗಿ ನಾಲ್ಕು ಜನಾಂಗಗಳ ಸಶಸ್ತ್ರ ಗುಂಪುಗಳಿವೆ.

ಮೊದಲನೆಯ ಗುಂಪಿನಲ್ಲಿ, ರುವಾಂಡ ಮತ್ತು ಬುರುಂಡಿ ದೇಶಗಳಲ್ಲಿ ಟುಟ್ಸಿ ಜನಾಂಗವು ಪ್ರಾಬಲ್ಯ ಹೊಂದಿದೆ. ರುವಾಂಡ ಮತ್ತು ಬುರುಂಡಿಯ ರಾಷ್ಟ್ರೀಯ ಭದ್ರತೆ ಮತ್ತು ನೈಸರ್ಗಿಕ ಸಂಪನ್ಮೂಲಗಳ ಹಂಚಿಕೆಗಾಗಿ ಈ ಸರ್ಕಾರಗಳು ರುವಾಂಡಾದ ಮೈತ್ರಿ ಸೇನೆ ಹಾಗೂ ಟುಟ್ಸಿ ಜನಾಂಗದ ಮಿಲಿಟರಿ ಗುಂಪು ಉಗಾಂಡಾದ ಮೈತ್ರಿ ಸೇನೆಯ ವಿರುದ್ಧ ಕಾದಾಡಿತು. ಎರಡನೆಯದು, ಹುಟು ಮೈತ್ರಿಕೂಟವು ೧೯೯೪ರಲ್ಲಿ ರುವಾಂಡಾದಲ್ಲಿ ನಡೆದ ನರಮೇಧಕ್ಕೆ ಕಾರಣವಾಗಿದೆ. ಇದರಲ್ಲಿ ರುವಾಂಡಾದ ಹುಟು ಮತ್ತು ಬುರುಂಡಿಯ ದಂಗೆಕೋರ ಗುಂಪುಗಳು ಸೇರಿಕೊಂಡಿವೆ. ಬುರುಂಡಿ ಸರ್ಕಾರವನ್ನು ಕಿತ್ತೊಗೆಯುವುದು, ಕಾಂಗೋದ ಹುಟು ಜನಾಂಗ ಮತ್ತು ಮಾಯಿ ಎಂಬ ಹೆಸರಿನ ಮಿಲಿಟರಿ ಗುಂಪಿನ ಮೇಲೆ ಯುದ್ಧ ಮಾಡುವುದು ಮತ್ತು ನಿಸರ್ಗದ ಸಂಪತ್ತಿನ ನಿಯಂತ್ರಣ ಇದರ ಉದ್ದೇಶ. ಈ ಕೂಟವು ರುವಾಂಡ ಮತ್ತು ಬುರುಂಡಿಯ ಟುಟ್ಸಿ ಸೇನೆಯ ವಿರುದ್ಧ ಸದಾ ಕತ್ತಿ ಮಸೆಯುತ್ತಿದೆ. ಮೂರನೆಯದಾಗಿ, ಉಗಾಂಡದ ಮೈತ್ರಿಕೂಟವು ಉಗಾಂಡಾ ರಾಷ್ಟ್ರೀಯ ಸೇನೆ ಮತ್ತು ಬಂಡುಕೋರರ ಮೈತ್ರಿ ಕೂಟವಾಗಿದೆ. ಇದು ರಿಪಬ್ಲಿಕ್ ಕಾಂಗೋದ ಈಶಾನ್ಯ ಮತ್ತು ಉತ್ತರ ದಿಕ್ಕಿನ ಕೇಂದ್ರೀಯ ಭಾಗದ ಮೇಲೆ ನಿಯಂತ್ರಣ ಹೊಂದಿದೆ. ಇದರ ಉದ್ದೇಶ ಕಾಂಗೋ ಸರ್ಕಾರದ ಸೇನೆಯ ದಾಳಿಯಿಂದ ತನ್ನ ಸಂಪನ್ಮೂಲ ಮತ್ತು ಭೂಭಾಗವನ್ನು ರಕ್ಷಿಸಿಕೊಳ್ಳುವುದು. ನಾಲ್ಕನೆಯದಾಗಿ, ಕಿನ್ಶಾಸಾ ಮೈತ್ರಿಕೂಟದಲ್ಲಿ ಕಾಂಗೋ ಸರ್ಕಾರ, ಮಾಯಿ-ಮಯಿ ಗುಂಪು ಮತ್ತು ಮೈತ್ರಿ ದೇಶಗಳಾದ ಜಿಂಬಾಬ್ವೆ, ಅಂಗೋಲಾ, ಸೂಡಾನ್, ಛಡ್ ಮತ್ತು ನಮೀಬಿಯಾ ದೇಶಗಳು ಒಟ್ಟಾಗಿವೆ. ಈ ಮೈತ್ರಿ ಕೂಟವು ರಿಪಬ್ಲಿಕ್ ಕಾಂಗೋ ದೇಶದ ಪೂರ್ವ ಮತ್ತು ದಕ್ಷಿಣ ಭಾಗದ ಮೇಲೆ ನಿಯಂತ್ರಣ ಹೊಂದಿದೆ. ತನ್ನ ಗಡಿಯನ್ನು ರಕ್ಷಿಸಿಕೊಂಡು ನೈಸರ್ಗಿಕ ಸಂಪನ್ಮೂಲವನ್ನು ನಿಯಂತ್ರಿಸುವುದು ಇದರ ಉದ್ದೇಶ.

### ಆಫ್ರಿಕಾದ ಮೊದಲನೇ ಮಹಾಯುದ್ಧ

ರುವಾಂಡಾದ ಹುಟು ಮತ್ತು ಬುರುಂಡಿಯ ದಂಗೆಕೋರ ಗುಂಪುಗಳು ೧೯೯೪ರಲ್ಲಿ ನಡೆಸಿದ ರುವಾಂಡಾ ನರಮೇಧದ ಅಂತ್ಯದಲ್ಲಿ ರುವಾಂಡಾ ಸರ್ಕಾರಿ ಸೇನೆಯ ಪ್ರತಿದಾಳಿಗೆ

ಹೆದರಿ ೨೦ಲಕ್ಷ ಹುಟು ಜನತೆಯು ನಿರಾಶ್ರಿತರಾಗಿ ರುವಾಂಡಾವನ್ನು ತ್ಯಜಿಸಿ ಪಕ್ಕದ ಝ್ಯುರೇ ಮತ್ತು ಟಾಂಜೇನಿಯಾ ದೇಶಗಳಿಗೆ ಓಡಿಹೋದರು. ಇದರಲ್ಲಿ ನರಮೇಧ ನಡೆಸಿದ ಹುಟು ಜನಾಂಗದ ನಾಯಕರು ಇದ್ದರು. ಝ್ಯುರೇಯ ಬುಕಾವು, ಗೋಮ ಮತ್ತು ಉವಿರಾ ಪ್ರದೇಶಗಳಲ್ಲಿ ನೆಲೆಯೂರಿದ್ದ ನಿರಾಶ್ರಿತರ ಶಿಬಿರಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ಈ ನಾಯಕರು ಯಶಸ್ವಿಯಾದರು. ಇವರಿಗೆ ಬುರುಂಡಿಯ ಟುಟ್ಸಿ ಜನಾಂಗದ ಸರ್ಕಾರವನ್ನು ಕಿತ್ತೊಗೆಯಲು ಯತ್ನಿಸುತ್ತಿದ್ದ ಹುಟು ಜನತೆಯ ಸಂಘಟನೆ ಮತ್ತು ಝ್ಯುರೇಯ ಅಧ್ಯಕ್ಷ ಮೊಬುಟು ಸೆಸೆ ಸೆಕೊ ಅವರು ಬೆಂಬಲವಾಗಿ ನಿಂತರು. ನೆರೆಯ ನೈರೋಬಿ, ಕೀನ್ಯಾ, ಅಮೆರಿಕ ಮತ್ತು ಯೂರೋಪ್ ರಾಷ್ಟ್ರಗಳಿಂದ ಸಂಪನ್ಮೂಲ ಮತ್ತು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುತ್ತಾ ನಿರಾಶ್ರಿತ ಜನತೆಗೆ ಮಿಲಿಟರಿ ತರಬೇತಿ ನೀಡಿ ಸನ್ನದ್ಧಗೊಳಿಸಿದರು. ಅಂತಿಮವಾಗಿ, ಸೆಂಬ್ಲಮೆಂಟ್ ಡೆಮಕ್ರಟಿಕ್ ಪೋರ್ ಲ ರುವಾಂಡಾ(ಆರ್‌ಡಿಆರ್) ಎಂಬ ಸಂಘಟನೆಯ ನೇತೃತ್ವದಲ್ಲಿ ರುವಾಂಡದ ಹುಟು ಮತ್ತು ಬುರುಂಡಿಯ ದಂಗೆಕೋರ ಗುಂಪುಗಳು ರುವಾಂಡಾ ಸರ್ಕಾರದ ವಿರುದ್ಧ ೧೯೯೬-೧೯೯೭ರಲ್ಲಿ ಯುದ್ಧ ಸಾರಿದವು. ಇದಕ್ಕೆ ಪ್ರತ್ಯುತ್ತರವಾಗಿ, ಪಾಲ್ ಕಗಾಮೆ ನಾಯಕತ್ವದ ರುವಾಂಡಾ ಸರ್ಕಾರಿ ಸೇನೆಯು ಬಂಡಾಯ ಗುಂಪುಗಳ ನಾಯಕ ಕಬಿಲಾ ಸಹಕಾರದಲ್ಲಿ ಪೂರ್ವ ಝ್ಯುರೇಯ ಮೇಲೆ ದಾಳಿಯಿಟ್ಟಿತು. ಆರ್‌ಡಿಆರ್ ಸೇನಾ ನೆಲೆಗಳನ್ನು ಧ್ವಂಸಗೊಳಿಸಿತು. ಈ ಪ್ರತಿ ದಾಳಿಯಿಂದ ನಿರಾಶ್ರಿತ ಜನತೆ ದಿಕ್ಕೆಟ್ಟು ಚೆಲ್ಲಾಪಿಲ್ಲಿಯಾದರು. ೬.೦ ಲಕ್ಷ ಜನ ನಿರಾಶ್ರಿತರಾಗಿ ಕಿವುಸ್ ಪ್ರದೇಶಕ್ಕೂ, ಸುಮಾರು ೪.೦ ಲಕ್ಷ ಜನರು ಟಾಂಜೇನಿಯಾಕ್ಕೂ ಓಡಿಹೋದರು. ಸಾವಿರಗಟ್ಟಲೆ ಜನ ಹಸಿವು, ಹಿಂಸೆಗಳಿಂದ ಮರಣ ಹೊಂದಿದರು. ಮೇ, ೧೯೯೭ರಲ್ಲಿ ರಾಜಧಾನಿ ಕಿನ್ಸಾಸಾವನ್ನು ಪ್ರವೇಶಿಸಿದಾಕ್ಷಣ ಝ್ಯುರೇ ಅಧ್ಯಕ್ಷ ಮೊಬುಟು ಅಲ್ಲಿಂದ ಪರಾರಿಯಾದ. ಯುದ್ಧಕ್ಕೆ ಅಂತ್ಯ ಹಾಡಿ ರಿಪಬ್ಲಿಕ್ ಕಾಂಗೋದ ಅಧ್ಯಕ್ಷ ಕಬಿಲಾ ಎಂದು ಘೋಷಿಸಲಾಯಿತು.

**ಆಫ್ರಿಕಾದ ಎರಡನೇ ಮಹಾಯುದ್ಧ**

ಜಾಂಬಿಯಾ, ಅಂಗೋಲಾ, ಕಾಂಗೋ, ಬೆಜ್ಜವಿಲ್ಲೆ, ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್, ಛಡ್, ಸೂಡಾನ್, ಬುರುಂಡಿ ಮತ್ತು ಟಾಂಜೇನಿಯಾಗಳಲ್ಲಿ ಚದುರಿಹೋಗಿದ್ದ ಹುಟು ಜನಾಂಗದ ಹೋರಾಟಗಾರರು ಮತ್ತೆ ರುವಾಂಡಾ ವಿಮೋಚನಾ ಮೈತ್ರಿ (ಎಎಲ್‌ಐಆರ್) ಯನ್ನು ಸಂಘಟಿಸಿದರು. ಅದು ೧೯೯೭ರ ಹೊತ್ತಿಗೆ ಕೆಲಸ ಮಾಡಲಾರಂಭಿಸಿತು. ಇವರು ಕಬಿಲಾ ಸರ್ಕಾರದ ವಿರುದ್ಧ ಕತ್ತಿ ಮಸೆಯಲಾರಂಭಿಸಿದರು. ಎರಡನೇ ಕಾಂಗೋ ಮಹಾಯುದ್ಧವನ್ನು ಆಫ್ರಿಕಾದ ಮಹಾಯುದ್ಧವೆಂದೂ ಕರೆಯಲಾಗುತ್ತದೆ. ಆಫ್ರಿಕಾದ ೮ ರಾಷ್ಟ್ರಗಳ ನಡುವೆ ನಡೆದ ಈ ಯುದ್ಧವು ೧೯೯೪ರಲ್ಲಿ ಆರಂಭವಾಗಿ ೨೦೦೩ರಲ್ಲಿ ಕೊನೆಗೊಂಡಿತು. ಎರಡನೇ ವಿಶ್ವ ಮಹಾಯುದ್ಧಾನಂತರದಲ್ಲಿ ನಡೆದ ಅತ್ಯಂತ ಬರ್ಬರ

ಯುದ್ಧ ಇದಾಗಿತ್ತು. ಇದರಲ್ಲಿ ೨೫ ಸಶಸ್ತ್ರ ಗುಂಪುಗಳು ಭಾಗಿಯಾಗಿದ್ದು ಸುಮಾರು ೩೮ ಲಕ್ಷ ಜನ ಬಹುತೇಕ ಹಸಿವು ಮತ್ತು ಬಡತನದಿಂದ ಅಸುನೀಗಿದ್ದಾರೆ. ಲಕ್ಷಾಂತರ ಜನರು ಈ ಯುದ್ಧದಿಂದಾಗಿ ನಿರಾಶ್ರಿತರಾಗಿದ್ದಾರೆ.

೨೦೦೧ರಲ್ಲಿ ಎಲ್ಲ ಬಂಡುಕೋರ ಗುಂಪುಗಳು ಮತ್ತು ದೇಶಗಳ ನಡುವೆ ಮಾತುಕತೆಗಳ ಮುಖಾಂತರ ಸಮಸ್ಯೆ ಬಗೆಹರಿಸಲು ಯತ್ನಿಸಲಾಯಿತು ಹಾಗೂ ಮಧ್ಯಂತರ ಸರ್ಕಾರ ರಚಿಸಿ ಲಾರೆಂಟ್ ಕಬಿಲಾರನ್ನು ರಿಪಬ್ಲಿಕ್ ಕಾಂಗೋದ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಅಂಗೋಲಾ, ಜಿಂಬಾಬ್ವೆ, ಛಡ್, ಸೂಡಾನ್ ಮತ್ತು ಲಿಬ್ಯಾಗಳು ಕಬಿಲಾ ಬೆಂಬಲಕ್ಕೆ ನಿಂತವು. ಆದರೆ, ೨೦೦೨ರಲ್ಲಿ ಅವರನ್ನು ಹತ್ಯೆ ಮಾಡಿದ್ದರಿಂದ ಅವರ ಮಗ ಜೋಸೆಫ್ ಕಬಿಲಾರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಈ ಮಧ್ಯಾಂತರ ಸರ್ಕಾರದ ಅವಧಿ ಮುಗಿದ ನಂತರ ೨೦೦೬ರಲ್ಲಿ ಸಾಮಾನ್ಯ ಚುನಾವಣೆ ನಡೆದು ಕಬಿಲಾ ಮತ್ತೆ ಅಧ್ಯಕ್ಷರಾಗಿ ಆಯ್ಕೆಯಾದರು.

**ಜಾಗತೀಕರಣ ಯುಗದಲ್ಲಿ ಆಫ್ರಿಕಾ**

ನೈಜೇರಿಯಾವು ಪೆಟ್ರೋಲಿಯಂ ಉತ್ಪಾದನೆಯಲ್ಲಿ ಇಡೀ ವಿಶ್ವದಲ್ಲೇ ಹನ್ನೊಂದನೇ ಸ್ಥಾನದಲ್ಲಿದೆ. ನೈಜೀರಿಯಾ ಸರ್ಕಾರದ ಶೇ.೮೦ರಷ್ಟು ಆದಾಯವು ಪೆಟ್ರೋಲಿಯಂ ಉತ್ಪನ್ನಗಳ ಮೇಲೆ ಅವಲಂಬಿತವಾಗಿದ್ದು ಯುರೋಪ್ ಮತ್ತು ಅಮೆರಿಕಗಳು ಪ್ರಧಾನವಾಗಿ ಆಮದು ಮಾಡಿಕೊಳ್ಳುತ್ತವೆ. ಅಂಗೋಲಾವು ಪೆಟ್ರೋಲಿಯಂ ಉತ್ಪಾದನೆಯಲ್ಲಿ ಆಫ್ರಿಕಾದಲ್ಲಿ ದ್ವಿತೀಯ ಸ್ಥಾನದಲ್ಲಿದೆ. ಆದರೆ ಶೇ.೯೦ರಷ್ಟು ಆದಾಯವು ಪೆಟ್ರೋಲಿಯಂ ರಫ್ತಿನಿಂದ ಬರುತ್ತಿದೆ. ಚೀನಾ ಈ ದೇಶದ ಪ್ರಮುಖ ಆಮದುದಾರ ರಾಷ್ಟ್ರವೆನಿಸಿದೆ. ಸೂಡಾನ್ ದೇಶವೂ ತನ್ನ ಬಹುಪಾಲು ಆದಾಯವನ್ನು ಪೆಟ್ರೋಲಿಯಂ ರಫ್ತಿನಿಂದಾಗಿ ಗಳಿಸುತ್ತಿದೆ.

ಆದರೂ ಆಫ್ರಿಕಾದಲ್ಲಿ ೧೯೮೫ರಿಂದೀಚೆಗೆ ಬಡತನ ಮತ್ತು ಮಿಲಿಟರಿ ಗಲಭೆಗಳು ಅಗಾಧ ಪ್ರಮಾಣದಲ್ಲಿ ಹೆಚ್ಚುತ್ತಿವೆ. ೧೯೮೯ರಲ್ಲಿ ಸೋವಿಯತ್ ಒಕ್ಕೂಟವು ವಿಘಟನೆಗೊಂಡದ್ದರಿಂದಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಆಫ್ರಿಕಾವನ್ನು ಮತ್ತಷ್ಟು ಮಣಿಸಿ ಹೊಸ ರೂಪದ ಸುಲಿಗೆಕೋರ ಆರ್ಥಿಕ ನೀತಿಗಳನ್ನು ಹೇರಲಾಗುತ್ತಿದೆ.

ಒಂದರ್ಥದಲ್ಲಿ ಪ್ರಪಂಚದೆಲ್ಲೆಡೆ ಜಾಗತೀಕರಣ ನೀತಿಯನ್ನು ಜಾರಿ ಮಾಡುವ ಮೊದಲೇ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಮೊದಲಿಗೆ ಅದನ್ನು ಅನಧಿಕೃತವಾಗಿ ಆಫ್ರಿಕಾ ರಾಷ್ಟ್ರಗಳಲ್ಲಿ ೧೯೮೦ರ ದಶಕದ ಸುಮಾರಿಗೆ ಜಾರಿ ಮಾಡಿದ್ದವೆಂದೇ ಹೇಳಬಹುದು. ಆಫ್ರಿಕನ್ ರಾಷ್ಟ್ರಗಳನ್ನು ಒಂದೇ ಮಾರುಕಟ್ಟೆಗೆ ಎಳೆತರುವುದು ನವ ವಸಾಹತುವಾದದ ರೂಪಗಳಲ್ಲೊಂದು. ಆಫ್ರಿಕಾದ ರಾಷ್ಟ್ರಗಳ ಸ್ವಾವಲಂಬನೆ ಮತ್ತು ಸ್ವತಂತ್ರ ಆರ್ಥಿಕ

ಹಾದಿಗಳನ್ನು ಬುಡಮೇಲುಗೊಳಿಸಿದ ಪಾಶ್ಚಿಮಾತ್ಯ ರಾಷ್ಟ್ರಗಳು, ವಿಶ್ವಬ್ಯಾಂಕ್ ಮತ್ತು ಐಎಂಎಫ್ ಪ್ರೇರಿತ ರಚನಾತ್ಮಕ ಹೊಂದಾಣಿಕೆ ಕಾರ್ಯಕ್ರಮಗಳು, ಉದಾರ ಆರ್ಥಿಕ ನೀತಿ, ಸಾರ್ವಜನಿಕ ಉತ್ಪಾದನಾ ಕ್ಷೇತ್ರವನ್ನು ಕಿತ್ತೊಗೆಯುವುದು ಮತ್ತು ಮುಕ್ತ ಮಾರುಕಟ್ಟೆ ನೀತಿಗಳನ್ನು ಪರಿಹಾರವೆಂಬಂತೆ ನೀಡಿದವು. ಪಶ್ಚಿಮ ರಾಷ್ಟ್ರಗಳಲ್ಲಿ ಮುಖ್ಯವಾಗಿ ಅಮೆರಿಕ, ಬ್ರಿಟನ್ ಮತ್ತು ಫ್ರಾನ್ಸ್‌ಗಳು ಅಲ್ಲಿ ರಾಜಕೀಯ ಸುಧಾರಣೆ, ಬಹುಪಕ್ಷ ವ್ಯವಸ್ಥೆ, ಪತ್ರಿಕೋದ್ಯಮದ ಮುಕ್ತ ಸ್ವಾತಂತ್ರ್ಯಗಳ ನೆಪದಲ್ಲಿ ಮೇಲಿನ ವಿಧಾನಗಳನ್ನು ಪರಿಹಾರ ರೂಪದಲ್ಲಿ ಉಣಬಡಿಸಿದವು. ಜಾಗತೀಕರಣವು ಸ್ಥಳೀಯ ಉತ್ಪಾದನಾ ವ್ಯವಸ್ಥೆಯನ್ನು ಹಾಳುಗೆಡವಿ ಜಾಗತಿಕ ಸ್ಪರ್ಧಾ ಮಾರುಕಟ್ಟೆಯಲ್ಲಿ ಆಫ್ರಿಕಾದ ಉತ್ಪನ್ನಗಳನ್ನು ಮೂಲೆಗೆ ತಳ್ಳಿತು. ೧೯೯೨ ಮತ್ತು ೧೯೯೪ರ ನಡುವೆ ಜಿಂಬಾಬ್ವೆಯ ದೊಡ್ಡ ಜವಳಿ ಕಾರ್ಖಾನೆ ಸೇರಿದಂತೆ ಸುಮಾರು ೬೦ಕ್ಕೂ ಹೆಚ್ಚು ಕಾರ್ಖಾನೆಗಳನ್ನು ಮುಚ್ಚಲಾಯಿತು.

**ರಫ್ತು ಕುಸಿತ**

ಅಸಮಾನ ವ್ಯಾಪಾರ ನೀತಿಗಳಿಂದ ಆಫ್ರಿಕಾಗೆ ಬಹಳ ಪೆಟ್ಟು ಬಿದ್ದಿತು. ರಫ್ತು ಉತ್ಪನ್ನಗಳಿಗೆ ದೊರಕುತ್ತಿದ್ದ ಬೆಲೆಯು ಆಮದು ಉತ್ಪನ್ನಗಳಿಗೆ ಹೋಲಿಸಿದಲ್ಲಿ ಏನೇನೂ ಇರಲಿಲ್ಲ. ಜಾಗತಿಕ ವ್ಯಾಪಾರದಲ್ಲಿ ಆಫ್ರಿಕಾದ ಪಾಲು ಕುಸಿದು ಹೋಗಲು ಕಾರಣವೆಂದರೆ ಬಹುತೇಕ ರಾಷ್ಟ್ರಗಳು ಕೇವಲ ಕೆಲವೇ ಉತ್ಪನ್ನಗಳ ರಫ್ತಿನ ಮೇಲೆ ಅವಲಂಬಿತವಾಗಿದ್ದವು. ಒಟ್ಟಾರೆ ರಫ್ತಿನಲ್ಲಿ ಶೇ.೭೫ರಷ್ಟು ಪಾಲು ಒಂದೇ ಉತ್ಪನ್ನಗಳ ಮೇಲೆ ಅವಲಂಬಿತವಾಗಿರುವ ರಾಷ್ಟ್ರಗಳೆಂದರೆ ಅಂಗೋಲ, ಬೊಟ್ಸ್ವಾನಾ, ಬುರುಂಡಿ, ಕಾಂಗೋ, ಗ್ಯಾಬನ್, ನೈಜರ್, ನೈಜೀರಿಯಾ, ಸೋಮಾಲಿಯಾ, ಉಗಾಂಡಾ ಮತ್ತು ಜಾಂಬಿಯಾ. ತಮ್ಮ ರಫ್ತು ಪ್ರಮಾಣದಲ್ಲಿ ಕನಿಷ್ಟ ಶೇ.೨೫ರಷ್ಟನ್ನು ನಾಲ್ಕಕ್ಕೂ ಹೆಚ್ಚು ಉತ್ಪನ್ನಗಳಿಂದ ಗಳಿಸುವ ರಾಷ್ಟ್ರಗಳೆಂದರೆ ಗ್ಯಾಂಬಿಯಾ, ಲೆಸೊತೊ, ದಕ್ಷಿಣ ಆಫ್ರಿಕಾ, ಸ್ವಾಜಿಲ್ಯಾಂಡ್, ಟ್ಯಾಂಜೇನಿಯಾ ಮತ್ತು ಜಿಂಬಾಬ್ವೆ. ೧೯೮೦ರಿಂದ ೨೦೦೦ರವರೆಗೆ, ಆಫ್ರಿಕಾದ ರಫ್ತು ಪ್ರಮಾಣವು ಕುಸಿತಗೊಂಡು ಸಕ್ಕರೆ ಶೇ.೭೭ರಷ್ಟು, ಕೋಕೋ ಶೇ.೭೧, ಕಾಫಿ ಶೇ.೬೪ರಷ್ಟು ಮತ್ತು ಹತ್ತಿಯು ಶೇ.೪೭ರಷ್ಟು ಕುಸಿತಗೊಂಡಿದೆ. ಇದೇ ವೇಳೆ ಆಫ್ರಿಕಾದಿಂದ ಅಮೆರಿಕಕ್ಕೆ ರಫ್ತಾಗುವ ಕಡಲೆಕಾಯಿ ಮೇಲಿನ ಆಮದು ಸುಂಕವನ್ನು ಅಮೆರಿಕವು ಶೇ.೧೩೨ರಷ್ಟು ಹೆಚ್ಚಿಸಿದೆ.

ಈ ಮಧ್ಯೆ ಚೀನಾ ಮತ್ತು ಆಫ್ರಿಕಾ ನಡುವಿನ ಬಾಂಧವ್ಯ ವೃದ್ಧಿಸುತ್ತಿದೆ. ೧೯೯೦ರ ಹೊತ್ತಿಗೆ ಆಫ್ರಿಕಾ ಮತ್ತು ಚೀನಾದ ವ್ಯಾಪಾರವು ಶೇ.೭೦೦ರಷ್ಟು ಬೆಳವಣಿಗೆ ಹೊಂದಿದೆ. ಅಂಗೋಲಾ, ಸೂಡಾನ್ ಮತ್ತು ಇನ್ನಿತರ ದೇಶಗಳಿಂದ ಚೀನಾ ಪೆಟ್ರೋಲಿಯಂನ್ನು ಆಮದು ಮಾಡಿಕೊಳ್ಳುತ್ತಿದೆ. ಅಮೆರಿಕ ಮತ್ತು ಫ್ರಾನ್ಸ್‌ನ ನಂತರ ಚೀನಾ ಅತಿ ದೊಡ್ಡ ವ್ಯಾಪಾರ ಮೈತ್ರಿಯನ್ನು ಏರ್ಪಡಿಸಿದೆ. ಚೀನಾದ ಮೈತ್ರಿಯು ಬರೆ ವ್ಯಾಪಾರೋದ್ದೇಶಕ್ಕೆ

ಮಾತ್ರವೇ ಸೀಮಿತವಾಗಿರದೆ, ಆಫ್ರಿಕಾದಲ್ಲಿ ರೈಲು ಮಾರ್ಗ, ಶಾಲೆಗಳು, ರಸ್ತೆಗಳು, ಆಸ್ಪತ್ರೆಗಳು, ಸೇತುವೆಗಳು ಮತ್ತು ಕಚೇರಿ ನಿರ್ಮಾಣಗಳಂತಹ ಅಭಿವೃದ್ಧಿ ಕಾರ್ಯಗಳಿಗೂ ಸಹ ನೆರವು ನೀಡುತ್ತಿದೆ. ಆಫ್ರಿಕಾ ಪಡೆದಿದ್ದ ೧೦ ಬಿಲಿಯನ್ ಡಾಲರ್ ಸಾಲವನ್ನು ಚೀನಾ ಇತ್ತೀಚೆಗಷ್ಟೇ ಮನ್ನಾ ಮಾಡಿತು. ಆಫ್ರಿಕಾ ದೇಶಗಳಲ್ಲಿ ಶಾಂತಿಪಾಲನೆಗಾಗಿ ವಿಶ್ವಸಂಸ್ಥೆಯ ನೇತೃತ್ವದಲ್ಲಿ ಸುಮಾರು ೧,೫೦೦ ಸೈನಿಕರನ್ನು ಅದು ಕಳುಹಿಸಿದೆ. ಆರೋಗ್ಯ ಸೇವೆ ಒದಗಿಸಲು ತನ್ನ ಡಾಕ್ಟರುಗಳನ್ನು ಆಫ್ರಿಕಾಕ್ಕೆ ಕಳುಹಿಸಿದೆ. ಆಫ್ರಿಕಾದ ಕಾರ್ಮಿಕರು ಮತ್ತು ವಿದ್ಯಾರ್ಥಿಗಳು ಚೀನಾದ ವಿಶ್ವವಿದ್ಯಾನಿಲಯ ಮತ್ತು ತರಬೇತಿ ಕೇಂದ್ರಗಳಲ್ಲಿ ತರಬೇತು ಪಡೆಯುತ್ತಿದ್ದಾರೆ.

ಇನ್ನೊಂದೆಡೆ, ನಿರಂತರವಾಗಿ ಆಫ್ರಿಕನ್ ರಾಷ್ಟ್ರಗಳಿಗೆ ಅಗಾಧ ಪ್ರಮಾಣದ ಸಾಲ ನೀಡುತ್ತಾ ಐಎಂಎಫ್ ಮತ್ತು ವಿಶ್ವಬ್ಯಾಂಕ್ ಮೂಲಕ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಅಪಾರ ಹೊರೆಯನ್ನು ಹೇರಿದವು. ಉದಾಹರಣೆಗೆ, ೧೯೯೦ರಲ್ಲಿ ೬೦ ಬಿಲಿಯನ್ ಡಾಲರ್ ಸಾಲ ಪಡೆದದ್ದಕ್ಕೆ ೧೯೯೭ರ ಹೊತ್ತಿಗೆ ಆಫ್ರಿಕಾದ ರಾಷ್ಟ್ರಗಳು ೧೬೨ ಬಿಲಿಯನ್ ಡಾಲರ್ ಬಡ್ಡಿ ಸಮೇತ ಸಾಲ ಮರುಪಾವತಿ ಮಾಡಿದ್ದವು. ಕುತ್ತಿಗೆಯ ಸುತ್ತ ಉಸಿರುಗಟ್ಟುವಂತೆ ಬಿಗಿದಿದ್ದ ಸಾಲವನ್ನು ಮರುಪಾವತಿ ಮಾಡಲಾಗದೆ ಮಿಸುಕಾಡುತ್ತಿದ್ದವು. ಇದರಿಂದಾಗಿ ವಿಶ್ವಸಂಸ್ಥೆಯ ವರದಿಯಂತೆ, ಸರಾಸರಿ ಆಫ್ರಿಕಾದ ಕುಟುಂಬಕ್ಕೆ ೨೫ ವರ್ಷಗಳ ಹಿಂದೆ ಸಿಗುತ್ತಿದ್ದ ಆಹಾರಕ್ಕಿಂತ ಶೇಕಡಾ ೨೦ರಷ್ಟು ಕಡಿಮೆ ಆಹಾರ ದೊರಕುತ್ತಿದೆ. ಅಮೆರಿಕದ ಪ್ರಜೆಯೊಬ್ಬ ಗಳಿಸುವ ಪ್ರತಿ ಡಾಲರ್‌ಗೆ ಆಫ್ರಿಕಾದ ಪ್ರಜೆ ಕೇವಲ ೦.೦೬ ಡಾಲರ್ ಗಳಿಸುತ್ತಿದ್ದಾನಷ್ಟೆ. ೧೯೯೮ರಲ್ಲಿ ಆಫ್ರಿಕಾವು ಶೇ.೧೧ರಷ್ಟು ವಿಶ್ವ ಜನಸಂಖ್ಯೆಯನ್ನು ಹೊಂದಿದ್ದರೆ, ಕೇವಲ ಶೇ.೧ರಷ್ಟು ಕೈಗಾರಿಕಾ ಉತ್ಪಾದನೆಯ ಪಾಲನ್ನು ಹೊಂದಿತ್ತು. ಇಸ್ರೇಲ್ ಮತ್ತು ಬೆಲ್ಜಿಯಂ ದೇಶಗಳು ಅಗಾಧ ಮೊತ್ತ ಶಸ್ತ್ರಾಸ್ತ್ರಗಳನ್ನು ಉಗಾಂಡಕ್ಕೆ ನೀಡಿ ಬದಲಿಗೆ ಅಲ್ಲಿನ ಬೆಲೆಬಾಳುವ ವಜ್ರಗಳನ್ನು ಕೊಳ್ಳೆ ಹೊಡೆಯುತ್ತಿವೆ. ಆಫ್ರಿಕಾ ರಾಷ್ಟ್ರಗಳಲ್ಲಿ ಮಕ್ಕಳ ಅಪೌಷ್ಟಿಕತೆಯ ಪ್ರಮಾಣವು ಶೇ.೨೫ರಿಂದ ೫೦ರವರೆಗೂ ಇದೆ. ಹೆಚ್.ಐ.ವಿ.ರೋಗದ ಸೋಂಕಿಗೆ ತುತ್ತಾದವರ ಸಂಖ್ಯೆಯು ವಿಶೇಷವಾಗಿ ಪೂರ್ವ, ಮಧ್ಯ ಮತ್ತು ದಕ್ಷಿಣ ಆಫ್ರಿಕಾದಲ್ಲಿ ಹೆಚ್ಚಿನ ಪ್ರಮಾಣದಲ್ಲಿದೆ. ಎಬೋಲಾದಂತಹ ಅಪಾಯಕಾರಿ ವೈರಸ್ ರೋಗಗಳನ್ನು ನಿಯಂತ್ರಿಸಲಾಗದೆ ಸಾವಿರಾರು ಆಫ್ರಿಕನ್ನರು ಮರಣವಾದರು. ಪ್ರತಿ ವರ್ಷ ಸುಮಾರು ೭೦,೦೦೦ ಪರಿಣತ ಕೆಲಸಗಾರರು ಆಫ್ರಿಕಾದಿಂದ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ವಲಸೆ ಹೋಗುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಜಾಂಬಿಯಾವು ತನ್ನ ೧೪೦೦ ಡಾಕ್ಟರುಗಳಲ್ಲಿ ಸುಮಾರು ೪೦೦ ಮಂದಿಯನ್ನು ಪ್ರತಿಭಾ ಪಲಾಯನದಿಂದಾಗಿ ಕಳೆದುಕೊಂಡಿದೆ.

**ಪರಾಮರ್ಶನ ಗ್ರಂಥಗಳು**

೧. ಬೆಸಿಲ್ ಡೇವಿಡ್ಸನ್, ೧೯೭೩. **ವಿಚ್ ವೇ ಆಫ್ರಿಕಾ?** ಮೂರನೇ ಮುದ್ರಣ, ಲಂಡನ್: ಪೆಂಗ್ವಿನ್ ಬುಕ್ಸ್.

೨. ಜಾಕ್ ವುಡ್ಸ್, ೧೯೭೭. **ನ್ಯೂ ಥಿಯರೀಸ್ ಆಫ್ ರೆವಲ್ಯೂಷನ್,** ನ್ಯೂಯಾರ್ಕ್ : ಇಂಟರ್ ನ್ಯಾಷನಲ್ ಪಬ್ಲಿಷರ್ಸ್.

೭. ಪ್ಯಾಟ್ರಿಕ್ ಬಾಂಡ್, ಡಾರ್ಲಿನ್ ಮಿಲ್ಲರ್ ಮತ್ತು ಗ್ರೆಗ್ ರಾಯಟರ್ಸ್, ೨೦೦೧. **ದಿ ಸೌತ್ ಆಫ್ರಿಕನ್ ವರ್ಕಿಂಗ್ ಕ್ಲಾಸ್: ಪ್ರೊಡಕ್ಷನ್, ರಿಪ್ರೊಡಕ್ಷನ್ ಅಂಡ್ ಪಾಲಿಟಿಕ್ಸ್,** ಸೋಷಿಯಲಿಸ್ಟ್ ರಿಜಿಸ್ಟರ್.

೯

# ವಸಾಹತು ಆಫ್ರಿಕಾ ಮತ್ತು ವಸಾಹತೋತ್ತರ ಆಫ್ರಿಕಾ*

**ನಟರಾಜ್ ಹುಳಿಯಾರ್**

**ಭಾಗ ೧**

ನೆಲೆಸುವವನ ಪಾದಗಳು ಎಂದೂ ಕಾಣುವುದಿಲ್ಲ.

**ಫ್ರಾಂಜ್ ಫ್ಯಾನನ್**

..... ಅಭಿವೃದ್ಧಿ, ಬೆಳವಣಿಗೆ, ಚರಿತ್ರೆ, ವಿಜ್ಞಾನ, ತಂತ್ರಜ್ಞಾನ ಮುಂತಾದ ಪರಿಕಲ್ಪನೆಗಳು ಪ್ರಭುತ್ವದ ಹೊಸ ವಿವೇಚನಾ ಕ್ರಮಗಳು ಮಾತ್ರವೇ ಅಲ್ಲ, ಹಿಂಸೆಯ ಹೊಸ ರೂಪಗಳ ನಿಗೂಢೀಕರಣಗಳೂ ಆಗಿವೆ.

**ಆಶೀಶ್‌ನಂದಿ**

..... ಅದು ಆಗುವುದು ಹೀಗೆಯೇ. ನಮ್ಮ ಕಣ್ಣು ಏನನ್ನೋ ನೋಡುತ್ತದೆ. ನಾವು ಕಲ್ಲೆತ್ತಿಕೊಂಡು ಅದಕ್ಕೆ ಗುರಿ ಇಡುತ್ತೇವೆ. ಆದರೆ ನಮ್ಮ ಕಣ್ಣು ಗುರಿ ತಲುಪಿದ ಹಾಗೆ ಆ ಕಲ್ಲು ಗುರಿ ತಲುಪುವುದು ಕಡಿಮೆ.

**ಆಫ್ರಿಕಾದ ಒಂದು ಗಾದೆ**

## ವಸಾಹತುವಾದದ ಸ್ವರೂಪ

ಏಕಕಾಲಕ್ಕೆ ಒಂದು ಪರಕೀಯ ಸಮಾಜದ ರಾಜಕೀಯ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಲೋಕಗಳನ್ನೂ ಒಂದು ಜನಾಂಗದ ಪ್ರಜ್ಞೆಯನ್ನೂ ಆಕ್ರಮಿಸಿಕೊಳ್ಳಲು ಪ್ರಯತ್ನಿಸುವ ಆಧುನಿಕ ವಸಾಹತುವಾದ ಆಧುನಿಕ ಪಶ್ಚಿಮ ರೂಪಿಸಿದ ಒಂದು ವಿಶಿಷ್ಟ ಆಕ್ರಮಣವಾದಿ ಸಿದ್ಧಾಂತ. ಯುರೋಪಿಯನ್ ಪುನರುಜ್ಜೀವನ ಘಟ್ಟ ಹಾಗೂ ಬಂಡವಾಳ ಶಾಹಿ ಯುಗದ ಆರಂಭದಲ್ಲಿ ರೂಪುಗೊಂಡ ವಸಾಹತುವಾದ ಮೂಲತಃ ಒಂದು ಯಜಮಾನಿಕೆಯ ವ್ಯವಸ್ಥೆ

* ಆಫ್ರಿಕನ್ ಸಮಾಜಗಳ ವಸಾಹತೀಕರಣ ಹಾಗೂ ನಿರ್ವಸಾಹತೀಕರಣ ಘಟ್ಟಗಳನ್ನು ನಿರ್ವಸಾಹತೀ ಕರಣ ಸಿದ್ಧಾಂತಗಳು ಹಾಗೂ ಪ್ರಾತಿನಿಧಿಕ ಆಫ್ರಿಕನ್ ಕಾದಂಬರಿಗಳ ಮೂಲಕ ಗ್ರಹಿಸುವ ಪ್ರಯತ್ನ ಇದು.

ಹಾಗೂ ಒಂದು ನೋಟಕ್ರಮ. ಇದು ನಿರ್ದಿಷ್ಟ ಸಂಕಥನಗಳು, ಪರಿಭಾಷೆ, ಧರ್ಮ, ಸಂಸ್ಕೃತಿ, ಯಜಮಾನಿಕೆ, ವ್ಯಾಪಾರ, ಶಿಕ್ಷಣ, ಆಧುನಿಕ ವಿಜ್ಞಾನ, ಅದೃಶ್ಯ ನಿಯಂತ್ರಣ ಇವೆಲ್ಲವೂ ಕೂಡಿ ರೂಪುಗೊಂಡ ವ್ಯವಸ್ಥೆ. ಆದ್ದರಿಂದಲೇ ಚರಿತ್ರೆಯುದ್ದಕ್ಕೂ ನಡೆದಿರುವ ಅನ್ಯ ದೇಶಗಳ ಆಕ್ರಮಣಕ್ಕೂ, ಒಂದು ನಾಡಿನ ಎಲ್ಲ ಅಂಗಗಳನ್ನೂ ವ್ಯಾಪಿಸುವ ಆಧುನಿಕ ವಸಾಹತೀಕರಣಕ್ಕೂ ವ್ಯತ್ಯಾಸವಿದೆ. ಹೀಗಾಗಿ, ವಸಾಹತುಗಳು ಸ್ವತಂತ್ರವಾದ ಮಾತ್ರಕ್ಕೆ ವಸಾಹತುಕಾರ ಹಾಗೂ ವಸಾಹತೀಕರಣಗೊಂಡವನ ಪ್ರಜ್ಞೆ ಅಥವಾ ಮನಸ್ಸನ್ನು ನಿಯಂತ್ರಿಸುವ ವಸಾಹತುವಾದ ಕೊನೆಗೊಳ್ಳುವುದಿಲ್ಲ. ಕಾರಣ, ಸಾಮ್ರಾಜ್ಯವಾದ ಹಾಗೂ ವಸಾಹತುವಾದಗಳೆರಡೂ ಕೇವಲ ನಿರ್ದಿಷ್ಟ ಪ್ರಾಂತಗಳನ್ನು ರಾಜಕೀಯವಾಗಿ ನಿಯಂತ್ರಿಸುವ ಸಾಧನಗಳಷ್ಟೇ ಅಲ್ಲ. ಆದ್ದರಿಂದ ವಸಾಹತೀಕರಣಕ್ಕೊಳಗಾದ ಸಂಸ್ಕೃತಿಗಳಲ್ಲಂತೂ ಅಧಿಕೃತ ನಿರ್ವಸಾಹತೀಕರಣ ಪ್ರಕ್ರಿಯೆ ಆರಂಭವಾಗುವುದೇ ವಸಾಹತುಕಾರನ ನಿರ್ಗಮನದ ನಂತರ. ವಸಾಹತೋತ್ತರದಲ್ಲೂ ವಸಾಹತುವಾದೀ ಮಾದರಿಗಳು ನಿರಂತರವಾಗಿ ಮುಂದುವರಿಯುತ್ತಲೇ ಇರುತ್ತವೆ. ಆಧುನಿಕ ಅಭಿವೃದ್ಧಿ ಪಥಗಳಲ್ಲಿ, ಆಧುನಿಕ ಮೌಲ್ಯಗಳಲ್ಲಿ, ಆಧುನಿಕ ಸಂಸ್ಥೆಗಳಲ್ಲಿ, ಶಿಥಿಲಗೊಂಡ ಪಾರಂಪರಿಕ ಸಂಸ್ಥೆಗಳಲ್ಲಿ, ಸಂಸ್ಕೃತಿಯ ವ್ಯಾಖ್ಯಾನಗಳಲ್ಲಿ, ಅಲ್ಲಿ ಹುಟ್ಟುವ ಕಲಾಕೃತಿಗಳಲ್ಲಿ ಹಾಗೂ ವಸಾಹತುವಾದೀ ಸನ್ನಿವೇಶದಲ್ಲಿ ಹುಟ್ಟಿದ ಆಧುನಿಕತೆ ಹಾಗೂ ಪರಂಪರೆಗಳ ನಿರಂತರ ಮುಖಾಮುಖಿಗಳಲ್ಲಿ ವಸಾಹತುವಾದೀ ರಚನೆಗಳು ಹಾಗೂ ನೋಟಕ್ರಮಗಳು ತಮ್ಮ ಇರವನ್ನು ಪ್ರಕಟಿಸುತ್ತಲೇ ಇರುತ್ತವೆ.

ಅಲ್ಲದೆ, ವಸಾಹತುಶಾಹಿಯ ದೈಹಿಕ ಪ್ರವೇಶವನ್ನೇ ಎದುರಿಸದ ಸಂಸ್ಕೃತಿಗಳನ್ನೂ ಪಶ್ಚಿಮದ ಯಜಮಾನೀ ಮಾದರಿಗಳು ಹಲವು ಬಗೆಗಳಲ್ಲಿ ಆಕ್ರಮಿಸುತ್ತಿರುತ್ತವೆ. ಓರಿಯೆಂಟಲ್ ಪರಿಕಲ್ಪನೆಯ ಸೃಷ್ಟಿ ಹಾಗೂ ಓರಿಯೆಂಟಲ್‌ವಾದಗಳೆರಡೂ ಪಶ್ಚಿಮ ರೂಪಿಸಿಕೊಂಡ ನಿಯಂತ್ರಣ ಹಾಗೂ ಯಜಮಾನಿಕೆಗಳ ಸಾಧನಗಳಾಗಿ ನಿರಂತರವಾಗಿ ಮುಂದುವರಿಯುವುದನ್ನು ಓರಿಯೆಂಟಲ್‌ವಾದಿ ರಾಜಕಾರಣದ ಸೂಕ್ಷ್ಮ ರೂಪಗಳನ್ನು ಶೋಧಿಸುವ ಎಡ್ವರ್ಡ್ ಸೈದನ ಅಧ್ಯಯನ ತೋರಿಸುತ್ತದೆ. ಸೈದನ ಪ್ರಕಾರ ಓರಿಯೆಂಟ್ (ಅಥವಾ 'ಪ್ರಾಚೀನ' ಅಥವಾ 'ಹಳೆಯ ಜಗತ್ತು') ಎಂಬ ಸೃಷ್ಟಿಯೇ ಯುರೋಪಿನ ಆಲೋಚನಾ ಕ್ರಮದ ಫಲ. ಯುರೋಪು ತಾನು 'ಓರಿಯೆಂಟ್' ಎಂದು ಕರೆದ ಜಗತ್ತಿನ ಬಗ್ಗೆ ವ್ಯಾಖ್ಯಾನ ಮಾಡುವುದು, ಆ ವ್ಯಾಖ್ಯಾನಗಳನ್ನು ಸಮರ್ಥಿಸುವುದು, ಆ ಜಗತ್ತನ್ನು ವರ್ಣಿಸುವುದು, ಅದನ್ನು ಕುರಿತು ಬೋಧಿಸುವುದು ಹಾಗೂ ಅಲ್ಲಿ ನೆಲೆಸುವುದು ಮತ್ತು ಆಳುವುದು... ಈ ಎಲ್ಲ ಅಂಶಗಳು ಸೇರಿ ರೂಪುಗೊಂಡ ಒಂದು ನೋಟಕ್ರಮ ಅಥವಾ ಸಂಸ್ಥೆಯೇ ಓರಿಯೆಂಟಲ್‌ವಾದ. ಅಂದರೆ, ತನಗಿಂತ ಭಿನ್ನವಾದ ಇನ್ನೊಂದು ಜಗತ್ತನ್ನು ನೋಡುವ ಕ್ರಮದಲ್ಲಿಯೇ ಆ ಜಗತ್ತನ್ನು ತನಗೆ ಸರಿ ಕಂಡಂತೆ ನಿರ್ಮಿಸಿಕೊಳ್ಳುವ ಹಾಗೂ ಅದನ್ನು ಆಳುವ ಕ್ರಮವೂ ಇರುತ್ತದೆ. ಯುರೋಪಿನ ಹಲವು ತಲೆಮಾರುಗಳ ಬುದ್ಧಿಜೀವಿಗಳು, ಕಲಾವಿದರು, ವ್ಯಾಖ್ಯಾನಕಾರರು, ಲೇಖಕರು ಹಾಗೂ ರಾಜಕಾರಣಿಗಳು ಕೆಲವು

ನಿರ್ದಿಷ್ಟ ಬಗೆಯ ಅನಿಸಿಕೆಗಳನ್ನು ಹಾಗೂ ಸಿದ್ಧಮಾದರಿಗಳನ್ನು 'ಸತ್ಯ'ವೆಂದು ಪ್ರತಿಪಾದಿಸಿದ ರೀತಿಯಿಂದಾಗಿ ಯುರೋಪಿಗೆ 'ಪ್ರಾಚೀನ' ಎಂದು ತಾನು ಕರೆದ ಜಗತ್ತಿನ ಮೇಲೆ ಯಜಮಾನಿಕೆ ಸುಲಭವಾಯಿತು ಎಂಬುದು ಸೈದನ ವಾದ. ಇದೇ ವಾದದ ಆಧಾರದ ಮೇಲೆ, ಭಾರತದಲ್ಲಿ ಇಂಗ್ಲಿಷ್ ಸರಕಾರದ ಬೆಂಬಲದಿಂದ ನಡೆದ ಓರಿಯೆಂಟಲ್‌ವಾದೀ ಸಂಶೋಧನೆಯೇ ಆಂಗ್ಲವಾದಿಗಳಿಗೆ ಭಾರತೀಯ ಸಂಸ್ಕೃತಿಯ ಆಕ್ರಮಣಕ್ಕೆ ಸಾಧನವಾದದ್ದನ್ನು ಗೌರಿ ವಿಶ್ವನಾಥನ್ ತಮ್ಮ 'ಮಾಸ್ಕ್ಸ್ ಆಫ್ ಕಾಂಕ್ವೆಸ್ಟ್' (ಆಕ್ರಮಣದ ಮುಖವಾಡಗಳು) ಪುಸ್ತಕದಲ್ಲಿ ವಿಸ್ತೃತವಾಗಿ ಚರ್ಚಿಸುತ್ತಾರೆ.

ಈ ಹಿನ್ನೆಲೆಯಲ್ಲಿ, ಒಮ್ಮೆ ವಸಾಹತುವಾಗಿದ್ದ ಆಫ್ರಿಕನ್ ಸಮಾಜದಲ್ಲಿ ಸೃಷ್ಟಿಯಾಗುವ ಸಾಹಿತ್ಯಕೃತಿಗಳ ಅಧ್ಯಯನದಲ್ಲಿ ವಸಾಹತುವಾದದ ಪರಿಣಾಮಗಳನ್ನು ವಿಶ್ಲೇಷಿಸುವ ನಿರ್ವಸಾಹತೀಕರಣ ಸಿದ್ಧಾಂತಗಳ ಚರ್ಚೆ ಕೇಂದ್ರಸ್ಥಾನದಲ್ಲಿರಬಲ್ಲದು. ವಸಾಹತೋತ್ತರ ಆಫ್ರಿಕಾ ಹಾಗೂ ಭಾರತದಲ್ಲಿ ಮತ್ತೆ ಮತ್ತೆ ಚರ್ಚಿತವಾಗುತ್ತಿರುವ ಫ್ರಾಂಜ್ ಫ್ಯಾನನ್, ಸಾರ್ತ್ರ್, ಆಲ್ಬರ್ಟ್ ಮೆಮ್ಮಿ, ಮನೋನಿ, ಗಾಂಧಿ, ಅಶೀಶ್ ನಂದಿ, ನುಗುಗಿ, ಎಡ್ವರ್ಡ್ ಸೈದ್, ಅಲಿ ಮುಝುರಾಯ್ ಮೊದಲಾದವರ ವಸಾಹತುವಾದ ಕುರಿತ ಗ್ರಹಿಕೆಗಳು ಆಫ್ರಿಕನ್ ಸಮಾಜಗಳ ಸಾಹಿತ್ಯ ಕೃತಿಗಳ ಗ್ರಹಿಕೆಗೂ ಬಹುಮುಖ್ಯ ತಾತ್ವಿಕ ನೆಲೆಗಳನ್ನು ಒದಗಿಸಬಲ್ಲವು. ಈ ಅಧ್ಯಾಯ ಅಂಥ ವಿಸ್ತೃತ ತಾತ್ತ್ವಿಕ ನೆಲೆಯನ್ನು ಗ್ರಹಿಸುವ ಒಂದು ಪ್ರಯತ್ನ.

'ವಸಾಹತುವಾದೀ ಹಿಂಸೆ ಉಳಿದೆಲ್ಲ ಬಗೆಯ ಸಾಂಸ್ಥಿಕ ಹಿಂಸೆಗಿಂತ ಭೀಕರವಾದದ್ದು' ಇದು ಅಶೀಶ್‌ನಂದಿಯವರ ನಿಲುವು. ಈ ನಿಲುವಿನಿಂದ ವಸಾಹತುವಾದವನ್ನು ಪರಿಶೀಲಿಸಿದರೆ ಅದು ಸೃಷ್ಟಿಸುವ ಹಿಂಸೆಯ ಹಲವು ಸ್ತರಗಳು ಕಾಣತೊಡಗುತ್ತವೆ: ವಸಾಹತುವಾದ ನಾಗರೀಕರಣದ ಹೆಸರಿನಲ್ಲಿ ದೇಶೀ ನಾಗರಿಕತೆಗಳನ್ನು ನಿರ್ನಾಮ ಮಾಡಲೆತ್ನಿಸುತ್ತಿರುತ್ತದೆ. ಧರ್ಮ ಪ್ರಸಾರದ ಹೆಸರಿನಲ್ಲಿ ಅದು ದೇಶೀ ಧರ್ಮಗಳನ್ನು ಅಧೀನಗೊಳಿಸಿಕೊಳ್ಳಲೆತ್ನಿಸುತ್ತಿರುತ್ತದೆ. ಯಂತ್ರಮುಖೀ ನಾಗರಿಕತೆ, ಹೊಸ ಪ್ರಗತಿ ತತ್ತ್ವ ಹಾಗೂ ಆಧುನಿಕ ಬಂಡವಾಳಶಾಹಿ ನೆಲೆಗಳಲ್ಲಿ ನಿಂತು ದೇಶೀ ಸಾಂಪ್ರದಾಯಿಕ ಸಮಾಜಗಳನ್ನು ಮುಖಾಮುಖಿಯಾಗುತ್ತದೆ. ಈ ಮುಖಾಮುಖಿಯಲ್ಲಿ, ಎರಡು ಸಂಸ್ಕೃತಿಗಳ ಸಹಜ ಸಂಪರ್ಕದಿಂದ ಉಂಟಾಗುವ ಪರಿಣಾಮಗಳು ಹಾಗೂ ಒಂದು ಸಂಸ್ಕೃತಿ ಇನ್ನೊಂದು ಸಂಸ್ಕೃತಿಯಿಂದ ತನಗೆ ಬೇಕಾದದ್ದನ್ನು ಪಡೆಯುವ ಕ್ರಿಯೆಗಳೂ ಇರುತ್ತವೆ. ಆದರೆ ಇಲ್ಲಿ ಹೇರಿಕೆಯ ಕ್ರಿಯೆಯೇ ಪ್ರಧಾನವಾಗಿರುವುದನ್ನು ಮರೆಯಬಾರದು. ತನ್ನ ಸಾಂಸ್ಕೃತಿಕ ಹಿರಿಮೆಯ ಪ್ರತಿಷ್ಠಾಪನೆಯ ಮೂಲಕ ವಸಾಹತುವಾದ ದೇಶೀ, ಜಾನಪದೀಯ ಸಾಂಸ್ಕೃತಿಕ ಮಾದರಿಗಳನ್ನು ಕನಿಷ್ಠವಾಗಿಸಲೆತ್ನಿಸುತ್ತಿರುತ್ತದೆ. ದೇಶೀ ಮಾನವರನ್ನು ಅರೆಮಾನವರನ್ನಾಗಿ ಸುತ್ತಿರುತ್ತದೆ; ವಸಾಹತುಕಾರ ಹಾಗೂ ವಸಾಹತೀಕರಣಗೊಂಡವರಿಬ್ಬರನ್ನೂ ಅದು ನಿರ್ಮಾನವೀಕರಣಗೊಳಿಸುತ್ತಿರುತ್ತದೆ. ವಸಾಹತುವಾದೀ ದಮನದ ಮಾದರಿಗಳು ದೇಶೀ ಸಮಾಜಗಳಲ್ಲಿ

ಹೊಸ ಬಗೆಯ ದಮನದ ಮಾದರಿಗಳನ್ನು- ಸ್ತ್ರೀಯರು, ಅಲ್ಪಸಂಖ್ಯಾತರು, ಕೆಳಜಾತಿಗಳ ದಮನಗಳ ಹೊಸ ರೂಪಗಳೂ ಸೇರಿದಂತೆ-ಸೃಷ್ಟಿಸುತ್ತಿರುತ್ತವೆ. ವಸಾಹತುವಾದದ ಚರಿತ್ರೆಯುದ್ದಕ್ಕೂ 'ಕಾಲೊನೈಸರ್' (ವಸಾಹತುಕಾರ) ಎಂಬ ಪದಕ್ಕೆ 'He'(ಅವನು) ಎಂಬ ಸರ್ವನಾಮವನ್ನೇ ಬಳಸಿರುವುದು ಇಡೀ ವಸಾಹತೀಕರಣದ ಚಟುವಟಿಕೆಯಲ್ಲಿ ಗಂಡಿನ ಮೇಲುಗೈಯನ್ನೇ ಸೂಚಿಸುತ್ತದೆಂದು ಸ್ತ್ರೀವಾದಿಗಳು ಹೇಳುತ್ತಾರೆ.

ಆದರೆ ವಸಾಹತುವಾದವನ್ನು ದಮನದ ಸಾಧನವನ್ನಾಗಿ ಮಾತ್ರ ನೋಡುವವರು ಅದು ಸಾಂಪ್ರದಾಯಿಕ ಸಮಾಜದ ಹಿಂಸೆಗೊಳಗಾದ ಅನೇಕ ವರ್ಗಗಳಿಗೆ ಬಿಡುಗಡೆಯ ಮಾರ್ಗವನ್ನು ತೆರೆಯುವುದನ್ನು ಮರೆಯುತ್ತಾರೆ. ಅಲ್ಲದೆ, ತನ್ನೆಲ್ಲ ಮಾದರಿಗಳನ್ನು ದೇಶೀ ಸಂಸ್ಕೃತಿಗಳು ಸಂಪೂರ್ಣ ವಿಧೇಯತೆಯಿಂದ ಒಪ್ಪಿಕೊಳ್ಳುವಂತೆ ವಸಾಹತುವಾದ ಮಾಡಲಾರದು. ತನ್ನ ಮಾದರಿಗಳಿಗೆ ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ಸಮರ್ಥನೆಗಳನ್ನು ವಸಾಹತುವಾದ ಸಮರ್ಥವಾಗಿ ಸೃಷ್ಟಿಸಿಕೊಳ್ಳುತ್ತಿರುತ್ತಾದರೂ, ದೇಶೀ ಸಾಂಪ್ರದಾಯಿಕ ದಮನದ ಬೇರುಗಳಿಗೆ ಅದು ನಿರ್ಣಾಯಕ ಹೊಡೆತ ಕೊಡುತ್ತದೆ. ಭಾರತದಂಥ ಸಮಾಜಗಳಲ್ಲಿ ಜಾತಿಪದ್ಧತಿಯ ಖಾಯಂ ಅಸಮಾನತೆಯನ್ನು ಕದಲಿಸತೊಡಗುತ್ತದೆ. ವಸಾಹತುವಾದದ ಜೊತೆಗೇ ಬಂದ ಆಧುನಿಕತೆ ಅಸ್ಪೃಶ್ಯರಿಗೆ, ಸ್ತ್ರೀಯರಿಗೆ ವಿಮೋಚನೆಯ ಹಾದಿಯಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡೇ ವಸಾಹತೀಕರಣದ ಸ್ವರೂಪಗಳನ್ನು ಚರ್ಚಿಸಬೇಕು.

## ಪಶ್ಚಿಮ ರೂಪಿಸಿದ ವಸಾಹತುವಾದೀ ಸಂಕಥನಗಳು

ಸಾಮ್ರಾಜ್ಯವಾದದಂತೆ ವಸಾಹತುವಾದದಲ್ಲೂ ಆಕ್ರಮಣದ ಹಂಬಲವೇ ಪ್ರಧಾನವಾಗಿದ್ದರೂ ವಸಾಹತುವಾದಕ್ಕೆ ಸಮಸ್ತ ನಾಗರಿಕತೆಗಳ ಹಾಗೂ ಜನಾಂಗಗಳ ಏಕತೆಯ ಕನಸೂ ಇತ್ತು. ಈ ಹಿನ್ನೆಲೆಯಲ್ಲಿ ವಸಾಹತುವಾದೀ ಆಕ್ರಮಣಕ್ಕೆ ಹಲವು ಬಗೆಯ ನ್ಯಾಯಬದ್ಧತೆಗಳನ್ನೂ, ಸಮರ್ಥನೆಗಳನ್ನೂ ಪಶ್ಚಿಮ ಹುಟ್ಟುಹಾಕಿದೆ. ಅವುಗಳ ಸಂಗ್ರಹ ರೂಪ ಇಲ್ಲಿದೆ:

೧ 'ಬಿಳಿಯ ಮನುಷ್ಯನ ಹೊರೆ'('Whiteman's burden') ಸಿದ್ಧಾಂತದ ಪ್ರಕಾರ 'ಹಿಂದುಳಿದ' ಜನಾಂಗಗಳು ಹಾಗೂ 'ಹಿಂದುಳಿದ' ದೇಶಗಳನ್ನು 'ನಾಗರಿಕ'ಗೊಳಿಸ ಬೇಕಾದದ್ದು ಬಿಳಿಯರ ಹೊಣೆ. ಫ್ರೆಂಚ್ ವಸಾಹತುವಾದಿಗಳು ತಾವು ಹಾಗೂ ತಮ್ಮ ನೆರೆಹೊರೆಯ ದೇಶಗಳು ರೋಮನ್ ನಾಗರಿಕತೆಯಿಂದ ಪ್ರೇರಣೆಗಳನ್ನು ಪಡೆದಂತೆ, ಇತರ ದೇಶಗಳಿಗೆ ನಾಗರಿಕತೆಯನ್ನು ಪ್ರಸಾರ ಮಾಡುವುದು ತಮ್ಮ ಹೊಣೆಯೆಂದು ನಂಬಿದ್ದರು. ಆಫ್ರಿಕಾದ ಸಂದರ್ಭದಲ್ಲಿ 'ಅನಾಗರಿಕ'ನನ್ನು('ಸ್ಯಾವೇಜ'ನ್ನು) ನಾಗರಿಕರಣ ಗೊಳಿಸುವ ಹೊಣೆ ಇದ್ದಂತೆ, ಭಾರತದ ಸಂದರ್ಭದಲ್ಲಿ 'ಅರ್ಧ ಮಗು- ಇನ್ನರ್ಧ ಅನಾಗರಿಕ'ನನ್ನು ಪ್ರಬುದ್ಧಗೊಳಿಸುವ ಹೊಣೆ ತಮ್ಮದೆಂದು ಬ್ರಿಟಿಷ್ ವಸಾಹತುವಾದಿಗಳು ನಂಬಿದ್ದರು. ಶ್ರೇಷ್ಠ ಇಂಗ್ಲಿಷ್ ಕಾದಂಬರಿಕಾರರಲ್ಲೊಬ್ಬನಾದ ಜೋಸೆಫ್ ಕಾನ್ರಾಡ್ ತನ್ನ ಕಾದಂಬರಿಗಳಲ್ಲಿ ಬ್ರಿಟಿಷ್ ವಸಾಹತುವಾದದ ಹಿನ್ನೆಲೆಯಲ್ಲಿ ಒಂದು

ಆದರ್ಶವಿತ್ತು ಎಂದು ಪ್ರತಿಪಾದಿಸಿದ. ಆರಂಭ ಘಟ್ಟದ 'ಸಾಹಸಿ' ವಸಾಹತುವಾದಿಗಳು ಕೂಡ ಹೀಗೆಯೇ ಯೋಚಿಸಿದ ಅನೇಕ ಸಂದರ್ಭಗಳಿವೆ.

೨. ಕಾರ್ಲ್‌ಮಾರ್ಕ್ಸ್ ಭಾರತದ ವಸಾಹತೀಕರಣವನ್ನು ಸಮರ್ಥಿಸುತ್ತಾ, ಇಂಗ್ಲೆಂಡನ್ನು 'ಚರಿತ್ರೆಯ ಅಪ್ರಜ್ಞಾಪೂರ್ವಕ ಸಾಧನ' ಎನ್ನುತ್ತಾನೆ. ಮಾರ್ಕ್ಸ್‌ನ ಪ್ರಕಾರ, ಇಂಗ್ಲೆಂಡ್ ಸಾಧಿಸಬೇಕಾದ ಎರಡು ಗುರಿಗಳಿದ್ದವು: ಒಂದು, ಹಳೆಯ ಏಷ್ಯಾಟಿಕ್ ಸಮಾಜದ ನಿರ್ನಾಮ. ಎರಡು, ಏಷ್ಯಾದಲ್ಲಿ ಪಾಶ್ಚಿಮಾತ್ಯ ಸಮಾಜದ ನಿರ್ಮಾಣ. (ಬಿಪಿನ್ ಚಂದ್ರಪಾಲ್ ಅವರ ಪ್ರಕಾರ, ಮಾರ್ಕ್ಸ್ ಈ ಹೇಳಿಕೆ ನೀಡುವ ಹೊತ್ತಿಗೆ ವಸಾಹತುವಾದದ 'ಮುಕ್ತ ವ್ಯಾಪಾರ'ದ ಬಂಡವಾಳಶಾಹಿ ಮುಖ ಇನ್ನೂ ಸ್ಪಷ್ಟವಾಗಿ ಕಾಣಿಸಿಕೊಂಡಿರಲಿಲ್ಲ).

೩. ಪ್ರಜಾಪ್ರಭುತ್ವಕ್ಕೆ ಇನ್ನೂ ಸಿದ್ಧವಾಗದ ಸಮಾಜಗಳನ್ನು ಅದಕ್ಕಾಗಿ ಸಿದ್ಧಗೊಳಿಸುವುದೇ ವಸಾಹತುವಾದೀ ಸರ್ಕಾರದ ಹೊಣೆ ಎಂದು ವಸಾಹತುವಾದದ ಉಗ್ರ ಸಮರ್ಥಕನಾದ ಜೇಮ್ಸ್ ಮಿಲ್ ವಾದಿಸುತ್ತಿದ್ದ. ಈಗಾಗಲೇ ಪ್ರಬುದ್ಧ ಸಮಾಜವನ್ನು ರೂಪಿಸಿಕೊಂಡಿರುವ ಬ್ರಿಟನ್ ಕಿರಿಯ, ಅಪ್ರಬುದ್ಧ ಹಾಗೂ ಆದಿಮ ಸ್ಥಿತಿಯ ಭಾರತೀಯ ಸಮಾಜವನ್ನು ಪ್ರಬುದ್ಧತೆ ಹಾಗೂ ಪ್ರೌಢತೆಯತ್ತ ಕರೆದೊಯ್ಯುತ್ತದೆ ಎಂದು ಮಿಲ್ ನಂಬಿದ್ದ.

೪. ನಾಗರಿಕತೆಯೆಂದರೆ ಪಶ್ಚಿಮದ ನಾಗರಿಕತೆಯೆಂಬ ಯಜಮಾನೀ ನಿಲುವಿನಂತೆಯೇ, ಧರ್ಮವೆಂದರೆ ಕ್ರಿಶ್ಚಿಯನ್ ಧರ್ಮ ಮಾತ್ರ ಎಂಬ ನಿಲುವಿನಿಂದ ಹೊರಟ ಧಾರ್ಮಿಕ ಪ್ರಸಾರದ ಉದ್ದೇಶವೂ ವಸಾಹತೀಕರಣದ ಒಂದು ಭಾಗ. 'ದೇವರು ಭಾರತವನ್ನು ನಮಗೆ ವಹಿಸಿಕೊಟ್ಟಿದ್ದಾನೆ, ಅದನ್ನು ಬಿಟ್ಟುಕೊಡಲು ನಮಗೆ ಹಕ್ಕಿಲ್ಲ' ಎಂಬ ಆಕ್ಸ್‌ಫರ್ಡ್‌ನ ಪಾದ್ರಿ ರಿಚರ್ಡ್ ಕಾಂಗ್ರೀವರ ಪ್ರಾತಿನಿಧಿಕ ನಿಲುವಿನಲ್ಲಿ ವಸಾಹತುವಾದಕ್ಕೆ ದೈವೀ ಹಾಗೂ ಧಾರ್ಮಿಕ ಪ್ರೇರಣೆಗಳನ್ನೂ ಸೃಷ್ಟಿಸಲಾಗಿರುವುದನ್ನು ಗಮನಿಸಬೇಕು.

೫. ಆಫ್ರಿಕನ್ ನಾಗರಿಕತೆಯನ್ನು, ಅದರ ಬುಡಕಟ್ಟು ತಳಹದಿಯ ಸಮಾಜವನ್ನು ಹಾಗೂ ಮೌಖಿಕ ಪ್ರಧಾನ ಪರಂಪರೆಯನ್ನು 'ಅನಾಗರಿಕ'ವೆಂದು ತಳ್ಳಿಹಾಕುವುದು ವಸಾಹತುವಾದಿಗಳಿಗೆ ಸುಲಭವಾಗಿತ್ತು. ಆದರೆ ಯುರೋಪಿಯನ್ ಕಣ್ಣಿಗೆ ಅದೆಷ್ಟೇ ವಿಚಿತ್ರವಾಗಿ ಕಂಡರೂ, ಭಾರತಕ್ಕೆ ಸುದೀರ್ಘ ನಾಗರಿಕತೆಯ ಚರಿತ್ರೆಯಿರುವುದನ್ನಂತೂ ವಸಾಹತುವಾದ ಒಪ್ಪಿಕೊಳ್ಳಬೇಕಾಯಿತು. ಆದ್ದರಿಂದ ಭಾರತೀಯ ನಾಗರಿಕತೆಯ ವೈಭವ ಭೂತಕ್ಕೆ ಮಾತ್ರ ಸೇರಿದ್ದೆಂದೂ, ವರ್ತಮಾನದ ಭಾರತ ರೋಗಗ್ರಸ್ತವೆಂದೂ ವಸಾಹತೀಕರಣಕ್ಕೆ ಸಮರ್ಥನೆಯನ್ನು ಸೃಷ್ಟಿಸಲಾಯಿತು.

೬. ಶ್ರೇಷ್ಠ ಜನಾಂಗ ಹಾಗೂ ಕನಿಷ್ಠ ಜನಾಂಗ ಎಂಬ ವರ್ಗೀಕರಣವನ್ನು ಹುಟ್ಟು ಹಾಕಿದ ಜನಾಂಗೀಯ ಸಿದ್ಧಾಂತ ಕೂಡ ವಸಾಹತುವಾದಕ್ಕೆ ತಕ್ಕ ಸಮರ್ಥನೆಯನ್ನು ಒದಗಿಸಿತು. ಎಡ್ವರ್ಡ್ ಸೈದ್ ಪ್ರಕಾರ, ಸಾಮ್ರಾಜ್ಯಶಾಹಿಯ ವಕ್ತಾರರು 'ನಾವು' ಮತ್ತು 'ಅವರು' (ಅಂದರೆ 'ಯುರೋಪಿಯನ್ನರು' ಮತ್ತು 'ಇತರರು') ಎಂಬ ಮೇಲು-ಕೀಳುಗಳ ತಾತ್ತ್ವಿಕ ವರ್ಗೀಕರಣದ ಪರಿಭಾಷೆಯನ್ನು ಕಾದಂಬರಿ, ರಾಜಕೀಯವಿಜ್ಞಾನ, ಜನಾಂಗೀಯ

ಸಿದ್ಧಾಂತ ಹಾಗೂ ಪ್ರವಾಸಕಥನಗಳ ಮೂಲಕ ಸೃಷ್ಟಿಸಿದರು. ಯುರೋಪ್‌ಕೇಂದ್ರಿತ ಸಾಂಸ್ಕೃತಿಕ ಮಾದರಿಗಳು ಹಾಗೂ 'ದೇಶೀ' ಸಾಂಸ್ಕೃತಿಕ ಮಾದರಿಗಳು ಎಂಬ ವಿರುದ್ಧ ಜೋಡಿಪದವನ್ನು(binary opposites) ನಿರ್ಮಾಣ ಮಾಡುವ ಮೂಲಕ ಯುರೋಪಿನ ಭಾಷೆ, ಕಲೆ, ಚರಿತ್ರೆ ಎಲ್ಲವೂ 'ದೇಶೀ' ಮಾದರಿಗಳಿಗಿಂತ ಶ್ರೇಷ್ಠ ಎಂದು ಪ್ರತಿಪಾದಿಸುವ ವಸಾಹತುವಾದೀ ಸಂಕಥನ ಕೇಂದ್ರ ರಂಗಕ್ಕೆ ಬಂದಿತು.

ಫ್ಯೂಕೋನ 'ಡಿಸ್ಕೋರ್ಸ್'(ಸಂಕಥನ) ಕಲ್ಪನೆಯನ್ನಾಧರಿಸಿ ಎಡ್ವರ್ಡ್ ಸೈದ್ ವಸಾಹತುವಾದೀ ಸಂಕಥನ ಎಂಬ ಪರಿಕಲ್ಪನೆಯನ್ನು ಚಾಲ್ತಿಗೆ ತಂದ. 'ಡಿಸ್ಕೋರ್ಸ್' ಎಂದರೆ ಮೂಲತಃ 'ಬಳಕೆಯಲ್ಲಿರುವ ಭಾಷೆ' ಎಂದರ್ಥ. ಈ ಕಲ್ಪನೆಯನ್ನು ಹೊಸದಾಗಿ ವಿವರಿಸಿದ ಫ್ಯೂಕೋನ ಪ್ರಕಾರ, ಡಿಸ್ಕೋರ್ಸ್ ಎಂದರೆ ಜಗತ್ತನ್ನು ಗ್ರಹಿಸುವ ವ್ಯಾಖ್ಯಾನಗಳ ಒಂದು ವ್ಯವಸ್ಥೆ. ಆದ್ದರಿಂದ ಯಾರು ಒಂದು ಕಾಲದ ಡಿಸ್ಕೋರ್ಸ್‌ಅನ್ನು (ಸಂಕಥನವನ್ನು) ನಿಯಂತ್ರಿಸುವರೋ ಅವರು ಆ ಕಾಲದಲ್ಲಿ ಅಧಿಕಾರ ಸ್ಥಾಪಿಸುತ್ತಾರೆ ಎಂಬುದು ಸ್ಥೂಲವಾಗಿ ಫ್ಯೂಕೋನ ವಾದ. ಈ ಹಿನ್ನೆಲೆಯಲ್ಲಿ ನೋಡಿದಾಗ ಚರಿತ್ರೆ, ಭಾಷೆ, ಆಧುನಿಕತೆ, ಧರ್ಮ, ಸಾಹಿತ್ಯ, ವಿಜ್ಞಾನ, ವಸಾಹತುಕಾರ ಹಾಗೂ ವಸಾಹತೀಕರಣಗೊಂಡವನ ನಡುವಣ ಸಂಬಂಧಗಳು- ಈ ಎಲ್ಲದರ ಬಗ್ಗೆ ವಸಾಹತುವಾದ ನಿರ್ದಿಷ್ಟ ವ್ಯಾಖ್ಯಾನಗಳನ್ನು ರೂಪಿಸುತ್ತಿರುತ್ತದೆ. ಈ ಎಲ್ಲ ವ್ಯಾಖ್ಯಾನಗಳು ಹಾಗೂ ಕಥನಗಳು ಒಗ್ಗೂಡಿ ಒಂದು ಸಂಯುಕ್ತ ಕಥನ (ಅಂದರೆ, ಸಂಕಥನ) ನಿರ್ಮಾಣವಾಗುತ್ತದೆ. ಈ ಸಂಕಥನ ಒಂದು ರಾಜಕೀಯ ವ್ಯವಸ್ಥೆಯನ್ನು ರೂಪಿಸುತ್ತದೆ. ಜೊತೆಗೆ ಆರ್ಥಿಕ ವಸಾಹತುವಾದವಂತೂ ಎಲ್ಲ ಬಗೆಯ ಸಾಮಾಜಿಕ, ಸಾಂಸ್ಕೃತಿಕ ಮುಖಗಳನ್ನು ನಿಯಂತ್ರಿಸುತ್ತಿರುತ್ತದೆ.

**ವಸಾಹತುವಾದೀ ಸಂಕಥನಗಳ ಮುಖಾಮುಖಿ**

ವಸಾಹತುಕಾರ ಸೃಷ್ಟಿಸಿದ ಇಂಥ ಅಧಿಕಾರಸ್ಥ ಸಂಕಥನಗಳನ್ನು ಅಥವಾ ಪುರಾಣಗಳನ್ನು ಪ್ರಶ್ನಿಸುವುದು ಅಥವಾ ನಿರ್ಪುರಾಣೀಕರಣಗೊಳಿಸುವುದು(demythification) ವಸಾಹತು ವಿರೋಧೀ ಸಿದ್ಧಾಂತಗಳ ಪ್ರಧಾನ ಆಶಯಗಳಲ್ಲೊಂದು. ಆಫ್ರಿಕನ್ ಚಿಂತಕ ಅಲಿ ಮುಝುರಾಯ್ ಹೇಳುವಂತೆ, ಒಂದು ಜನಾಂಗ ಆರಂಭಿಸಿದ ನಾಗರೀಕರಣದ ಧರ್ಮಯುದ್ಧ ಇನ್ನೊಂದು ಜನಾಂಗಕ್ಕೆ ಹುತಾತ್ಮ ಪಟ್ಟವನ್ನು ತರುವ ರೀತಿಯನ್ನೂ, ವಸಾಹತೀಕರಣಕ್ಕೆ ದೇಶೀ ಸಂಸ್ಕೃತಿಗಳು ಪ್ರತಿಕ್ರಿಯಿಸಿದ ವಿಭಿನ್ನ ಬಗೆಗಳನ್ನೂ ಈ ಸಿದ್ಧಾಂತಗಳು ಗ್ರಹಿಸಲೆತ್ನಿಸು ತ್ತವೆ. ವಸಾಹತುವಾದೀ ಹಿಂಸೆಯ ಸ್ವರೂಪಗಳು ಹಾಗೂ ವಸಾಹತು ಘಟ್ಟದ ಪಲ್ಲಟಗಳ ಹಲವು ಸೂಕ್ಷ್ಮಗಳು ಅರಿವಾಗುವುದು ಕೂಡ ಇಂಥ ಸಿದ್ಧಾಂತಗಳ ಮೂಲಕವೇ.

ಮೂಲತಃ ವಸಾಹತುವಿರೋಧೀ ನೆಲೆಯಿಂದಲೇ ವಸಾಹತುವಾದೀ ಅನುಭವವನ್ನು ಗ್ರಹಿಸುವ ಈ ಸಿದ್ಧಾಂತಗಳಲ್ಲಿ ಎರಡು ಮಾದರಿಗಳಿವೆ. ಉದಾಹರಣೆಗೆ, ಗಾಂಧಿ, ಅಶೀಶ್ ನಂದಿ, ಅಲಿ ಮುಝುರಾಯ್ ಅಥವಾ ಚಿನುವ ಅಚೀಬೆಯಂಥ ಲೇಖಕರು ವಸಾಹತುವಾದವನ್ನು

ಮೂಲತಃ 'ಪಶ್ಚಿಮದ ಆಧುನಿಕತೆ' ಮತ್ತು 'ಆಧುನಿಕ ನಾಗರಿಕತೆ'ಯನ್ನಾಗಿ ಹಾಗೂ ಪಶ್ಚಿಮವನ್ನೂ, ಪಶ್ಚಿಮೇತರ ಜಗತ್ತನ್ನೂ ಒಟ್ಟಾರೆಯಾಗಿ ಕಬಳಿಸುತ್ತಿರುವ ಶಕ್ತಿಯನ್ನಾಗಿ ಗ್ರಹಿಸುತ್ತಾರೆ. ಇನ್ನೊಂದು ಮಾದರಿಯ ವಸಾಹತುವಿರೋಧೀ ಸಿದ್ಧಾಂತಗಳ ನೆಲೆಗಳು ಕೊಂಚ ಭಿನ್ನ. ಪಶ್ಚಿಮದ ಮನಃಶಾಸ್ತ್ರೀಯ ನೆಲೆಗಳಿಂದ ವಸಾಹತುವಾದೀ ಸನ್ನಿವೇಶವನ್ನು ಅರ್ಥೈಸುವ ಓ.ಮನೋನಿ, ವರ್ಗ ಹೋರಾಟದ ನೆಲೆಗಳಿಂದ ವಸಾಹತುವಾದವನ್ನು ವ್ಯಾಖ್ಯಾನಿಸುವ ಫ್ಯಾನನ್, ವಸಾಹತುವಾದದ ಆರ್ಥಿಕ ಹಾಗೂ ಮನಃಶಾಸ್ತ್ರೀಯ ಆಯಾಮ ಗಳಿಗೆ ಒತ್ತು ನೀಡುವ ಅಲ್ಬರ್ಟ್ ಮೆಮ್ಮಿ ಮುಂತಾದವರು ಒಟ್ಟಾರೆಯಾಗಿ ಪಶ್ಚಿಮದ ಮಾನದಂಡಗಳಿಂದಲೇ ವಸಾಹತುವಾದೀ ಅನುಭವವನ್ನು ಗ್ರಹಿಸುತ್ತಾರೆ. ಮೇಲೆ ಪ್ರಸ್ತಾಪಿಸಿದ ಮೊದಲನೆಯ ಮಾದರಿಯ ವಸಾಹತು ವಿರೋಧಗಳಲ್ಲಿ ಕಾಣುವ ದೇಶೀ ಮಾದರಿಗಳ ಪ್ರತಿಷ್ಠಾಪನೆ ಅಥವಾ ಪುನರುಜ್ಜೀವನದ ಪ್ರಶ್ನೆ ಎರಡನೆಯ ವರ್ಗಕ್ಕೆ ಪ್ರಧಾನವಾಗಿ ಕಾಣುವುದಿಲ್ಲ. ಆಯಾ ವಸಾಹತುವಾದೀ ಸನ್ನಿವೇಶದ ಭಿನ್ನ ಭಿನ್ನ ಆಂತರಿಕ ಒತ್ತಡಗಳು ರೂಪಿಸಿರುವ ಈ ವಿಭಿನ್ನ ಗ್ರಹಿಕೆಗಳನ್ನು ಇನ್ನಷ್ಟು ವಿಸ್ತಾರವಾಗಿ ಇಲ್ಲಿ ಚರ್ಚಿಸಬೇಕು.

ಮೊದಲಿಗೆ, ಗಾಂಧೀಜಿಯವರ ಗ್ರಹಿಕೆಗಳ ಬಗ್ಗೆ ಚರ್ಚಿಸ ಬಹುದು: ವಸಾಹತುವಾದದಿಂದ ಭಾರತದಲ್ಲಿ ಉಂಟಾದ ಇಬ್ಬಗೆಯ ಪರಿಣಾಮಗಳ ಸ್ವರೂಪವನ್ನು ಗ್ರಹಿಸಿದ ಗಾಂಧಿ ಅದರಲ್ಲಿ ಒಳಿತಿನ ಪರಿಣಾಮವನ್ನು ಆಧುನಿಕಪೂರ್ವ ಪಶ್ಚಿಮದ ಫಲವೆಂದೂ, ಕೆಡುಕಿನ ಪರಿಣಾಮವನ್ನು ಆಧುನಿಕ ಪಶ್ಚಿಮದ ಫಲವೆಂದೂ ವ್ಯಾಖ್ಯಾನಿಸಿದ್ದರು. ಪಶ್ಚಿಮವನ್ನೂ ಪೂರ್ವವನ್ನೂ ಏಕಕಾಲಕ್ಕೆ ಈ ಆಧುನಿಕ ಪಶ್ಚಿಮದ ಹಿಡಿತದಿಂದ ಪಾರುಮಾಡಬೇಕೆಂಬುದು ಗಾಂಧಿಯ ಕೇಂದ್ರ ಕಾಳಜಿ. ಅಶೀಶ್‌ನಂದಿ ಗುರುತಿಸುವಂತೆ,

> ಗಾಂಧಿ ಆಧುನಿಕ ಪಶ್ಚಿಮವನ್ನು ತಿರಸ್ಕರಿಸಿದ್ದು ಅದರ ಧರ್ಮಾತೀತ ವೈಜ್ಞಾನಿಕ ಲೋಕದರ್ಶನದ ಕಾರಣಕ್ಕಾಗಿ. ತನ್ನದೇ ಶ್ರೇಷ್ಠ ಸಂಸ್ಕೃತಿಯೆಂಬ ಅಧಿಕಾರವನ್ನು ಆಧುನಿಕ ಪಶ್ಚಿಮ ಚಲಾಯಿಸಹೊರಡುವುದಕ್ಕೆ ಮೂಲ ಕಾರಣವೊಂದಿದೆ. ಅದೇನೆಂದರೆ, ಸೆಕ್ಯುಲರೈಸ್ಡ್ ಸಮಾಜಗಳು ಸೆಕ್ಯುಲರೀಕರಣ ಗೊಳ್ಳದ ಸಮಾಜಗಳಿಗಿಂತ ಶ್ರೇಷ್ಠವೆಂಬ ಅದರ ನಂಬಿಕೆ.

ಗಾಂಧೀ ಗ್ರಹಿಕೆಯ ಪ್ರಕಾರ ವಸಾಹತುವಾದ ದೇಶೀ ಆರ್ಥಿಕ ವ್ಯವಸ್ಥೆ, ದೇಶೀ ಕೈಗಾರಿಕೆ ಹಾಗೂ ದೇಶೀ ಸಾಂಸ್ಕೃತಿಕ ಹಿರಿಮೆಯ ನಾಶವನ್ನು ಒಂದೆಡೆಯಿಂದ ಆರಂಭಿಸಿತು: ಇನ್ನೊಂದೆಡೆಯಿಂದ ಭೌತಿಕವಾದಿ ಕೈಗಾರಿಕಾ ನಾಗರಿಕತೆಯನ್ನು ಭಾರತದ ಮೇಲೆ ಹೇರಿ ಭಾರತದ 'ಸಹಜ' ಬೆಳವಣಿಗೆಗೆ ಮಾರಕವಾಯಿತು. ಗಾಂಧಿಯ ಪ್ರಕಾರ ವಸಾಹತುವಾದದ ಮುಖ್ಯ ವಿನಾಶಕಾರಿ ಗುಣಗಳು ಇವು. ವಸಾಹತುವಾದೀ ಮೂಲದಿಂದ ಬಂದ ಪ್ರಭುತ್ವದ ಕಲ್ಪನೆಯನ್ನೇ ತಿರಸ್ಕರಿಸುವ ಗಾಂಧಿಯ ಕಣ್ಣಲ್ಲಿ ಪಾರ್ಲಿಮೆಂಟು 'ಬಂಜೆ' ಹಾಗೂ 'ವೇಶ್ಯೆ'.

ವಸಾಹತುವಾದ ಕುರಿತ ಗಾಂಧಿಯ ಗ್ರಹಿಕೆಗಳಲ್ಲಿ ಎದ್ದುಕಾಣುವ ಅಂಶವೆಂದರೆ, ಸ್ವೀಕರಿಸುವ ಸಂಸ್ಕೃತಿಯ ಕೀಳರಿಮೆ ಅಲ್ಲಿ ಇಲ್ಲದಿರುವುದು. ಆದ್ದರಿಂದ ಮೂಲತಃ

ಸಾಂಸ್ಕೃತಿಕ ಕೀಳರಿಮೆಯಿಂದ ಹುಟ್ಟುವ ದೇಶೀ ಮಾದರಿಗಳ ಉಗ್ರ ಸಮರ್ಥನೆ ಹಾಗೂ ಪಶ್ಚಿಮದ ವಿರೋಧ ಗಾಂಧೀ ಗ್ರಹಿಕೆಯಲ್ಲಿಲ್ಲ. ಗಾಂಧಿಯ ವಿರೋಧವಿದ್ದದ್ದು ಆಧುನಿಕ ಪಶ್ಚಿಮವನ್ನು ಕುರಿತು ಹಾಗೂ ಮೂಲತಃ ಕೇಡಿನ ತಳಹದಿಯ ಮೇಲೆ ನಿಂತಿರುವ ಪಶ್ಚಿಮದ ಆಧುನಿಕ ನಾಗರಿಕತೆಯನ್ನು ಕುರಿತು. 'ಆಧುನಿಕ ಸಂಸ್ಕೃತಿಯನ್ನು ಸೈತಾನೀ ಸಂಸ್ಕೃತಿ ಎಂದ ಗಾಂಧಿ, ರಾಷ್ಟ್ರಪ್ರಭುತ್ವ, ಆಧುನಿಕ ವಿಜ್ಞಾನ, ಆಧುನಿಕ ತಂತ್ರಜ್ಞಾನ, ನಗರೀಕೃತ ಕೈಗಾರಿಕೀಕರಣ-ಇಂಥ ಆಧುನಿಕ ಮಾದರಿಗಳನ್ನು ತಿರಸ್ಕರಿಸಿದ್ದರು'. ಇದು ಸ್ಥೂಲವಾಗಿ ಗಾಂಧಿ ವಸಾಹತುವಾದವನ್ನು ವ್ಯಾಖ್ಯಾನಿಸಿದ ಬಗೆ.

ಇನ್ನು ಮುಂದೆ ಅಶೀಶ್‌ನಂದಿಯವರ ಗ್ರಹಿಕೆಗಳನ್ನು ಚರ್ಚಿಸಬಹುದು: ವಸಾಹತೀಕರಣವನ್ನು ಮೂಲತಃ ಮಾನಸಿಕ ಪ್ರಕ್ರಿಯೆಯನ್ನಾಗಿ ಹಾಗೂ ಪಶ್ಚಿಮದಲ್ಲಿ ಹುಟ್ಟುತ್ತಿದ್ದ ಹೊಸ ದಮನದ ಮಾದರಿಗಳ(ಆ ಘಟ್ಟದಲ್ಲಿ ಅಮೆರಿಕದಲ್ಲಿ ಆರಂಭಗೊಂಡ ಆಫ್ರಿಕಾದ ಗುಲಾಮರ ಮಾರಾಟ ಇಂಥ ದಮನದ ಒಂದು ಮಾದರಿ) ಪ್ರತಿರೂಪವನ್ನಾಗಿ ಅಶೀಶ್‌ನಂದಿ ಕಾಣುತ್ತಾರೆ. ಪುನರುಜ್ಜೀವನ ಘಟ್ಟದ ಯುರೋಪಿನಲ್ಲಿ ಬಾಲ್ಯಾವಸ್ಥೆ ಕುರಿತಂತೆ ಬದಲಾದ ದೃಷ್ಟಿಕೋನಕ್ಕೂ ವಸಾಹತುವಾದದ ಉಗಮಕ್ಕೂ ಸಂಬಂಧವಿದೆಯೆಂದು ನಂದಿ ವಾದಿಸುತ್ತಾರೆ. ಯುರೋಪಿನ ಪ್ರಗತಿವಾದಿ ಸಿದ್ಧಾಂತಗಳ ಆ ಘಟ್ಟದಲ್ಲಿ ಬಾಲ್ಯಾವಸ್ಥೆ ಆನಂದದ ಅಥವಾ ದೈವೀಸ್ಥಿತಿಯಾಗಿ ಕಾಣುವುದಿಲ್ಲ. ಬದಲಿಗೆ, ಹಿರಿಯರು ನೀತಿ ನಿಯಮಗಳ ಪಟ್ಟಿಯನ್ನು ಬರೆಯಬೇಕಾದ ಖಾಲಿ ಸ್ಲೇಟಾಗಿ, ಅಪ್ರಬುದ್ಧವಾದ ಹಾಗೂ ಏನನ್ನೂ ಉತ್ಪಾದಿಸದ ಸ್ಥಿತಿಯಾಗಿ ಕಾಣುತ್ತದೆ. ಬಂಡವಾಳಶಾಹೀ ಯುಗದ ಹೊಸ ಪ್ರಗತಿವಾದಿ ಸಿದ್ಧಾಂತಗಳ ಜೊತೆಗೆ ಹುಟ್ಟಿದ ವಸಾಹತುವಾದ ಆದಿಮಸ್ಥಿತಿ ಹಾಗೂ ಬಾಲ್ಯಾವಸ್ಥೆಗಳೆರಡನ್ನೂ ಒಂದೇ ತೆರನಾಗಿ ಕಂಡಿತು. ಅಂದರೆ, ಬಾಲ್ಯಾವಸ್ಥೆಯೆನ್ನುವುದು ತಿದ್ದಿ ಬದಲಿಸಬೇಕಾದ ಸ್ಥಿತಿ. ಹಾಗೆಯೇ, ಬಾಲ್ಯಾವಸ್ಥೆಯಲ್ಲಿರುವ 'ಹಿಂದುಳಿದ' ನಾಡುಗಳ 'ಆದಿಮಸ್ಥಿತಿ' ಹಾಗೂ 'ಅನಾಗರಿಕ ಸ್ಥಿತಿ' ಕೂಡ 'ಹಿರಿಯ'ನೂ 'ರಕ್ಷಕ'ನೂ ಆದ ವಸಾಹತುಕಾರ ಬದಲಿಸಬೇಕಾದ ಸ್ಥಿತಿ ಎಂಬುದು ವಸಾಹತುವಾದದ ನಂಬಿಕೆ.

ಆಧುನಿಕ ವಸಾಹತುವಾದ ಆಧುನಿಕ ಯುಗದ ಉಳಿದೆಲ್ಲ ದಮನಕಾರಿ ಮಾರ್ಗಗಳಿಗಿಂತ ಪರಿಣಾಮಕಾರಿಯಾಗಿ ಆಳತೊಡಗಿದ್ದಕ್ಕೆ ಮುಖ್ಯ ಕಾರಣ, ಅದರ ಸ್ಪಷ್ಟವಾದ ತಾತ್ವಿಕ ನೆಲೆಗಟ್ಟು, ಸಾಂಸ್ಕೃತಿಕ ಬೇರುಗಳನ್ನುಳ್ಳ ಅದರ ನ್ಯಾಯಬದ್ಧ ಅಧಿಕಾರ ಹಾಗೂ ಪ್ರತಿಹಿಂಸೆಯನ್ನು ನಿಯಂತ್ರಿಸಬಲ್ಲ ಶಕ್ತಿ. ವಸಾಹತುಗಳನ್ನು ನಾಗರೀಕರಣಗೊಳಿಸಲು ತಾನು ಆರಂಭಿಸಿದ ಯುದ್ಧಕ್ಕೆ ವಸಾಹತುವಾದ ಆಧುನಿಕ ತಂತ್ರಜ್ಞಾನ ಹಾಗೂ ಆಧುನಿಕ ತಂತ್ರಜ್ಞಾನ ಸಂಸ್ಕೃತಿಯ ಮೂಲಕ ಸಮರ್ಥನೆಗಳನ್ನು ಸೃಷ್ಟಿಸಿತು. ಪಶ್ಚಿಮದ ತಂತ್ರಜ್ಞಾನ ಸಂಸ್ಕೃತಿ, ಪಶ್ಚಿಮದ ಮನುಷ್ಯ ಹಾಗೂ ಪಶ್ಚಿಮದ ತಂತ್ರಜ್ಞಾನಗಳ ಹಿರಿಮೆಯನ್ನು ಪ್ರತಿಪಾದಿಸುವ ಇಂಥ ಸಿದ್ಧಾಂತದ ಮೂಲ ತುದಿತವೇ ಆಧುನಿಕ ಸಮಾಜಗಳು, ಆಧುನಿಕ ವಿಜ್ಞಾನಗಳು ಮತ್ತು ಆಧುನಿಕ ತಂತ್ರಜ್ಞಾನಗಳು ಮಾತ್ರ ಶ್ರೇಷ್ಠವೆಂದು ಪ್ರತಿಪಾದಿಸುವುದು. ಆ ಪ್ರತಿಪಾದನೆಯ ಇನ್ನೊಂದು ಮುಖದಲ್ಲಿ ಪಾರಂಪರಿಕ ತಂತ್ರಜ್ಞಾನದ, ಪಾರಂಪರಿಕವಾದ

ಮಾನವ-ಪ್ರಕೃತಿ ಸಂಬಂಧಗಳ ವ್ಯವಸ್ಥೆಯ, ಅಂದರೆ ಒಟ್ಟಾರೆಯಾಗಿ ಪಾರಂಪರಿಕ ಮನುಷ್ಯನ ನಿರ್ನಾಮ ಆರಂಭವಾಗುತ್ತದೆ. ಇದು ವಸಾಹತುವಾದ ಕುರಿತಂತೆ ಅಶೀಶ್ ನಂದಿಯವರ ಚಿಂತನೆಯ ಸಾರಾಂಶ.

ವಸಾಹತೀಕರಣವನ್ನು ಮನಃಶಾಸ್ತ್ರೀಯ ಹಾಗೂ ಮಾನವಶಾಸ್ತ್ರೀಯ ನೆಲೆಗಳ ಮೂಲಕ ವ್ಯಾಖ್ಯಾನಿಸುವ ಮಾನವಶಾಸ್ತ್ರಜ್ಞ ಓ.ಮನೋನಿ, ವಸಾಹತು ಸನ್ನಿವೇಶವನ್ನು ಎರಡು ವಿಭಿನ್ನ ವ್ಯಕ್ತಿತ್ವಗಳ ಭೇಟಿಯನ್ನಾಗಿ ಹಾಗೂ ಆ ವ್ಯಕ್ತಿತ್ವಗಳು ಪರಸ್ಪರ ಪ್ರತಿಕ್ರಿಯಿಸುವ ರೀತಿಯಿಂದ ಹುಟ್ಟುವ ಸನ್ನಿವೇಶವನ್ನಾಗಿ ಗ್ರಹಿಸುತ್ತಾನೆ. ಈ ಗ್ರಹಿಕೆಯಲ್ಲಿ ಶೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ನಾಟಕದ ಪ್ರಾಸ್ಪರೋ ಹಾಗೂ ಕ್ಯಾಲಿಬನ್ ಕ್ರಮವಾಗಿ ವಸಾಹತುಕಾರ ಹಾಗೂ ವಸಾಹತೀಕರಣಗೊಂಡವರ ಮೂಲ ಮಾದರಿಗಳು. ವಸಾಹತುವಾದೀ ದೇಶಕ್ಕೆ ಸೇರಿದ ಲೇಖಕರಾದ ಶೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ನಾಟಕದ ಪ್ರಾಸ್ಪರೋ ಹಾಗೂ ಡೇನಿಯಲ್ ಡಿಫೋ ಸೃಷ್ಟಿಸಿದ 'ರಾಬಿನ್‌ಸನ್ ಕ್ರೂಸೊ' ಎಂಬ ಎರಡು ಪಾತ್ರಗಳ ವಸಾಹತುವಾದೀ ಮನಸ್ಥಿತಿಯ ಮೂಲವನ್ನರಿಯಲು ಮನೋನಿ ಯತ್ನಿಸುತ್ತಾನೆ. ಅನ್ಯದ್ವೀಪಗಳನ್ನು ಆಕ್ರಮಿಸುವ ಈ ಎರಡು ಕಾಲ್ಪನಿಕ ಪಾತ್ರಗಳನ್ನು ಯುರೋಪಿಯನ್ ಪ್ರಜ್ಞೆಯಲ್ಲಿ ಸುಪ್ತವಾಗಿದ್ದ ವಸಾಹತುಶಾಹಿ ಧೋರಣೆಯೇ ಸೃಷ್ಟಿಸಿತೆಂದು ಮನೋನಿ ವಾದಿಸುತ್ತಾನೆ. ಎಡ್ವರ್ಡ್ ಸೈದ್ ಕೂಡ 'ಆಧುನಿಕ ವಾಸ್ತವವಾದೀ ಮಾರ್ಗದ 'ರಾಬಿನ್‌ಸನ್ ಕ್ರೂಸೋ' ಕಾದಂಬರಿಯಲ್ಲಿ ಯುರೋಪಿಯನ್ನನೊಬ್ಬ ಯುರೋಪಿನಿಂದ ಹೊರಗಿರುವ ದೂರದ ಪ್ರದೇಶವೊಂದರಲ್ಲಿ ತನಗಾಗಿ ಒಂದು ಜಹಗೀರನ್ನು ಸೃಷ್ಟಿಸಿಕೊಳ್ಳುವುದು ಕೇವಲ ಆಕಸ್ಮಿಕವಲ್ಲ' ಎನ್ನುತ್ತಾ, ಅದರ ಹಿಂದಿನ ವಸಾಹತೀಕರಣದ ಉದ್ದೇಶವನ್ನೇ ಗುರುತಿಸುತ್ತಾನೆ. ಅಂದರೆ, ಯುರೋಪಿನ ಚಿತ್ತದಲ್ಲಿ ಸುಪ್ತವಾಗಿದ್ದ ಆಕ್ರಮಣವಾದೀ ಭಾವನೆಗಳು ಹಾಗೂ ಕೆಲವು ನಿರ್ದಿಷ್ಟ ಗೀಳುಗಳು ಕ್ರಮೇಣ ವಸಾಹತು ಸನ್ನಿವೇಶದಲ್ಲಿ ವಸಾಹತುವಾದ ಎಂಬ ಸಿದ್ಧಾಂತವಾಗಿ ರೂಪಗೊಂಡವು.

ಒಂದು ಕಲಾಕೃತಿಯ ಪಾತ್ರಗಳು ಹಾಗೂ ಕೃತಿಕಾರನ ಸಂಬಂಧ ಕುರಿತು (ಅಂದರೆ ಶೇಕ್ಸ್‌ಪಿಯರ್ ಮತ್ತು ಪ್ರಾಸ್ಪರೋ; ಡಿಫೋ ಮತ್ತು ಕ್ರೂಸೋ ನಡುವಣ ಸಂಬಂಧಗಳನ್ನು ಕುರಿತು) ಕೃತಿಕೇಂದ್ರಿತ ವಿಮರ್ಶೆ ಒಪ್ಪದ ವಾದವನ್ನು ಮನೋನಿ ಒಂದು ಸಂಸ್ಕೃತಿಯಲ್ಲಿ ಹುಟ್ಟುವ ಪಾತ್ರಗಳಿಗೂ, ಆ ಸಂಸ್ಕೃತಿಯ ನೋಟಕ್ರಮಗಳಿಗೂ ಇರುವ ಸಂಬಂಧವನ್ನು ಗುರುತಿಸಲು ಬಳಸುತ್ತಾನೆ. ಅವನ ಪ್ರಕಾರ, ಕ್ಯಾಲಿಬನ್ ಅಥವಾ ಲಿಲಿಪುಟ್ಟರಂಥ ಅರೆ ಮಾನವ ಪ್ರಾಣಿಗಳನ್ನು ಸೃಷ್ಟಿಸುವ ಕೃತಿಕಾರನ ಅಪ್ರಜ್ಞೆಯಲ್ಲಿ ಇಡೀ ಮಾನವಕುಲವನ್ನೇ ಕೀಳಾಗಿ ಚಿತ್ರಿಸುವ ಆಶಯವಿರುತ್ತದೆ. ಆದ್ದರಿಂದಲೇ ಪ್ರಾಸ್ಪರೋ ಹಾಗೂ ಕ್ರೂಸೋ ಎಂಬ ಕಾಲ್ಪನಿಕ ಪಾತ್ರಗಳು ಭವಿಷ್ಯದಲ್ಲಿ ಪಶ್ಚಿಮ ರೂಪಿಸಲಿದ್ದ ವಸಾಹತುಕಾರನ ಮಾದರಿಗಳು. ಈ ಇಬ್ಬರೂ ಹುಡುಕಿಕೊಂಡು ಹೊರಟಿರುವುದು 'ಮನುಷ್ಯರಿಲ್ಲದ ಜಗತ್ತನ್ನು'. ಆ ಜಗತ್ತುಗಳಲ್ಲಿ ಅವರಿಗೆ ಸಿಕ್ಕುವ ಫ್ರೈಡೇ, ಏರಿಯಲ್, ಕ್ಯಾಲಿಬನ್ ಮುಂತಾದ ಮನುಷ್ಯರು

ಅವರ ಕಣ್ಣಲ್ಲಿ ಮನುಷ್ಯರೇ ಅಲ್ಲ. ಕ್ರೂಸೋ, ಪ್ರಾಸ್ಪರೋರಲ್ಲಿ ಕಾಣುವ ಈ ವಸಾಹತುಕಾರನ ಮೂಲ ಮಾದರಿಯೇ ಆಧುನಿಕ ವಸಾಹತು ಸನ್ನಿವೇಶದಲ್ಲಿ ಮುಂದು ವರಿಯುತ್ತದೆ. ಯುರೋಪಿಯನ್ ಅಪ್ರಜ್ಞೆಯಲ್ಲಿದ್ದ 'ಅನಾಗರಿಕ' ಪಾತ್ರಗಳು ಸಾಹಿತ್ಯ ಕೃತಿಗಳಲ್ಲಿ ಫ್ರೈಡೇ ಅಥವಾ ಕ್ಯಾಲಿಬನ್‌ಗಳಾದಂತೆ, ಅದೇ ಅಪ್ರಜ್ಞೆಯಲ್ಲಿದ್ದ ಧೋರಣೆಗಳೇ ಯುರೋಪಿಯನ್ನರನ್ನು ತಾವೆಂದೂ ಕಾಣದ ದ್ವೀಪಗಳನ್ನು ಆಕ್ರಮಿಸಿಕೊಳ್ಳುವಂತೆ, ಈಗಾಗಲೇ ತಮ್ಮ ಅಪ್ರಜ್ಞೆಯಲ್ಲಿ ಸೃಷ್ಟಿಯಾಗಿದ್ದ ಆ ದ್ವೀಪವಾಸಿಗಳಾದ 'ಕ್ರೂರ ಪ್ರಾಣಿ' ಗಳನ್ನು (ಅಂದರೆ ಅಲ್ಲಿನ ಮನುಷ್ಯರನ್ನು) ಶಸ್ತ್ರಬಲದಿಂದ ಆಳುವಂತೆ ಪ್ರೇರೇಪಿಸುತ್ತವೆ.

ಮನೋನಿಯ ಗ್ರಹಿಕೆಯ ಪ್ರಕಾರ, ವಸಾಹತುವಾದದ ಹಿನ್ನೆಲೆಯಲ್ಲಿರುವ ಆರ್ಥಿಕ ಅಥವಾ ರಾಜಕೀಯ ಒತ್ತಡಗಳಿಗಿಂತ ಯುರೋಪಿಯನ್ನರ ಅಪ್ರಜ್ಞೆಯಲ್ಲಿ ಬಾಲ್ಯದಿಂದಲೂ ನೆಲೆಸಿರುವ ಮರುಭೂಮಿ ಹಾಗೂ ನರಭಕ್ಷಕರನ್ನು ಕುರಿತ ಕಲ್ಪನೆಗಳೇ ವಸಾಹತುವಾದೀ ಮನಸ್ಥಿತಿಯ ಹುಟ್ಟಿನಲ್ಲಿ ನಿರ್ಣಾಯಕ ಪಾತ್ರವಹಿಸುತ್ತವೆ. ಮನೋನಿ ಗುರುತಿಸುವಂತೆ, ವಸಾಹತುವಾದೀ ದೃಷ್ಟಿಕೋನದ ಅತ್ಯಂತ ಅಪಾಯಕಾರಿ ಗುಣವೆಂದರೆ, ತನ್ನನ್ನು ಬಿಟ್ಟು ಉಳಿದವರಿಗೆ- ಅಂದರೆ, ಮಿರಾಂಡ, ಏರಿಯಲ್, ಫ್ರೈಡೇಗಳಿಗೆ (ಅಂದರೆ ಹೆಣ್ಣಿಗೆ ಹಾಗೂ ಇತರ ದೇಶೀಯರಿಗೆ)- ವ್ಯಕ್ತಿತ್ವವೇ ಇಲ್ಲವೆಂಬ ವಸಾಹತುಕಾರನ ಧೋರಣೆ. ಆದ್ದರಿಂದಲೇ ಕ್ಯಾಲಿಬನ್ ಸ್ವಾತಂತ್ರ್ಯಕ್ಕೋಸ್ಕರ ಹೂಡುವ ಬಂಡಾಯವನ್ನು ಪ್ರಾಸ್ಪರೋ ಕೇವಲ ಮೃಗೀಯ ವರ್ತನೆಯಂತೆ ಕಾಣುತ್ತಾನೆ. ಪ್ರಾಸ್ಪರೋನಂತೆ ವಸಾಹತುಕಾರನಿಗೂ 'ಇತರರ' ಜಗತ್ತನ್ನು ಕುರಿತು ಗೌರವವಿಲ್ಲ. ಪ್ರತಿ ವಸಾಹತುಕಾರನಲ್ಲೂ ಇಂಥ ಪ್ರಾಸ್ಪರೋ ಮನಸ್ಥಿತಿ ಇದ್ದು ಕಾಣುತ್ತದೆ.

ಮಡಗಾಸ್ಕರ್ ದ್ವೀಪದ ಮ್ಯಾಲಗೇಸಿ ಜನಾಂಗದ ವಸಾಹತೀಕರಣದ ಅಧ್ಯಯನದ ಮೂಲಕ ಮನೋನಿ ಗ್ರಹಿಸುವ ಪ್ರಧಾನ ಅಂಶವೆಂದರೆ ವಸಾಹತೀಕರಣಗೊಂಡವನಲ್ಲಿರುವ ಅವಲಂಬನೆಯ ಮನಸ್ಥಿತಿಯಿಂದ ಹುಟ್ಟುವ ವಸಾಹತು ಸಂಬಂಧ. ಮನೋನಿಯ ಪ್ರಕಾರ, ವಸಾಹತು ಸನ್ನಿವೇಶ ವಸಾಹತುಕಾರ ಹಾಗೂ ವಸಾಹತೀಕರಣಗೊಂಡವರಿಬ್ಬರ ಮೂಲಭೂತ ಅಗತ್ಯವೊಂದನ್ನು ತೃಪ್ತಿಪಡಿಸುತ್ತಿರುತ್ತದೆ. ವಸಾಹತು ಸಂದರ್ಭದಲ್ಲಿ ತನ್ನ ಬುಡಕಟ್ಟು ಬದುಕಿನ ಆಸರೆ ಹಾಗೂ ರಕ್ಷಣೆಯನ್ನು ಕಳೆದುಕೊಳ್ಳುವ ದೇಶೀಯ ತಾನು ಅವಲಂಬಿಸಲು ಯಾರನ್ನಾದರೂ ಹುಡುಕುತ್ತಿರುತ್ತಾನೆ. ಹಾಗೆ ಅವಲಂಬಿಸಬಲ್ಲ ವ್ಯಕ್ತಿತ್ವವನ್ನು ಅವನು ಕಾಣುವುದು 'ಬಲಿಷ್ಠ'ನಾದ, 'ರಕ್ಷಕ'ನಾದ, 'ಸ್ವಾವಲಂಬಿ'ಯಾದ ಹಾಗೂ ಸ್ಥಳೀಯ ಮಾಂತ್ರಿಕ ಶಕ್ತಿಗಳಿಗೆ ಹೆದರದ ಯುರೋಪಿಯನ್ನನಲ್ಲಿ. ಈ ಅವಲಂಬನೆಯ ಮನಸ್ಥಿತಿ ವಸಾಹತುವಾದೀ ಯುರೋಪಿಯನ್ ಮನಸ್ಸಿನ ಅಗತ್ಯವೊಂದನ್ನು ಕೂಡ ಪೂರೈಸುತ್ತಿರುತ್ತದೆ. ಆಕ್ರಮಣಕಾರಿಯಾದ ಹಾಗೂ ಸ್ಪರ್ಧಾತ್ಮಕವಾದ ಸಮಾಜದಲ್ಲಿ ಹುಟ್ಟುವ ಯಶಸ್ಸಿನ ಕಲ್ಪನೆಯಿಂದ ರೂಪುಗೊಂಡ ಯುರೋಪಿಯನ್ ವಸಾಹತುವಾದಿಗೆ ಹಾಗೂ ಅವನ ಸಾಮರ್ಥ್ಯಕ್ಕೆ ಒತ್ತಾಸೆ ಹಾಗೂ ಭರವಸೆ ದಕ್ಕುವುದು ವಸಾಹತುಗಳ ದೇಶೀಯನಲ್ಲಿರುವ

ಈ ಅವಲಂಬನೆಯ ಬಯಕೆಯಿಂದ. ಆದ್ದರಿಂದ ವಸಾಹತುವಾದಿಯನ್ನು ಅವಲಂಬಿಸುವ ದೇಶೀಯನ ಗುಲಾಮಗಿರಿ ವಸಾಹತುವಾದಿಯ ಬಹುಮುಖ್ಯ ಮಾನಸಿಕ ಅಗತ್ಯವೊಂದನ್ನು ಕೂಡ ಪೂರೈಸುತ್ತಿರುತ್ತದೆ. ಹಾಗೆಯೇ, ವಸಾಹತೀಕರಣಕ್ಕೊಳಗಾದ ಮ್ಯಾಲಗೇಸಿ ಜನಾಂಗ ವಸಾಹತುಕಾರನ ಜೊತೆಗಿನ ಸಂಬಂಧದಲ್ಲಿ ಗತಿಸಿದ ತನ್ನ ಹಿರೀಕರ ಜೊತೆಗಿನ ಸಂಬಂಧ ವನ್ನು ಕಂಡುಕೊಂಡಿತು ಎನ್ನುವ ಮನೋನಿ, ಅವಲಂಬನೆಯ ಅಗತ್ಯವೇ ಮಾನಸಿಕ ವಸಾಹತೀಕರಣದ ಕೇಂದ್ರದಲ್ಲಿರುವುದನ್ನು ಒತ್ತಿ ಹೇಳುತ್ತಾನೆ. ಆದರೆ ಮನೋನಿಯ ಈ ಅವಲಂಬನೆಯ ಸಿದ್ಧಾಂತವನ್ನು ಫ್ಯಾನನ್ ಹಾಗೂ ಏಮಿ ಸಿಸಾರೆ 'ಜನಾಂಗೀಯವಾದೀ ವಿಶ್ಲೇಷಣೆಯ ಮಾದರಿ' ಎನ್ನುತ್ತಾರೆ. ದಮನಕ್ಕೊಳಗಾದ ಸಂಸ್ಕೃತಿಗಳನ್ನು ಕುರಿತಂತೆ ಪಶ್ಚಿಮದ ಮನೋವಿಜ್ಞಾನಿಗಳ ಪೂರ್ವಗ್ರಹಗಳಿಗೆ ಇಂಥ ದೃಷ್ಟಿಕೋನಗಳೇ ಸಾಕ್ಷಿ ಎನ್ನುತ್ತಾನೆ ಏಮಿ ಸಿಸಾರೆ.

ಯುರೋಪಿಯನ್ ಪುನರುಜ್ಜೀವನ ಘಟ್ಟದಲ್ಲಿ ಹುಟ್ಟಿದ ಹೊಸ ದಮನಕಾರಿ ಸಿದ್ಧಾಂತ ಗಳ ಸಾಂಸ್ಥಿಕ ರೂಪವಾದ ವಸಾಹತುವಾದದ ಕೇಂದ್ರದಲ್ಲಿರುವ ಜನಾಂಗೀಯವಾದವು ವಸಾಹತುವಾದೀ ಸಂಸ್ಥೆಗಳು, ಧೋರಣೆಗಳು, ಉತ್ಪಾದನಾ ಕ್ರಮಗಳು, ಕೊಡುಕೊಳ್ಳುವ ಕ್ರಿಯೆ, ರಾಜಕೀಯ ಹಾಗೂ ಕಾನೂನುಗಳಲ್ಲಿ ಹುದುಗಿರುವುದನ್ನು ಸಾರ್ತರ್ ಮತ್ತು ಫ್ಯಾನನ್ ತೋರಿಸುತ್ತಾರೆ. ಆಫ್ರಿಕಾದ ವಸಾಹತೀಕರಣವನ್ನು ಕುರಿತು ಚರ್ಚಿಸುತ್ತಾ, 'ಫ್ಯಾಸಿಸ್ಟ್‌ವಾದದ ಇನ್ನೊಂದು ರೂಪವೇ ವಸಾಹತುವಾದ' ಎನ್ನುವ ಸಾರ್ತರ್, 'ಹಲವು ರೀತಿಯ ಹಿಂಸೆಗಳ ಮೂಲಕ ದೇಶೀಯರನ್ನು ನಿಯಂತ್ರಿಸುವ ಜನಾಂಗೀಯವಾದೀ ವಸಾಹತುವಾದದ ತಾತ್ತ್ವಿಕ ತಳಹದಿ ನಾಝೀವಾದಿಗಳ ಹುಟ್ಟಿಗೆ ಹೇಳಿ ಮಾಡಿಸಿದಂತಿದೆ' ಎನ್ನುತ್ತಾನೆ. ವಸಾಹತೀಕರಣದ ಗುರಿಯೇ ಚರಿತ್ರೆಯನ್ನು ವ್ಯವಸ್ಥಿತವಾಗಿ ವಿರೂಪಗೊಳಿಸುವುದು ಹಾಗೂ ದೇಶೀಯರನ್ನು ಅರೆ ಮಾನವ ಸ್ಥಿತಿಯಲ್ಲಿಡುವುದು ಎನ್ನುವ ಸಾರ್ತರ್, ವಸಾಹತುವಾದೀ ಹಿಂಸೆಯಲ್ಲಿ ಎರಡು ಬಗೆಯ ನಿರ್ಮಾನವೀಕರಣವನ್ನು ಗುರುತಿಸುತ್ತಾನೆ: ವಸಾಹತುವಾದೀ ಹಿಂಸೆ ದೇಶೀಯನನ್ನು ಗುಲಾಮನನ್ನಾಗಿ ಮಾಡಿ ತನ್ನ ಬಂದೂಕಿನ ನಳಿಗೆಯೆದುರು ನಿಲ್ಲಿಸಿಕೊಂಡಿರುತ್ತದೆ. ಅವನನ್ನು ನಿರ್ಮಾನವೀಕರಣಗೊಳಿಸುತ್ತದೆ. ವಸಾಹತೀಕರಣವನ್ನು ಪ್ರತಿಭಟಿಸಿದರೆ ಸಾಯುವ ದೇಶೀಯ, ವಸಾಹತೀಕರಣವನ್ನು ಒಪ್ಪಿಕೊಂಡರೆ ತನ್ನನ್ನು ತಾನೇ ಕನಿಷ್ಠ ಸ್ಥಿತಿಗೆ ದೂಡಿಕೊಳ್ಳುತ್ತಾನೆ. ಅಂದರೆ, ಈ ಎರಡೂ ಸ್ಥಿತಿಗಳಲ್ಲಿ ಅವನು ಮನುಷ್ಯನಾಗಿ ಉಳಿದಿರುವುದಿಲ್ಲ. ಆದರೆ, ವಸಾಹತು ಸನ್ನಿವೇಶದ ನಿರ್ಮಾನವೀಕರಣ ಅಂತಿಮವಾಗಿ ವಸಾಹತುಕಾರ ಹಾಗೂ ವಸಾಹತೀಕರಣಗೊಂಡ ವರಿಬ್ಬರನ್ನೂ ಒಳಗೊಳ್ಳುವುದನ್ನು ಸಾರ್ತರ್ ಗುರುತಿಸುತ್ತಾನೆ. 'ವಸಾಹತುವಾದದ ಯಂತ್ರ ವೃತ್ತಾಕಾರದಲ್ಲಿ ಚಲಿಸುತ್ತಿರುತ್ತದೆ. ಅಲ್ಲಿ ಅಭ್ಯಾಸಬಲದಿಂದ ಹುಟ್ಟಿದ ಚಲನೆ ಹಾಗೂ ಗುರಿಗಳ ನಡುವೆ ವ್ಯತ್ಯಾಸ ಹುಡುಕುವುದು ಸಾಧ್ಯವೇ ಇಲ್ಲ' ಎನ್ನುವ ಸಾರ್ತರ್, 'ಶೋಷಿತನ ನಿರ್ಮಾನವೀಕರಣದ ಇನ್ನೊಂದು ಮುಖವೇ ಶೋಷಕನ ಪರಕೀಯತೆ'

ಎನ್ನುತ್ತಾನೆ.

ತೀವ್ರ ಸಾಮಾಜಿಕ ವಿಭಜನೆಯನ್ನು ಹೇರುವ ಮೂಲಕ ಆಳುವ ವಿದೇಶೀಯರು ಹಾಗೂ ವಸಾಹತೀಕರಣಗೊಂಡ ದೇಶೀಯರ ನಡುವಣ ಸಂಬಂಧಗಳನ್ನು ಭ್ರಷ್ಟಗೊಳಿಸುವ ಶಕ್ತಿಯನ್ನಾಗಿ ವಸಾಹತುವಾದವನ್ನು ಗ್ರಹಿಸುತ್ತಾನೆ, ಫ್ರಾಂಜ್ ಫ್ಯಾನನ್. 'ವಸಾಹತುವಾದ ದೇಶೀ ಸಮಾಜದ ಎಲ್ಲ ಅಂಗಗಳಲ್ಲೂ ಗೊಂದಲಗಳನ್ನು ಸೃಷ್ಟಿಸುತ್ತದೆ. ತನ್ನ ಮೌಲ್ಯಗಳೊಂದಿಗೆ ದೇಶೀ ಸಮಾಜವನ್ನು ಪ್ರವೇಶಿಸುವ ಆಕ್ರಮಣವಾದೀ ಜನಾಂಗ ಎಷ್ಟು ಹಿಂಸಾತ್ಮಕವಾಗಿ ಆ ಮೌಲ್ಯಗಳನ್ನು ಹೇರುತ್ತದೆಂದರೆ, ವಸಾಹತೀಕರಣಗೊಂಡವರು ತಮ್ಮನ್ನು ತಾವು ರಕ್ಷಿಸಿಕೊಳ್ಳುತ್ತಲೋ ಅಥವಾ ಹೆಚ್ಚೂ ಕಡಿಮೆ ಕಳ್ಳಮಾರ್ಗಗಳಲ್ಲೋ ಉಳಿದುಕೊಳ್ಳಬೇಕಾಗುತ್ತದೆ. ಇಂಥ ವಸಾಹತುವಾದೀ ದಬ್ಬಾಳಿಕೆಯ ಸ್ಥಿತಿಯಲ್ಲಿ ವಸಾಹತೀಕರಣಗೊಂಡವರು ತಮ್ಮ ಸಂಸ್ಕೃತಿಯೊಂದಿಗೆ ಇರಿಸಿಕೊಂಡ ಸಂಬಂಧ ಕೂಡ ಕಲುಷಿತಗೊಳ್ಳುತ್ತಿರುತ್ತದೆ. ವಸಾಹತುವಾದವೆಂದರೆ ಮೂಲತಃ ಹೇರಿಕೆಯ ವ್ಯವಸ್ಥೆಯೆಂಬುದು ಫ್ಯಾನನ್‌ನ ಕೇಂದ್ರ ನಿಲುವು. ಇಂಥ ವಸಾಹತು ಜಗತ್ತನ್ನು ಫ್ಯಾನನ್ 'ಮ್ಯಾನೀಖಿಯನ್ ಜಗತ್ತು'(manichean world) ಎನ್ನುತ್ತಾನೆ. ಒಳಿತು, ಕೆಡುಕುಗಳನ್ನು ಗೆರೆ ಕೊಯ್ದು ವರ್ಗೀಕರಿಸುವ 'ಮ್ಯಾನೀಖಿಯನಿಸಂ' ಎಂಬ ಧಾರ್ಮಿಕ ತತ್ವದಿಂದ ಮ್ಯಾನೀಖಿಯನ್ ಎಂಬ ಶಬ್ದ ಹುಟ್ಟಿದೆ. ಈ ತತ್ವದ ಪ್ರಕಾರ, ಬೆಳಕು, ದೇವರು, ಆತ್ಮ ಇವು ಒಳಿತಿನ ಪ್ರತಿನಿಧಿಗಳು; ಕತ್ತಲು, ಸೈತಾನ, ದೇಹ ಇವು ಕೇಡಿನ ಪ್ರತಿನಿಧಿಗಳು. ಈ ಬಗೆಯಲ್ಲಿ ಆಫ್ರಿಕಾದ ದೇಶೀ ಸಮಾಜವನ್ನು ನೋಡುವ ವಸಾಹತುಕಾರನನ್ನು ಕುರಿತು ಫ್ಯಾನನ್ ಹೇಳುವ ಮಾತುಗಳು ಇವು:

> ವಸಾಹತುವಾದೀ ವ್ಯವಸ್ಥೆ ಸೃಷ್ಟಿಸುವ ಚಿತ್ರದ ಪ್ರಕಾರ, ಸ್ಥಳೀಯನೆಂದರೆ ಕೇಡಿನ ಪ್ರತಿರೂಪ. ದೇಶೀ ಸಮಾಜವೆಂದರೆ ಮೌಲ್ಯಗಳೇ ಇಲ್ಲದ ಸಮಾಜ. ಸ್ಥಳೀಯರಿಗೆ ನೀತಿ ನಡವಳಿಕೆಗಳೇ ಇಲ್ಲ, ಅವರು ಸುಂದರ ವಾದದ್ದೆಲ್ಲವನ್ನೂ ಕುರೂಪಗೊಳಿಸುವವರು, ಅವರ ಬೌದ್ಧಿಕ ದಾರಿದ್ರ್ಯಕ್ಕೆ ಹಾಗೂ ಅವರ ಹುಟ್ಟುಗುಣವಾದ ಕೇಡಿಗೆ ಅವರ ಸಂಪ್ರದಾಯಗಳು ಹಾಗೂ ಪುರಾಣಗಳೇ ಸಾಕ್ಷಿ ಎಂದು ವಸಾಹತುವಾದ ಮತ್ತೆ ಮತ್ತೆ ಸಿದ್ಧಮಾಡಲೆತ್ನಿಸುತ್ತಿರುತ್ತದೆ. ಈ ಬಗೆಯ 'ಮ್ಯಾನೀಖಿಯನಿಸಂ' ದೇಶೀಯ ನನ್ನು ಪ್ರಾಣಿಯನ್ನಾಗಿ ಕಾಣುತ್ತದೆ; ಅವನನ್ನು ನಿರ್ಮಾನವೀಕರಣ ಗೊಳಿಸುತ್ತದೆ.

ಆದ್ದರಿಂದಲೇ, 'ವಸಾಹತುವಾದವೆನ್ನುವುದು ಹಿಂಸಾವಾದಿ ನೋಟಕ್ರಮ; ಅದು ಬಗ್ಗು ವುದು ಪ್ರತಿಹಿಂಸೆಯಿಂದಲೇ' ಎಂಬುದು ಫ್ಯಾನನ್ನನ ನಿಲುವು.

ವಸಾಹತುವಾದದ ವಿರುದ್ಧ ಉಗ್ರವಾದೀ ಪರಿಭಾಷೆಯನ್ನು ಬಳಸಿದ ಫ್ಯಾನನ್ ತನ್ನ 'ಬ್ಲ್ಯಾಕ್ ಸ್ಕಿನ್, ವೈಟ್ ಮಾಸ್ಕ್ಸ್'(ಕಪ್ಪು ಚರ್ಮ, ಬಿಳಿಯ ಮುಖವಾಡಗಳು) ಪುಸ್ತಕದಲ್ಲಿ

ವಸಾಹತೀಕರಣದ ಸಮರ್ಥನೆಗೆ ಯುರೋಪು ತನ್ನದೇ ಆದ ಸಂಜ್ಞಾಶಾಸ್ತ್ರ (semiotics) ಒಂದನ್ನು ರೂಪಿಸಿಕೊಂಡದ್ದನ್ನು ತೋರಿಸಿದ. ಆ ಸಂಜ್ಞಾಶಾಸ್ತ್ರದ ಪ್ರಕಾರ ಬಿಳಿತನ ವಿವೇಚನೆ, ಸದ್ಗುಣ ಹಾಗೂ ಸೌಂದರ್ಯಗಳ ಸೂಚಕ; ಕಪ್ಪುತನ ಅವೈಚಾರಿಕತೆ ಹಾಗೂ ಹಸಿ ಐಂದ್ರಿಕತೆಯ ಸೂಚಕ. ಇಂಥ ಕೀಳರಿಮೆಯನ್ನು ಹುಟ್ಟುಹಾಕುವ ಜನಾಂಗೀಯವಾದೀ ಸಂಕೇತಗಳ ಫಲವಾಗಿ ಕಪ್ಪು ಚರ್ಮಗಳು ಬಿಳಿಯ ಮುಖವಾಡ ತೊಟ್ಟು ಬಿಳಿಯರಾಗಲು ಹಾತೊರೆಯುತ್ತವೆ. ಇದು ಫ್ಯಾನನ್ ಪುಸ್ತಕದ ಮುಖ್ಯ ಗ್ರಹಿಕೆ.

**ವಸಾಹತುಕಾರನ ನರಕ: ಕೊಂದವರುಳಿಯುವರೆ?**

ಒಂದಾನೊಂದು ಕಾಲದಲ್ಲಿ ಇಥಿಯೋಪಿಯಾದಲ್ಲಿದ್ದ ವಿಚಿತ್ರ ನಿಯಮವೊಂದನ್ನು ಕುರಿತು ಮನೋನಿ ಹೇಳುತ್ತಾನೆ: ಆ ನಿಯಮದ ಪ್ರಕಾರ, ಸಾಲ ಕೊಟ್ಟವನು ಸಾಲಗಾರನನ್ನು ಸರಪಳಿಯಿಂದ ಕಟ್ಟಿ, ಅದರ ಇನ್ನೊಂದು ತುದಿಯನ್ನು ತನ್ನ ದೇಹದ ಯಾವುದಾದರೂ ಭಾಗಕ್ಕೆ ಕಟ್ಟಿಕೊಳ್ಳುವ ಅವಕಾಶವಿತ್ತು. ಇಲ್ಲಿ ಇಬ್ಬರೂ ಒಂದೇ ಪರಿಸ್ಥಿತಿಯ ಬಂಧಿಗಳು. ಆದರೆ ಸಾಲಗಾರ ಕರುಣೆಗೆ ಅರ್ಹನಾದ, ದೈನೇಸಿ ಸ್ಥಿತಿಯ ವ್ಯಕ್ತಿಯಾದರೆ, ಸಾಲಿಗನಿಗೆ ವಿಚಿತ್ರ ತೃಪ್ತಿಯೊಂದು ಸಿಕ್ಕಿದ ಆನಂದವಿರುತ್ತಿತ್ತು.

ವಸಾಹತುಸನ್ನಿವೇಶದ ಮನಃಶಾಸ್ತ್ರೀಯ ಆಯಾಮವನ್ನು ಸಮರ್ಥವಾಗಿ ಹಿಡಿದಿಡ ಬಲ್ಲ ರೂಪಕವಿದು. ವಸಾಹತುವಾದೀ ಸನ್ನಿವೇಶದಲ್ಲಿ ಗೆದ್ದವನೂ ವಸಾಹತು ಸನ್ನಿವೇಶದ ತೆರೆಮರೆಯ ಬಲಿಯೇ ಎಂಬುದನ್ನು ಏಮಿಸಿಸಾರೆ, ಮೆಮ್ಮಿ, ಜಾರ್ಜ್ ಆರ್ವೆಲ್, ಆಶೀಶ್ ನಂದಿಯಂಥವರು ಹಲವು ಆಧಾರಗಳ ಮೂಲಕ ತೋರಿಸುತ್ತಾರೆ. ಜಾರ್ಜ್ ಆರ್ವೆಲ್ ತನ್ನ 'ಶೂಟಿಂಗ್ ಆ್ಯನ್ ಎಲಿಫೆಂಟ್ '(ಆನೆಯನ್ನು ಕೊಲ್ಲುವುದೆಂದರೆ...) ಎಂಬ ಅನುಭವ ಕಥನದಲ್ಲಿ ಹಿಂಸೆಯನ್ನು ಒಲ್ಲದ ವಸಾಹತುಕಾರ ಹಿಂಸೆಗಿಳಿಯಲು ವಸಾಹತೀಕರಣ ಗೊಂಡವನ ಒತ್ತಾಯವೂ ಕಾರಣವಾಗುವುದನ್ನು ತೋರಿಸುತ್ತಾನೆ. ವಸಾಹತುವಾದೀ ದಬ್ಬಾಳಿಕೆಯ ಮತ್ತೊಂದು ಮುಖದಲ್ಲಿ ವಸಾಹತುಕಾರನ ನಿರ್ನಾಗರೀಕರಣವೂ ನಡೆಯುವ ಬಗೆಯನ್ನು ಏಮಿಸಿಸಾರೆ ಗುರುತಿಸುತ್ತಾನೆ:

> ... ವಸಾಹತೀಕರಣಗೊಂಡವನನ್ನು ಪ್ರಾಣಿಯನ್ನಾಗಿ ಕಾಣಹೊರಡುವ ವಸಾಹತುಕಾರ ತನ್ನನ್ನೂ ಪ್ರಾಣಿಯನ್ನಾಗಿ ಪರಿವರ್ತಿಸಿಕೊಳ್ಳಲಾರಂಭಿಸುತ್ತಾನೆ. ಭಾರತೀಯರನ್ನು ಅಥವಾ ಆಫ್ರಿಕನ್ನರನ್ನು ಮಾತ್ರ ಕೊಲ್ಲುತ್ತಿದ್ದೇವೆಂದು ತಿಳಿದಿರುವ ಯುರೋಪಿಯನ್ನರು, ಆ ಪ್ರಕ್ರಿಯೆಯಲ್ಲಿ ಯುರೋಪಿನ ನಾಗರಿಕತೆ ಸ್ವತಂತ್ರವಾಗಿ ಬೆಳೆಯಲು ಅಗತ್ಯವಾಗಿದ್ದ ತಳಹದಿಗಳನ್ನೇ ತಾವು ಒಂದೊಂದಾಗಿ ಕಳಚಿ ಎಸೆದಿರುವುದನ್ನು ಮರೆತಿದ್ದಾರೆ.

ಇಂಥ ಎರಡು ಅಲಗಿನ ಹಿಂಸೆಯ ವಸಾಹತು ಸನ್ನಿವೇಶ ವಸಾಹತುಕಾರನಾಗಲೊಲ್ಲದ ವಸಾಹತುವಾದೀ ದೇಶದ ಪ್ರಜೆಯನ್ನೂ ವಸಾಹತುಕಾರನನ್ನಾಗಿ ಪರಿವರ್ತಿಸುವ ಬಗೆಯನ್ನು ಆಲ್ಬರ್ಟ್‌ಮೆಮ್ಮಿ ವಿವರಿಸುತ್ತಾನೆ. 'ವಸಾಹತುಕಾರ' ಹಾಗೂ 'ವಸಾಹತೀಕರಣಗೊಂಡವ'

ಎಂಬ ಎರಡು ನಿರ್ದಿಷ್ಟ ಮಾದರಿಗಳ ಮೂಲಕ ವಸಾಹತುವಾದೀ ಹಿಂಸೆಯನ್ನು ವ್ಯಾಖ್ಯಾನಿಸಿದವರಲ್ಲಿ ಮೆಮ್ಮಿ ಮೊದಲಿಗ. ವಸಾಹತುವಾದೀ ಧ್ರುವೀಕರಣಗಳು ಮಾಡುವ ಮೊದಲ ಕೆಲಸವೆಂದರೆ ವಸಾಹತುಕಾರ ಹಾಗೂ ವಸಾಹತೀಕರಣಗೊಂಡವನ ನಡುವಣ ವ್ಯತ್ಯಾಸವನ್ನು ಕಂಡುಹಿಡಿದು, ಅದನ್ನು ಸಿದ್ಧಾಂತವನ್ನಾಗಿ ಮಾಡುವುದು; ವಸಾಹತುಕಾರನ ದೃಷ್ಟಿಕೋನದಿಂದ ಶ್ರೇಷ್ಠ-ಕನಿಷ್ಠ ಎಂಬ ವರ್ಗೀಕರಣವನ್ನು ಮಾಡುವುದು. ಈ ವರ್ಗೀಕರಣವನ್ನು ಒಂದು ಅತಿಗೆ ಒಯ್ಯುವ ಮೂಲಕ ಅವು ಬದಲಾಗದ ಸ್ಥಿತಿಗಳು ಎಂಬಂತೆ ಚಿತ್ರಿಸುವುದು. ತನ್ಮೂಲಕ ವಸಾಹತುವಾದೀ ಆಕ್ರಮಣಕ್ಕೆ ಸಮರ್ಥನೆಗಳನ್ನು ಸೃಷ್ಟಿಸುವುದು.

ವಸಾಹತುಕಾರ ಹಾಗೂ ವಸಾಹತೀಕರಣಗೊಂಡವರಿಬ್ಬರೂ ತಪ್ಪಿಸಿಕೊಳ್ಳಲಾಗದ ಸ್ಥಿತಿಯೊಂದನ್ನು ವಸಾಹತು ಸನ್ನಿವೇಶ ಸೃಷ್ಟಿಸುತ್ತದೆ. ವಸಾಹತು ಸನ್ನಿವೇಶದ ಹಿಂಸೆ ವಸಾಹತುಕಾರನಲ್ಲಿ ಪ್ರಕಟಗೊಂಡು ವಸಾಹತೀಕರಣಗೊಂಡವನಲ್ಲೂ ಮುಂದುವರಿಯುತ್ತದೆ. ಅದರ ಪರಿಣಾಮವಾಗಿಯೇ ವಸಾಹತು ವ್ಯವಸ್ಥೆಯಲ್ಲಿ ಆಳುವ ವರ್ಗಕ್ಕೆ ಹತ್ತಿರವಾಗುವ ವಸಾಹತೀಕರಣಗೊಂಡ ವರ್ಗಗಳು ಬರುಬರುತ್ತಾ ವಸಾಹತುಕಾರನ ಉದ್ದೇಶವನ್ನೇ ರಕ್ಷಿಸಲಾರಂಭಿಸುತ್ತವೆ. ಅವನ ಭಾಷೆಯಲ್ಲೇ ಮಾತಾಡತೊಡಗುತ್ತವೆ. ಅವನ ತತ್ವವನ್ನೇ ಅನುಸರಿಸತೊಡಗುತ್ತವೆ. ಈ ಬೆಳವಣಿಗೆಗಳನ್ನು 'ಸಣ್ಣಪುಟ್ಟ ದಮನಕಾರರ ಪಿರಮಿಡ್ಡಿನ ಚರಿತ್ರೆ' ಎನ್ನುತ್ತಾನೆ ಮೆಮ್ಮಿ. ಈ ವ್ಯವಸ್ಥೆಯಲ್ಲಿ ತನಗಿಂತ ಮೇಲಿರುವ ವಸಾಹತುಕಾರ ಸೃಷ್ಟಿಸಿದ ದಮನದ ರೂಪಗಳನ್ನು ವಸಾಹತೀಕರಣಕ್ಕೆ ತುತ್ತಾದ ಸಮಾಜದ ಒಂದು ವರ್ಗ ತನ್ನ ಕೆಳಗಿನವರ ಮೇಲೆ-ಅಂದರೆ ತನ್ನ ದೇಶೀಯರ ಮೇಲೆ-ಹರಿಯಬಿಡುತ್ತದೆ; ಹಾಗೂ ಈ ವರ್ಗ ತನ್ನ ಸಮಾಜದ ವಿರುದ್ಧವೇ ಕ್ರೂರವಾಗಿ ತಿರುಗಿಬೀಳುವ ಪ್ರಕ್ರಿಯೆ ಶುರುವಾಗುತ್ತದೆ ಎಂಬುದನ್ನು ಮೆಮ್ಮಿ ಗುರುತಿಸುತ್ತಾನೆ.

### ವಸಾಹತುವಿರೋಧೀ ಸಿದ್ಧಾಂತಗಳ ಸ್ವರೂಪ

'ನಾಗರಿಕತೆ', 'ಅಭಿವೃದ್ಧಿ', 'ಆಧುನಿಕತೆ' 'ಚರಿತ್ರೆ' 'ಸಂಸ್ಕೃತಿ ಪ್ರಸಾರ' 'ವಿಜ್ಞಾನ' ಎಂಬ ಹೊಸ ನೆಲೆಗಳು ರೂಪಿಸಿದ ಮಹಾಕಥನಗಳು ಅಥವಾ ಅಧಿಕಾರಸ್ಥ ಸಂಕಥನಗಳ ಮೂಲಕ ಆಧುನಿಕ ಪಶ್ಚಿಮವು 'ಅನಾಗರಿಕ', 'ಹಿಂದುಳಿದ' ಹಾಗೂ 'ಸಾಂಪ್ರದಾಯಿಕ' ಸಮಾಜಗಳಾದ ವಸಾಹತುಗಳಲ್ಲಿ ತಾನು ರೂಪಿಸಿಕೊಂಡ ಸ್ವ-ಪ್ರತಿಬಿಂಬದ ಸ್ವರೂಪವನ್ನು ಈವರೆಗೆ ಚರ್ಚಿಸಲಾದ ಆಫ್ರಿಕನ್ ಹಾಗೂ ಭಾರತೀಯ ವಸಾಹತುವಿರೋಧೀ ಸಿದ್ಧಾಂತಗಳು ಹೇಳುತ್ತವೆ. ಇಂಥ ತನ್ನ ಸ್ವ-ಪ್ರತಿರೂಪವನ್ನು ಸೃಷ್ಟಿಸಿಕೊಂಡ ವಸಾಹತುವಾದೀ ಸಂಸ್ಕೃತಿ ತನ್ನ ಆಕ್ರಮಣಕ್ಕೊಳಗಾದ ಸಂಸ್ಕೃತಿಗಳಲ್ಲಿ ಗುರುತಿಸುವ ಸಾಧನೆಗಳೇನಾದರೂ ಇದ್ದರೆ, ಅವು ಕಲೆ, ಧರ್ಮ, ಜಾನಪದೀಯ ಜ್ಞಾನದಂಥ ಕ್ಷೇತ್ರಗಳಲ್ಲಿ ಅಥವಾ ಆ ಸಂಸ್ಕೃತಿಗಳ ಕೆಲವು 'ವಿಲಕ್ಷಣ' ಅಂಶಗಳಲ್ಲಿ ಮಾತ್ರ. ಆದರೆ ಆಧುನಿಕ ಜಗತ್ತಿನಲ್ಲಿ ಗೆಲ್ಲುವ, ಉಳಿಯುವ ಗುಣಗಳಾಗಲೀ, ಶ್ರೇಷ್ಠ ಗುಣಗಳಾಗಲೀ ಇರುವುದು ತನ್ನಲ್ಲಿ ಮಾತ್ರ

ಎಂಬುದು ಅದರ ದೃಢ ನಂಬಿಕೆ. ಇಂಥ ಯಜಮಾನಿಕೆಯ ಧೋರಣೆಯಿಂದ ಹೊರಟು ದೇಶೀ ಸಂಸ್ಕೃತಿಗಳ ದೈವೀ ನೆಲೆಗಳನ್ನೂ, ಬಹುರೂಪೀ ಗುಣವನ್ನೂ, ನ್ಯಾಯಬದ್ಧತೆಯನ್ನೂ ನಾಶಮಾಡಿ ಒಂದೇ ರೂಪದ ಯಾಂತ್ರಿಕ ಸಮಾಜವನ್ನೂ, ಆಧುನಿಕ ಹಿಂಸೆಗಳ ನೆಲೆಗಳನ್ನೂ ಸೃಷ್ಟಿಸುವ ವಸಾಹತು ಅನುಭವವನ್ನು ಮೂಲತಃ ಹಿಂಸೆಯ ಅನುಭವವನ್ನಾಗಿಯೇ ಈವರೆಗೆ ಚರ್ಚಿಸಲಾದ ವಸಾಹತು ವಿರೋಧೀ ಸಿದ್ಧಾಂತಗಳು ಗ್ರಹಿಸುತ್ತವೆ.

ಪಶ್ಚಿಮದ ಸೃಷ್ಟಿಯಾದ ಆಧುನಿಕ ವಸಾಹತುವಾದವನ್ನು ಚರ್ಚಿಸುವ ಈ ವಸಾಹತು ವಿರೋಧೀ ಸಿದ್ಧಾಂತಗಳ ಪ್ರಧಾನ ಧ್ವನಿ ಪಶ್ಚಿಮವಿರೋಧಿಯಾಗಿರುವುದು ಸಹಜ. ಹಾಗೆಯೇ ಈ ಸಿದ್ಧಾಂತಗಳು ದೇಶೀ ಸಂಸ್ಕೃತಿಗಳ ಸತ್ವವನ್ನು ಪ್ರತಿಪಾದಿಸುತ್ತಿರುವಾಗಲೂ ಪಶ್ಚಿಮವನ್ನೇ ಹೆಚ್ಚು ಉದ್ದೇಶಿಸಬೇಕಾಗಿರುವುದರಿಂದ ಅಲ್ಲಿ ದೇಶೀ ಸಂಸ್ಕೃತಿಗಳ ಅವಿಮರ್ಶಾತ್ಮಕ ಆರಾಧನೆ ಎದ್ದು ಕಾಣುವುದೂ ಪ್ರಾಯಶಃ ಸಹಜ.ಅಲ್ಲದೆ, ಈ ಸಿದ್ಧಾಂತಗಳು ವಸಾಹತೋತ್ತರ ಆಫ್ರಿಕಾದ ಆಂತರಿಕ ಲೋಕವನ್ನು ಚರ್ಚಿಸುವಾಗಲೂ ಸರ್ವವ್ಯಾಪಿ ಪಶ್ಚಿಮದತ್ತಲೇ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿರುತ್ತವೆ. ಆದ್ದರಿಂದ ದೇಶೀ ಜಗತ್ತಿನ ಆಂತರಿಕ ಹಿಂಸೆಗಳು ಹಾಗೂ ಸಾಂಪ್ರದಾಯಿಕ ಸಮಾಜಗಳ ದೌರ್ಬಲ್ಯಗಳತ್ತ ಅವುಗಳ ಒತ್ತು ಕಡಿಮೆ. ಅಲ್ಲದೆ, ಬೆನಿಟಾ ಪ್ಯಾರಿ ಅವರು ಗುರುತಿಸುವಂತೆ, ವಸಾಹತು ವಾದಿ ಪ್ರಭುತ್ವದ ದಬ್ಬಾಳಿಕೆಯನ್ನು ಗ್ರಹಿಸುವ ಹಲವು ವಸಾಹತುವಿರೋಧೀ ಸಿದ್ಧಾಂತಗಳು ವಸಾಹತೀಕರಣಗೊಂಡವನನ್ನು ಪರ್ಯಾಯ ಮಾದರಿಯ ಜ್ಞಾನ ಹಾಗೂ ಚರಿತ್ರೆಯ ವಾರಸುದಾರನನ್ನಾಗಿ, ಪರ್ಯಾಯ ಪರಂಪರೆಯ ಪ್ರತಿಪಾದಕನನ್ನಾಗಿ ಗುರುತಿಸುವ ನಿಟ್ಟಿನಲ್ಲಿ ಆಳವಾಗಿ ಕೆಲಸ ಮಾಡುವುದಿಲ್ಲ.

### ವಸಾಹತೀಕರಣಕ್ಕೆ ಆಫ್ರಿಕಾದ ದೇಶೀ ಪರಂಪರೆಗಳ ಪ್ರತಿಕ್ರಿಯೆ

ವಸಾಹತುವಾದದ ಮೂಲಕ ಪ್ರವೇಶಿಸುವ ಅನ್ಯ ಸಂಸ್ಕೃತಿಯ ಆಕ್ರಮಣಕ್ಕೆ ದೇಶೀ ಸಂಸ್ಕೃತಿಗಳು ಹಲವು ಬಗೆಗಳಲ್ಲಿ ಪ್ರತಿಕ್ರಿಯಿಸುತ್ತಿರುತ್ತವೆ. ಆ ಪ್ರತಿಕ್ರಿಯೆಗಳಲ್ಲಿ ನೇರ ಸ್ವೀಕಾರ, ವಿಮರ್ಶಾತ್ಮಕ ಸ್ವೀಕಾರ, ಸಂಘರ್ಷ, ಸ್ವಪ್ರತಿಪಾದನೆ, ಅನುಕರಣೆ, ಜೀರ್ಣಿಸಿಕೊಳ್ಳುವ ಕ್ರಿಯೆ, ಒಪ್ಪಂದ, ಶರಣಾಗತಿ, ಉಪೇಕ್ಷೆ, ದೇಶೀ ಮಾದರಿಗಳ ಪುನರುಜ್ಜೀವನ, ಬುಡಮೇಲು ಕೃತ್ಯ, ನಿಷ್ಕ್ರಿಯತೆ... ಹೀಗೆ ಹಲವು ಸಂಕೀರ್ಣ ಮಾದರಿಗಳಿರುತ್ತವೆ. ಇಂಥ ಪ್ರತಿಕ್ರಿಯೆಗಳು ವಸಾಹತೀಕರಣಗೊಂಡವನನ್ನು ಮಾತ್ರವಲ್ಲದೆ ವಸಾಹತುಕಾರನನ್ನೂ ರೂಪಾಂತರಿಸಲೆತ್ನಿಸುತ್ತಿರುತ್ತವೆ. ಆದ್ದರಿಂದಲೇ ಸಮಾಜಶಾಸ್ತ್ರೀಯ ಮಾದರಿಗಳು ಗುರುತಿಸುವ 'ಪ್ರತಿರೋಧ', 'ಅನುಕರಣೆ' ಹಾಗೂ 'ಸಮನ್ವಯ'ಗಳ ಪರಿಕಲ್ಪನೆಗಳು ವಸಾಹತು ಸನ್ನಿವೇಶದ ವಿಶಿಷ್ಟ ಪ್ರತಿಕ್ರಿಯೆಗಳನ್ನು ಸಮಗ್ರವಾಗಿ ಗ್ರಹಿಸಲಾರವು. ಕಾರಣ, ಹಲವು ದೇಶೀ ಸಂಸ್ಕೃತಿಗಳು ವಸಾಹತುವಾದೀ ಸಂಸ್ಕೃತಿಗೆ ಆರಂಭದಲ್ಲೇ ತೀವ್ರ ಪ್ರತಿರೋಧವನ್ನು ವ್ಯಕ್ತಪಡಿಸಿದ ಉದಾಹರಣೆಗಳಿರುವಂತೆ, ಇನ್ನು ಕೆಲ ಸಂಸ್ಕೃತಿಗಳು ಹೊಸ ಸಂಸ್ಕೃತಿಯನ್ನು

ಸ್ವಾಗತಿಸಿದ ಉದಾಹರಣೆಗಳೂ ಇರುತ್ತವೆ.

ಯುರೋಪಿಯನ್ನರು ವಸಾಹತೀಕರಣವನ್ನಾರಂಭಿಸುವುದಕ್ಕಿಂತ ಮೊದಲೇ ಅವರ ಆಗಮನವನ್ನು ಕೆಲವು ಆಫ್ರಿಕನ್ ಸಂಸ್ಕೃತಿಗಳು ಅಪ್ರಜ್ಞಾಪೂರ್ವಕವಾಗಿ ಎದುರು ನೋಡುತ್ತಿದ್ದವೆಂಬುದಕ್ಕೆ ಮ್ಯಾಲಗೇಸಿ ಬುಡಕಟ್ಟಿನ ಜಾನಪದ ಕತೆಗಳ ಉದಾಹರಣೆಗಳನ್ನು ಮನೋನಿ ಕೊಡುತ್ತಾನೆ. ಕಡಲಿನಿಂದ ಬರುವ ಅಪರಿಚಿತರನ್ನು, ಅವರು ತರಲಿರುವ ಅದ್ಭುತವಾದ ಉಡುಗೊರೆಗಳನ್ನು ಕುರಿತು ಮ್ಯಾಲಗೇಸಿ ಪುರಾಣಗಳು ಹಾಗೂ ಜಾನಪದ ಕತೆಗಳಲ್ಲಿ ಬರುವ ಪ್ರತಿಮೆಗಳನ್ನು ಮನೋನಿ ಮನೋವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸುತ್ತಾನೆ. ಅಲ್ಲಿ ಕಾಣುವ ರಮ್ಯ ನಿರೀಕ್ಷೆಗಳನ್ನು ದೇಶೀಯರು ವಸಾಹತುಕಾರನನ್ನು ನಿರೀಕ್ಷಿಸುವ ರೂಪಕಗಳಂತೆ ಮನೋನಿ ಕಾಣುವುದು ಮೇಲುನೋಟಕ್ಕೆ ಉತ್ಪ್ರೇಕ್ಷಿತ ಓದಿನಂತೆ ತೋರುತ್ತದೆ. ಆದರೆ ಮಡಗಾಸ್ಕರ್‌ನಲ್ಲಿ ಹದಿನೇಳನೆಯ ಶತಮಾನದ ಆರಂಭ ದಲ್ಲಿ ಅಪಘಾತಕ್ಕೀಡಾದ ಹಡಗುಗಳಿಂದ ಪಾರಾಗಿ ಬಂದ ವಿದೇಶೀ ನಾವಿಕರನ್ನು ತಮ್ಮವರನ್ನಾಗಿಸಿ ಕೊಳ್ಳಲು ಸ್ಥಳೀಯ ಜನಾಂಗಗಳಲ್ಲಿ ನಡೆಯುತ್ತಿದ್ದ ಪೈಪೋಟಿಯಲ್ಲಿ ವಸಾಹತುಕಾರನನ್ನು ಕುರಿತ ಒಂದು ಬಗೆಯ ಆರಾಧನೆಯನ್ನು ಮನೋನಿ ಕಾಣಲೆತ್ನಿಸುತ್ತಾನೆ. ಹೀಗೆ ಇದ್ದಕ್ಕಿದ್ದಂತೆ ದೇಶೀ ಸಮಾಜಗಳಿಗೆ ಪ್ರವೇಶಿಸಿದ ಯುರೋಪಿಯನ್ನರನ್ನು ಕೊಂದ ಘಟನೆಗಳೂ ಇದ್ದವು, ನಿಜ. ಆದರೆ ಒಟ್ಟಾರೆಯಾಗಿ ಮಡಗಾಸ್ಕರ್‌ನಲ್ಲಿ ಬಿಳಿಯ ಮನುಷ್ಯನ ಆಗಮನದ ಆರಂಭ ಘಟ್ಟದಲ್ಲಿ ಜನಾಂಗದ್ವೇಷದ ಸೂಚನೆಗಳು ದೊಡ್ಡ ರೀತಿಯಲ್ಲಿ ಕಾಣಿಸುತ್ತಿರಲಿಲ್ಲ. ಕಾರಣ, ಈ ಪ್ರದೇಶಗಳಿಗೆ ವಸಾಹತುಕಾರ ಮೊದಲು ಆಗಮಿಸಿದಾಗ ಅವನನ್ನು ಅಪರಿಚಿತನಂತೆ, ಅಥವಾ ಅತಿಥಿಯಂತೆ ಕಾಣಲಾಯಿತೇ ಹೊರತು ಶತ್ರುವಿನಂತಲ್ಲ. ಮಡಗಾಸ್ಕರ್‌ನ ಸ್ಥಳೀಯರು ಅವನನ್ನು 'ವಝಾಹ'(ಅಂದರೆ 'ಗೌರವಾನ್ವಿತ ಅಪರಿಚಿತ') ಎಂದೇ ಕರೆಯುತ್ತಿದ್ದರು.

ಮನೋನಿಯ ಓದನ್ನು ಪಶ್ಚಿಮದ ಮನೋವಿಜ್ಞಾನದ ಗರಡಿಯಲ್ಲಿ ತಯಾರಾದ ಓದು ಎಂದು ತಳ್ಳಿಹಾಕುವುದು ಸುಲಭ. ಆದರೆ ಅವನು ಮ್ಯಾಲಗೇಸಿ ರೂಪಕಗಳಲ್ಲಿ ಗುರುತಿಸುವ 'ಅನ್ಯ'ದ ನಿರೀಕ್ಷೆಯನ್ನು ಇನ್ನಷ್ಟು ಸೂಕ್ಷ್ಮವಾಗಿ ನೋಡಬೇಕು. ವಸಾಹತುಶಾಹಿಯನ್ನು ಕುರಿತು ಇತರ ಸಂಸ್ಕೃತಿಗಳಲ್ಲಿ ಇದ್ದಿರಬಹುದಾದ ಕುತೂಹಲ, ಕಾತುರ, ಕನಸುಗಳನ್ನೂ ಮನೋನಿಯ ಓದು ಗ್ರಹಿಸಲೆತ್ನಿಸಿದೆ. ವಸಾಹತೀಕರಣಕ್ಕೊಳಗಾದ ಸಮಾಜಗಳಲ್ಲಿ ವಸಾಹತುವಾದೀ ಸಂಸ್ಕೃತಿಯ ಬಗ್ಗೆ ಹಲಬಗೆಯ ಆಕರ್ಷಣೆಗಳಿದ್ದವು ಎಂಬ ವಾಸ್ತವವನ್ನು ಕಡೆಗಣಿಸುವಂತಿಲ್ಲ.

ವಸಾಹತು ಸನ್ನಿವೇಶ ವಸಾಹತುವಾದೀ ಮೌಲ್ಯಗಳ ಶ್ರೇಷ್ಠತೆಯನ್ನು ಪ್ರತಿಪಾದಿಸಲು ಹಾಗೂ ಹೇರಲು ನಿರಂತರವಾಗಿ ಪ್ರಯತ್ನಿಸುವುದರಿಂದ ಎರಡು ಬಗೆಯ ಪ್ರತಿಕ್ರಿಯೆಗಳು ಹುಟ್ಟಿಕೊಳ್ಳುತ್ತವೆ: ಒಂದು, ವಸಾಹತೀಕರಣಗೊಂಡವನೂ ವಸಾಹತುಕಾರನ ಮೌಲ್ಯಗಳಿಗೆ

ಹತ್ತಿರವಾಗಲು ಪ್ರಯತ್ನಿಸುತ್ತಾನೆ. ಎರಡು, ವಸಾಹತುಕಾರನ ಮೌಲ್ಯಗಳನ್ನು ವಿರೋಧಿಸುತ್ತಾ, ತನ್ನ ಮೌಲ್ಯಗಳಿಗೆ ತೀವ್ರವಾಗಿ ಅತುಕೊಳ್ಳುತ್ತಾ ಉಗ್ರ ಸ್ವ-ಸಮರ್ಥನೆಯನ್ನಾರಂಭಿಸುತ್ತಾನೆ. ಮತೀಯವಾದೀ ಮೂಲಭೂತವಾದ ಹುಟ್ಟುವುದು ಈ ಘಟ್ಟದಲ್ಲಿ. ಆದರೆ, ಈ ಎರಡು ಪ್ರತಿಕ್ರಿಯೆಗಳನ್ನೂ ಸೂಕ್ಷ್ಮವಾಗಿ ವಸಾಹತುವಾದವೇ ನಿಯಂತ್ರಿಸುವುದರಿಂದ ಮೊದಲನೆಯ ಮಾದರಿಯ ಪ್ರತಿಕ್ರಿಯೆಯಲ್ಲಿ ದೇಶೀ ಪಾರಂಪರಿಕ ಮೌಲ್ಯಗಳು ನಿರ್ನಾಮವಾಗತೊಡಗುತ್ತವೆ. ಅವುಗಳಲ್ಲಿ ಅಳಿಯಲು ಲಾಯಕ್ಕಾದ ಹಾಗೂ ಉಳಿಸಿಕೊಳ್ಳಬಹುದಾದ ಮೌಲ್ಯಗಳೂ ಸೇರಿರುತ್ತವೆ. ಎರಡನೇ ಬಗೆಯ ಪ್ರತಿಕ್ರಿಯೆಯಲ್ಲಿ ವಸಾಹತುವಾದೀ ನೋಟ ಕ್ರಮ ಗಳನ್ನಾಧರಿಸಿದ ಪಾರಂಪರಿಕ ಮೌಲ್ಯಗಳ ಪುನರುಜ್ಜೀವನ ಆರಂಭವಾಗುತ್ತದೆ. ಈ ಪ್ರಕ್ರಿಯೆಯಲ್ಲಿ ದೇಶೀ ಮೌಲ್ಯಗಳಲ್ಲಿ ಇದ್ದಿರಬಹುದಾದ ಅರ್ಥ ಮತ್ತು ಪಾವಿತ್ರ್ಯಗಳು ನಾಶವಾಗತೊಡಗುವುದರ ಜೊತೆಗೇ ಪ್ರತಿಗಾಮಿ ಮೌಲ್ಯಗಳೂ ಹುಟ್ಟಿಕೊಳ್ಳುತ್ತವೆ. ಆಲ್ಜೀರಿಯಾದಲ್ಲಿ ಪರದಾ ಪದ್ಧತಿಯನ್ನು ಸಂಪ್ರದಾಯವಾದಿಗಳು ಉಗ್ರವಾಗಿ ಪ್ರತಿಪಾದಿಸಲಾರಂಭಿಸಿದ ಪ್ರತಿಗಾಮಿ ಧೋರಣೆ ಹೆಚ್ಚತೊಡಗಿದ್ದು ವಸಾಹತು ಘಟ್ಟದಲ್ಲೇ ಎಂಬುದನ್ನು ಫ್ಯಾನನ್ ಗುರುತಿಸುತ್ತಾನೆ. ಈ ಎರಡೂ ಬಗೆಯ ಪ್ರತಿಕ್ರಿಯೆಗಳಿಗಿಂತ ಭಿನ್ನವಾಗಿ, ಅಶೀಶ್‌ನಂದಿಯವರು ಭಾರತದ ಸಂದರ್ಭದಲ್ಲಿ ತೋರಿಸುವಂತೆ, ಪರಂಪರೆಯ ಒಳಗಿನ ವಿಮರ್ಶಕರಾದ ಈಶ್ವರಚಂದ್ರ ವಿದ್ಯಾಸಾಗರ ಹಾಗೂ ಗಾಂಧೀ ಮಾದರಿಗಳು ತೀವ್ರವಾದ ಸ್ವ-ವಿಮರ್ಶೆಯ ಮೂಲಕ ಪರಂಪರೆಯ ಸತ್ವವನ್ನು ಕಾಪಾಡಲೆತ್ನಿಸುತ್ತಲೇ ವಸಾಹತುವಾದವನ್ನು ವಿರೋಧಿಸುತ್ತಿರುತ್ತವೆ. ಅಶೀಶ್ ನಂದಿಯವರ ಪ್ರಕಾರ, ಈ ಮೂರನೆಯ ಮಾದರಿಯೇ ನಿಜವಾದ ವಸಾಹತು ವಿರೋಧ.

ಮೇಲಿನ ಮೂರು ಮಾದರಿಗಳಲ್ಲಿ, ಮೊದಲನೆಯ ಮಾದರಿಯ ಪ್ರತಿಕ್ರಿಯೆಯಲ್ಲಿ ಸೂಚಿಸಲಾದ ವಸಾಹತು ಮೌಲ್ಯಗಳ ಆರಾಧನೆಯನ್ನು ಕುರಿತು ಅಲ್ಬರ್ಟ್ ಮೆಮ್ಮಿ ಬರೆಯುತ್ತಾನೆ: ವಸಾಹತುಕಾರ ಸೃಷ್ಟಿಸಿರುವ ಆಕರ್ಷಕ ಮಾದರಿಗಳನ್ನು ಅಪ್ಪಿಕೊಳ್ಳುವ ದೇಶೀಯ ತನ್ನನ್ನು ತಾನೇ ಇಲ್ಲವಾಗಿಸಿಕೊಳ್ಳುವ ಹಂತ ತಲುಪುತ್ತಾನೆ. ವಸಾಹತುಕಾರ ಉತ್ಪಾದಿಸಿದ ವಸ್ತು, ಅವನ ವರ್ತನೆ, ಉಡುಪು, ವಾಸ್ತುಶಿಲ್ಪ, ಕಲೆ ಎಲ್ಲವನ್ನೂ ಅನುಕರಿಸುವ ಈ ಘಟ್ಟದಲ್ಲಿ ಸ್ವಂತದ ನಿರಾಕರಣೆ ಹಾಗೂ ವಸಾಹತುಕಾರನ ಆರಾಧನೆ-ಹೀಗೆ ಎರಡು ಮುಖಗಳಿರುತ್ತವೆ. ಈ ಸ್ಥಿತಿ ಹೆಚ್ಚು ವ್ಯಕ್ತವಾಗುವುದು ವಸಾಹತೀಕರಣಕ್ಕೊಳಗಾದ ದೇಶೀ ಬೂರ್ಜ್ವಾ ವರ್ಗದಲ್ಲಿ. ಹೀಗೆ ವಸಾಹತುಕಾರನಾಗಬಯಸುವ ದೇಶೀಯ ಎಷ್ಟು ಅಪಾಯಕಾರಿಯಾಗುತ್ತಾನೆಂದರೆ, ಆತ ದೇಶೀ ಜನತೆಯನ್ನೂ ವಸಾಹತುಕಾರನ ಕಣ್ಣಿನ ಮೂಲಕ ನೋಡಲಾರಂಭಿಸುತ್ತಾನೆ. ದೇಶೀ ಸಮಾಜದಲ್ಲಿ ಹಲವು ವೈರುಧ್ಯಗಳೂ, ಶಿಥಿಲ ಅಂಶಗಳೂ ಇರುವುದು ನಿಜ. ಆದರೆ ಈಗ(ವಸಾಹತುಕಾರನಿಗೆ ಕಂಡಂತೆಯೇ) ದೇಶೀಯನಿಗೂ ತನ್ನ ಸಮಾಜ ಅದಕ್ಷವಾಗಿ, ನಿಕೃಷ್ಟವಾಗಿ ಕಾಣತೊಡಗುತ್ತದೆ.

ಹೀಗೆ ವಸಾಹತೀಕರಣಗೊಂಡವರು ವಸಾಹತುಕಾರನ ಸಂಸ್ಕೃತಿಯನ್ನು ಅನುಕರಿಸುವ

ಘಟ್ಟದ ಹಲವು ದುರಂತ ಮುಖಗಳನ್ನು ಪಾಶ್ಚಾತ್ಯೀಕರಣ ಹಾಗೂ ಸಂಸ್ಕೃತೀಕರಣದಂಥ ಮೇಲ್ಮುಖ ಚಲನೆ ಕುರಿತ ಸಮಾಜಶಾಸ್ತ್ರೀಯ ಪರಿಕಲ್ಪನೆಗಳು ಸಂಪೂರ್ಣವಾಗಿ ಗ್ರಹಿಸುವುದಿಲ್ಲ. ಕಾರಣ, ಅವು ಒಂದು ಬಗೆಯ ಚಲನೆಯನ್ನಷ್ಟೇ ಗಮನಿಸುತ್ತವೆ. ವಸಾಹತು ಸನ್ನಿವೇಶವೊಂದರಲ್ಲಿ ವಸಾಹತುಕಾರನನ್ನು ಅನುಸರಿಸುವ ಯಹೂದಿಗಳ ದುರಂತ ಚಿತ್ರವನ್ನು ಮೆಮ್ಮಿ ಕೊಡುತ್ತಾನೆ:

> ವಸಾಹತೀಕರಣದ ನಿಕೃಷ್ಟಸ್ಥಿತಿಯಿಂದ ತಪ್ಪಿಸಿಕೊಳ್ಳಲು ವಸಾಹತುಕಾರನನ್ನು ಅನುಸರಿಸುವುದೇ ರಾಜಮಾರ್ಗವೆಂದು ಯಹೂದಿಗಳು ಭ್ರಮಿಸಿದರು. ಹಾಗೆ ಅನುಸರಿಸಿದರೆ ವಸಾಹತುಕಾರ ತಮ್ಮನ್ನು ಪರಕೀಯರಂತೆ ಕಾಣದೆ ತನ್ನವರನ್ನಾಗಿಯೇ ಕಾಣುತ್ತಾನೆಂದು ಈ ಯಹೂದಿಗಳು ಒಂದು ಘಟ್ಟದಲ್ಲಿ ನಂಬಿದರು. ಆದ್ದರಿಂದ ತಮ್ಮ ಭೂತದಿಂದ ಬಿಡಿಸಿಕೊಳ್ಳುವ ಸಲುವಾಗಿ ಸಾಮೂಹಿಕ ಅಭ್ಯಾಸಗಳನ್ನು ಬದಲಿಸಿಕೊಂಡ ಅವರು ಪಶ್ಚಿಮದ ಭಾಷೆ, ಸಂಸ್ಕೃತಿ, ಆಚರಣೆಗಳನ್ನು ಉತ್ಸಾಹದಿಂದ ಸ್ವೀಕರಿಸಲಾರಂಭಿಸಿದರು. ಆದರೆ ವಸಾಹತುಕಾರ ಮಾತ್ರ ಅವರನ್ನು ಒಪ್ಪಿಕೊಳ್ಳಲಿಲ್ಲ. ಹೀಗಾಗಿ ಅವರು(ತಮ್ಮ ಸಂಸ್ಕೃತಿಯನ್ನು ಕಳೆದು ಕೊಂಡು)ಎಲ್ಲೂ ಸಲ್ಲದ ಭೀಕರ ಸ್ಥಿತಿಯಲ್ಲಿ ಮುಂದುವರಿಯಬೇಕಾಯಿತು.

ಭೂತ-ವರ್ತಮಾನಗಳ ಸಂಬಂಧಗಳನ್ನು ರೂಪಾಂತರಿಸಲೆತ್ನಿಸುವ ವಸಾಹತುವಾದದ ನಾಗರೀಕರಣದ ಧರ್ಮಯುದ್ಧ ತರುವ ದುರಂತಗಳ ಅರಿವಾಗುವುದು ಈ ಘಟ್ಟಗಳಲ್ಲೇ. ಯಾವ ಸಂಸ್ಕೃತಿಗೂ ಸಲ್ಲದ ಛಿದ್ರೀಕರಣಗೊಂಡ ವ್ಯಕ್ತಿತ್ವಗಳು ಹುಟ್ಟುವುದೂ ಈ ಘಟ್ಟಗಳಲ್ಲೇ.

ಆದರೆ ಈ ಘಟ್ಟಗಳಲ್ಲೇ ವಸಾಹತೀಕರಣಕ್ಕೆ ತೀವ್ರವಾಗಿ ಪ್ರತಿಕ್ರಿಯಿಸುತ್ತಾ, ಇನ್ನೊಂದು ದೇಶೀವರ್ಗ ದೇಶೀ ಮೌಲ್ಯಗಳ ಪುನರುಜ್ಜೀವನದ ಪ್ರಶ್ನೆಯನ್ನು ಎತ್ತಲಾರಂಭಿಸುತ್ತದೆ. ಆಫ್ರಿಕಾದ 'ನೆಗ್ರಿಟ್ಯೂಡ್'(negritude) ಚಳುವಳಿ ಎತ್ತಿದ ನೀಗ್ರೋತನ ಹಾಗೂ ಆಫ್ರಿಕನ್ ಸಂಸ್ಕೃತಿಗಳ ಶ್ರೇಷ್ಠತೆಯ ಪ್ರಶ್ನೆಗಳಲ್ಲಿ ಇಂಥ ಮಾದರಿಗಳಿವೆ. ವಸಾಹತು ಘಟ್ಟದಲ್ಲಿ ಪ್ರವೇಶಿಸುವ ರಾಷ್ಟ್ರದ ಕಲ್ಪನೆಯೇ ಹೊಸ ಬಗೆಯ ಅಸ್ತಿತ್ವಗಳನ್ನು ಹಾಗೂ ಪ್ರತ್ಯೇಕತೆಗಳನ್ನು ನಿರ್ಮಿಸುತ್ತದೆ. ಜೊತೆಗೆ, ಎಡ್ವರ್ಡ್ ಸೈದ್ ಗುರುತಿಸುವಂತೆ ವಸಾಹತು ಘಟ್ಟದಲ್ಲಿ ಆರಂಭವಾಗುವ ಭೂತಕಾಲದೆಡೆಗಿನ 'ಮರು ಪ್ರಯಾಣ'ಗಳು ಧಾರ್ಮಿಕ ಹಾಗೂ ರಾಷ್ಟ್ರೀಯ ಮೂಲಭೂತವಾದವನ್ನು ಹುಟ್ಟುಹಾಕುತ್ತವೆ. ಅಶೀಶ್‌ನಂದಿ ಕೂಡ ಆಧುನಿಕ ಹಿಂದೂ ಮೂಲಭೂತವಾದ ವಸಾಹತುಶಾಹಿಯ ಅನೈತಿಕ ಕೂಸು ಎನ್ನುತ್ತಾರೆ. 'ಈ ಪುನರುಜ್ಜೀವನದ ಕಲ್ಪನೆ ಹುಟ್ಟುವುದು ಕೂಡ ಈಗಾಗಲೇ ತನ್ನ ದೇಶೀ ಮಾರ್ಗಗಳನ್ನು ಕೈಬಿಟ್ಟ(ಆಧುನಿಕ ವರ್ಗದ) ಸುಪ್ತ ಪಾಪಪ್ರಜ್ಞೆಯಿಂದಲೇ' ಎನ್ನುವ

ಮನೋನಿಯ ಮಾತು, ಪರಂಪರೆಯ ಮರುಪ್ರತಿಪಾದನೆಯ ಹಿನ್ನೆಲೆಯಲ್ಲಿರುವ ವಸಾಹತು ವಾದದ ಎಳೆಗಳನ್ನು ಗುರುತಿಸುತ್ತದೆ.

**ನಿರ್ವಸಾಹತೀಕರಣ ಮತ್ತು ನಿಜಮುಗ್ಧತೆಯ ಆರಾಧನೆ**

**ಪ್ರತಿಕ್ರಿಯೆ: ಒಂದು**

ನೀನು ನನಗೆ ಭಾಷೆ ಕಲಿಸಿದೆ. ಅದರಿಂದ ನನಗೆ ಆದ
ಲಾಭವೇನೆಂದರೆ, ನಾನು ಬೈಯುವುದು ಹೇಗೆಂದು ಕಲಿತೆ.

**ಕ್ಯಾಲಿಬನ್**

'ದಿ ಟೆಂಪೆಸ್ಟ್', ಅಂಕ-೧, ದೃಶ್ಯ-೨

**ಪ್ರತಿಕ್ರಿಯೆ: ಎರಡು**

**ಸಂದರ್ಶಕ:** ಪಶ್ಚಿಮದ ನಾಗರಿಕತೆಯ ಬಗ್ಗೆ ನಿಮ್ಮ ಅಭಿಪ್ರಾಯ?

**ಗಾಂಧೀಜಿ:** ಅವರಿಗೆ ಅಂಥದ್ದೊಂದು ಇರುವುದೇ ನನಗೆ ಗೊತ್ತಿಲ್ಲವಲ್ಲ...

ಎಲ್ಲೆಡೆ ಹಬ್ಬುವ ತನ್ನ ಶಕ್ತಿಯ ಮೂಲಕ ವಸಾಹತುವಾದ ದೇಶೀ ಪ್ರತಿಕ್ರಿಯೆಗಳ ಹಲವು ಮಾದರಿಗಳನ್ನು ನಿಯಂತ್ರಿಸುವ ರೀತಿಯನ್ನು ಹಿಂದಿನ ಭಾಗದಲ್ಲಿ ಚರ್ಚಿಸಲಾದ ಅಂಶಗಳು ಹೇಳುತ್ತವೆ. ಆಶ್ಚರ್ಯವೆಂದರೆ, ನಿರ್ವಸಾಹತೀಕರಣದ ಕೆಲವು ಮಾದರಿಗಳನ್ನೂ ವಸಾಹತುವಾದವೇ ಸೃಷ್ಟಿಸುವುದು. ಅಶೀಶ್‌ನಂದಿಯವರ ಮಾತಿನಲ್ಲೇ ಹೇಳುವುದಾದರೆ, ವಸಾಹತುವಾದ ತನ್ನ ವಿರುದ್ಧದ ಭಿನ್ನಮತಗಳನ್ನೂ, ವಸಾಹತುವಿರೋಧೀ ಸಿದ್ಧಾಂತ ಗಳನ್ನೂ ಪ್ರಭಾವಿಸಬಲ್ಲದು. ಆದ್ದರಿಂದಲೇ ನಿಜವಾದ ನಿರ್ವಸಾಹತೀಕರಣ ಆರಂಭ ವಾಗುವುದು ದೇಶೀಯ ತನ್ನ ಸಂಪೂರ್ಣ ಸ್ವಾಯತ್ತತೆಯನ್ನು ಪ್ರತಿಪಾದಿಸಿದಾಗ ಹಾಗೂ ಪ್ರಜ್ಞೆಯ ನಿರ್ವಸಾಹತೀಕರಣವಾದಾಗ. 'ನಿರ್ವಸಾಹತೀಕರಣವೆಂದರೆ ಹೊಸ ಮನುಷ್ಯನ ಸೃಷ್ಟಿ; ವಸಾಹತೀಕರಣಕ್ಕೊಳಗಾಗಿದ್ದ 'ವಸ್ತು' ತನ್ನನ್ನು ತಾನು ಸ್ವತಂತ್ರಗೊಳಿಸಿಕೊಳ್ಳುವ ರೀತಿಯಿಂದಲೇ ಮನುಷ್ಯನಾಗುತ್ತದೆ' ಎಂದು ನಿರ್ವಸಾಹತೀಕರಣದ ಮೂಲಕ ಆರಂಭ ವಾಗುವ ಸ್ವ-ಪ್ರತಿಪಾದನೆಯನ್ನು ಫ್ಯಾನನ್ ಸೂಚಿಸುತ್ತಾನೆ. ವಸಾಹತೀಕರಣಗೊಂಡವನ ಸ್ವ-ಪ್ರತಿಪಾದನೆಯಲ್ಲಿ ಫ್ಯಾನನ್, ಸಾರ್ತರ್ ಹಾಗೂ ಮೆಮ್ಮಿ ಮೂಲತಃ ವಸಾಹತುಕಾರ ನಿಂದ ಪರಿವರ್ತನೆಗೊಂಡ ಕ್ಯಾಲಿಬನ್‌ನ ಬಂಡಾಯದ ಮಾದರಿಯನ್ನು ಅಧಿಕೃತವೆಂದು ಗುರುತಿಸುತ್ತಾರೆ. ಆದರೆ ಗಾಂಧಿ, ಅಶೀಶ್‌ನಂದಿ ಮೊದಲಾದವರು ವಸಾಹತುಕಾರನ ಮಾದರಿಗಳನ್ನು ತಿರಸ್ಕರಿಸುವ ದೇಶೀ ಮನುಷ್ಯನ ವ್ಯಕ್ತಿತ್ವದ ಪ್ರತಿಪಾದನೆಯನ್ನು ನಿಜವಾದ ವಸಾಹತುವಿರೋಧವೆಂದು ಗುರುತಿಸುತ್ತಾರೆ.

ಮೊದಲಿಗೆ, ಫ್ಯಾನನ್ ಮಾದರಿಯನ್ನು ಗಮನಿಸಬಹುದು: ಈ ಮಾದರಿಯ ಪ್ರಕಾರ, ವಸಾಹತೀಕರಣಗೊಂಡವನು ಮೂಲತಃ ಬಲಿಪಶು. ಆದರೆ, ಈತ ಶೇಕ್ಸ್‌ಪಿಯರ್‌ನ

'ಟೆಂಪೆಸ್ಟ್' ನಾಟಕದ ಪ್ರಾಸ್ಪರೋ ಎಂಬ ವಸಾಹತುಕಾರನ ಭಾಷೆಯನ್ನು ಕಲಿತು ವಸಾಹತುಕಾರನ ವಿರುದ್ಧ ಬಂಡೆದ್ದಿರುವ ಕ್ಯಾಲಿಬನ್. 'ವಸಾಹತು ವಿರೋಧವನ್ನು ವ್ಯಾಖ್ಯಾನಿಸಲು ವಸಾಹತು ಸೃಷ್ಟಿಯಾದ ಕ್ಯಾಲಿಬನ್‌ನ ಪ್ರತಿರೂಪವನ್ನು ಬಳಸುವುದೇ ವಸಾಹತೀಕರಣಗೊಂಡವನ ಸ್ವ-ನಿರಾಕರಣೆಯ ಸೂಚನೆಯೆನ್ನುತ್ತಾರೆ ಡಿ.ಆರ್. ನಾಗರಾಜ್. ಫ್ಯಾನನ್ ಮಾದರಿಯ ವಸಾಹತು ವಿರೋಧ ಪಶ್ಚಿಮದ ಕಲ್ಪನೆಯ ರಾಷ್ಟ್ರಪ್ರಭುತ್ವ, ಆಧುನೀಕರಣ ಹಾಗೂ ವ್ಯವಸ್ಥಿತ ಹಿಂಸೆಯ ಮಾದರಿಯನ್ನು-ಮೂಲತಃ ವಸಾಹತುಕಾರನೇ ಹುಟ್ಟುಹಾಕಿದ ವ್ಯವಸ್ಥಿತ ಹಿಂಸೆಯ ಇನ್ನೊಂದು ರೂಪವನ್ನು-ಅಧಿಕೃತ ವಸಾಹತು ವಿರೋಧವೆಂದು ಪ್ರತಿಪಾದಿಸುತ್ತದೆ. 'ಹಿಂಸೆ ಸೋಲನ್ನೊಪ್ಪುವುದು ಮತ್ತಷ್ಟು ಭೀಕರವಾದ ಹಿಂಸೆಯೆದುರು ಮಾತ್ರ' ಎನ್ನುವ ಫ್ಯಾನನ್, ವಸಾಹತುಕಾರ ಹುಟ್ಟುಹಾಕಿದ ಹಿಂಸೆಯ ಭಾಷೆ ಅವನ ವಿರುದ್ಧವೇ ತಿರುಗುತ್ತದೆ ಎನ್ನುತ್ತಾನೆ.

ಫ್ಯಾನನ್ ಪ್ರತಿಪಾದಿಸುವ ವಸಾಹತುವಿರೋಧೀ ಹಿಂಸೆಯನ್ನು 'ವಸಾಹತು ರೋಗದಿಂದ ಮುಕ್ತವಾಗುವ ಪ್ರಕ್ರಿಯೆ' ಎನ್ನುವ ಸಾರ್ತ್‌ರ್, 'ವಸಾಹತು ಸನ್ನಿವೇಶದಲ್ಲಿ ಒಬ್ಬ ಯುರೋಪಿಯನ್ನನನ್ನು ಕೊಲ್ಲುವುದೆಂದರೆ, ಒಂದೇ ಬಾಣದಿಂದ ಎರಡು ಹಕ್ಕಿಗಳನ್ನು ಕೊಂದಂತೆ. ಅಂದರೆ ಇದು ಶೋಷಕ ಹಾಗೂ ಶೋಷಿತರಿಬ್ಬರ ಹತ್ಯೆ; ಶೋಷಕ ನೆಲಕ್ಕುರುಳಿದ ತಕ್ಷಣ, ಶೋಷಿತ ಮೊದಲ ಬಾರಿಗೆ 'ತನ್ನ' ನೆಲದ, ರಾಷ್ಟ್ರದ ಮಣ್ಣನ್ನು ಸ್ಪರ್ಶಿಸುತ್ತಾನೆ' ಎನ್ನುತ್ತಾನೆ. ಆದರೆ, ಗಾಂಧಿಯ ಪ್ರಕಾರ ವಸಾಹತುವಾದದ ವಿರೋಧದಲ್ಲಿ ಹಿಂಸಾಮಾರ್ಗ ಹಿಡಿಯುವುದರ ಮೂಲಕ ನಿಜವಾದ ಅರ್ಥದಲ್ಲಿ ನಿರ್ವಸಾಹತೀಕರಣ ಪ್ರಕ್ರಿಯೆ ನಡೆಯುವುದಿಲ್ಲ. ಕಾರಣ, 'ವಸಾಹತುವಾದದ ವಿರೋಧದಲ್ಲಿ ಹಿಂಸಾಮಾರ್ಗವನ್ನು ಹಿಡಿಯುವುದೆಂದರೆ ಆಧುನಿಕ ನಾಗರಿಕತೆಯನ್ನು ಒಪ್ಪಿಕೊಳ್ಳುವುದು ತಪ್ಪದು' ಎಂಬುದು ಗಾಂಧಿಯ ನಿಲುವು: 'ದೊಡ್ಡ ಪ್ರಮಾಣದಲ್ಲಿ ಹಿಂದೂಸ್ಥಾನವನ್ನು ಶಸ್ತ್ರಾಸ್ತ್ರಗಳಿಂದ ಸಬಲವಾಗಿಸುವುದೆಂದರೆ ಹಿಂದೂಸ್ಥಾನವನ್ನೂ ಯುರೋಪಿನ ಹಾಗೆ ಮಾಡುವುದು. ಆಮೇಲೆ ಯುರೋಪಿನ ಶೋಚನೀಯ ಸ್ಥಿತಿಯೇ ಇಲ್ಲಿಯೂ ಬರುತ್ತದೆ. ಅಂದರೆ ಹಿಂದೂಸ್ಥಾನ ಯುರೋಪಿನ ನಾಗರಿಕತೆಯನ್ನೇ ಅವಲಂಬಿಸಬೇಕು ಎಂದರ್ಥ'. ಗಾಂಧಿಯ ಈ ವಾದದೆದುರು ಫ್ಯಾನನ್ ಮಾದರಿಯ ವಸಾಹತು ವಿರೋಧವನ್ನು ಚರ್ಚಿಸುತ್ತಾ ಆಶೀಶ್‌ನಂದಿ, 'ಫ್ಯಾನನ್‌ನ ನೋಟಕ್ರಮ ವಸಾಹತೀಕರಣಗೊಂಡವನನ್ನು ವಸಾಹತುಕಾರನ ಸಂಸ್ಕೃತಿಗೆ ಹಾಗೂ ವಸಾಹತುಕಾರನ ದಮನಕಾರಿ ಮೌಲ್ಯಗಳಿಗೇ ಹೆಚ್ಚು ಹತ್ತಿರವಾಗಿಸುತ್ತದೆ' ಎನ್ನುತ್ತಾರೆ: 'ಹಿಂಸೆಗೆ ಆಂತರಿಕ ನ್ಯಾಯಬದ್ಧತೆ ಸಿಕ್ಕಿಬಿಟ್ಟ ತಕ್ಷಣ, ಎರಡು ಮಾನವ ಸಮಾಜಗಳ ವಿಭಿನ್ನ ಲೋಕದರ್ಶನಗಳ ನಡುವಣ ಹೋರಾಟವನ್ನು ಅದು ಅಧಿಕಾರ ಹಾಗೂ ಸಂಪತ್ತುಗಳಿಗಾಗಿ ನಡೆಯುವ ಹೋರಾಟದ ಮಟ್ಟಕ್ಕೆ ಇಳಿಸಿ ಬಿಡುತ್ತದೆ. ಹೋರಾಡುತ್ತಿರುವ ಎರಡು ಗುಂಪುಗಳೂ ಒಂದೇ ರೀತಿಯ ಮೌಲ್ಯಗಳ ಚೌಕಟ್ಟನ್ನು ಹಂಚಿಕೊಳ್ಳಬೇಕಾಗಿ ಬರುವುದು ಆಗಲೇ'.

'ವಸಾಹತುಕಾರನ ಮೌಲ್ಯಗಳನ್ನೇ ಸ್ವೀಕರಿಸಿ, ಅವನೇ ನಿರ್ಮಿಸಿದ ಮಾನಸಿಕ ಮಿತಿಗಳೊಳಗೇ ವಸಾಹತುಕಾರನನ್ನು ವಸಾಹತೀಕರಣಗೊಂಡವರು ಎದುರಿಸಬೇಕಾದ ಸ್ಥಿತಿಯನ್ನು ವಸಾಹತುವಾದ ಸೃಷ್ಟಿಸುತ್ತದೆ' ಎಂದು ಅಶೀಶ್‌ನಂದಿ ಇನ್ನೊಂದೆಡೆ ಬರೆಯುತ್ತಾರೆ. ಆದ್ದರಿಂದ, ಗಾಂಧೀಜಿಯವರ ದೃಷ್ಟಿಕೋನದಿಂದ ನೋಡಿದರೆ ವಸಾಹತು ವಿರೋಧವೆಂದರೆ ಕ್ಯಾಲಿಬನ್ ಪ್ರಾಸ್ಪರೋ ಆಗುವುದಲ್ಲ; ಪ್ರಾಸ್ಪರೋ ಹಾಗೂ ಕ್ಯಾಲಿಬನ್ ಇಬ್ಬರೂ ರೂಪಾಂತರಗೊಳ್ಳುವುದು:

> ವಸಾಹತು ಸನ್ನಿವೇಶದಲ್ಲಿ ತಾನಿರುವ ಎರಡನೆಯ ಅಥವಾ ಮೂರನೆಯ ದರ್ಜೆಯ ಸ್ಥಿತಿಯ ಬದಲಿಗೆ, ದಮನಕಾರಿ ವ್ಯವಸ್ಥೆಯಲ್ಲಿ ಮೊದಲನೇ ದರ್ಜೆಯ ನಾಗರಿಕನಾಗುವುದು ದಮನಕ್ಕೊಳಗಾದವನ ಗುರಿಯಾಗಿರ ಬಾರದು. ಬದಲಿಗೆ, ತನ್ನ ಮನುಷ್ಯತ್ವವನ್ನು ಮರಳಿ ಗಳಿಸಿಕೊಳ್ಳಲು ಸಾಧ್ಯವಾಗುವ ಪರ್ಯಾಯ ವ್ಯವಸ್ಥೆಯನ್ನು ಸೃಷ್ಟಿಸುವುದು ಅವನ ಗುರಿಯಾಗಿರಬೇಕು.

-ಇದು ಗಾಂಧೀಜಿಯ ನಿಲುವು.

**ಎನೇಕೆ ನಟುಲುಕ್ಪ: ಎಲ್ಲೂ ಕೂರದ ಹಕ್ಕಿ**

ವಸಾಹತೀಕರಣದ ಆಘಾತಕ್ಕೆ ಸಿಕ್ಕದೆ ಉಳಿದುಕೊಳ್ಳುವ ಹಲವು ಮಾರ್ಗಗಳನ್ನು ಪರಂಪರೆ ಹುಡುಕಿಕೊಳ್ಳುತ್ತಿರುತ್ತದೆ ಎಂಬುದನ್ನು ಸೂಚಿಸಲು ಪಶ್ಚಿಮ ಆಫ್ರಿಕಾದ ಕಾದಂಬರಿಕಾರ ಚಿನುವ ಅಚೀಬೆ 'ಎನೇಕೆ ನಟುಲುಕ್ಪ' ಎಂಬ ಹಕ್ಕಿಯ ಕತೆಯನ್ನು ಹೇಳುತ್ತಾನೆ. ಎನೇಕೆ ಎಂಬುದು ಎಲ್ಲೂ ಕೂರದೆ ಸದಾ ರೆಕ್ಕೆಯನ್ನೆತ್ತಿಕೊಂಡು ಹಾರಲು ಸಿದ್ಧವಾಗಿರುವ ಹಕ್ಕಿ. ಆ ಹಕ್ಕಿಯನ್ನು 'ನೀನೇಕೆ ಹೀಗೆ ಎಲ್ಲೂ ಕೂರದೆ ಹಾರುತ್ತಿರುತ್ತೀಯ?' ಎಂದು ಕೇಳಿದರೆ, 'ಗುರಿಯಿಟ್ಟು ಕೊಲ್ಲುವುದನ್ನು ಜನ ಕಲಿತಿದ್ದಾರೆ, ನಾನು ಆ ಗುರಿಗೆ ಸಿಕ್ಕದೆ ತಪ್ಪಿಸಿಕೊಂಡು ಹಾರುವುದನ್ನು ಕಲಿತಿದ್ದೇನೆ!' ಎನ್ನುತ್ತದೆ. ಹೀಗೆ ಸಂಸ್ಕೃತಿಗಳು ಅಥವಾ ಪರಂಪರೆಗಳು ಕೂಡ ಸದಾ ಎಚ್ಚರವಾಗಿದ್ದು ಹೊಸ ಸವಾಲುಗಳನ್ನು ಸ್ವೀಕರಿಸಿ ಬದುಕಿ ಉಳಿಯಲೆತ್ನಿಸುತ್ತವೆ ಎನ್ನುತ್ತಾನೆ ಅಚೀಬೆ.

ಆದ್ದರಿಂದಲೇ ವಸಾಹತೀಕರಣಕ್ಕೆ ದೇಶೀ ಪರಂಪರೆಗಳು ನೀಡಿದ ಪ್ರತಿಕ್ರಿಯೆಗಳ ಚರ್ಚೆಯಲ್ಲಿ ರಾಷ್ಟ್ರೀಯವಾದಿ ಹೋರಾಟಗಳಿಗೆ ಸ್ಥಾನವಿರುವಂತೆ, ಪರಂಪರೆಯಲ್ಲಿ ಅಡಗಿ ಕುಳಿತ ಇಂಥ ಅದೃಶ್ಯಶಕ್ತಿಗಳ ಹಾಗೂ ಗುಪ್ತ ಬಂಡಾಯದ ಮಾದರಿಗಳ ಚರ್ಚೆಗೂ ಮಹತ್ವವಿದೆ. ಇಂಥ ಗುಪ್ತ ಬಂಡಾಯವನ್ನು ಚರ್ಚಿಸುತ್ತಾ ಅಶೀಶ್‌ನಂದಿ ಬರೆಯುತ್ತಾರೆ:

> ದಮನಕ್ಕೊಳಗಾದವನು ಸಂಪೂರ್ಣ ಬಲಿಪಶುವಲ್ಲ. ಅವನ ಒಂದು ಭಾಗ ರಾಜಿಮಾಡಿ ಕೊಳ್ಳುತ್ತದೆ. ಹೊಂದಿಕೊಳ್ಳುತ್ತದೆ. ಇನ್ನೊಂದು ಭಾಗ ಆ ದಮನವನ್ನು ತಿರಸ್ಕರಿಸುತ್ತದೆ, ಅಸಹಕಾರ ತೋರುತ್ತದೆ; ಬುಡಮೇಲು ಗೊಳಿಸುತ್ತದೆ, ಅಥವಾ ನಾಶಮಾಡುತ್ತದೆ. ಈ ಬುಡಮೇಲು ಕೃತ್ಯಗಳನ್ನು

ಎಷ್ಟೋಸಲ ಹೊಂದಾಣಿಕೆಯ ಹೆಸರಿನಲ್ಲೇ, ದಾಸ್ಯದ ಮುಸುಕು ಹೊದ್ದೇ ಮಾಡುತ್ತಿರುತ್ತದೆ....

ಹೊಂದಾಣಿಕೆಯ ಪ್ರಕ್ರಿಯೆ ಸಂಸ್ಕೃತಿಯೊಂದು ತನ್ನನ್ನು ತಾನು ಕಳೆದುಕೊಳ್ಳುವ ಮಾರ್ಗವಾಗಿರಬಹುದಾದಂತೆ ತನ್ನನ್ನು ತಾನು ಉಳಿಸಿಕೊಳ್ಳುವ ಮಾರ್ಗವೂ, ಹೊಸ ಶಕ್ತಿಗಳನ್ನು ಜೀರ್ಣಿಸಿಕೊಳ್ಳುವ ಕ್ರಮವೂ ಆಗಿರಬಹುದೆಂಬುದನ್ನು ಮ್ಯಾಲಗೇಸಿ ಜನಾಂಗದ ಕ್ರಿಶ್ಚಿಯನೀಕರಣದ ಅಧ್ಯಯನದಲ್ಲಿ ಮನೋನಿ ತೋರಿಸುತ್ತಾನೆ. ಕ್ರಿಶ್ಚಿಯನ್ ಧರ್ಮವನ್ನು ಕೇವಲ ಸಾಮಾಜಿಕ ಮುಖವಾಡವನ್ನಾಗಿ ಸ್ವೀಕರಿಸಿದ ಮ್ಯಾಲಗೇಸಿ ಪರಂಪರಾವಾದಿಗಳು ತಂತಮ್ಮ ದೇವರುಗಳ ಜೊತೆಗಿನ ಸಂಬಂಧವನ್ನೂ ಮುಂದುವರಿಸಿಕೊಂಡು ಹೋಗುತ್ತಾರೆ. ಇದನ್ನು ಚರ್ಚಿಸುತ್ತಾ, ವಸಾಹತುವಾದ ಆರಂಭಿಸುವ ದೇಶೀ ಸಂಸ್ಕೃತಿಗಳ ನಿರ್ನಾಮ ಹಾಗೂ ಆಧುನಿಕ ನಾಗರಿಕತೆಯ ಪ್ರತಿಷ್ಠಾಪನೆಗಳನ್ನು ದೇಶೀ ಸಂಸ್ಕೃತಿಗಳು ಹಲವು ನೆಲೆಗಳಲ್ಲಿ ಒಪ್ಪಿಕೊಳ್ಳುವಂತೆ ತೋರುತ್ತಲೇ ಗುಪ್ತವಾಗಿ ವಿರೋಧಿಸುತ್ತಿರುವುದನ್ನು ಮನೋನಿ ಗುರುತಿಸುತ್ತಾನೆ. ಈ ದೃಷ್ಟಿಯಿಂದ, ವಸಾಹತೀಕರಣದ ವಿರುದ್ಧ ಹೋರಾಡಿ ಸೋತ ಪರಂಪರೆಯ ಮಾದರಿಗಳಿಗಿಂತ, 'ತಪ್ಪಿಸಿಕೊಳ್ಳುತ್ತಾ ಹೋರಾಡಿದ' ಅಥವಾ 'ಸೋಲೊಪ್ಪಿಕೊಂಡೇ ಹೋರಾಡಿದ' ಮಾದರಿಗಳು ಕುತೂಹಲಕಾರಿಯಾಗಿ ಕಾಣುತ್ತವೆ ಎಷ್ಟೋ ಸಂದರ್ಭಗಳಲ್ಲಿ ಹೇಡಿತನದಲ್ಲಿರುವುದು ಕೂಡ ಬದುಕಿ ಉಳಿಯುವ ಮಾರ್ಗವೇ ಎಂಬುದಕ್ಕೆ ಅಚೀಬೆಯ 'ಆರೋ ಆಫ್ ಗಾಡ್' ಕಾದಂಬರಿಯ ಉಮುವಾರೋವಿನ ಧರ್ಮಗುರು ಎಝೆಲುವಿನ ಬುದ್ಧಿವಾದದಲ್ಲೂ ಸೂಚನೆಗಳಿವೆ: 'ಧೈರ್ಯಶಾಲಿಯಾಗಿರುವುದು ಅಥವಾ ನಿರ್ಭೀತನಾಗಿರುವುದು ಮೆಚ್ಚತಕ್ಕ ವಿಷಯವೇನೋ ನಿಜ. ಆದರೆ ಕೆಲವು ಸಲ ಹೇಡಿಯಾಗಿರುವುದು ಕೂಡ ಒಳ್ಳೆಯದೇ. ಎಷ್ಟೋ ಸಲ ನಾವು ಹೇಡಿಯ ಮನೆಯಂಗಳದಲ್ಲಿ ನಿಂತು 'ಧೈರ್ಯಶಾಲಿ' ಮನುಷ್ಯ ಬದುಕಿದ್ದ ಸ್ಥಳದ ಅವಶೇಷಗಳನ್ನು ನೋಡಬೇಕಾದ ಪ್ರಸಂಗ ಬರುತ್ತದೆ. ಎಂದೂ ಯಾವುದಕ್ಕೂ ತಲೆಬಾಗದವನು ಬಲುಬೇಗ ಚಟ್ಟದ ಬೊಂಬಿಗೆ ತಲೆಬಾಗಬೇಕಾಗುತ್ತದೆ'.

ವಸಾಹತುಕಾರನ ಕಣ್ಣಿಗೆ 'ನಿಷ್ಕ್ರಿಯತೆ'ಯಂತೆ ಕಾಣುವ ಪ್ರತಿಭಟನೆಯ ಮಾರ್ಗಗಳನ್ನು ಹಾಗೂ ಉಳಿದುಕೊಳ್ಳುವ ಮಾರ್ಗಗಳನ್ನು ದೇಶೀ ಸಂಸ್ಕೃತಿಗಳು ಅಳವಡಿಸಿಕೊಳ್ಳುವುದನ್ನು ಈ ಅಂಶಗಳು ಸೂಚಿಸುತ್ತವೆ. ಆಧುನಿಕತೆಗೆ ಯಾವಾಗಲೂ ಸವಾಲಾಗಿ ಉಳಿದಿರುವ ದೇಶೀ ಸಂಸ್ಕೃತಿಗಳ ಅಂಗಗಳು ಅಥವಾ ಮಾದರಿಗಳು ಕೂಡ ಇವೇ. ಹಾಗೆ ನೋಡಿದರೆ ಎಲ್ಲ ಬಗೆಯ ದಬ್ಬಾಳಿಕೆಯ ಮಾದರಿಗಳಿಗೂ ಈ ಬಗೆಯ 'ನಿಷ್ಕ್ರಿಯ' ಎಂಬಂತೆ ಕಾಣುವ ಪ್ರತಿಕ್ರಿಯೆಗಳು ಸವಾಲಾಗಿರುತ್ತವೆಂದು ಕಾಣುತ್ತದೆ.

ಈ ಹಿಂದೆ ಉಲ್ಲೇಖಿಸಲಾದ, ಬಂದೂಕಿನ ಗುರಿಯಿಂದ ತಪ್ಪಿಸಿಕೊಂಡು ಹಾರುವ ಎನೇಕೆ ಹಕ್ಕಿ ಹಾಗೂ ಪರಂಪರೆಯ ಶಕ್ತಿಗಳ ನಡುವಣ ಸಾಮ್ಯ ಅಚೀಬೆಯ 'ಥಿಂಗ್ಸ್ ಫಾಲ್ ಅಪಾರ್ಟ್' ಹಾಗೂ 'ಆರೋ ಆಫ್ ಗಾಡ್' ಕಾದಂಬರಿಗಳೆರಡರಲ್ಲೂ ಸುಳಿಯುತ್ತದೆ.

ಏನೇಕೆ ಹಕ್ಕಿಯಂತೆ ಹಾರುತ್ತಾ, ಅಥವಾ ಚರಿತ್ರೆಯ ಚಲನೆಯ ಪ್ರಶ್ನೆಯೇ ಅಮುಖ್ಯ ಎಂಬಂತೆ ಅದನ್ನು ಮೀರುತ್ತಾ, ವಸಾಹತೀಕರಣದ ಆಘಾತವನ್ನು ದೇಶೀ ಸಂಸ್ಕೃತಿಗಳ ಹಲವು ಅಂಗಗಳು ತಪ್ಪಿಸಿಕೊಳ್ಳುತ್ತವೆ, ನಿಜ. ಆದರೆ, ವಸಾಹತುವಾದವನ್ನು ಮುಖಾ ಮುಖಿಯಾಗುವ, ಪರಕೀಯ ನೋಟಕ್ರಮಗಳು ಎತ್ತಬಹುದಾದ ಹಲವು ನ್ಯಾಯಬದ್ಧ ಹಾಗೂ ವಿಮರ್ಶಾತ್ಮಕ ಪ್ರಶ್ನೆಗಳನ್ನು ಎದುರಿಸುವ, ಒಪ್ಪುವ, ಅಂತರ್ಗತಗೊಳಿಸಿ ಕೊಳ್ಳುವ, ಆಧುನಿಕತೆ ಹಾಗೂ ಪರಂಪರೆಗಳೆರಡರ ಜೀವನಾಶಕ ಗುಣಗಳೆರಡರ ಬಗೆಗೂ ಎಚ್ಚರವಾಗಿರಬಲ್ಲ ಸಂಸ್ಕೃತಿಗಳು ಮಾತ್ರ ಕೇವಲ ವಸಾಹತುವಾದೀ ಸಂಸ್ಕೃತಿಯ ಅನುಕರಣೆ ಗಳಾಗದೆ ಅಥವಾ ಅತಿ ಸಾಂಪ್ರದಾಯಿಕತೆಯ ಚಿಪ್ಪಿನೊಳಹೊಕ್ಕು ಪ್ರತಿಗಾಮಿಯಾಗದೆ, ತಮ್ಮ ಸ್ವಾಯತ್ತ ಅಸ್ತಿತ್ವವನ್ನೂ ಕಾಪಾಡಿಕೊಂಡು ಬರಬಲ್ಲವು.

**ಭಾಗ ೨**

**ಯುರೋಪು, ಪಶ್ಚಿಮ ಮತ್ತು ಆಫ್ರಿಕಾ : ಸಂಕಥನಗಳ ಮುಖಾಮುಖಿ**

'... ಇದು ಕಗ್ಗತ್ತಲ ಖಂಡ'

'... ಇದು ಅಚಾರಿತ್ರಿಕ ಆಫ್ರಿಕಾ'

'... ಈ ಆಫ್ರಿಕನ್ನರಿಗೆ ಆತ್ಮವಿದೆಯೇ?'

'... ಈ ಆಫ್ರಿಕನ್ನರಿಗೆ ಮಿದುಳು ಇದೆಯೇ?'

'... ಈ ಆಫ್ರಿಕನ್ನರ ಮೈ ಚರ್ಮ ಸರಿಯಾಗಿ ಬೆಳೆದಿಲ್ಲವೆಂದು ಕಾಣುತ್ತದೆ'

'... ಕಪ್ಪುತನ ದೇವರೇ ಕೊಟ್ಟ ಕರಾಳ ಸ್ಥಿತಿ'

'... ಮಾನವ ಜನಾಂಗವನ್ನು ಬಿಳಿ, ಹಳದಿ, ಕೆಂಪು ಹಾಗೂ ಕಪ್ಪು ಎಂದು ವಿಂಗಡಿಸಲಾಗಿದೆ.'

-ಇವು ಆಫ್ರಿಕಾದ ವಿರುದ್ಧ ಚರಿತ್ರೆಯಲ್ಲಿ ಸೃಷ್ಟಿಯಾಗಿದ್ದ ಸಂಕಥನಗಳು.

**ಅಚೀಬೆಯ ಆಫ್ರಿಕಾ, ಕಾನ್ರಾಡ್‌ನ ಆಫ್ರಿಕಾ**

ಇಂಗ್ಲಿಷಿನಲ್ಲಿ ಬರೆಯುವ ಪೋಲೆಂಡಿನ ಕಾದಂಬರಿಕಾರ ಜೋಸೆಫ್ ಕಾನ್ರಾಡ್‌ನ 'ಹಾರ್ಟ್ ಆಫ್ ಡಾರ್ಕ್‌ನೆಸ್' ಕಾದಂಬರಿಯಲ್ಲಿ ಎರಡು ನದಿಗಳಿವೆ. ಒಂದು, ಇಂಗ್ಲೆಂಡಿನಲ್ಲಿ ಹರಿಯುವ ಥೇಮ್ಸ್ ನದಿ. ಇನ್ನೊಂದು, ಆಫ್ರಿಕಾದಲ್ಲಿ ಹರಿಯುವ ಕಾಂಗೋ ನದಿ. ಈ ಕಾದಂಬರಿಯ ತಾತ್ವಿಕ ನೋಟದಿಂದಾಗಿ ಈ ನದಿಗಳಿಗೆ ಪರಸ್ಪರ ವಿರುದ್ಧವಾದ ಅರ್ಥಗಳು ಹುಟ್ಟಿಕೊಳ್ಳುವುದನ್ನು ಚಿನುವ ಅಚೀಬೆ ಈ ಕೃತಿಯ ನಿಕಟ ಓದಿನ ಮೂಲಕ ತೋರಿಸಿಕೊಡುತ್ತಾನೆ. ಅಚೀಬೆಯ ಸಾಂಸ್ಕೃತಿಕ ಓದು ತೋರಿಸಿಕೊಡುವಂತೆ, ಈ ಕಾದಂಬರಿಯ ಥೇಮ್ಸ್ ನದಿ 'ನಾಗರಿಕ' ಪಶ್ಚಿಮವನ್ನು ಸಂಕೇತಿಸುತ್ತದೆ; ಕಾಂಗೋ ನದಿ 'ಅನಾಗರಿಕ' ಆಫ್ರಿಕಾವನ್ನು ಪ್ರತಿನಿಧಿಸುತ್ತದೆ. ಆಫ್ರಿಕಾ ಕುರಿತಂತೆ ಆ ಹೊತ್ತಿಗಾಗಲೇ

ಹಲಬಗೆಯ ಸಿದ್ಧಮಾದರಿಗಳನ್ನು ಯುರೋಪ್‌ಕೇಂದ್ರಿತ ಚರಿತ್ರೆ, ವಿಜ್ಞಾನ, ಪ್ರವಾಸ ಕಥನ, ಸಮಾಜಶಾಸ್ತ್ರ ಸೃಷ್ಟಿಸಿತ್ತು. ಅದೇ ಹಾದಿಯಲ್ಲಿ ಆಫ್ರಿಕಾದ ವಿರುದ್ಧ ಯುರೋಪಿಯನ್ ಕಾದಂಬರೀ ರಾಜಕಾರಣದ ಹಲವು ಸೂಕ್ಷ್ಮ ಮುಖಗಳನ್ನು ಅಚೀಬೆಯ ವಿಶ್ಲೇಷಣೆ ತೆರೆದಿಡುತ್ತದೆ. ಅವನ ಪ್ರಕಾರ, 'ಹಾರ್ಟ್ ಆಫ್ ಡಾರ್ಕ್‌ನೆಸ್' ಸೃಷ್ಟಿಸುವ ಆಫ್ರಿಕಾ ಯುರೋಪಿಗೆ, ಅಂದರೆ ನಾಗರಿಕತೆಗೆ, ತದ್ವಿರುದ್ಧವಾದ ಜಗತ್ತಾಗಿ ಕಾಣುತ್ತದೆ. ಪಶ್ಚಿಮವನ್ನು ಪ್ರತಿನಿಧಿಸುವ ಥೇಮ್ಸ್ ನದಿ ಪ್ರಶಾಂತವಾಗಿ ಕಂಡರೆ, ಆಫ್ರಿಕಾವನ್ನು ಪ್ರತಿನಿಧಿಸುವ ಕಾಂಗೋ ನದಿಯ ಸ್ತಬ್ಧತೆ ಭಯಾನಕವಾಗಿ ಕಾಣುತ್ತದೆ. ಕಾದಂಬರಿಯ ನಿರೂಪಕನೇ ಈ ಅಂಶವನ್ನು ಸೂಚಿಸುತ್ತಾನೆ: '...ಆ ಸ್ತಬ್ಧತೆ ಪ್ರಶಾಂತತೆಯನ್ನು ನೆನಪಿಗೆ ತರುವಂತಿರಲಿಲ್ಲ. ನಿಗೂಢ ಉದ್ದೇಶವೊಂದನ್ನು ಕುರಿತು ರೋದಿಸುತ್ತಿರುವಂತೆ ತೋರುವ ಅತೃಪ್ತ ಶಕ್ತಿಯೊಂದರ ಮೌನ ಅದು. ಅದು ನಿಮ್ಮತ್ತ ಸೇಡಿನಿಂದ ನೋಡುತ್ತದೆ'. ಆಫ್ರಿಕಾವನ್ನು ಭಿತ್ತಿಯಾಗಿ, ಕತೆ ನಡೆಯುವ ರಂಗವಾಗಿ ಬಳಸಿಕೊಳ್ಳುವ ಈ ಕಾದಂಬರಿಯಲ್ಲಿ ಆಫ್ರಿಕನ್ನನನ್ನು ಮನುಷ್ಯನನ್ನಾಗಿ ನೋಡಲು ಒಲ್ಲದ ಧೋರಣೆಯೊಂದು ಸುಪ್ತವಾಗಿ ಕೆಲಸ ಮಾಡುತ್ತಿದ್ದಂತಿದೆ. ಆದ್ದರಿಂದ ಇಲ್ಲಿನ ಆಫ್ರಿಕಾ ಮಾನವೀಯ ಅಂಶಗಳಿಲ್ಲದ ಮೆಟಫಿಸಿಕಲ್ ಯುದ್ಧಭೂಮಿಯಂತೆ ಕಾಣುತ್ತದೆ. ಇಲ್ಲಿ ಕಾನ್ರಾಡನ ಕಣ್ಣಿಗೆ ಕಾಣುವುದು ಆದಿಮ ಸ್ಥಿತಿಯಲ್ಲಿರುವ ಆಫ್ರಿಕನ್ ಚೇತನಗಳು ಮಾತ್ರ... ಇದು ಅಚೀಬೆಯ ವಾದದ ಸಾರ.

ಅಚೀಬೆಯ ಪ್ರಕಾರ, ಈ ಕಾದಂಬರಿಯ ಪ್ರತಿಮೆಗಳು ಹಾಗೂ ರೂಪಕಗಳು ಜನಾಂಗೀಯವಾದಿ ಪಶ್ಚಿಮದ ಚಿತ್ತ ಅಥವಾ ಮಾನಸಿಕ ರಚನೆ(psyche)ಯಿಂದ ಹುಟ್ಟಿದಂಥವು. ಆದ್ದರಿಂದ ಇದು ಮೂಲತಃ ಕಾನ್ರಾಡ್ ಪ್ರತಿಭೆ ಸೃಷ್ಟಿಸಿದ ಆಫ್ರಿಕಾ ಅಲ್ಲ; ಇದು ಪಶ್ಚಿಮದ ಪೂರ್ವಗ್ರಹ ಸೃಷ್ಟಿಸಿದ ಆಫ್ರಿಕಾ:

> (ಇದು) ಪಶ್ಚಿಮದ ಕಲ್ಪನೆಯಲ್ಲಿರುವ ಆಫ್ರಿಕಾದ ಪ್ರತಿಬಿಂಬ. ಕಾನ್ರಾಡ್ ತನ್ನ ಅದ್ಭುತ ಪ್ರತಿಭಾಶಕ್ತಿಯಿಂದ ಅದನ್ನು ಪುನರ್‌ಸೃಷ್ಟಿಸುತ್ತಾನೆ, ಅಷ್ಟೆ. ಪಶ್ಚಿಮಕ್ಕೆ ತನ್ನ ಸಂಸ್ಕೃತಿಯ ಅಸ್ಥಿರತೆಗಳನ್ನು ಕುರಿತು ಆಳದ ಆತಂಕಗಳಿವೆ. ಆಳವಾದ ಮನಃಶಾಸ್ತ್ರೀಯ ವಿಶ್ಲೇಷಣೆಯಿಂದ ಮಾತ್ರ ಅರಿಯಬಹುದಾದ ಕಾರಣಗಳಿವು. ಆದ್ದರಿಂದಾಗಿ ಸದಾ ತನ್ನನ್ನು ತಾನು ಆಫ್ರಿಕಾಕ್ಕೆ ಹೋಲಿಸಿಕೊಂಡು ತನ್ನ ಸಂಸ್ಕೃತಿ ಉತ್ತಮವಾದದ್ದೆಂದು ಸಮಾಧಾನ ಮಾಡಿಕೊಳ್ಳಬೇಕಾದ ಅಗತ್ಯಗಳು ನಿರಂತರವಾಗಿ ಪಶ್ಚಿಮಕ್ಕಿರುವುವೆಂದು ತೋರುತ್ತದೆ.

ಅಚೀಬೆ ಕಾನ್ರಾಡನ ಕೃತಿಯನ್ನು ಓದುವ ರೀತಿಯಲ್ಲೇ ಸಮಸ್ಯೆಗಳಿರುವಂತೆ ಕಾಣುತ್ತದೆ. ಕಾದಂಬರಿಯ ನಿರೂಪಕ ಮಾರ್ಲೋನ ನಿಲುವುಗಳನ್ನು ಕಾನ್ರಾಡನ ನಿಲುವುಗಳೆನ್ನುವುದು

ಕಾದಂಬರಿಯ ಅಸಮರ್ಪಕವಾದ ಓದಿನಂತೆ ಕೂಡ ತೋರುತ್ತದೆ. 'ಹಾರ್ಟ್ ಆಫ್ ಡಾರ್ಕ್‌ನೆಸ್' ಕೃತಿಯನ್ನು 'ಸಾಮ್ರಾಜ್ಯವಾದದ ಉಗ್ರ ವಿಮರ್ಶೆಯ ರೂಪಕವಾಗಿ' 'ಸಂಪೂರ್ಣ ಜ್ಞಾನೋದಯ ಪಡೆದ ಯುರೋಪಿಯನ್ನನಿಗೂ ಆಫ್ರಿಕನ್ನರನ್ನು ಮಾನವ ಜೀವಿಗಳನ್ನಾಗಿ ಕಾಣಲು ಅಸಾಧ್ಯವಾಗುವುದನ್ನು ಸೂಕ್ಷ್ಮವಾಗಿ ಶೋಧಿಸುವ ಕಾದಂಬರಿಯಾಗಿ' ಓದುವ ಸಾಧ್ಯತೆಗಳಿವೆ. ಹೀಗಾಗಿ, ಅಚೀಬೆ ಈ ಕಾದಂಬರಿಯ ಅರ್ಥಸಾಧ್ಯತೆಗಳನ್ನು ಸೀಮಿತಗೊಳಿಸುವಂತೆ ಕಾಣುತ್ತದೆ. ಕಾನ್ರಾಡನ ಸಾಮ್ರಾಜ್ಯ ವಿರೋಧೀ ತಾತ್ತ್ವಿಕ ನಿಲುವುಗಳನ್ನು ಕುರಿತು ಬರೆಯುತ್ತಾ ಎಲಿಯಟ್ 'ವ್ಯವಸ್ಥೆ, ಸಾಮ್ರಾಜ್ಯ ಹಾಗೂ ಜನಾಂಗ ವನ್ನು ಕಿಪ್ಲಿಂಗ್ ಸಮರ್ಥಿಸುತ್ತಿದ್ದರೆ, ಕಾನ್ರಾಡ್ ಈ ಮೂರಕ್ಕೂ ವಿರುದ್ಧವಾಗಿದ್ದ' ಎನ್ನುತ್ತಾನೆ.

ಆದರೆ ಅಚೀಬೆಯ ಪ್ರತಿಕ್ರಿಯೆಯನ್ನು ಒಂದು ಸಂಸ್ಕೃತಿಯ ಪ್ರತಿಕ್ರಿಯೆಯನ್ನಾಗಿ ನೋಡಿದರೆ, ಅಚೀಬೆ ಕಾದಂಬರಿಯನ್ನು ಓದುವ ರೀತಿಗೂ ವಿಶಾಲ ಅರ್ಥಗಳು ಹುಟ್ಟಿ ಕೊಳ್ಳುತ್ತವೆ. 'ಕಾನ್ರಾಡನ ಕಾದಂಬರಿಯಲ್ಲಿರುವುದು ಕಾನ್ರಾಡನ ಆಫ್ರಿಕಾ ಅಲ್ಲ' ಎಂಬ ಅಚೀಬೆಯ ಮಾತಿನ ಹಿನ್ನೆಲೆಯಲ್ಲಿ ನೋಡಿದರೆ, ಅಚೀಬೆಯ ಪ್ರತಿಕ್ರಿಯೆಯಲ್ಲಿರುವುದೂ ಅಚೀಬೆಯ ಪ್ರತಿಕ್ರಿಯೆಯಲ್ಲ; ಅದು ಆಫ್ರಿಕಾದ ಪ್ರತಿಕ್ರಿಯೆ. ಕಾದಂಬರಿಕಾರನಾಗಿ ಕಾನ್ರಾಡನ ಮಹತ್ವವನ್ನು ಒಪ್ಪಿಕೊಂಡರೂ ಈ ಕೃತಿಯ ಶ್ರೇಷ್ಠತೆ ಕುರಿತು ಅಚೀಬೆಗೆ ಅನುಮಾನಗಳಿವೆ. ಕಾರಣ, ಕಾದಂಬರಿಯ ತುಂಬ ಕಪ್ಪು, ಕಪ್ಪುತನ ಹಾಗೂ ಆಫ್ರಿಕಾ ಕುರಿತಂತೆ ಕಾದಂಬರಿಕಾರನ ಅಸಹನೆ, ಅಸಹ್ಯ, ಜಿಗುಪ್ಸೆಗಳು ಸ್ಥಾಯಿಯಾಗಿವೆ. ಇದು ಕಾದಂಬರಿಯ ಪ್ರಧಾನ ದೃಷ್ಟಿಕೋನವೇ ಆಗಿಬಿಟ್ಟಿದೆ ಎನ್ನುತ್ತಾ '... a black figure stood up. Strode on black legs waving black arms' ಎಂಬ ವಾಕ್ಯ ಕುರಿತು ಅಚೀಬೆಯ ಪ್ರತಿಕ್ರಿಯೆ:

> ಕಪ್ಪು ಮನುಷ್ಯನೊಬ್ಬ ಮೇಲೆದ್ದು, ವೇಗವಾಗಿ ಕಪ್ಪು ಹೆಜ್ಜೆ ಹಾಕುತ್ತಾ ಬರುವಾಗ 'ಬಿಳಿಯ' ಕೈಗಳನ್ನು ಮೇಲೆತ್ತಿ ಬೀಸುತ್ತಾನೆಂದು ಯಾರಾದರೂ ಊಹಿಸುತ್ತಾರೆಯೆ? ಇದು ಕಾನ್ರಾಡನಿಗೆ ನೀಗ್ರೋಗಳನ್ನೂ ಕಪ್ಪನ್ನೂ ಕುರಿತಂತೆ ಇದ್ದ ವಿಚಿತ್ರ ಪೂರ್ವಗ್ರಹಕ್ಕೊಂದು ಉದಾಹರಣೆ.

ಕಾನ್ರಾಡನಲ್ಲಿ ಕಾಣುವ ಆಫ್ರಿಕಾ ಕುರಿತ ಅಸಹನೆ ಹಾಗೂ ಅವನ ಕಾದಂಬರಿಯಲ್ಲಿ ಆಫ್ರಿಕನ್ನನ ನಿರ್ಮಾನವೀಕರಣವನ್ನು ಚರ್ಚಿಸುತ್ತಾ ಜೊನಾಹ್ ರಾಸ್ಕಿನ್ ಬರೆಯುತ್ತಾನೆ:

> ಭ್ರಷ್ಟತೆ ಮತ್ತು ಕೇಡಿನ ಎರಡು ಮೂಲಗಳನ್ನು ಕಾನ್ರಾಡ್ ಹುಡುಕುತ್ತಾನೆ. ಒಂದು ಘಟ್ಟದಲ್ಲಿ ಈ ಎರಡಕ್ಕೂ ಸಾಮ್ರಾಜ್ಯವಾದವೇ ಮೂಲ ಕಾರಣವೆಂದು ಸೂಚಿಸುವಂತೆ ತೋರುವ ಕಾನ್ರಾಡ್, ಕೊನೆಗಳಿಗೆಯಲ್ಲಿ ಅದಕ್ಕೆ ಕಾರಣ ಕಪ್ಪು ಮನುಷ್ಯ ಎನ್ನುತ್ತಾನೆ... ಕಾನ್ರಾಡನಿಗೆ ಕಪ್ಪು ಮನುಷ್ಯನೆಂದರೆ ಪರಕೀಯ, ನಿಗೂಢ, ನಂಬಿಕೆಗೆ ಅರ್ಹನಲ್ಲದವನು...

ಕಪ್ಪುತನವೆಂದರೆ ದುಷ್ಟತನ.

ಡೇವಿಡ್ ಕ್ಯಾರೋಲ್ ಕೂಡ ಕಾನ್ರಾಡ್ ಆಫ್ರಿಕಾ ಕುರಿತ ಕ್ಲೀಷೆಗಳಿಗೆ ದಟ್ಟವಾದ ರೂಪ ಕೊಡುವುದನ್ನು ಚರ್ಚಿಸುತ್ತಾನೆ:

> ಇದು ಥಟ್ಟನೆ ಸೂರ್ಯ ಮುಳುಗುವ, ಹದ್ದುಗಳ, ಕರಿನೀರಿನ ಜ್ವರದ ಆಫ್ರಿಕಾ. ಇಲ್ಲಿ ಉರಿಯುವ ಸೂರ್ಯನನ್ನು ಏಕಾಏಕಿ ಕವಿಯುವ ಮಂಕು, ಎದೆ ನಡುಗಿಸುವ ಸ್ತಬ್ಧತೆ. ಇದು ಅರ್ಥವಿಲ್ಲದ, ಆಕಾರವಿಲ್ಲದ, ಇಲ್ಲಿ ನಡೆಯುವ ಒಂದೊಂದು ಘಟನೆಗಳ ನಡುವೆ ಪರಸ್ಪರ ಸಂಬಂಧವೇ ಇಲ್ಲದ ಆಫ್ರಿಕಾ.

'ಈ ಬಗೆಯ ಕಲಾಕೃತಿಗಳಲ್ಲಿ ಅಡಗಿರುವ ಜನಾಂಗೀಯವಾದ ನಾಜೀವಾದಕ್ಕಿಂತ ಭೀಕರವಾದದ್ದು' ಎನ್ನುವ ಅಚೀಬೆ ಕಾನ್ರಾಡನ ಕೃತಿಯಲ್ಲಿ ಸುಪ್ತವಾಗಿರುವ ಜನಾಂಗೀಯ ವಾದಕ್ಕೆ ಹಲವು ಉದಾಹರಣೆಗಳನ್ನು ಕೊಡುತ್ತಾ, ಕೊನೆಗೆ ಈ ನಿಲುವನ್ನು ತಲುಪುತ್ತಾನೆ:

> ಲೇಖಕನೊಬ್ಬ ದೃಶ್ಯಗಳನ್ನೂ, ಘಟನೆಗಳನ್ನೂ, ಅವುಗಳ ಪರಿಣಾಮಗಳನ್ನೂ ದಾಖಲಿಸುವಂತೆ ನಟಿಸುತ್ತಲೇ, ವಾಸ್ತವದಲ್ಲಿ ತನ್ನ ಭಾವುಕ ಶಬ್ದಜಾಲ ಹಾಗೂ ಇತರ ಅಗ್ಗದ ತಂತ್ರಗಳ ಬಾಂಬ್ ದಾಳಿಯ ಮೂಲಕ ಓದುಗನನ್ನು ವಶೀಕರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆಂದರೆ, ಅಲ್ಲಿ ಶೈಲಿಯ ಪ್ರಶ್ನೆಗಿಂತ ಬೇರೇ ಯಾವುದೋ ಉದ್ದೇಶವೇ ಇರುವಂತೆ ಕಾಣುತ್ತದೆ.

ಪಶ್ಚಿಮದ ಕಾದಂಬರಿಯ ಇಂಥ ಉದ್ದೇಶಗಳನ್ನು ಮುಖಾಮುಖಿಯಾಗುವ, ಹಾಗೂ ಶತಶತಮಾನಗಳ ಇತಿಹಾಸವುಳ್ಳ ಸಮುದಾಯವೊಂದು ಸಂಸ್ಕೃತಿಯೇ ಇಲ್ಲದೆ ಬದುಕಿದೆ ಎಂದು ಸೂಚಿಸುವ 'ಸಂಸ್ಕೃತಿಹೀನ ಆಫ್ರಿಕಾ' ಎಂಬ ಪಶ್ಚಿಮದ ಬಾಲಿಶ ಕಲ್ಪನೆಗೆ ಉತ್ತರ ನೀಡುವ ತುಡಿತಗಳು ಆಫ್ರಿಕನ್ ಕಾದಂಬರಿಯ ಆರಂಭದ ಘಟ್ಟದಲ್ಲಿ ಪ್ರಧಾನವಾಗಿದ್ದವು. ಇದನ್ನೇ ಆಫ್ರಿಕಾದ ಸಾಹಿತ್ಯ ಚರಿತ್ರಕಾರರು 'ಅಥೆಂಟಿಕ್ (ಅಧಿಕೃತ ಅಥವಾ ನಿಜ) ಆಫ್ರಿಕಾದ ಹುಡುಕಾಟ' ಎಂದು ಕರೆದರು.

ಆಫ್ರಿಕಾ ಕುರಿತ ಪಶ್ಚಿಮದ ಸಿದ್ಧಮಾದರಿಗಳು ಕಾನ್ರಾಡನಂಥ ಮಹತ್ವದ ಲೇಖಕನಲ್ಲೇ ಸುಪ್ತವಾಗಿ ವ್ಯಕ್ತವಾಗುತ್ತವೆ ಎಂದಮೇಲೆ ಉಳಿದ ಜನಾಂಗೀಯವಾದಿ ಲೇಖಕರ ಮಾದರಿ ಗಳನ್ನು ಊಹಿಸುವುದು ಸುಲಭ. ಜನಪ್ರಿಯ ಕಾದಂಬರಿಗಳ ಜೊತೆಜೊತೆಗೆ, ಯುರೋಪ್ ಸೃಷ್ಟಿಸಿದ ಆಫ್ರಿಕನ್ ಚರಿತ್ರೆ, ವಸಾಹತು ಅಧಿಕಾರಿಗಳ ದಾಖಲೆಗಳು, ಪ್ರವಾಸ ಕಥನಗಳು ಹಾಗೂ ಅದ್ಭುತರಮ್ಯ ಕತೆಗಳಲ್ಲಿ ಈ ಮಾದರಿಗಳು ಮತ್ತೆ ಮತ್ತೆ ಪ್ರತ್ಯಕ್ಷವಾಗುತ್ತಿದ್ದವು. ವಿಕಾಸವಾದಿಗಳು, ವಿಜ್ಞಾನಿಗಳು, ಹಾಗೂ ಮಾನವಶಾಸ್ತ್ರಜ್ಞರ ಸಿದ್ಧಾಂತಗಳು ಈ ಮಾದರಿ ಗಳನ್ನು ಮತ್ತಷ್ಟು ಅಧಿಕೃತಗೊಳಿಸುತ್ತಿದ್ದವು. ಇವೆಲ್ಲದರ ಹಿನ್ನೆಲೆಗೆ 'ಕಪ್ಪು' ಹಾಗೂ

'ಬಿಳುಪು'ಗಳ ನಡುವಣ ವೈರುಧ್ಯದ ಸಾಂಕೇತಿಕ ಅರ್ಥಗಳ ಸುದೀರ್ಘ ಚರಿತ್ರೆಯಿತ್ತು. ಮೆರಿಯನ್ ಬರ್ಗಮ್ ಬರೆಯುತ್ತಾರೆ :

> ಈ ಕಪ್ಪು-ಬಿಳುಪಿನ ಧೃವೀಕರಣ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಇಂದಿಗೂ ಇತಿಹಾಸದುದ್ದಕ್ಕೂ ಬಂದಿರುವ ಸಾಂಕೇತಿಕ ಅರ್ಥವನ್ನೇ ಉಳಿಸಿಕೊಂಡು ಬಂದಿದೆ. ಬಿಳುಪಿಗೆ 'ಒಳ್ಳೆಯ', 'ಸುಂದರ', 'ಪವಿತ್ರ' ಮುಂತಾದ ಒಳ್ಳೆಯ ಅರ್ಥಗಳನ್ನೇ ಸಾಂಪ್ರದಾಯಿಕ ದೃಷ್ಟಿಕೋನ ಸೂಚಿಸುತ್ತದೆ. ಅದೇ ರೀತಿ, ಕಪ್ಪು ಎಂದರೆ 'ಕೆಟ್ಟ', 'ದುಷ್ಟ', 'ಕಾಳರಾತ್ರಿ', 'ಕುರೂಪ', 'ನರಕ', 'ದುರಾದೃಷ್ಟ' ಮೊದಲಾದ ಕೆಟ್ಟ ಅರ್ಥಗಳೂ ಇದೇ ಸಾಂಪ್ರದಾಯಿಕ ನೆಲೆಯಿಂದಲೇ ಹೊರಡುತ್ತವೆ. ಈ ಕಪ್ಪು-ಬಿಳುಪಿನ ಸಾಂಕೇತಿಕ ದ್ವಂದ್ವ ಆಫ್ರಿಕನ್ ಸಂಸ್ಕೃತಿಗಳೂ ಸೇರಿದಂತೆ ಹಲವು ಸಂಸ್ಕೃತಿಗಳಲ್ಲಿದೆ. ಕಪ್ಪು-ಬಿಳುಪಿನ ಮುಖಾಮುಖಿ ಬೈಬಲ್ಲಿನಲ್ಲಿ 'ಸರ್ವಶಕ್ತನು ಬೆಳಕನ್ನು ಕತ್ತಲೆಯಿಂದ ಬೇರ್ಪಡಿಸುವ' ಪ್ರಯತ್ನದಲ್ಲೂ ಕಾಣುತ್ತದೆ. ಇಂಥ ದೃಷ್ಟಿಕೋನಗಳು ಬೆಳೆಯುತ್ತಾ ಬೆಳೆಯುತ್ತಾ ಕೊನೆಗೆ ಆಫ್ರಿಕನ್ನರ ಅಜ್ಞಾನ, ಅಂಧಕಾರಗಳಿಗೂ, ಮೂರ್ತಿಪೂಜೆಗೂ ಅವರ ಚರ್ಮದ ಬಣ್ಣಕ್ಕೂ ಸಂಬಂಧವಿದೆಯೆಂದು ಸಿದ್ಧಮಾಡಲೆತ್ನಿಸುತ್ತವೆ. ಈ ನಿಲುವುಗಳ ತಾರ್ಕಿಕ ಮುಂದುವರಿಕೆಯಿಂದಾಗಿ ಕಪ್ಪು ಆಫ್ರಿಕನ್ನರೆಂದರೆ ಸೈತಾನನ ಮಕ್ಕಳು ಎಂಬ ಹಣೆಪಟ್ಟಿಯನ್ನು (ಆಫ್ರಿಕನ್ನರಿಗೆ) ಹಚ್ಚಲಾಗುತ್ತದೆ; ಬೈಬಲ್ಲಿನಲ್ಲಿ ಬರುವ 'ನೋಹನ* ಶಾಪ'ವನ್ನು 'ಕಪ್ಪುತನ ದೇವರೇ ಕೊಟ್ಟ ಕರಾಳ ಸ್ಥಿತಿ' ಎಂದು ಈ ಇಪ್ಪತ್ತನೆಯ ಶತಮಾನದಲ್ಲೂ ಅರ್ಥೈಸಲಾಗುತ್ತದೆ. ನೋಹನ ಶಾಪದ ವೈಚಿತ್ರ್ಯವೇನೆಂದರೆ, ಮೊದಮೊದಲು ಆ ಶಾಪವನ್ನು ಕಪ್ಪು ಮೈ ಬಣ್ಣ ಉಂಟಾದ ಬಗೆಯನ್ನು ವಿವರಿಸಲು ಬಳಸಿಕೊಳ್ಳಲಾಗುತ್ತಿತ್ತು. ನಂತರ ಕಪ್ಪುಜನರ ಗುಲಾಮಗಿರಿಯ ಸಮರ್ಥನೆಗೂ ಅದನ್ನು ಬಳಸಿಕೊಳ್ಳುವುದು ಆರಂಭವಾಯಿತು.'

ಇಂಥ ಕಪ್ಪು-ಬಿಳುಪಿನ ಆದಿಮ ರೂಪಗಳು ಆಫ್ರಿಕನ್ ಲೋಕದರ್ಶನದಲ್ಲೂ ಇದ್ದವು,

---

* ನೋಹ ಬೈಬಲಿನಲ್ಲಿ ಬರುವ ಒಬ್ಬ ಯಹೂದಿ ಕುಲಪತಿ. ಒಮ್ಮೆ ನೋಹ ತಾನೇ ಬೆಳೆದ ದ್ರಾಕ್ಷಿ ಹಣ್ಣುಗಳಿಂದ ತಯಾರಿಸಿದ ದ್ರಾಕ್ಷಾರಸ ಕುಡಿದು ಮತ್ತೇರಿ ಬೆತ್ತಲೆ ಮಲಗುತ್ತಾನೆ. ಅದನ್ನು ಕಂಡ ಅವನ ಹಿರಿಯ ಮಗ ಹ್ಯಾಮ್ ತನ್ನ ತಮ್ಮಂದಿರಾದ ಶೆಮ್ ಹಾಗೂ ಜೆಸ್‌ಪತ್‌ಗೆ ತಂದೆ ಬೆತ್ತಲಾಗಿ ಮಲಗಿರುವ ವಿಷಯ ಹೇಳುತ್ತಾನೆ. ಆ ದೃಶ್ಯವನ್ನು ನೋಡಲು ಒಲ್ಲದ ಆ ತಮ್ಮಂದಿರು ಹಿಮ್ಮುಖವಾಗಿ ಬಂದು ಹೊದಿಕೆ ಹೊದಿಸಿ ತಂದೆಯ ಬೆತ್ತಲೆಯನ್ನು ಮುಚ್ಚುತ್ತಾರೆ. ನೋಹನಿಗೆ ಎಚ್ಚರವಾದಾಗ ಈ ವಿಷಯ ತಿಳಿಯುತ್ತದೆ. ತನ್ನನ್ನು ಬೆತ್ತಲೆ ಕಂಡ ಹ್ಯಾಮ್‌ನ ಮಗನ ಸಂತತಿಯು ಶೆಮ್ ಹಾಗೂ ಜೆಸಪತ್‌ರ ಮಕ್ಕಳ ಸಂತತಿಗೆ ಗುಲಾಮ ಸಂತತಿಯಾಗಲೆಂದು ನೋಹ ಶಾಪ ಕೊಡುತ್ತಾನೆ. ಈ ಗುಲಾಮ ಸಂತತಿಯ ಒಂದು ಜನಾಂಗ ಆಫ್ರಿಕನ್ನರದು ಎಂಬ ಕತೆಯಿದೆ. ಇದನ್ನಾಧರಿಸಿ ಕರಿಯರು ಬಿಳಿಯರ ಗುಲಾಮರಾದರು ಎಂಬ ಸಂಕಥನ ಕಾಲಕ್ರಮೇಣ ನಿರ್ಮಾಣಗೊಂಡಂತಿದೆ.

ನಿಜ. ಯೊರೂಬಾ ನಂಬಿಕೆಯಲ್ಲೇ ದುರಾದೃಷ್ಟವೆಂದರೆ 'ಕಪ್ಪು' ಅದೃಷ್ಟ ಎಂಬ, ಅಥವಾ 'ಬಿಳಿ' ಯೊರೂಬಾ ಭೂಮಿತಾಯಿ ಎಂಬ ಕಲ್ಪನೆಗಳೂ ಇವೆ. 'ಕಪ್ಪು-ಬಿಳುಪಿನ ಸಾಂಕೇತಿಕ ಅರ್ಥಗಳನ್ನು ಚರ್ಮಕ್ಕೂ ಅನ್ವಯಿಸುವುದು ಮಾತ್ರ ವಸಾಹತುಶಾಹಿ ಚಾರಿತ್ರಿಕ ಸನ್ನಿವೇಶದ ಸೃಷ್ಟಿ' ಎನ್ನುತ್ತಾನೆ ಲೂಯಿಸ್ ಜೇಮ್ಸ್. ಹೀಗೆ ಸಾಂಕೇತಿಕ ಅರ್ಥಗಳನ್ನು ನಾಗರಿಕತೆಗಳಿಗೆ ಅನ್ವಯಿಸಿದ್ದರಿಂದ ಹುಟ್ಟಿದ ಆಫ್ರಿಕಾದ ಚಿತ್ರಕ್ಕೆ ಹಲವು ಜ್ಞಾನಶಾಖೆಗಳ ಸಂಕಥನಗಳ ಸಮರ್ಥನೆಗಳು ದೊರೆತವು. ಹೆಗೆಲ್ ಕೊಡುವ ಚರಿತ್ರೆಯಿಲ್ಲದ ಆಫ್ರಿಕಾ ಇದು: 'ಚಾರಿತ್ರಿಕ ಚಲನೆಯನ್ನು ಪ್ರದರ್ಶಿಸಬಲ್ಲ ಚಳುವಳಿಯಾಗಲೀ, ಬೆಳವಣಿಗೆಯಾಗಲೀ ಆಫ್ರಿಕಾದಲ್ಲಿ ಕಾಣುತ್ತಿಲ್ಲ...(ಈಗ) ನಾವು ಕಾಣುವ ಆಫ್ರಿಕಾ ಅಚಾರಿತ್ರಿಕವಾದ, ಅಪ್ರಬುದ್ಧ ಚೇತನದ, ಇನ್ನೂ ಪ್ರಕೃತಿಯ ಸ್ಥಿತಿಯಲ್ಲೇ ಇರುವ ಆಫ್ರಿಕಾ.'

ಯುರೋಪಿಯನ್ ಪುನರುಜ್ಜೀವನ ಘಟ್ಟದ ಬಹುಮುಖ್ಯ ಸಿದ್ಧಾಂತಗಳಲ್ಲೊಂದಾದ ಡಾರ್ವಿನ್ನನ ವಿಕಾಸವಾದೀ ಸಿದ್ಧಾಂತವೂ ಆಫ್ರಿಕನ್ನನ ಕನಿಷ್ಠತೆ ಕುರಿತಂತೆ ಈಗಾಗಲೇ ಇದ್ದ ಸಿದ್ಧಾಂತಗಳನ್ನು ಸಮರ್ಥಿಸುವಂತೆ ಹಲವರಿಗೆ ಕಂಡಿತು. ಹದಿನೆಂಟನೆಯ ಶತಮಾನದ 'ನೋಬಲ್ ಸ್ಯಾವೇಜ್'ನ ಕಲ್ಪನೆ ಪ್ರಕೃತಿಯ ಸ್ಥಿತಿಯಲ್ಲಿ ಇರುವ ಜೀವಿಯ ಚಿತ್ರವನ್ನು ಸೃಷ್ಟಿಸಿದರೆ, ಆ ನಂತರ ಬಂದ ಸಿದ್ಧಾಂತಗಳು ನೀಗ್ರೋನನ್ನು 'ಸ್ಯಾವೇಜ್' ಎಂದು ಪರಿಗಣಿಸಿ ಮಾನವನ ವರ್ಗೀಕರಣದಲ್ಲಿ ಕೊನೆಯ ಸ್ಥಾನದಲ್ಲಿಟ್ಟವು: ಡೇವಿಡ್ ಕ್ಯಾರೊಲ್ ಹೇಳುವಂತೆ 'ಹದಿನೆಂಟನೆಯ ಶತಮಾನದಲ್ಲಿ ಮಾನವ ಜನಾಂಗವನ್ನು ಬಿಳಿ, ಹಳದಿ ಕೆಂಪು ಹಾಗೂ ಕಪ್ಪು ಜನಾಂಗಗಳನ್ನಾಗಿ ವಿಂಗಡಿಸಿದ ಲಿನಿಯನ್ ವರ್ಗೀಕರಣದಂತೆ, ಹತ್ತೊಂಬತ್ತನೆಯ ಶತಮಾನದ ಡಾರ್ವಿನ್ ವಿಕಾಸವಾದವೂ ಆಫ್ರಿಕನ್ನರನ್ನು ಕಟ್ಟಕಡೆಯ ಸ್ಥಾನದಲ್ಲಿಟ್ಟಿತು. ಈ ಆಫ್ರಿಕನ್ನರು ಹಿಂದುಳಿದಿರಲು ಅವರು ಕನಿಷ್ಠರಾಗಿರುವುದೇ ಕಾರಣ ಎಂದು ಅದು ವಾದಿಸಿತು.'

ಡಾರ್ವಿನ್ ಸಿದ್ಧಾಂತದ ಕೇಂದ್ರ ಪರಿಕಲ್ಪನೆಗಳಾದ 'ಶಕ್ತಿಶಾಲಿಯ ಉಳಿವು', 'ಸಹಜ ಆಯ್ಕೆ'ಮತ್ತು ಡಾರ್ವಿನ್‌ವಾದವನ್ನು ಆಧರಿಸಿ ಯುರೋಪು ರೂಪಿಸಿಕೊಂಡ 'ಪ್ರಕೃತಿಯ ವಿಶೇಷ ಸವಲತ್ತುಪಡೆದ ಜನಾಂಗ' ಇವುಗಳನ್ನು ಚರ್ಚಿಸುತ್ತಾ, ಎ.ಜಿ.ಆರ್ನಾಲ್ಡ್ 'ಡಾರ್ವಿನ್‌ನ ವಿಕಾಸವಾದೀ ಸಿದ್ಧಾಂತವೂ ಯುರೋಪಿಯನ್ ಜನಾಂಗೀಯವಾದದ ವಿಕಾಸದ ಒಂದು ತಾರ್ಕಿಕ ಬೆಳವಣಿಗೆಯೇ' ಎನ್ನುತ್ತಾನೆ. ಇದು ಕೊಂಚ ಉತ್ಪ್ರೇಕ್ಷೆಯ ಮಾತಾದರೂ, ಚರಿತ್ರೆ, ವಿಜ್ಞಾನ ಹಾಗೂ ಇತರ ಮಾನವಿಕಶಾಸ್ತ್ರಗಳ ಸಂಕಥನಗಳು ಪ್ರತಿಪಾದಿಸುತ್ತಿದ್ದ ಆಫ್ರಿಕಾದ ಮಾದರಿಗಳು ಆಫ್ರಿಕೇತರರ ಮನಸ್ಸಿನಲ್ಲಿ ಆಳವಾಗಿ ಬೇರೂರಿಬಿಟ್ಟಿದ್ದವು: ವಿ.ಜೆ.ಕಿಯರ್ನನ್ ಸೂಚಿಸುವಂತೆ 'ಕೆಲವೊಮ್ಮೆ ಲಿವಿಂಗ್‌ಸ್ಟೋನ್ ನಂಥವರು ಕೂಡ ಸಮರ್ಥಿಸುವ, ಆಫ್ರಿಕನ್ನರೆಂದರೆ ನಿಕೃಷ್ಟರೆಂಬ ನಂಬಿಕೆ ಹಾಗೂ ವಾದಗಳೆರಡೂ ಎಷ್ಟು ಆಳವಾಗಿ ಬೇರೂರಿದ್ದವೆಂದರೆ, ಸ್ಪೇನೀಯರು ಮತ್ತು ಬೋಯರ್ ಜನಾಂಗದವರು ಈ ಸ್ಥಳೀಯರಿಗೆ (ಆಫ್ರಿಕನ್ನರಿಗೆ) ಆತ್ಮವಿದೆಯೇ ಎಂದು ಪ್ರಶ್ನಿಸುತ್ತಿದ್ದರು.

ಆಧುನಿಕ ಯುರೋಪಿಯನ್ನರಿಗಂತೂ ಆಫ್ರಿಕನ್ನರಿಗೆ ಮೆದುಳಿರುವುದರ ಬಗೆಗೇ ಅನುಮಾನವಿತ್ತು; ಅಕಸ್ಮಾತ್ ಮೆದುಳಿದ್ದರೂ ಅದು ಪ್ರೌಢ ಹಂತಕ್ಕೆ ಬೆಳೆಯುವುದರ ಬಗೆಗಂತೂ ತೀರಾ ಅನುಮಾನವಿತ್ತು, ಆಫ್ರಿಕನ್ನರ ಬೌದ್ಧಿಕ ಬೆಳವಣಿಗೆ ಬಾಲ ಹಂತದಲ್ಲೇ ನಿಂತುಬಿಟ್ಟಿದೆಯೆಂದು ವಾದಿಸುವ ಅನೇಕ ಜನಪ್ರಿಯ ಸಿದ್ಧಾಂತಗಳಿದ್ದವು.

ಈ ಬಗೆಯ ಜನಪ್ರಿಯ ಸಿದ್ಧಾಂತಗಳಿಂದಾಗಿ ಆಫ್ರಿಕೇತರರಲ್ಲಿ ಆಫ್ರಿಕನ್ನರ ಬಗ್ಗೆ ಹುಟ್ಟುತ್ತಿದ್ದ ಧೋರಣೆಗಳನ್ನು ಚರ್ಚಿಸುತ್ತಾ, ಫ್ಯಾನನ್ 'ಅಲ್ಜೀರಿಯನ್ನರು ಒಬ್ಬರನ್ನೊಬ್ಬರು ಕೊಲ್ಲುವುದನ್ನು ನೋಡಿದರೆ ಅವರ ಮೈ ಚರ್ಮ ಸರಿಯಾಗಿ ಬೆಳೆದಿಲ್ಲವೆಂದು ಕಾಣುತ್ತದೆ' ಎಂಬ ರೀತಿಯ ಪ್ರತಿಕ್ರಿಯೆಗಳು ಮನೋವೈದ್ಯರ ಸಮ್ಮೇಳನವೊಂದರಲ್ಲಿ ಹುಟ್ಟಿದ್ದನ್ನು ಉಲ್ಲೇಖಿಸುತ್ತಾನೆ. ಇದೇ ರೀತಿ, ಆಫ್ರಿಕನ್ನರು ತಮ್ಮ ಕಿವಿಯ ಹಾಲೆಗಳನ್ನು(frontal lobes) ಬಳಸಿಕೊಳ್ಳುವುದೇ ಕಡಿಮೆಯೆಂಬ ಭಾವನೆ ಮಧ್ಯ ಆಫ್ರಿಕಾದಲ್ಲಿ ವ್ಯಾಪಕವಾಗಿತ್ತು. ಎಡ್ವರ್ಡ್ ಟೈಸನ್ ಎಂಬ ಬ್ರಿಟಿಷ್ ವಿಜ್ಞಾನಿ ಮಂಡಿಸಿದ 'ಪಿಗ್ಮೀಸ್' ಎಂದರೆ ಮಾನವ ಮತ್ತು ಮಂಗಗಳ ನಡುವಣ 'ತಪ್ಪಿದ ಕೊಂಡಿ' ಎಂಬ ಸಿದ್ಧಾಂತ ಕೂಡ ಈ ನೆಲೆಗಳಿಂದಲೇ ಹೊರಟಿತ್ತು. ಇಲ್ಲಿನ ಸಿದ್ಧಾಂತಗಳಲ್ಲಿ ಕೆಲವು ಯುರೋಪಿನ ಪುನರುಜ್ಜೀವನ ಹಾಗೂ ಜ್ಞಾನೋದಯ ಯುಗದ ನಂತರ ಹುಟ್ಟಿದವು ಎಂಬ ಅಂಶ ಪಶ್ಚಿಮ ತನ್ನ ನಿರ್ಣಾಯಕ ವೈಚಾರಿಕ ಜಿಗಿತಗಳ ಘಟ್ಟಗಳಲ್ಲಿ ಕೂಡ ಆಫ್ರಿಕಾವನ್ನು ಕುರಿತ ಸಿದ್ಧ ಆಲೋಚನಾ ಕ್ರಮವನ್ನು ಬದಲಿಸಿಕೊಳ್ಳಲಿಲ್ಲ ಎಂಬುದಕ್ಕೆ ಐತಿಹಾಸಿಕ ಸಾಕ್ಷಿಯಂತಿದೆ.

### ಆಧುನಿಕ ಪುರಾಣಗಳ ಹಣಾಹಣಿ

ಯುರೋಪ್‌ಕೇಂದ್ರಿತ ಅಥವಾ ಪಶ್ಚಿಮ ಕೇಂದ್ರಿತ ಅಪ್ರಜ್ಞೆ ಕೆಲವು ಸಿದ್ಧ ಮಾದರಿಗಳು ಹಾಗೂ ಸಿದ್ಧ ಸಂಕಥನಗಳ ಮೂಲಕ ಮಾತ್ರ ಆಫ್ರಿಕಾವನ್ನು ಅರಿಯಲು ಹಾಗೂ ವ್ಯಾಖ್ಯಾನಿಸಲು ಸಾಧ್ಯವಾದದ್ದನ್ನು ಹಿಂದಿನ ಭಾಗದಲ್ಲಿ ಚರ್ಚಿಸಲಾದ ಎಲ್ಲ ಅಂಶಗಳೂ ಹೇಳುತ್ತವೆ. ಈ ಹಿನ್ನೆಲೆಯಲ್ಲಿ, 'ನನ್ನೆದುರಿಗಿರುವ ಮುಖ್ಯ ಪ್ರಶ್ನೆಯೆಂದರೆ, ಆದಿಯಿಂದಲೂ ಆಫ್ರಿಕಾ ಕುರಿತ ಈ ಧೋರಣೆ ಆಫ್ರಿಕನ್ನರನ್ನೂ, ಆಫ್ರಿಕಾವನ್ನೂ ನಿರ್ಮಾನವೀಕರಣಗೊಳಿಸಿದ್ದು, ಹಾಗೂ ಅದು ಈಗಲೂ ಮುಂದುವರಿಯುತ್ತಿರುವುದು' ಎನ್ನುತ್ತಾನೆ ಅಚೀಬೆ. ಈ ಮಾತಿನಲ್ಲಿ ಆರಂಭದ ಘಟ್ಟದ ಆಫ್ರಿಕನ್ ಕಾದಂಬರಿಕಾರರ ಮನೋಲೋಕವನ್ನು ಯುರೋಪಿಯನ್ ಮನಸ್ಸು ಸೃಷ್ಟಿಸಿದ ಯುರೋಪ್ ಹಾಗೂ ಆಫ್ರಿಕಾದ ಮಾದರಿಗಳು ಪ್ರಧಾನವಾಗಿ ಆಕ್ರಮಿಸಿಕೊಂಡದ್ದರ ಸೂಚನೆಯಿದೆ. ಆದರೆ ಮೇಲಿನ ಅನೇಕ ಸಂಕಥನಗಳನ್ನು ಹುಟ್ಟುಹಾಕಿದ್ದ ಪಶ್ಚಿಮದಲ್ಲೇ ಈ ಬಗ್ಗೆ ಭಿನ್ನಮತ ಆರಂಭವಾಗಿತ್ತು. ಈ ಸಿದ್ಧಾಂತಗಳಾಗಲೇ ಫ್ರಾಯ್ಡ್ ಹಾಗೂ ಯೂಂಗರ ಯುಗದಲ್ಲಿ ಪ್ರಶ್ನಿತವಾಗುತ್ತಿದ್ದವು. ಆ ಕಾಲದಲ್ಲಿ ಹುಟ್ಟಿದ ಆಫ್ರಿಕನ್ ಕಾದಂಬರಿ ಮುಖ್ಯವಾಗಿ ಮುಖಾಮುಖಿಯಾಗಲು ಹೊರಟಿದ್ದು ಕಾದಂಬರಿಯ ಮೂಲಕವೇ ಪಶ್ಚಿಮ ಸೃಷ್ಟಿಸಿದ್ದ ಆಫ್ರಿಕಾದ ಚಿತ್ರವನ್ನು. ಕಾರಣ, ಮೇಲೆ ಚರ್ಚಿತವಾದ ಸಿದ್ಧಾಂತಗಳು ಹಾಗೂ ಕಲ್ಪನೆಗಳು ಸೃಜನಶೀಲ ಸೃಷ್ಟಿಯಾದ

ಸಾಹಿತ್ಯವೂ ಮೀರಲು ದುಃಸ್ಸಾಧ್ಯವಾದ ಮಿತಿಗಳನ್ನು ನಿರ್ಮಿಸಿದ್ದವು: ಒಬಿಚೀನಾ ಗುರುತಿಸುವಂತೆ,

> ಯುರೋಪಿಯನ್ ಸಾಹಿತಿಗಳು ವಸ್ತುನಿಷ್ಠ ದೃಷ್ಟಿಕೋನದಿಂದ ಆಫ್ರಿಕನ್ ವಸ್ತುವನ್ನು ಶೋಧಿಸಹೊರಟಾಗಲೂ, ಆಗಲೇ ಚಾಲ್ತಿಯಲ್ಲಿದ್ದ ಆಫ್ರಿಕಾ ಕುರಿತ ಪುರಾಣಗಳು ಅವರ ಕಲ್ಪನಾಶಕ್ತಿಯನ್ನು ಹೇಗೆ ನಿಯಂತ್ರಿಸುತ್ತಿದ್ದ ವೆಂದರೆ, ತಮ್ಮ ಅನುಭವನಿಷ್ಠ ಸೃಷ್ಟಿಯ ಹಾದಿಯನ್ನೇ ಬಿಟ್ಟು ಯುರೋಪಿನ ಜನಪ್ರಿಯ ಕಲ್ಪನೆ ಯಾವುದನ್ನು ಆಫ್ರಿಕತ್ವ ಅಥವಾ ಆಫ್ರಿಕನ್ ಬದುಕು ಎಂದು ಗುರುತಿಸುತ್ತಿತ್ತೋ ಅಂಥ ಜನಪ್ರಿಯ ಕಲ್ಪನೆಯ ಹಳ್ಳಕ್ಕೇ ಬಿದ್ದುಬಿಡುತ್ತಿದ್ದರು.

ಯುರೋಪಿಯನ್ ಕಾದಂಬರಿಕಾರರ ಇಂಥ ಸೃಜನಶೀಲ ಮಿತಿಗಳಿಗೆ ಆಫ್ರಿಕಾ ಕುರಿತಂತೆ ಸಿದ್ಧ ನೆಲೆಯಿಂದ ಹೊರಡುತ್ತಿದ್ದ ಧೋರಣೆಗಳು, ಆಫ್ರಿಕನ್ ವಾಸ್ತವವನ್ನು ಆ ಲೇಖಕರು ಹೊರ ನಿಂತು ನೋಡಿ ಸೃಷ್ಟಿಸಿದ ಆಧುನಿಕ ಪುರಾಣಗಳು ಹಾಗೂ ಕೆಲವು ಲೇಖಕರ ಸಂದರ್ಭದಲ್ಲಿ ವಸಾಹತು ಸನ್ನಿವೇಶ ಇವೆಲ್ಲ ಕಾರಣವಾಗಿದ್ದವು. ವಸಾಹತುಕಾರ ಹಾಗೂ ಸ್ಥಳೀಯರ ನಡುವಣ ಸಂಬಂಧದ ಸ್ವರೂಪದಿಂದ ಹುಟ್ಟಿದ ವಸಾಹತುವಾದೀ ತಾತ್ತ್ವಿಕತೆ ಇಂಥ ಕೃತಿಗಳ ತಾತ್ತ್ವಿಕತೆಯನ್ನೂ ರೂಪಿಸಿರಬಹುದಾದ ಸಾಧ್ಯತೆಗಳಿದ್ದವು. ಆಫ್ರಿಕಾ ಎಂಬ 'ಕಗ್ಗತ್ತಲ ಖಂಡ'ವನ್ನು ಸಾಹಸದಿಂದ ಭೇದಿಸುವ ಅಥವಾ 'ಕತ್ತಲ ಆಫ್ರಿಕಾ'ಕ್ಕೆ 'ಬೆಳಕು ತರುವ' ಎರಡು ನೆಲೆಗಳು ಇಂಥ ಕಾದಂಬರಿಗಳಲ್ಲಿ ಪ್ರಧಾನವಾಗಿ ಕಾಣುತ್ತವೆ. ಎಲ್ಸ್‌ಪೆತ್ ಹಕ್ಸ್ಲೀ, ರಾಬರ್ಟ್ ರೂರಕ್, ರೈಡರ್ ಹ್ಯಾಗಾರ್ಡ್ ಮುಂತಾದವರ ಕಾದಂಬರಿಗಳ ಆಫ್ರಿಕನ್ ಪಾತ್ರಗಳ ಸಿದ್ಧ ಮಾದರಿಗಳನ್ನು ಕುರಿತು ನುಗುಗಿ ಬರೆಯುತ್ತಾನೆ:

> ರೈಡರ್ ಹ್ಯಾಗಾರ್ಡ್‌ನ ಕೃತಿಯಲ್ಲಿರುವ ಆಫ್ರಿಕನ್ ಪಾತ್ರಗಳು ದೈನೇಸಿಯಾಗಿ ಬಿಳಿಹಲ್ಲು ಕಿರಿಯುತ್ತಾ ತಮ್ಮ ಬಿಳಿಯ ಒಡೆಯನ ಕೃಪಾದೃಷ್ಟಿಗಾಗಿ ಕಣ್ಣಗಲಿಸಿ ನಿಂತಿರುತ್ತವೆ, ಅಥವಾ ಬಿಳಿಯ ಉದ್ಧಾರಕನನ್ನು ಕೊಲ್ಲಲು ಕತ್ತಲಲ್ಲಿ ಹೊಂಚು ಹಾಕುತ್ತಿರುವ ಅಮಾನುಷ ನೀಚ ಪಾತ್ರಗಳಾಗಿರುತ್ತವೆ. ..... ಇಂಥ ಕಾದಂಬರಿಗಳಲ್ಲಿ ಒಳ್ಳೆಯ ಆಫ್ರಿಕನ್ನನೆಂದರೆ ಯುರೋಪಿಯನ್ ವಸಾಹತುಕಾರನೊಂದಿಗೆ ಶಾಮೀಲಾದವನು; ಆಫ್ರಿಕನ್ ನೆಲವನ್ನೂ, ಆಫ್ರಿಕನ್ನರನ್ನೂ ವಸಾಹತುಕಾರ ತನ್ನ ನಿಯಂತ್ರಣದಲ್ಲಿರಿಸಿಕೊಳ್ಳಲು ಸಹಾಯ ಮಾಡುವವನು. ದುಷ್ಟ ಆಫ್ರಿಕನ್ನನೆಂದರೆ, ತನ್ನ ನೆಲವನ್ನು ಕಬಳಿಸುತ್ತಿರುವ ವಿದೇಶೀಯನನ್ನೂ ಅವನ ಆಕ್ರಮಣವನ್ನೂ ವಿರೋಧಿಸು ವವನು.

ಮೂಲತಃ ಜನಾಂಗೀಯವಾದೀ ಧೋರಣೆಯಿಂದ ಹೊರಡದ ಯುರೋಪಿಯನ್ ಲೇಖಕರು ಕೂಡ ತಾವು ಬಲ್ಲ ಅಥವಾ ಕಂಡುಕೊಂಡ ಮನಃಶಾಸ್ತ್ರೀಯ ಅಥವಾ ಸಮಾಜ

ಶಾಸ್ತ್ರೀಯ ತತ್ತ್ವವೊಂದನ್ನು ಸಿದ್ಧಮಾಡಲು ಆಫ್ರಿಕಾದ ಭೂಮಿಕೆಯನ್ನು ಮಾತ್ರ ಬಳಸಿಕೊಳ್ಳುತ್ತಿದ್ದರು; ಭಯಾನಕದ ಅಥವಾ ನಿಗೂಢತೆಯ ಭಿತ್ತಿಗಾಗಿ ಆಫ್ರಿಕಾವನ್ನು ಸೃಷ್ಟಿಸುತ್ತಿದ್ದರು; ಅಥವಾ ಪಶ್ಚಿಮದ ಸಂಸ್ಕೃತಿ ಇತರ ಸಮಾಜಗಳಲ್ಲಿ ತರುವ ಬದಲಾವಣೆಗಳನ್ನು ಕುರಿತ ಥೀಸಿಸ್ ಕಾದಂಬರಿಗಳಿಗಾಗಿ ಆಫ್ರಿಕಾ ಬಳಕೆಯಾಗುತ್ತಿತ್ತು. ಪಶ್ಚಿಮದ ಮನಸ್ಸು ಆಫ್ರಿಕನ್ ಅನುಭವವನ್ನು ಗ್ರಹಿಸುವ ರೀತಿ ಕುರಿತು 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯ ಕೊನೆಯಲ್ಲಿ ವ್ಯಂಗ್ಯದ ಸನ್ನಿವೇಶವೊಂದಿದೆ. ಇಬೋ ಸಮಾಜದ ನಾಯಕನಾದ ಒಕಾಂಕೋನ ಆತ್ಮಹತ್ಯೆ ಹಾಗೂ ಇಬೋ ಸಂಸ್ಕೃತಿಯ ವಿಘಟನೆಯ ದುರಂತವನ್ನು ಕಾದಂಬರಿಯ ನಿರೂಪಕ ವಿಷಾದದ ದನಿಯಲ್ಲಿ ನಿರೂಪಿಸುತ್ತಿರುವಾಗ, ಒಕಾಂಕೋನ ಶವ ತೂಗಾಡುವಲ್ಲಿಗೆ ಬಂದ ಇಂಗ್ಲಿಷ್ ಜಿಲ್ಲಾಧಿಕಾರಿ ತಾನು ಬರೆಯಲಿರುವ 'ದಿ ಪ್ಯಾಸಿಫಿಕೇಶನ್ ಆಫ್ ದಿ ಪ್ರಿಮಿಟಿವ್ ಟ್ರೈಬ್ಸ್ ಆಫ್ ದಿ ಲೋಯರ್ ನೈಜಿರ್' ಪುಸ್ತಕದಲ್ಲಿ ಒಕಾಂಕೋನ ಸಾವಿಗೆ ಒಂದು ಪ್ಯಾರಾವನ್ನು ಮೀಸಲಿಡಲು ನಿರ್ಧರಿಸುತ್ತಾನೆ. ಹೀಗೆ ಪಶ್ಚಿಮದ ಮಾದರಿಗಳು ಆಫ್ರಿಕಾ ಕುರಿತು ಸರಳ ಗ್ರಹಿಕೆಗಳನ್ನು ಅಥವಾ ವಿಕೃತ, ನಿಕೃಷ್ಟ, ಕರುಣಾಜನಕ ಚಿತ್ರಗಳನ್ನು ಅಥವಾ ಅದ್ಭುತ ರಮ್ಯದ ಚಿತ್ರಗಳನ್ನು, ಅಥವಾ ಹಗುರವಾದ ಸಿದ್ಧಾಂತಗಳನ್ನು ಮಂಡಿಸುತ್ತಿದ್ದವು. ಇಂಥ ಕೃತಿಗಳು ಉಳಿದೆಲ್ಲ ಸಾಮಾಜಿಕ ವಿಜ್ಞಾನಗಳು ಪ್ರತಿಪಾದಿಸುತ್ತಿದ್ದ ಸಿದ್ಧಾಂತಗಳಿಗಿಂತ ಪರಿಣಾಮಕಾರಿಯಾಗಿ ಹಾಗೂ ವ್ಯಾಪಕವಾಗಿ ಯುರೋಪಿಯನ್ ಶಾಲೆಗಳಲ್ಲಿ ಪಠ್ಯಗಳಾಗಿ, ಮಧ್ಯಮವರ್ಗದ ಜನಪ್ರಿಯ ಕಾದಂಬರಿಗಳಾಗಿ ಯುರೋಪಿಯನ್ ನೋಟಕ್ರಮಗಳನ್ನು ನಿಯಂತ್ರಿಸುತ್ತಿದ್ದವು. ಈ ಕೃತಿಗಳು ವಸಾಹತು ಆಫ್ರಿಕಾದಲ್ಲಿ ಹೊಸ ಶಾಲೆಗಳ ಮೂಲಕ ಆಫ್ರಿಕಾದ ನವಸಾಕ್ಷರ ವರ್ಗದ ನೋಟಕ್ರಮವನ್ನೂ ನಿಯಂತ್ರಿಸಲಾರಂಭಿಸಿದವು. ಆಫ್ರಿಕನ್ ಅನುಭವವನ್ನು ಯುರೋಪಿಯನ್ ಕಣ್ಣುಗಳ ಮೂಲಕ ಅರಿಯಬೇಕಾದ ವಿರೋಧಾಭಾಸದ ಸನ್ನಿವೇಶವನ್ನು ಆಫ್ರಿಕಾದಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ಮೊದಲ ಜನಾಂಗ ಎದುರಿಸಬೇಕಾಯಿತು. 'ಆಫ್ರಿಕಾ ಒಂದು ಕಗ್ಗತ್ತಲ ಖಂಡ' ಎಂಬ ಪಠ್ಯಪುಸ್ತಕಗಳ ವರ್ಣನೆ ಮೂಲತಃ ಪಶ್ಚಿಮದ ಗ್ರಹಿಕೆಯಿಂದ ಉಂಟಾದ ಒಂದು ನಿರ್ಮಿತಿ ಎಂಬುದನ್ನು ಜಗತ್ತಿನ ವಿವಿಧ ಶಾಲಾ ಕಾಲೇಜುಗಳ ಪಠ್ಯಪುಸ್ತಕ ರಚನಕಾರರು ಇವತ್ತಿಗೂ ಅರಿಯಲು ಸಾಧ್ಯವಾಗಿಲ್ಲ. ಹೀಗಿರುವಾಗ ಆಫ್ರಿಕಾದಲ್ಲಿ ಇಂಗ್ಲಿಷ್ ಅಕ್ಷರಜ್ಞಾನ ಪಡೆದ ಮೊದಲ ತಲೆಮಾರಿನ ಮಕ್ಕಳ ಮನಸ್ಸನ್ನು ಈ ಬಗೆಯ ವರ್ಣನೆಗಳು ಹೇಗೆ ಆಕ್ರಮಿಸಿರಬಹುದು, ಪ್ರಭಾವಿಸಿರಬಹುದು ಎಂಬುದನ್ನು ಸುಲಭವಾಗಿ ಊಹಿಸಬಹುದು.

'ಒಂದು ಪುರಾಣವನ್ನು ಎದುರಿಸುವ ಅತ್ಯುತ್ತಮ ಮಾರ್ಗವೆಂದರೆ ಹೊಸ ಪುರಾಣಗಳನ್ನು ಸೃಷ್ಟಿಸುವುದು ಅಥವಾ ಅರ್ಥಪೂರ್ಣವಾದ ಪುರಾಣಗಳಿಗೆ ಮರುಜೀವ ಕೊಡುವುದು' ಎಂದು ಅಶೀಶ್ ನಂದಿ ಭಾರತೀಯ ನಿರ್ವಸಾಹತೀಕರಣವನ್ನು ಚರ್ಚಿಸುವಾಗ ಹೇಳುತ್ತಾರೆ. ಯುರೋಪ್‌ಕೇಂದ್ರಿತ ಯುರೋಪಿಯನ್ ಪುರಾಣ ಮತ್ತು ಆಫ್ರಿಕನ್ ಪುರಾಣಕ್ಕೆ

ಪ್ರತಿಯಾಗಿ, ಆಫ್ರಿಕಾಕೇಂದ್ರಿತ ಯುರೋಪಿಯನ್ ಪುರಾಣ ಮತ್ತು ಆಫ್ರಿಕನ್ ಪುರಾಣ ಸೃಷ್ಟಿಯೇ ಉತ್ತರ ಎಂಬುದನ್ನು ಆಫ್ರಿಕನ್ ಕಾದಂಬರಿಯ ಆರಂಭದ ಘಟ್ಟ ಗ್ರಹಿಸಿತು. ಅಮೋಸ್‌ಟುಟುವೋಲನಂಥ ಕಾದಂಬರಿಕಾರರು ಅಪ್ರಜ್ಞಾಪೂರ್ವಕವಾಗಿ ಆರಂಭಿಸಿದ್ದ ಈ ಆಫ್ರಿಕನ್ ಪುರಾಣದ ಸೃಷ್ಟಿಯನ್ನು ಅಚೀಬೆ, ನುಗುಗಿ ಹಾಗೂ ಷೋಯಿಂಕಾ ಹೆಚ್ಚು ಆಳವಾದ ತಾತ್ತ್ವಿಕ ನೆಲೆಗಟ್ಟಿನಿಂದ ಆರಂಭಿಸಿದರು.

ಈ ಹಿನ್ನೆಲೆಯಲ್ಲಿ, ಇಂಗ್ಲಿಷ್ ಸಾಹಿತ್ಯದ ಜನಾಂಗೀಯವಾದೀ ಪರಿಭಾಷೆ ಹಾಗೂ ಜನಪ್ರಿಯ ಸಂಕೇತಗಳ ದಬ್ಬಾಳಿಕೆಯ ಎದುರು ಚಿನುವ ಅಚೀಬೆ ತಾನು ಕಾದಂಬರಿ ಬರೆಯಲಾರಂಭಿಸಿದ್ದು 'ಜಾಯ್ಸ್ ಕ್ಯಾರಿಯ 'ಮಿಸ್ಟರ್ ಜಾನ್ಸನ್' ಕಾದಂಬರಿಗೆ ಪ್ರತಿಯಾಗಿ' ಎಂದಾಗ ಕಾದಂಬರಿ ಪ್ರಕಾರಗಳ ಮುಖಾಮುಖಿ ಹಾಗೂ ಎರಡು ಸಂಸ್ಕೃತಿಗಳ ಮುಖಾಮುಖಿಯ ಸೂಚನೆಗಳು ಈ ಮಾತಿನಲ್ಲಿದ್ದವು. 'ಜಾಯ್ಸ್‌ಕ್ಯಾರಿಯ ಕತೆ ನಾವು ಹೇಳಲೇಬೇಕಾದ ಕತೆಯನ್ನು ಹೇಳುವಂತೆ ನನ್ನನ್ನು ಒತ್ತಾಯಿಸಿತು' ಎಂದು ಅಚೀಬೆ ಇನ್ನೊಂದು ಸಂದರ್ಭದಲ್ಲಿ ಬರೆಯುತ್ತಾನೆ.

ಆದರೆ ರಾಬರ್ಟ್ ರೂರಕ್ ಅಥವಾ ರೈಡರ್ ಹ್ಯಾಗಾರ್ಡ್‌ರಂತೆ ಜಾಯ್ಸ್‌ಕ್ಯಾರಿ ಜನಾಂಗೀಯವಾದೀ ಲೇಖಕನಲ್ಲ. ಜೊನಾ ರಾಸ್ಕಿನ್ ಗುರುತಿಸುವಂತೆ, ಈತ 'ನೋಬಲ್ ಸ್ಯಾವೇಜ್'ನ ಆಫ್ರಿಕನ್ ಸಿದ್ಧ ಮಾದರಿಯನ್ನು ಬದಲಿಸುವ ಆಶಯದಿಂದ ಕಾದಂಬರಿ ಬರೆಯಹೊರಟವನು'. ಜೊತೆಗೆ, ಉದಾರವಾದೀ ಮಾನವತಾವಾದೀ ವರ್ಗಕ್ಕೆ ಸೇರುವ ಕಾದಂಬರಿಕಾರ. ಆದರೆ ವಸಾಹತು ಸಂದರ್ಭದಲ್ಲಿ ಆ ಮಾನವತಾವಾದೀ ಕರುಣೆಯೂ ಮೂಲತಃ ವಸಾಹತುವಾದೀ ನೆಲೆಯಿಂದಲೇ ಹುಟ್ಟುವುದಕ್ಕೆ ಕ್ಯಾರಿಯ ಕಾದಂಬರಿ ಸಾಕ್ಷಿಯಂತಿದೆ. ಆದ್ದರಿಂದಲೇ ಈ ಕಾದಂಬರಿಯಲ್ಲಿರುವುದೂ ಆಫ್ರಿಕನ್ ವ್ಯಕ್ತಿತ್ವದ ರಮ್ಯೀಕರಣ ಹಾಗೂ ಇಂಥ ರಮ್ಯೀಕರಣವೂ ನಿರ್ಮಾನವೀಕರಣದ ಇನ್ನೊಂದು ಮುಖ. ಈ ಬಗೆಯ ರಮ್ಯೀಕರಣದ ಮಾದರಿಯಲ್ಲಿರುವ ಪಶ್ಚಿಮದ ಉದಾರವಾದವನ್ನು 'ಸಾಮ್ರಾಜ್ಯವಾದೀ ಸಿಹಿ ಸಿದ್ಧಾಂತ' ಎನ್ನುವ ನುಗುಗಿ ಇಂಥ ಸಿದ್ಧ ಮಾದರಿಗಳನ್ನು (ಕ್ಯಾರೆನ್ ಬ್ಲಿಕ್ಸನಳ ಕೃತಿಗಳ ಸಂದರ್ಭದಲ್ಲಿ) ವಿವರಿಸುತ್ತಾನೆ:

> (ಇಂಥ ಲೇಖಕರಿಗೆ) ಆಫ್ರಿಕನ್ನರೆಂದರೆ ವಿಚಿತ್ರ ಮಾನವ ಪ್ರಾಣಿಗಳು; ಪ್ರಾಣಿ ಸಹಜವಾದ ಗುಣಗಳೆಲ್ಲವನ್ನೂ ಉಳಿಸಿಕೊಂಡವರು. 'ಅಲೌಕಿಕ' 'ಆಧ್ಯಾತ್ಮಿಕ' ಹಾಗೂ 'ನಿಗೂಢ ಶಕ್ತಿಯುಳ್ಳವರು'. 'ನಾವು ಯುರೋಪಿನಲ್ಲಿ ಕಳೆದುಕೊಂಡಿರುವ ಮುಗ್ಧತೆಯನ್ನು ಉಳಿಸಿಕೊಂಡಿರುವವರು.

ಜಾಯ್ಸ್ ಕ್ಯಾರಿಯ ಕಾದಂಬರಿಯ ಜಾನ್ಸನ್ ಇಂಥ ಒಂದು ಮಾದರಿ. ಅವನು ಜನತೆಯ ಕವಿ, ಹಾಡುಗಾರ. ಕಾದಂಬರಿಯ ನಿರೂಪಕ ಪ್ರಜ್ಞೆ ಅವನ 'ಸಹಜತೆ'ಯನ್ನೂ ಹಾಸ್ಯಪ್ರಜ್ಞೆಯನ್ನೂ ಆರಾಧಿಸುತ್ತದೆ. ಆದರೆ ಜಾನ್ಸನ್ ಯುರೋಪಿಯನ್ನನ ಪೋಷಣೆಯಲ್ಲಿ ಬೆಳೆಯಬೇಕಾದ 'ಮುಗ್ಧ' ಕೂಡ. ಕಾದಂಬರಿಯ ಇನ್ನೊಂದು ಕೇಂದ್ರ ಪಾತ್ರವೆಂದರೆ

ನಿರ್ಮಾಣಗೊಳ್ಳುತ್ತಿರುವ ರಸ್ತೆ. ವಸಾಹತು ಅಧಿಕಾರಿ ರುಡ್‌ಬೆಕ್ ನಿರ್ಮಿಸುತ್ತಿರುವ ಈ ರಸ್ತೆಗೆ ಜಾನ್ಸನ್ನನದೇ ನಾಯಕತ್ವ. ಆದರೆ ರಸ್ತೆ ಭ್ರಷ್ಟಾಚಾರವನ್ನೂ ತರುತ್ತದೆ. ಜಾನ್ಸನ್ ಭ್ರಷ್ಟನಾಗುತ್ತಾನೆ. ಗೊಲಪ್ ಎಂಬಾತನನ್ನು ಕೊಂದು ತಾನು ಜೈಲು ಸೇರುತ್ತಾನೆ. ಮರಣ ದಂಡನೆ ಖಾತ್ರಿಯಾದಾಗ ಜಾನ್ಸನ್ನನ ಕೊನೆಯ ಆಸೆಯೊಂದೇ: ತನ್ನ ಒಡೆಯನಾದ ರುಡ್‌ಬೆಕ್‌ನ ಗುಂಡಿನಿಂದ ಸಾಯಬೇಕು.

-ಇದು ಕಾದಂಬರಿಯ ಸಾರ. ಕಾದಂಬರಿಯನ್ನು ಚರ್ಚಿಸುತ್ತಾ ನುಗುಗಿ ಹೇಳುತ್ತಾನೆ: 'ಮಿಸ್ಟರ್ ಜಾನ್ಸನ್ ಎಂದರೆ ತಮಾಷೆಯ, ದಟ್ಟ ಜೀವನ ಪ್ರೀತಿಯ, ಮಗುವಿನಂತೆ ಬೆಚ್ಚಗಿನ ಪ್ರೀತಿ ತೋರುವ ಆಫ್ರಿಕನ್. ಅವನ ಎದೆಯಾಳದ ಏಕಮಾತ್ರ ಆಸೆಯೆಂದರೆ, ಯುರೋಪಿಯನ್ ಜಿಲ್ಲಾಧಿಕಾರಿಯ ಗುಂಡಿಗೆ ಬಲಿಯಾಗಬೇಕೆನ್ನುವುದು. ಇಲ್ಲಿ ಜಿಲ್ಲಾಧಿಕಾರಿ ಹಾಗೂ ಜಾನ್ಸನ್ ಇಬ್ಬರನ್ನೂ ಓದುಗ ಮೆಚ್ಚಿಕೊಳ್ಳಬೇಕೆಂಬುದು ಕಾದಂಬರಿಯ ನಿರೂಪಕನ ಉದ್ದೇಶ. ಕಡೆಗೂ ಅವರಿಬ್ಬರ ನಡುವೆ ಸಂಬಂಧವೊಂದು ನಿರ್ಮಾಣವಾಗಿದೆ. ಆದರೆ ಅದು ಎಂಥ ಸಂಬಂಧವೆಂದರೆ, ಕುದುರೆ ಹಾಗೂ ಅದರ ಸವಾರನ ನಡುವಣ ಸಂಬಂಧ; ಅಂದರೆ ಗುಲಾಮ ಹಾಗೂ ಒಡೆಯರ ಸಂಬಂಧ'.

ಇದು ಕಾದಂಬರಿ ನೀಡುವ ಜಾನ್ಸನ್‌ನ ಚಿತ್ರವಾದರೆ, ಕಾದಂಬರಿಯ ಕ್ರಿಯೆ ನಡೆಯುವ ಆಫ್ರಿಕಾದ ಊರಿನ ಚಿತ್ರ ಇದು:

> ಫಾದಾ ಪಶ್ಚಿಮ ಸೂದಾನಿಗೆ ಸೇರಿದ ಒಂದು ಸಾಮಾನ್ಯವಾದ ಊರು. ಈ ಊರಲ್ಲಿ ಸೌಂದರ್ಯವಾಗಲೀ ಸೌಲಭ್ಯಗಳಾಗಲೀ, ಆರೋಗ್ಯವಾಗಲೀ ಕಾಣುವುದಿಲ್ಲ... ಊರಿನ ಜನ... ಇಲಿಗಳಂತೆ ಬದುಕುತ್ತಾರೆ; ಅದ್ಭುತವಾದ ಕತೆಗಳು, ತತ್ವಗಳು, ಹೊಸ ಜ್ಞಾನ, ನಾಗರಿಕತೆಯ ಹಲವು ಸೆಣಸಾಟಗಳು ಅವರ ತಲೆಯ ಮೇಲೆ ಹಾಯ್ದುಹೋಗುತ್ತಿರುತ್ತವೆ. ಆದರೆ ಊರಿನ ಜನಕ್ಕೆ ಅದರ ಕಲ್ಪನೆಯೂ ಇಲ್ಲ....
>
> .....ಕುತೂಹಲ ಹಾಗೂ ಉತ್ಸಾಹ ತುಂಬಿದ ಇಲ್ಲಿನ ಹರೆಯದ ಹುಡುಗರು ನೋಡುನೋಡುತ್ತಿದ್ದಂತೆಯೇ ಮುದುಕರಾಗುತ್ತಾರೆ.... ಈ ಊರಿನ ಕೊಳಕು, ದುರ್ಗಂಧ, ಬೆತ್ತಲೆ ಮೈಯಲ್ಲಿ ಕೀವು ತುಂಬಿದ ಗಾಯಗಳು, ತಿರುಚಿಕೊಂಡ ಕಾಲು ಕೈಯಿನ, ಗುಡಾಣವಾದ ಹೊಟ್ಟೆಯ, ಹರ್ನಿಯಾ ಬಂದ ಮಕ್ಕಳನ್ನು ನೋಡಿದ್ದೇ ಆದರೆ, ಬ್ರಿಟಿಷ್ ಮಕ್ಕಳು ಹೆದರಿ ಸತ್ತೇಬಿಡಬಹುದೇನೋ. ಭೂಮಿಯ ಮೇಲೆ ಕಜ್ಜಿ ಗಾಯದಂತೆ ಇದ್ದ ಊರು ಅದು....

ಈ ಚಿತ್ರಕ್ಕೆ ಪ್ರತಿಯಾಗಿ ರುಡ್‌ಬೆಕ್‌ನ ಹೆಂಡತಿ ಸಿಲಿಯಾಳ ಕಣ್ಣಲ್ಲಿ ಫಾದಾ ಎಂದರೆ ಇನ್ನೂ 'ಕೆಟ್ಟುಹೋಗದ ಆದಿವಾಸಿಗಳ ತಾಣ' ಎಂಬ ರಮ್ಯೀಕರಣವೂ ಕಾದಂಬರಿಯಲ್ಲಿದೆ. ಇಂಥ ಊರಿಗೆ ರುಡ್‌ಬೆಕ್ ನಿರ್ಮಿಸಬಯಸುವ ರಸ್ತೆ ಕಾದಂಬರಿಯ ಕೇಂದ್ರ ರೂಪಕ.

ಆಧುನಿಕ ಸಾಹಿತ್ಯದ ಚಿರಪರಿಚಿತ ರೂಪಕವಾದ ಈ ರಸ್ತೆ ಎಲ್ಲರನ್ನೂ ಉದ್ದೇಶಿಸಿ ಹೀಗೆನ್ನುತ್ತದೆ:

'ನಾನು ಹಳೆಯ ಘಾದಾವನ್ನು ನಿರ್ನಾಮ ಮಾಡುತ್ತಿದ್ದೇನೆ. ಇಲ್ಲಿರುವ ಎಲ್ಲರನ್ನೂ, ಎಲ್ಲವನ್ನೂ ಬದಲಿಸುತ್ತೇನೆ.... ಹಳೆಯ ರೀತಿ ರಿವಾಜು, ಹಳೆಯ ಆಲೋಚನೆಗಳು, ಹಳೆಯ ಕಾನೂನುಗಳು ಎಲ್ಲವನ್ನೂ. ಒಳ್ಳೆಯದಕ್ಕೋ, ಕೆಟ್ಟದ್ದಕ್ಕೋ ಅಂತೂ ಸಂಪತ್ತು ಹಾಗೂ ಅವಕಾಶಗಳನ್ನು ತರುತ್ತೇನೆ. ಮನುಷ್ಯನಿಗೆ ಹೊಸ ಅಧಿಕಾರಗಳನ್ನೂ ತನ್ಮೂಲಕ ಹೊಸ ಸಂಘರ್ಷಗಳನ್ನೂ ತರುತ್ತೇನೆ. ನಾನು ಕ್ರಾಂತಿ. ನಿರ್ನಾಮ ಮಾಡಿ ಹೊಸತನ್ನು ಬೆಳೆಯುತ್ತೇನೆ. (ಮನುಷ್ಯನೇ) ಈಗೇನು ಮಾಡುತ್ತೀಯ? ನಿನ್ನ ಕಲ್ಪನೆಯಿಂದ ತಾನೇ ನಾನು ಹುಟ್ಟಿದ್ದು? ಆದ್ದರಿಂದ ಏನು ಮಾಡಬೇಕೆಂದು ನಿನಗೇ ಗೊತ್ತಿರಬೇಕು.'

'ನಾಗರಿಕತೆ' ತರುವ ವಿಘಟನೆಯ ಅನುಭವವನ್ನು, ರಸ್ತೆಯ ಮೂಲಕ ಕಳ್ಳರು, ದುಷ್ಟತನ, ದರೋಡೆ ಎಲ್ಲವೂ ಬರುವುದನ್ನು ಕಾದಂಬರಿ ಹಿಡಿದಿಡುತ್ತದೆ, ನಿಜ. ಆದರೆ ಇದು ಕೂಡ ವಸಾಹತುವಾದೀ ಸಂಸ್ಕೃತಿ ಆಫ್ರಿಕಾವನ್ನು ಗ್ರಹಿಸುವ ಸರಳ ಮಾದರಿ. ಈ ಸರಳ ಮಾದರಿಯ ಪ್ರಕಾರ ಪಶ್ಚಿಮ 'ಅನಾಗರಿಕರಿಗೆ ನಾಗರಿಕತೆಯನ್ನು' ಕೊಡುತ್ತದೆ; ಆ ನಾಗರಿಕತೆ ಭ್ರಷ್ಟತೆಯನ್ನು ತರುತ್ತದೆ. ಆದರೆ, ರಾಸ್ಕಿನ್ ಗುರುತಿಸುವಂತೆ, 'ಸಾಮ್ರಾಜ್ಯವಾದೀ ಯುರೋಪು ಆಫ್ರಿಕಾದ ಸಂಪತ್ತನ್ನು ಲೂಟಿ ಹೊಡೆಯಲು ರಸ್ತೆಯನ್ನು ನಿರ್ಮಾಣ ಮಾಡುತ್ತಿರುವ ಸೂಚನೆಯನ್ನು ಮಾತ್ರ ಕಾದಂಬರಿ ನೀಡುವುದಿಲ್ಲ'. ಜಾಯ್ಸ್‌ಕ್ಯಾರಿ ಕಡೆಗಣಿಸಿದ ಸತ್ಯವನ್ನು ಅಚೀಬೆಯ 'ಆರೋ ಆಫ್ ಗಾಡ್' ಕಾದಂಬರಿಯಲ್ಲಿ ಬರುವ ರಸ್ತೆಯ ರೂಪಕ ಗ್ರಹಿಸುತ್ತದೆ. ಉಮುವಾರೋ ಹಾಗೂ ಒಕ್ಪೇರಿ ಎಂಬ ಊರುಗಳನ್ನು ಒಗ್ಗೂಡಿಸುವ ರಸ್ತೆ ಬಿಳಿಯ ಮನುಷ್ಯನ ಹಲವು ಆಯುಧಗಳಲ್ಲೊಂದು ಎಂದು ಕಾದಂಬರಿಯ ಪಾತ್ರವೊಂದು ಹೇಳುತ್ತದೆ.

ಜಾಯ್ಸ್‌ಕ್ಯಾರಿಯ ಕಾದಂಬರಿ ಆಫ್ರಿಕಾದ ಪ್ರಾಚೀನ ನಾಗರಿಕತೆಯನ್ನೇನೋ ಗುರುತಿಸುತ್ತದೆ. ಆದರೆ, ಆ ನಾಗರಿಕತೆ ಮಲೆತುಹೋಗಿದೆಯೆನ್ನುತ್ತದೆ. ಆದ್ದರಿಂದಲೇ ಜಾಯ್ಸ್ ಕ್ಯಾರಿ ಸೃಷ್ಟಿಸುವ 'ಮುಗ್ಧ' ಹಾಗೂ ಬಿಡುಗಡೆಯ ಬೆಳಕಿಗಾಗಿ ಕಾದು ನಿಂತ ಆಫ್ರಿಕಾಕ್ಕೆ ಪ್ರತಿಯಾಗಿ ತಾನು ಕಾದಂಬರಿ ಬರೆಯಹೊರಟಿದ್ದೇನೆಂಬ ಅಚೀಬೆಯ ಮಾತಿನಲ್ಲಿ ಆಫ್ರಿಕನ್ ಕಾದಂಬರಿಯ ಪ್ರಧಾನ ತಾತ್ವಿಕ ನೆಲೆಯೊಂದು ಸೂಚಿತವಾಗುತ್ತಿದೆ. ಈ ದೃಷ್ಟಿಯಿಂದ ಅಚೀಬೆ ಹಾಗೂ ಕ್ಯಾರಿಯ ಆಫ್ರಿಕವನ್ನು ಮುಖಾಮುಖಿಯಾಗಿಸಬೇಕು. ಜಾಯ್ಸ್ ಕ್ಯಾರಿಯ ಘಾದಾ ವೈರುಧ್ಯಗಳ ತವರಾಗಿ ಕಂಡರೆ, ಅಚೀಬೆಯ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯಲ್ಲಿರುವ ಆಧುನಿಕಪೂರ್ವ ಉಮೋಫಿಯ ವ್ಯವಸ್ಥಿತವಾದ ಹಾಗೂ ತನ್ನದೇ ಆದ ಘನತೆಯುಳ್ಳ ಊರು. ಜಾಯ್ಸ್ ಕ್ಯಾರಿಗೆ ನಿಗೂಢವಾಗಿ, ಬರ್ಬರವಾಗಿ ಕಾಣುವ

ಆಚರಣೆಗಳ ಅರ್ಥ ಹಾಗೂ ಸಾಂಕೇತಿಕ ಮಹತ್ವ ಅಚೀಬೆಗೆ ಗೋಚರವಾಗುತ್ತದೆ. 'ಫಾದಾ ಬದಲಾವಣೆಗೆ ಒಳಗಾಗುವ 'ವಸ್ತು' ವಾದರೆ, ಅಚೀಬೆ ತನ್ನನ್ನು ತಾನು ರೂಪಿಸಿಕೊಳ್ಳುವ ಸಮಾಜವನ್ನು ಸೃಷ್ಟಿಸುತ್ತಾನೆ. ಜಾಯ್ಸ್‌ಕ್ಯಾರಿ ಹೇಳುವ ವಿಘಟನೆಯ ಕತೆಯನ್ನೇ ಅಚೀಬೆ ನಿರೂಪಿಸುತ್ತಿದ್ದರೂ ಅಚೀಬೆ ಆಫ್ರಿಕನ್ ಸಮಾಜದೊಳಗೆ ನಿಂತು ಕತೆ ಹೇಳುತ್ತಿದ್ದಾನೆ. ಜಾಯ್ಸ್‌ಕ್ಯಾರಿಯ ನೈಜೀರಿಯನ್ ಪಾತ್ರಗಳು ಜಾಯ್ಸ್‌ಕ್ಯಾರಿಯಂತೆಯೇ ಇಂಗ್ಲಿಷ್ ಮಾತನಾಡುತ್ತಿದ್ದರೆ, ಅಚೀಬೆಯ ಪಾತ್ರಗಳು ಜಾನಪದ ಕತೆ, ಪುರಾಣ, ಉಪಕತೆ, ಗಾದೆ, ನೀತಿಕತೆಗಳ ಮೂಲಕ ಮನುಷ್ಯರಂತೆ ಕಾಣುತ್ತಾರೆ'.

ಆಫ್ರಿಕಾವನ್ನು ಒಂದು ಪರಿಕಲ್ಪನೆಯಾಗಿ, ಐಡಿಯಾ ಆಗಿ ಕಾಣುವ ಕ್ಯಾರಿಯನ್ನು ಅಚೀಬೆ ಮುಖಾಮುಖಿಯಾಗುವಲ್ಲಿ ಕಾಣುವುದು ಕೂಡ ಈ ಹಿಂದೆ ಹೇಳಲಾದ ಎರಡು ಸಂಸ್ಕೃತಿಗಳ ಮುಖಾಮುಖಿ. ಅದು ಯುರೋಪಿನ ಕಲ್ಪನೆಯ ರಮ್ಯ ಸ್ವ-ಪ್ರತಿಬಿಂಬ ಹಾಗೂ ಆಫ್ರಿಕನ್ ಕಲ್ಪನೆಯ ರಮ್ಯ ಸ್ವ-ಪ್ರತಿಬಿಂಬಗಳ ನಡುವಣ ಮುಖಾಮುಖಿ ಕೂಡ. 'ಪ್ರತಿಯೊಂದು ಜನಾಂಗವೂ ತನ್ನ ಸಂಸ್ಕೃತಿ ಕುರಿತ ಆದರ್ಶೀಕೃತ ಚಿತ್ರವೊಂದನ್ನು ಪ್ರಜ್ಞೆಯಲ್ಲಿಟ್ಟು ಕೊಂಡಿರುತ್ತದೆ. ಈ ಚಿತ್ರ ಸೃಷ್ಟಿಯಲ್ಲಿ ಮೂರು ಪ್ರೇರಣೆಗಳಿರುತ್ತವೆ: ಒಂದು, ಮನಃ ಶಾಸ್ತ್ರೀಯವಾದದ್ದು. ಎರಡು, ಸೃಜನಶೀಲ ಕಲ್ಪನೆ. ಮೂರು, ಚರಿತ್ರೆ' ಎನ್ನುವ ಅಲಿ ಮುಝುರಾಯ್, ಒಂದು ಸಂಸ್ಕೃತಿಯ ಸ್ವಂತಿಕೆಯ ಹುಡುಕಾಟವನ್ನು ಹೀಗೆ ವಿವರಿಸುತ್ತಾನೆ:

> ತನ್ನತನವನ್ನು ಕಂಡುಕೊಳ್ಳಬೇಕೆಂಬ ಮಾನಸಿಕ ಅಗತ್ಯ ಒಂದು ಜನಾಂಗದ ಕಲ್ಪನಾಶಕ್ತಿಯನ್ನು ಪ್ರಚೋದಿಸುತ್ತದೆ. ಆಗ ಕಲ್ಪನಾಶಕ್ತಿ ಆ ಜನಾಂಗದ ಇತಿಹಾಸದತ್ತ ತಿರುಗುತ್ತದೆ. ಕ್ಷ-ಕಿರಣ ಬೀರುತ್ತದೆ. ಅಲ್ಲಿ ತನ್ನದು ಎಂದು ಗುರುತಿಸಿಕೊಳ್ಳಬಹುದಾದ ನೈತಿಕ ಹಾಗೂ ಬೌದ್ಧಿಕ ಗುಣಗಳನ್ನು ಎತ್ತಿ ಹಿಡಿಯಲೆತ್ನಿಸುತ್ತದೆ.

ಆಫ್ರಿಕನ್ ಸಮುದಾಯದ ಕಲ್ಪನಾಶಕ್ತಿ ಆಫ್ರಿಕನ್ ಕಾದಂಬರಿಯ ಮೂಲಕ ಆರಂಭಿಸಿದ್ದು ಇಂಥ ಹುಡುಕಾಟವನ್ನು. ಸರಿಸುಮಾರು ಇದೇ ವೇಳೆಗೆ ಫ್ರೆಂಚ್ ಆಕ್ರಮಿತ ಆಫ್ರಿಕಾದ ಕವಿಗಳು, ರಾಜಕಾರಣಿಗಳು ನೆಗ್ರಿಟ್ಯೂಡ್(negritude) ಚಳುವಳಿಯ ಮೂಲಕ 'ನೀಗ್ರೋತನ'ದ ಹುಡುಕಾಟದಲ್ಲಿ ತೊಡಗಿದ್ದರು. ಪಶ್ಚಿಮದ ನಾಗರಿಕತೆಗೆ ಪರ್ಯಾಯದ ಸೃಷ್ಟಿಯ ಹಂಬಲವಿದು. ಯುರೋಪ್‌ಕೇಂದ್ರಿತ ಭೌತಿಕವಾದ, ಮಾನವ ಸಂಬಂಧಗಳ ಸ್ವರೂಪ ಹಾಗೂ ಮಾನವ-ಪ್ರಕೃತಿಯ ಸಂಬಂಧಕ್ಕಿಂತ ಭಿನ್ನವಾದ ಆಫ್ರಿಕನ್ ಲೋಕದರ್ಶನದ ಪ್ರತಿಪಾದನೆಯಿದು. 'ನೆಗ್ರಿಟ್ಯೂಡ್ ಕಲ್ಪನೆ ಆಫ್ರಿಕನ್ನರ ಕಲೆ, ಸಂಪ್ರದಾಯ, ಸಂಗೀತ ಹಾಗೂ ನೃತ್ಯಗಳಲ್ಲಿ ತಂತಾನೇ ಪ್ರತಿಬಿಂಬಿತಗೊಳ್ಳುತ್ತದೆ' ಎನ್ನುವ ಸಾರ್ತ್ರ್‌ನ ದೃಷ್ಟಿಯಲ್ಲಿ 'ನೆಗ್ರಿಟ್ಯೂಡ್ ಎಂಬುದು ಅಖಂಡ ಆಫ್ರಿಕತ್ವದ ಪ್ರತಿಪಾದನೆ'.

ಆದರೆ ಮೂಲತಃ ಫ್ರೆಂಚ್ ಆಫ್ರಿಕಾದಲ್ಲಿ ಹಾಗೂ ದಕ್ಷಿಣ ಆಫ್ರಿಕಾದಲ್ಲಿ, ಅದರಲ್ಲೂ ಫ್ರೆಂಚ್ ಆಫ್ರಿಕಾದ ಕಾವ್ಯದಲ್ಲಿ ತೀವ್ರವಾಗಿ ಪ್ರತಿಪಾದಿಸಲ್ಪಟ್ಟ ನೆಗ್ರಿಟ್ಯೂಡ್ ಕಲ್ಪನೆಯನ್ನು

ಪಶ್ಚಿಮ ಆಫ್ರಿಕಾದ ಕಾದಂಬರಿಕಾರರು ಸಂಪೂರ್ಣವಾಗಿ ಸ್ವೀಕರಿಸಲಿಲ್ಲ. ಯುರೋಪಿನ ಕೆಲಚಿಂತಕರು ಆಫ್ರಿಕನ್ನನನ್ನು ವೈಭವೀಕರಿಸಿ ರೂಪಿಸಿಕೊಂಡ 'ನೋಬಲ್ ಸ್ಯಾವೇಜ್'('ಉದಾತ್ತ ಕಾಡುಮನುಷ್ಯ') ಕಲ್ಪನೆಯನ್ನೇ ನೆಗ್ರಿಟ್ಯೂಡ್ ಕೂಡ ರಮ್ಯವಾಗಿ ಮುಂದುವರಿಸುತ್ತಿದೆ ಎಂಬ ಹಿನ್ನೆಲೆಯಲ್ಲಿ ಷೋಯಿಂಕಾ, ಅಚೀಬೆ, ನುಗುಗಿಯಂಥ ಮುಖ್ಯ ಕಾದಂಬರಿಕಾರರು ನೆಗ್ರಿಟ್ಯೂಡ್ ಕಲ್ಪನೆಯನ್ನು ಸಂದೇಹಿಸುತ್ತಾರೆ. ಇಂಥ ಭೂತ ಸಮರ್ಥನೆಯ ರಾಜಕಾರಣದ ಸಾಹಿತ್ಯವನ್ನು ಮೂಲತಃ ರಾಷ್ಟ್ರೀಯವಾದೀ ಬೂರ್ಜ್ವಾವರ್ಗದ ಸಾಹಿತ್ಯವೆನ್ನುವ ನುಗುಗಿ, ಇಂಥ ಸಾಹಿತ್ಯ ರಾಷ್ಟ್ರೀಯವಾದೀ ವರ್ಗಕ್ಕೆ ಅಧಿಕಾರ ಗಳಿಸಿಕೊಳ್ಳುವ ರಾಜಕೀಯ ಏಣಿಯಾಗಿ ಬದಲಾಗುವುದನ್ನು ಗುರುತಿಸುತ್ತಾನೆ.

'ನೆಗ್ರಿಟ್ಯೂಡ್' ಕಲ್ಪನೆ ಕೂಡ ಮೂಲತಃ ಯುರೋಪಿನ ಸೃಷ್ಟಿಯೇ. ನೆಗ್ರಿಟ್ಯೂಡ್ ಕಲ್ಪನೆಯಲ್ಲಿರುವ ನೀಗ್ರೋ ವೈಭವೀಕರಣವನ್ನು ವಿಮರ್ಶಿಸುತ್ತಾ ಫ್ಯಾನನ್, 'ನೀಗ್ರೋಗಳನ್ನು ದ್ವೇಷಿಸುವವರಂತೆಯೇ ನೀಗ್ರೋಗಳನ್ನು ಆರಾಧಿಸುವವರೂ ಖಾಯಿಲೆಯ ಮನಸ್ಸಿನವರೇ' ಎನ್ನುತ್ತಾನೆ. 'ಹುಲಿ ತನ್ನ ಹುಲಿತನವನ್ನು ಪ್ರತಿಪಾದಿಸುವ ಅಗತ್ಯವಿದೆಯೆ!' ಎಂದು ಷೋಯಿಂಕಾ ನೆಗ್ರಿಟ್ಯೂಡ್ ಕಲ್ಪನೆಯನ್ನು ತಮಾಷೆ ಮಾಡಿದರೆ, 'ನೆಗ್ರಿಟ್ಯೂಡಿನಂಥ ಪುರಾಣೀಕರಿಸಿದ ಚಿತ್ರಣ ಆಫ್ರಿಕನ್ನರಿಗೆ ಹೊಸ ಸೆರೆಮನೆಯಾಗಿಬಿಡುತ್ತದೆ' ಎಂದು ಚಿನ್ವೆಜು ಹಾಗೂ ಸಹ ಲೇಖಕರು ಎಚ್ಚರಿಸುತ್ತಾರೆ. 'ನೆಗ್ರಿಟ್ಯೂಡಿನ ಜನಾಂಗವಾದೀ ಸ್ವ-ಪ್ರತಿಪಾದನೆಯ ಉಗ್ರತೆಗಿಂತ, ಸಹಜವಾಗಿ ತನ್ನನ್ನು ತಾನು ಒಪ್ಪಿಕೊಳ್ಳುವುದೇ ಅಥೆಂಟಿಕ್ ಆಫ್ರಿಕನ್ ಸಾಹಿತ್ಯ'ಎನ್ನುವ ಷೋಯಿಂಕಾ, ನೆಗ್ರಿಟ್ಯೂಡಿನ ಉಗ್ರ ಪ್ರತಿಪಾದಕನಾದ 'ಸೆಂಘಾರನಿಗಿಂತ ಅಚೀಬೆಯೇ ಮೊದಲು ಅಧಿಕೃತ ಆಫ್ರಿಕನ್ ಸಾಹಿತ್ಯ ಸೃಷ್ಟಿಸಿದವನು' ಎಂದು ಬರೆಯುತ್ತಾನೆ.

ಇಂಥ ಹಿನ್ನೆಲೆಯಲ್ಲಿ ಪಶ್ಚಿಮದ ಸಿದ್ಧಮಾದರಿಗಳನ್ನು ಮುಖಾಮುಖಿಯಾಗಲು ಹೊರಟ ಆಫ್ರಿಕನ್ ಕಾದಂಬರಿ ಯುರೋಪಿಯನ್ ಕಾದಂಬರಿಯ ಅಥವಾ ಇಂಗ್ಲಿಷ್ ಕಾದಂಬರಿಯ ಪರಂಪರೆಯಿಂದ ಕಲಿಯುತ್ತಲೇ ಯುರೋಪಿಯನ್ ಹಾಗೂ ಇಂಗ್ಲಿಷ್ ಕಾದಂಬರಿ ಸೃಷ್ಟಿಸಿದ್ದ ಆಫ್ರಿಕನ್ ಪ್ರತಿಬಿಂಬವನ್ನೂ ಮುಖಾಮುಖಿಯಾಗಬೇಕಾಯಿತು. ಜೊತೆಗೆ ಯುರೋಪು ಸೃಷ್ಟಿಸಿದ ಸ್ವ-ವಿಮರ್ಶೆಯ ಮಾದರಿಯನ್ನೂ ಸ್ವೀಕರಿಸಬೇಕಾಯಿತು. ಹೀಗೆ ಕಲಿಯುವ ಹಾಗೂ ಪ್ರತಿಭಟಿಸುವ ದ್ವಿಮುಖೀ ಚಲನೆಯ ಘಟ್ಟವೆಂದರೆ ಕಾದಂಬರೀ ಪ್ರಕಾರದ ರಾಜಕಾರಣದ ಕುತೂಹಲಕಾರಿ ಘಟ್ಟ.

**ಕಾದಂಬರಿ ಪ್ರಕಾರದ ರಾಜಕಾರಣ:**

**ಸ್ಥಾಪಿತ ಸತ್ಯಗಳು ಹಾಗೂ ಬಹುಧ್ವನಿಗಳ ನಡುವಣ ಸಂಘರ್ಷ**

ಒಂದು ಸಾಹಿತ್ಯಕೃತಿಯ ಅದ್ಭುತ ಗುಣವೆಂದರೆ, ಅಲ್ಲಿ ಹಲವು ಸಲ ಕೃತಿಕಾರನ ಪೂರ್ವಗ್ರಹಗಳನ್ನೂ, ಸುಪ್ತ ಉದ್ದೇಶಗಳನ್ನೂ ಬುಡಮೇಲುಗೊಳಿಸುವ ರೂಪಕಗಳು ಹೇಗೋ ಹುಟ್ಟಿಬಿಟ್ಟಿರುತ್ತವೆ. ಕೃತಿಕಾರನ ದೃಷ್ಟಿಕೋನ, ಕೃತಿಕಾರನ ಉದ್ದೇಶ ಎಂಬ ಸಿದ್ಧ

ವಿಮರ್ಶಾ ಪರಿಭಾಷೆಯನ್ನು ಬಿಟ್ಟು, ಒಂದು ಕಾದಂಬರಿಯಲ್ಲಿ ಬಹುಧ್ವನಿಗಳಿರುತ್ತವೆ ಎಂಬ ರಾಚನಿಕೋತ್ತರ ದೃಷ್ಟಿಕೋನದ ಆಧಾರದಿಂದ ಕೃತಿಗಳನ್ನು ಓದಿದರಂತೂ ಕಲಾವಿದನ ಉದ್ದೇಶಿತ ಹಾಗೂ ಘೋಷಿತ ಸತ್ಯವೇ ಬೇರೆ, ಕಲೆಯ ಸತ್ಯವೇ ಬೇರೆ ಎಂಬ ಅಂಶ ಮತ್ತೆ ಮತ್ತೆ ಸಿದ್ಧವಾಗುತ್ತಿರುತ್ತದೆ. ನಿರಚನಾವಾದೀ ಓದಿನ ಪ್ರಕಾರ ಕೃತಿಯಲ್ಲಿ ಖಾಯಂ ಅರ್ಥಗಳಿಲ್ಲ; ಅಲ್ಲಿ ಅರ್ಥಗಳು ನಿರಂತರವಾಗಿ ಮುಂದೂಡಲ್ಪಡುತ್ತಿರುತ್ತವೆ. ಉದಾಹರಣೆಗೆ, ನುಗುಗಿ 'ಬ್ಲಡಿ ರೇಸಿಸ್ಟ್ ಕಾದಂಬರಿ' ಎನ್ನುವ ರೈಡರ್ ಹ್ಯಾಗಾರ್ಡ್ ಎಂಬ ಬ್ರಿಟಿಷ್ ಕಾದಂಬರಿಕಾರನ 'ಕಿಂಗ್ ಸಾಲೊಮನ್ಸ್ ಮೈನ್ಸ್' ಕೃತಿಯಲ್ಲಿ ಭೀಕರವಾಗಿ ಕಾಣುವ ನೂರು ವರ್ಷ ದಾಟಿದ ಹಣ್ಣು ಹಣ್ಣು ಮುದುಕಿ ಗಗೂಲ್ ಪಾತ್ರವನ್ನು ಗಮನಿಸಬೇಕು. ಈ ಮುದುಕಿಯ ಚಿತ್ರ ಎಷ್ಟು ಭೀಕರವಾಗಿತ್ತೆಂದರೆ, ಆಫ್ರಿಕಾದ ಮುದುಕಿಯರನ್ನು ಕಂಡಾಗಲೆಲ್ಲ ಗಗೂಲ್ ಮುದುಕಿಯ ಭೀಕರ ಚಿತ್ರವೇ ಕಣ್ಣೆದುರು ಬಂದು ಭಯಭೀತಳಾಗುತ್ತಿದ್ದೆನೆಂದು ಲೇಖಕಿಯೊಬ್ಬಳು ಬರೆಯುತ್ತಾಳೆ. ಈ ಪ್ರಸಂಗವನ್ನು ನುಗುಗಿ ಒಂದೆಡೆ ನೆನೆಸಿಕೊಳ್ಳುತ್ತಾನೆ. 'ಕಿಂಗ್ ಸಾಲೊಮನ್ಸ್ ಮೈನ್ಸ್' ಕಾದಂಬರಿಯಲ್ಲಿ ಹಾವಿನಂತೆ ಸಿಂಬೆ ಸುತ್ತಿಕೊಂಡು ಬಿದ್ದುಕೊಂಡಿದ್ದು ಥಟ್ಟನೆ ಮೇಲೇಳುವ ಈ ಮುದುಕಿ ಬಿಳಿಯರ ಕಣ್ಣಲ್ಲಿಹಾಗೂ ಕಾದಂಬರಿಯ ಬಿಳಿಯ ನಿರೂಪಕನ ಕಣ್ಣಲ್ಲಿ ರಕ್ತ ಹೀರುವ ರಕ್ಕಸಿ. ಸಾಲೊಮನ್ ವಜ್ರದ ಗಣಿಗಳಿಗೆ ಬರುವ ಬಿಳಿಯರ ಕತ್ತು ಹಿಸುಕುವ ಪಿಶಾಚಿ. ಈ 'ಭೀಕರ' ಮುದುಕಿ ಆಫ್ರಿಕಾದ ಕುಕುವಾನಾ ನೆಲದಲ್ಲಿ ಬಿಳಿಯರನ್ನು ಕಂಡು ತನ್ನ ನಾಡಿನ ದೊರೆಗೆ ಹೇಳುವ ಎಚ್ಚರಿಕೆಯ ಮಾತುಗಳಿವು:

> ಕೇಳು ದೊರೆಯೇ ಕೇಳು. ಕೇಳಿ ಪರ್ವತಗಳೇ, ನದಿಗಳೇ, ಬಯಲುಗಳೇ ಕೇಳಿ, ನಾನು ಭವಿಷ್ಯ ನುಡಿಯುತ್ತಿದ್ದೇನೆ.... ನೆತ್ತರು... ನೆತ್ತರು.... ಎಲ್ಲೆಡೆ ನೆತ್ತರು ಕಾಣಿಸುತ್ತಿದೆ ನನಗೆ... ನೆಲದ ತುಂಬಾ ನೆತ್ತರು...ಆಗಸದಿಂದ ಸುರಿಯುತ್ತಿದೆ ನೆತ್ತರು. ..... ಹೆಜ್ಜೆಯ ಸಪ್ಪಳ! ಹೆಜ್ಜೆಯ ಸಪ್ಪಳ! ಹೆಜ್ಜೆಯ ಸಪ್ಪಳ! ದೂರದ ನಾಡಿಂದ ಬರುತ್ತಿರುವ ಬಿಳಿಯನ ಹೆಜ್ಜೆಯ ಸಪ್ಪಳ.... ಅದು ಭೂಮಿಯನ್ನು ನಡುಗಿಸುತ್ತಿದೆ. ಭೂಮಿ ತನ್ನ ಒಡೆಯನ ಎದುರು ಹೆದರಿ ನಡುಗುತ್ತಿದೆ....

ಗಗೂಲ್ ಮುದುಕಿಯ ಭವಿಷ್ಯವಾಣಿಯನ್ನು ಹ್ಯಾಗಾರ್ಡ್‌ನ ಕಾದಂಬರಿಯ ನಿರೂಪಕ ಪ್ರಜ್ಞೆ ಹಾಗೂ ಬಿಳಿಯ ಪಾತ್ರಗಳು ಗೇಲಿ ಮಾಡುತ್ತವೆ, ನಿಜ. ಆದರೂ ಇಲ್ಲೊಂದು ಸೂಕ್ಷ್ಮವಾದ ಅಂಶವಿದೆ. ಕುಕುವಾನದ ವಜ್ರಗಳನ್ನು ಕಾಯುವ ಜಾಣ ಮುದುಕಿಯನ್ನು ಪಿಶಾಚಿಯಂತೆ ಚಿತ್ರಿಸುವುದರ ಮೂಲಕ ಕಾದಂಬರಿ ಅವಳ ಸಾವನ್ನು 'ಶಿಕ್ಷೆ'ಯೆಂದು ಸಮರ್ಥಿಸುತ್ತದೆ ಹಾಗೂ ಆಫ್ರಿಕಾದ ವಜ್ರಗಳನ್ನು ದೋಚುವ ಬಿಳಿಯರ 'ಸಾಹಸ'ವನ್ನು ವೈಭವೀಕರಿಸುತ್ತದೆ. ಆದರೆ ಇಂಥ ಜನಾಂಗೀಯವಾದೀ ಕಾದಂಬರಿ ಕೂಡ ಬಿಳಿಯರು ಆಫ್ರಿಕಾದ ಮೇಲೆ ನಡೆಸಿದ ಆಕ್ರಮಣವನ್ನು ಸೂಕ್ಷ್ಮವಾಗಿ ಹಿಡಿದಿಟ್ಟಿರುವುದು ಕೃತಿಕಾರನ

ಪೂರ್ವಗ್ರಹಗಳ ವಿರುದ್ಧ ರೂಪಕ ಸತ್ಯದ, ಅಂದರೆ ಕಲೆಯ ಅಂತಿಮ ಗೆಲುವು. ನಿರೂಪಣಾ ದೃಷ್ಟಿಕೋನದ ನಿರ್ದೇಶನವನ್ನಾಧರಿಸಿ ಕಾದಂಬರಿಯನ್ನು ಓದುವ ಓದುಗರ ಮೇಲೆ ಆ ದೃಷ್ಟಿಕೋನ ಬೀರುವ ಪರಿಣಾಮ ಗಮನಾರ್ಹವಾದುದೇನೋ ನಿಜ. ಆದರೆ, ನಿರೂಪಕ ಪ್ರಜ್ಞೆಯನ್ನೂ ಮೀರಿದ ಭಿನ್ನಮತಗಳ ಮೂಲಕ ಕಾದಂಬರಿ ಹೊಳೆಯಿಸಬಲ್ಲ ಸತ್ಯಗಳನ್ನೂ ಅಲ್ಲಗಳೆಯುವಂತಿಲ್ಲ. ಸ್ವತಃ ಆಫ್ರಿಕನ್ನರೇ ತಮ್ಮ ಕಾದಂಬರಿಯನ್ನು ಬರೆಯಲಾರಂಭಿಸಿದಾಗ ಈ ರೂಪಕಸತ್ಯವನ್ನೇ ಆಧರಿಸಿ, ಅಂದರೆ ಗಗೂಲ್ ಮುದುಕಿಯ ಭವಿಷ್ಯವಾಣಿಯಂತೆ, ಆಫ್ರಿಕಾದ ನದಿ, ಪರ್ವತ, ಬಯಲು ಹಾಗೂ ಮಾನವರು ಅನುಭವಿಸಿದ ಯಾತನೆಯ ಘಟ್ಟಗಳನ್ನೇ ನಿರೂಪಿಸಬೇಕಾಯಿತೆನ್ನುವುದು ಕುತೂಹಲಕರ.

ಇಲ್ಲಿ ಸಾಬೀತಾಗುವ ಬಹುಮುಖ್ಯ ಅಂಶ ಇದು: ಕಾದಂಬರೀ ಪ್ರಕಾರವನ್ನು ತನ್ನ ಸಾಂಸ್ಕೃತಿಕ ರಾಜಕಾರಣದ ಪ್ರಧಾನ ಸಾಧನಗಳಲ್ಲೊಂದಾಗಿ ಪಶ್ಚಿಮ ಬಳಸಿಕೊಳ್ಳುತ್ತಿರುವಾಗ, ಕಾದಂಬರೀ ಪ್ರಕಾರವೇ ಇನ್ನೊಂದು ದಿಕ್ಕಿನಿಂದ ತನ್ನ ಸ್ವಾಯತ್ತ ಅಧಿಕಾರವನ್ನು ಪ್ರತಿಪಾದಿಸುತ್ತಿತ್ತು; ಜೊತೆಗೆ ಪಶ್ಚಿಮದ ಕಾದಂಬರೀ ರಾಜಕಾರಣದ ವಿರುದ್ಧ ಭಿನ್ನಮತೀಯ ಸಾಂಸ್ಕೃತಿಕ ರಾಜಕಾರಣವನ್ನು ಕಾದಂಬರೀ ಪ್ರಕಾರವೇ ಉದ್ಘಾಟಿಸಲೆತ್ನಿಸುತ್ತಿತ್ತು. ಡೇವಿಡ್ ಕ್ಯಾರೊಲ್, ಅಚೀಬೆ ಹಾಗೂ ರಾಸ್ಕಿನ್ ವಾದಿಸುವಂತೆ ಕಾನ್ರಾಡ್‌ನ 'ಹಾರ್ಟ್ ಆಫ್ ಡಾರ್ಕ್‌ನೆಸ್' ಕೃತಿ ಒಂದು ವೇಳೆ ಯುರೋಪಿಯನ್ ಸಾಮ್ರಾಜ್ಯವಾದೀ ಪೂರ್ವಗ್ರಹಗಳ ನೆಲೆಯಿಂದಲೇ ಸೃಷ್ಟಿಯಾಗಿರಬಹುದು. ಆದರೂ, ಅದು ಸಾಮ್ರಾಜ್ಯವಾದೀ ಮನಸ್ಸಿನ ಕ್ರೌರ್ಯವನ್ನು ವಿಮರ್ಶಿಸುತ್ತಿರುವುದನ್ನೂ, 'ಮಿಸ್ಟರ್ ಜಾನ್ಸನ್' ಕೃತಿ ಆಫ್ರಿಕನ್ ಸಮಾಜದ ವಿಘಟನೆಗೆ ಕಾರಣವಾಗುವ ಪಶ್ಚಿಮದ ಮೌಲ್ಯಗಳನ್ನು ಗುರುತಿಸುವುದನ್ನೂ ಈ ಕಾದಂಬರಿಗಳ ನಿಕಟ ಓದು ತೋರಿಸಿಕೊಡುತ್ತದೆ. ಆಫ್ರಿಕನ್ ಕಾದಂಬರಿಕಾರರ ಕಣ್ಣಿಗೆ (ಸಕಾರಣವಾಗಿಯೇ) ಜನಾಂಗೀಯವಾದೀ ಕಾದಂಬರಿಗಳಂತೆ ಕಂಡ 'ಕಿಂಗ್ ಸಾಲೊಮನ್ಸ್ ಮೈನ್ಸ್', 'ಮಿಸ್ಟರ್ ಜಾನ್ಸನ್' ಅಥವಾ 'ಹಾರ್ಟ್ ಆಫ್ ಡಾರ್ಕ್‌ನೆಸ್' ಕೃತಿಗಳು ಸೂಕ್ಷ್ಮವಾಗಿ ಅಥವಾ ಸ್ಥೂಲವಾಗಿ ಯುರೋಪಿಯನ್ ಕ್ರೌರ್ಯವನ್ನು ಕೂಡ ಚಿತ್ರಿಸುತ್ತವೆಂಬ ಅಂಶವೇ ಸ್ಥಾಪಿತ ಸತ್ಯಗಳ ವಿರುದ್ಧ ಕಾದಂಬರೀ ಪ್ರಕಾರದ ಬಹುಧ್ವನಿಗಳು ನಡೆಸುವ ಬುಡಮೇಲು ಕೃತ್ಯಕ್ಕೆ ಸಾಕ್ಷಿ. ಈ ಕಾದಂಬರೀ ಪ್ರಕಾರವೇ ಆಫ್ರಿಕನ್ ಲೇಖಕರಿಗೂ ವಸಾಹತು ವಿರೋಧೀ ಸಂಕಥನ ಸೃಷ್ಟಿಯ ಹಾಗೂ ಅಥೆಂಟಿಕ್ ಆಫ್ರಿಕಾದ ಸೃಷ್ಟಿಯ ಮಾಧ್ಯಮವಾದದ್ದನ್ನು ಸಾಹಿತ್ಯ ಪ್ರಕಾರಗಳ ಸಾಂಸ್ಕೃತಿಕ ರಾಜಕಾರಣದ ಮುಂದುವರಿಕೆಯನ್ನಾಗಿಯೂ ನೋಡಬಹುದು.

ಆದರೆ, ಪಶ್ಚಿಮ ಸೃಷ್ಟಿಸಿದ ಆಫ್ರಿಕಾದ ಚಿತ್ರಕ್ಕೆ ಪ್ರತಿಯಾದ ಅಧಿಕೃತ ಆಫ್ರಿಕಾದ ಸೃಷ್ಟಿಯನ್ನು ಆರಂಭದ ಆಫ್ರಿಕನ್ ಕಾದಂಬರಿಗಳು ಕೈಗೆತ್ತಿಕೊಂಡವೆಂಬ ಮಾತ್ರಕ್ಕೆ ಈ ಕಾದಂಬರಿಗಳು (ಇಲ್ಲಿ ಮಾನವಶಾಸ್ತ್ರೀಯ ಅಂಶಗಳು ಹೆಚ್ಚಿಗೆ ಇದ್ದರೂ) ಸಂಸ್ಕೃತಿ

ಪ್ರತಿಪಾದನೆಯ ದಾಖಲಾತ್ಮಕ ಚಿತ್ರಗಳಲ್ಲ. ಅದರಲ್ಲೂ ಕಾದಂಬರಿಯಂಥ ಪ್ರಕಾರದಲ್ಲಿ ಒಂದು ಸಮುದಾಯದ ಅಧಿಕೃತತೆಯ ಪ್ರಶ್ನೆ ಅದರ ಆಂತರಿಕ ವಿಮರ್ಶೆಯನ್ನು ಒಳಗೊಂಡೇ ಇರುತ್ತದೆ. ಅದರ ಜೊತೆಗೇ ಅನ್ಯ ಸಂಸ್ಕೃತಿಯಿಂದ ಪರಿಚಯಿಸಲ್ಪಟ್ಟ ಕಾದಂಬರೀ ಪ್ರಕಾರದಲ್ಲೇ ಅಂತರ್ಗತವಾಗಿರುವ ಭಿನ್ನಮತೀಯ ದೃಷ್ಟಿಕೋನಗಳು ಕೂಡ ಅಥೆಂಟಿಕ್ ಆಫ್ರಿಕಾದ ಸೃಷ್ಟಿಯ ಉದ್ದೇಶವನ್ನು ಹಲವು ಬಗೆಯಲ್ಲಿ ನಿಯಂತ್ರಿಸುತ್ತಿರುತ್ತವೆ.

ಈ ಹಿನ್ನೆಲೆಯಲ್ಲಿಯೇ ಸಮಕಾಲೀನ ಸಮಾಜದ ವಿಮರ್ಶೆಯನ್ನು ತನ್ನ ಮೂಲ ಧರ್ಮವನ್ನಾಗಿಟ್ಟುಕೊಂಡು ಬೆಳೆದ ಪ್ರಕಾರವಾದ ಕಾದಂಬರಿಯ ಮೂಲಕ ಆಫ್ರಿಕನ್ ಲೇಖಕರು ಆರಂಭಿಸಿದ ಅಥೆಂಟಿಕ್ ಆಫ್ರಿಕಾದ ಸೃಷ್ಟಿಯ ನಿರ್ದಿಷ್ಟ ಸ್ವರೂಪದ ಪ್ರಶ್ನೆ ಎದುರಾಗುವುದು. ಅಥೆಂಟಿಕ್ ಆಫ್ರಿಕಾದ ಸೃಷ್ಟಿಯೆಂದರೆ ರೈಡರ್ ಹ್ಯಾಗಾರ್ಡ್ ಅಥವಾ ಜಾಯ್ಸ್‌ಕ್ಯಾರಿಯಂಥವರ ಪ್ರತಿಮೆಗಳಿಗಿಂತ ಭಿನ್ನವಾದ ಪ್ರತಿ-ಪ್ರತಿಮೆಗಳ ಸೃಷ್ಟಿ ಮಾತ್ರವೆ? ಆಫ್ರಿಕಾ ಕುರಿತಂತೆ ಯುರೋಪಿನ ವಿಕೃತ ಕಲ್ಪನೆಗಳನ್ನು ತಿದ್ದುವ ಶಿಕ್ಷಕನ ಹಾಗೂ ಸಾಂಸ್ಕೃತಿಕ ರಾಯಭಾರಿಯ ಪಾತ್ರದಲ್ಲಿ ಆಫ್ರಿಕನ್ ಕಾದಂಬರಿ ಯಶಸ್ವಿಯಾಯಿತೆ?

ಸುಮಾರು ಐವತ್ತು, ಅರವತ್ತು ವರ್ಷಗಳ ತನ್ನ ಚರಿತ್ರೆಯಲ್ಲಿ ಆಫ್ರಿಕನ್ ಕಾದಂಬರಿ ದೇಶೀ ಸಂಸ್ಕೃತಿ ಕುರಿತಂತೆ ಪರಕೀಯರ ಪೂರ್ವಗ್ರಹಗಳನ್ನು ನಿವಾರಿಸುವ ಹಾಗೂ ತನ್ನ ವಿಶಿಷ್ಟ ವ್ಯಕ್ತಿತ್ವವನ್ನು ಪ್ರತಿಪಾದಿಸುವ ಸಾಂಸ್ಕೃತಿಕ ರಾಯಭಾರವನ್ನು ನಿರ್ವಹಿಸಿದೆ. ಆದರೆ ಅದರ ಜೊತೆಗೇ ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ, ಆಫ್ರಿಕನ್ ಪಾರಂಪರಿಕ ಸಮಾಜದ 'ಬರ್ಬರತೆ' ಕುರಿತಂತೆ ಪರಕೀಯ ಲೇಖಕರು ಎತ್ತಿದ ಪ್ರಶ್ನೆಗಳನ್ನು ಆಫ್ರಿಕನ್ ಕಾದಂಬರಿಯೂ ಒಂದಲ್ಲ ಒಂದು ಬಗೆಯಲ್ಲಿ ಎತ್ತಲೇಬೇಕಾಯಿತೆನ್ನುವುದು. ಆಫ್ರಿಕಾದ ಗೊಂದಲ, ಪತನ ಕುರಿತಂತೆ ಚಿನುವ ಅಚೀಬೆಯ 'ನೋ ಲಾಂಗರ್ ಅಟ್ ಈಸ್'ನ ಒಬಿ ಒಕಾಂಕೋ ಎತ್ತುವ ಪ್ರಶ್ನೆಗಳಿಗೂ 'ಹಾರ್ಟ್ ಆಫ್ ಡಾರ್ಕ್‌ನೆಸ್' ಕೃತಿಯ ಕರ್ಟ್ಜ್ ಎತ್ತುವ ಪ್ರಶ್ನೆಗಳಿಗೂ ಇರುವ ಸಾಮ್ಯವನ್ನು ಲೆವಿಸ್ ನಕೋಸಿ ಗುರುತಿಸುತ್ತಾನೆ. ಆಫ್ರಿಕನ್ ಭ್ರಷ್ಟತೆ ಕುರಿತಂತೆ 'ನೋ ಲಾಂಗರ್ ಅಟ್ ಈಸ್' ಕಾದಂಬರಿಯ ವಸಾಹತು ಅಧಿಕಾರಿ ಗ್ರೀನ್ ಮಾಡುವ ವ್ಯಾಖ್ಯಾನಗಳನ್ನೇ 'ದಿ ಇಂಟರ್‌ಪ್ರಿಟರ್ಸ್' ಅಥವಾ 'ಬ್ಯೂಟಿಫುಲ್ ಒನ್ಸ್ ಆರ್ ನಾಟ್ ಯೆಟ್ ಬಾರ್ನ್' ಕೃತಿಗಳೂ ಮಾಡಲೆತ್ನಿಸುತ್ತವೆ.

ಅಂದರೆ, ಅಥೆಂಟಿಕ್ ಆಫ್ರಿಕಾದ ತಾತ್ತ್ವಿಕ ನೆಲೆಯನ್ನು ಪ್ರಧಾನವಾಗಿಟ್ಟುಕೊಂಡ ಆಫ್ರಿಕನ್ ಕಾದಂಬರಿ ವಸಾಹತು ವಿರೋಧದ ಸಾಧನವೂ ಆಗಬೇಕಾಯಿತು; ವಸಾಹತುವಾದ ಎತ್ತಿದ ಪ್ರಶ್ನೆಗಳನ್ನು ತನ್ನ ಚೌಕಟ್ಟಿನಲ್ಲಿ ಪರಿಶೀಲಿಸುವ ವಿಮರ್ಶಕನೂ ಆಗಬೇಕಾಯಿತು. ಕಾದಂಬರೀ ಪ್ರಕಾರ ಆಫ್ರಿಕನ್ ಸಂದರ್ಭದಲ್ಲಿ ಕೂಡ ಅಂತಿಮವಾಗಿ ಸಮಕಾಲೀನ ಸಮಾಜದ ವಿಮರ್ಶೆಯ ಸಾಧನವೇ ಆಗಿ ತನ್ನ ಮೂಲ ಧರ್ಮವನ್ನೇ ಉಳಿಸಿಕೊಂಡು ಬಿಟ್ಟಿತೆಂದು ಈ ಅಂಶಗಳು ಸೂಚಿಸುತ್ತವೆ.

**ಆಫ್ರಿಕನ್ ಕಾದಂಬರಿ ಕಂಡ ವಸಾಹತೀಕರಣದ ರೂಪಕಗಳು**

ವಸಾಹತುವಾದ, ವಸಾಹತುಶಾಹಿ ಹಾಗೂ ಅದರ ಜೊತೆಗೇ ಬಂದ ವಿವಿಧ ಶಕ್ತಿಗಳು ಆಫ್ರಿಕಾದ ದೇಶೀ ಸಮಾಜದಲ್ಲಿ ತಂದ ವಿವಿಧ ರೀತಿಯ ಚಲನೆ, ವಿಘಟನೆ ಹಾಗೂ ಪ್ರಗತಿಗಳ ಸಂಕೀರ್ಣ ಚಿತ್ರವನ್ನು ನೈಜೀರಿಯಾದ ಕಾದಂಬರಿಕಾರ ಚಿನುವ ಅಚೀಬೆಯವರ 'ಥಿಂಗ್ಸ್ ಫಾಲ್ ಅಪಾರ್ಟ್' ಹಾಗೂ 'ಆರೋ ಆಫ್ ಗಾಡ್' ಕಾದಂಬರಿಗಳು ಕೊಡುತ್ತವೆ. ಆಫ್ರಿಕಾದ ಪ್ರಮುಖ ಬುಡಕಟ್ಟುಗಳಲ್ಲೊಂದಾದ ಇಬೊ ಬುಡಕಟ್ಟು ನೆಲೆಸಿರುವ ಉಮೋಫಿಯಾ ಎಂಬ ಊರಿಗೆ ವಸಾಹತುಶಾಹಿ ಪ್ರವೇಶದ ಮೊದಲ ಘಟ್ಟದ ಕತೆಯನ್ನು 'ಥಿಂಗ್ಸ್ ಫಾಲ್ ಅಪಾರ್ಟ್' ಹೇಳುತ್ತದೆ. ಈ ಕಾದಂಬರಿಯ ಚೌಕಟ್ಟನ್ನು ಹೀಗೆ ಗ್ರಹಿಸಬಹುದು.

ತನ್ನದೇ ಆದ ವಿಶಿಷ್ಟ ಜೀವನಕ್ರಮಗಳು, ಆಚರಣೆಗಳು, ನಂಬಿಕೆಗಳು ಹಾಗೂ ಮೌಲ್ಯಗಳ ಲೋಕದಲ್ಲಿ ಸಾವಿರಾರು ವರ್ಷಗಳ ಕಾಲ ಬದುಕಿದ್ದ ಉಮೋಫಿಯಾದ ಇಬೋ ಸಮುದಾಯದ ಹೆಮ್ಮೆಯ ಮಗ ಒಕಾಂಕೋ ಒಬ್ಬ ಕುಸ್ತಿಪಟು. ಕಾದಂಬರಿಯ ನಿರೂಪಕನ ವರ್ಣನೆಯಲ್ಲಿ ಮೂಡುವ ಕಾದಂಬರಿಯ ಕೇಂದ್ರ ಪಾತ್ರ ಒಕಾಂಕೋನ ಚಿತ್ರ ಹೀಗಿದೆ:

> ಒಕಾಂಕೋ ಛಲದಿಂದ ಮುನ್ನುಗ್ಗುವ ಮನುಷ್ಯನಾಗಿ ಬೆಳೆದ. ಕಾಳಗಕ್ಕಂತೂ ಹೇಳಿ ಮಾಡಿಸಿದ ವ್ಯಕ್ತಿಯಾಗಿದ್ದ. ಅವನು ತನ್ನ ಅಪ್ಪನಂತೆ ನೆತ್ತರು ಕಂಡು ಹೆದರಿದವನಲ್ಲ. ಉಮೋಫಿಯಾದ ಈಚಿನ ಕಾಳಗದಲ್ಲಿ ಮೊದಲ ಮಾನವ ತಲೆಯನ್ನು ಮನೆಗೆ ತಂದವನು ಕೂಡ ಅವನೇ. ಅದು ಅವನು ಗಳಿಸಿದ ಐದನೆಯ ತಲೆ. ತನ್ನ ಸಮುದಾಯಕ್ಕೆ ಸೇರಿದ ಹಿರೀಕರ ಸಂಸ್ಕಾರದ ದಿನದಂದು ತಾನು ಗಳಿಸಿದ ಮೊದಲ ಮಾನವನ ಬುರುಡೆ ಯನ್ನು ಅವನು ಸುರೆ ಕುಡಿಯಲು ಬಳಸುತ್ತಿದ್ದ.

ಇಂಥ ಒಕಾಂಕೋ ತನ್ನ ಎದುರಾಳಿಯನ್ನು ಕುಸ್ತಿಯಲ್ಲಿ ಸೋಲಿಸಿ ಊರಿನ ನಾಯಕ ನಾಗುವ ಪ್ರಸಂಗದೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಆದರೆ ಮುಂದೊಮ್ಮೆ ಈ ಕುಸ್ತಿಪಟು ತನ್ನ ಅರಿವಿಗೆ ಮೀರಿದ ವಸಾಹತುಶಾಹಿ ಶಕ್ತಿಗಳನ್ನು ಗ್ರಹಿಸಲಾರದೆ, ಎದುರಿಸಲಾರದೆ ನೇಣು ಹಾಕಿಕೊಳ್ಳುವುದರೊಂದಿಗೆ ಕಾದಂಬರಿ ಮುಗಿಯುತ್ತದೆ.

ಒಕಾಂಕೋ ಪ್ರತಿನಿಧಿಸುತ್ತಿರುವ ಪುರುಷತ್ವದ ಮೌಲ್ಯಗಳು ಅವನ ಸಮಾಜದ ಮೌಲ್ಯಗಳೂ ಹೌದು. ಹೀಗಾಗಿ ಅವನ ದೌರ್ಬಲ್ಯಗಳು ಅವನ ಸಮಾಜದ ಮೌಲ್ಯಗಳೂ ಹೌದು. ಒಂದು ಸಂದರ್ಭದಲ್ಲಿ ಅವನು ಅರಿಯದೇ ಮಾಡಿದ ತಪ್ಪಿನಿಂದಾಗಿ ಏಳು ವರ್ಷಗಳ ಕಾಲ ಉಮೋಫಿಯಾದಿಂದ ಹೊರಗೆ ತನ್ನ ತಾಯಿಯ ಊರಾದ ಮಬಾಂತದಲ್ಲಿ ನೆಲೆಸಬೇಕಾಗುತ್ತದೆ. ಅವನು ಅಲ್ಲಿರುವಾಗ ಮಬಾಂತದ ಸುತ್ತಮುತ್ತ ವಸಾಹತುಶಾಹಿ

ಆಕ್ರಮಣ ಆರಂಭವಾಗುತ್ತದೆ. ಅವನು ಮರಳಿ ಬರುವ ಹೊತ್ತಿಗೆ ಆಫ್ರಿಕಾದ ಇತರ ಭಾಗಗಳಿಗೆ ಅಡಿಯಿಟ್ಟಿದ್ದ ವಸಾಹತುಶಾಹಿ ಶಕ್ತಿಗಳು ಅವನ ಊರಾದ ಉಮೋಫಿಯಾಕ್ಕೂ ಆಡಿಯಿಟ್ಟಿವೆ.

ಕಾದಂಬರಿಯ ವಿವಿಧ ಘಟ್ಟಗಳಲ್ಲಿ ವಸಾಹತುಶಾಹಿ, ಚರ್ಚು, ಆಧುನಿಕತೆಗಳು ದೇಶೀ ಸಮಾಜದೊಂದಿಗೆ ನಡೆಸುವ ಮುಖಾಮುಖಿಯ ರೂಪಕಗಳಿವೆ. ಅವುಗಳಲ್ಲಿ ಕೆಲವನ್ನು ಮುಂದೆ ನೋಡಬಹುದು:

ಆಧುನಿಕತೆ ಹಾಗೂ ಪರಂಪರೆಗಳ ಮುಖಾಮುಖಿಯ ಮೊದಲ ಘಟ್ಟದಲ್ಲಿಯೇ ಅಷ್ಟು ತೀವ್ರವಾದ ಸಂಘರ್ಷಗಳು ಹುಟ್ಟುವುದಿಲ್ಲವೆಂಬುದರ ಸೂಚನೆ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯಲ್ಲಿದೆ. ಪಾರಂಪರಿಕ ಸಂಸ್ಕೃತಿಯ ರಕ್ಷಣೆಯನ್ನುಳ್ಳ ಜನಾಂಗವೊಂದು ಹೊಸ ಶಕ್ತಿಯ ಆಗಮನವನ್ನು ತೀವ್ರ ಅಪಾಯವೆಂಬಂತೆ ಪರಿಗಣಿಸದೆ, ತನ್ನ ಎಂದಿನ ಆತ್ಮವಿಶ್ವಾಸದಿಂದಲೇ ಹೊಸ ಅನುಭವಗಳನ್ನು ಅರಿಯಲೆತ್ನಿಸುತ್ತದೆ. 'ಥಿಂಗ್ಸ್ ಫಾಲ್ ಅಪಾರ್ಟ್'ನ ಉಮೋಫಿಯಾದ ಜನ ಬಿಳಿಯರ ಆಗಮನದ ಮೊದಲ ಘಟ್ಟದಲ್ಲಿ ಬಿಳಿಯರನ್ನು ಕುಷ್ಠರೋಗದವರೆಂದು ಗೇಲಿ ಮಾಡುತ್ತಾರೆ ಹಾಗೂ ಮಬಾಂತಕ್ಕೆ ಬಿಳಿಯ ಮಿಷನರಿಗಳು ನೀಡುವ ಮೊದಲ ಭೇಟಿಯಲ್ಲಿ ಧರ್ಮಪ್ರಚಾರಕನ ಭಾಷೆ, ಅವನ ಸಂದೇಶ ಎಲ್ಲವೂ ನಗೆಪಾಟಲಾಗುತ್ತವೆ. ಇವೆಲ್ಲವೂ ಪರಂಪರೆಯ ಆತ್ಮವಿಶ್ವಾಸದ ಸೂಚನೆಗಳೇ. ಜೊತೆಗೆ ಇಬೋ ಸಮುದಾಯ ಕಂಡ ಮೊದಲ ಮತಾಂತರಗಳು ಕೂಡ ಸಮುದಾಯದಲ್ಲಿ ಅಂಥ ದಿಗ್ಭ್ರಮೆಯನ್ನೇನೂ ಹುಟ್ಟು ಹಾಕುವುದಿಲ್ಲ. ಕಾರಣ, ಆ ಮತಾಂತರಿಗಳೆಲ್ಲ ಸಮುದಾಯದಲ್ಲಿ ನಿಷ್ಪ್ರಯೋಜಕರೆನಿಸಿಕೊಂಡವರು, ಯಾವ ಬಿರುದುಗಳನ್ನೂ ಸ್ಥಾನವನ್ನೂ ಪಡೆಯದವರು. ಸಮುದಾಯದ ಸಭೆಗಳಲ್ಲಿ ಇಂಥವರ ಮಾತಿಗೆ ಯಾವ ಬೆಲೆಯೂ ಇರುತ್ತಿರಲಿಲ್ಲ. ಇಂಥವರನ್ನೂ ಸಮುದಾಯ 'ಖಾಲಿಜನ' ಎಂದು ಕರೆಯುತ್ತಿತ್ತು. ಅಗ್ಬಾಲ ದೇವತೆಯ ಅರ್ಚಕಿ ಚೀಲೋ ಮತಾಂತರಿಗಳನ್ನು 'ತಮ್ಮ ಸಮಾಜದ ಮಲ ಹಾಗೂ ಹೊಸ ಧರ್ಮವೆಂದರೆ ಆ ಮಲವನ್ನು ತಿನ್ನಲು ಬಂದಿರುವ ಹುಚ್ಚುನಾಯಿ' ಎನ್ನುತ್ತಾಳೆ.

ಆದರೆ, ಇಂಥ ಆತ್ಮವಿಶ್ವಾಸದ ತಳಹದಿ ಅಲುಗಾಡತೊಡಗುವುದು ವ್ಯಕ್ತಿಗಳ ಮೂಲಕ ಪ್ರವೇಶಿಸುವ ಚಾರಿತ್ರಿಕ ಶಕ್ತಿಗಳು ಹಾಗೂ ನೋಟಕ್ರಮಗಳು ಒಡ್ಡುವ ಸವಾಲುಗಳು ಪಾರಂಪರಿಕ ಗ್ರಹಿಕೆಗಳನ್ನು ಮೀರಿ ಬೆಳೆದು ನಿಂತಾಗ. ಇಂಥದೊಂದು ಉದಾಹರಣೆ ಮಬಾಂತದ ಮಿಷನರಿಗಳು ಚರ್ಚುಕಟ್ಟುವ ಪ್ರಸಂಗದಲ್ಲಿದೆ. ಮಬಾಂತದ ಜನ, ಮಿಷನರಿಗಳು ಕ್ರಿಶ್ಚಿಯನ್ ದೇವರನ್ನು ಸ್ಥಾಪಿಸುವುದನ್ನು ಬುಡಮೇಲುಗೊಳಿಸಲೆಂದು 'ಕೇಡಿನ ಕಾಡು' ಎಂದು ಕರೆಯಲಾಗುವ ಜಾಗವನ್ನು ಚರ್ಚು ಕಟ್ಟಲು ಬಿಳಿಯರಿಗೆ ಬಿಟ್ಟುಕೊಡುತ್ತಾರೆ. ಕೇಡಿನ ಖಾಯಿಲೆಗಳಿಂದ ಸತ್ತವರನ್ನೂ ಅತೀಂದ್ರಿಯ ಶಕ್ತಿಗಳ ಆರಾಧಕರನ್ನೂ ಹೂಳುವ ಜಾಗ ಅದು. ಕಾಳರಾತ್ರಿಯ ಭೀಕರ ಶಕ್ತಿಗಳ ಆ ನೆಲದಲ್ಲಿ

ಚರ್ಚು ಕಟ್ಟಿದ ಬಿಳಿಯರು ನಾಲ್ಕೇ ದಿನಗಳಲ್ಲಿ ನಾಶವಾಗುವರೆಂದು ನಿರೀಕ್ಷಿಸುವ ಸ್ಥಳೀಯರಿಗೆ, ಬಿಳಿಯರೂ ಅವರ ಚರ್ಚೂ ಸ್ಥಿರವಾಗಿ ನಿಂತಾಗ ದಿಗ್ಭ್ರಮೆಯಾಗುತ್ತದೆ:

> ...ಮೊದಲ ದಿನ ಕಳೆಯಿತು. ಎರಡು, ಮೂರು, ನಾಲ್ಕನೆಯ ದಿನವೂ ಬಂದೇ ಬಿಟ್ಟಿತು. ಆದರೆ ಆ ಬಿಳಿಯರಲ್ಲಿ ಒಬ್ಬನೂ ಸಾಯಲಿಲ್ಲ. ಎಲ್ಲರಿಗೂ ಅಚ್ಚರಿ. ಆನಂತರ ಬಿಳಿಯರ ದೇವರಿಗೆ ಅಸಾಧಾರಣವಾದ ಶಕ್ತಿಯಿದೆಯೆಂದು ಎಲ್ಲ ಕಡೆ ಸುದ್ದಿ ಹಬ್ಬತೊಡಗಿತು. ಕಣ್ಣುಗಳ ಮೇಲೆ ಗಾಜಿಟ್ಟುಕೊಂಡ ಬಿಳಿಯನು ಭೂತಪ್ರೇತಗಳನ್ನು ಕಾಣಬಲ್ಲನೆಂದೂ ಅವುಗಳ ಜೊತೆ ಮಾತನಾಡಬಲ್ಲನೆಂದೂ ಜನ ಮಾತಾಡಿಕೊಳ್ಳುತ್ತಿದ್ದರು. ಇದಾದ ಕೆಲವೇ ದಿನಗಳಲ್ಲಿ ಅವನು ಮೂರು ಜನರನ್ನು ಮತಾಂತರಿಸುವಲ್ಲಿಯೂ ಯಶಸ್ವಿಯಾಗಿಬಿಟ್ಟನು.

ಪಾರಂಪರಿಕ ನೆಲೆಯನ್ನೇ ಅಲುಗಾಡಿಸುತ್ತಾ ನೆಲೆಯೂರುವ ಆಧುನಿಕ ಶಕ್ತಿಗಳನ್ನು ಕುರಿತ ಅರ್ಥಪೂರ್ಣ ರೂಪಕ ಇದು. ಮಧ್ಯಯುಗದ ಯುರೋಪಿನಲ್ಲಿ ವೈಜ್ಞಾನಿಕ ವಿಚಾರವಾದವನ್ನೂ ವಿಜ್ಞಾನವನ್ನೂ ವಿರೋಧಿಸುತ್ತಿದ್ದ ಚರ್ಚು 'ಥಿಂಗ್ಸ್ ಫಾಲ್ ಅಪಾರ್ಟ್' ಹಾಗೂ 'ಆರೋ ಆಫ್ ಗಾಡ್' ಕಾದಂಬರಿಗಳಲ್ಲಿ ಕಲ್ಲು ದೇವತೆಗಳ ವಿರುದ್ಧ ವೈಜ್ಞಾನಿಕ ವಿಚಾರವಾದದ ಅಸ್ತ್ರವನ್ನೇ ಬಳಸುತ್ತದೆ.

'ಚರಿತ್ರೆ ಕೆಲವು ಸಲ ನಿದ್ರಾಸಂಚಾರಿಯಂತೆ ವರ್ತಿಸುತ್ತದೆ' ಎಂದು ಅಚೀಬೆ ಆಫ್ರಿಕನ್ ಸಮುದಾಯದ ದುರಂತವನ್ನು ವಿವರಿಸುತ್ತಾ ಹೇಳುತ್ತಾನೆ. 'ಥಿಂಗ್ಸ್ ಫಾಲ್ ಅಪಾರ್ಟ್'ನ ಉಮೋಫಿಯಾಕ್ಕೆ ಚರ್ಚಿನ ಪ್ರವೇಶದಿಂದಾಗಿ, ಪಾರಂಪರಿಕ ಸಮಾಜದಲ್ಲಿ ದಮನಕ್ಕೊಳಗಾಗಿದ್ದ ವರ್ಗಗಳು ಬಿಡುಗಡೆ ಕಂಡರೂ ಚರ್ಚು ಆಫ್ರಿಕನ್ ಸಮಾಜವನ್ನು ಪ್ರವೇಶಿಸಿದ್ದೇ ವಿಘಟನೆಯ ಸಾಧನವಾಗಿ ಎಂದು 'ಥಿಂಗ್ಸ್ ಪಾಲ್ ಅಪಾರ್ಟ್' ಹಾಗೂ 'ಆರೋ ಆಫ್ ಗಾಡ್'ಗಳೆರಡೂ ಸೂಚಿಸುತ್ತವೆ. ಫ್ಯಾನನ್ ಹೇಳುವಂತೆ 'ವಸಾಹತುಗಳಲ್ಲಿ ಚರ್ಚು ಎಂದರೆ ಬಿಳಿಯನ, ವಿದೇಶಿಯನ ಚರ್ಚು ಎಂದೇ ಅರ್ಥ. ಚರ್ಚು ಸ್ಥಳೀಯರನ್ನು ಕರೆಯುವುದು ದೇವರ ಮಾರ್ಗದ ಕಡೆಗಲ್ಲ; ಬದಲಿಗೆ ಬಿಳಿಯನ, ಒಡೆಯನ, ದಮನಕಾರನ ರೀತಿಯನ್ನು ಒಪ್ಪಿಕೊಳ್ಳುವಂತೆ ಅದು ಕರೆ ನೀಡುತ್ತದೆ. ಆಫ್ರಿಕಾದಲ್ಲಿ ವಸಾಹತುವಾದ ದೇಶೀ ಮಾದರಿಗಳನ್ನು ಕನಿಷ್ಠವಾಗಿಸುವಂತೆ, ಚರ್ಚು ಕೂಡ ದೇಶೀ ಧರ್ಮವನ್ನು ತಿರಸ್ಕಾರದಿಂದ ನೋಡಲಾರಂಭಿಸುತ್ತದೆ.'

ಆಫ್ರಿಕನ್ ಕಾದಂಬರಿ ಹಾಗೂ ನಾಟಕಗಳ ಪಾರಂಪರಿಕ ಹಿಂಸೆಯ ಪ್ರತಿಮೆಗಳು ಸೂಚಿಸುವಂತೆ ಆಫ್ರಿಕಾದ ಹಲವಾರು ಬಗೆಯ ಕ್ರೌರ್ಯಗಳ ಹಿಂದೆ ದೇವರು ಹಾಗೂ ಮಾನವಾತೀತ ಶಕ್ತಿಗಳನ್ನು ಕುರಿತ ಭಯವಿದೆ. ಆದರೆ ವಸಾಹತುಶಾಹಿ ಹಾಗೂ

ಆಧುನಿಕತೆಯ ಪ್ರವೇಶಕ್ಕೆ ಮುನ್ನವೇ ದೇಶೀ ಸಮಾಜದ ಈ ಆಚರಣೆಗಳನ್ನು ಹಾಗೂ ಈ ಸಮಾಜದ ಹಿಂಸೆಯ ಮುಖಗಳನ್ನು ಕುರಿತ ಅಸಹನೆಗಳು ಆಗಲೇ ಗರಿಗಟ್ಟಿಕೊಳ್ಳ ತೊಡಗಿದ್ದವು. ಲೆವಿಸ್ ನಕೊಸಿ ಗುರುತಿಸುವಂತೆ, ಈ ಸಮಾಜ ಅದೆಷ್ಟೇ ಹೊಂದಾಣಿಕೆಯ ನೆಲೆಯಲ್ಲಿ ನಿಂತಿರುವಂತೆ ಕಂಡರೂ ಅದು ಒಳಗೊಳಗೇ ಕುದಿದು ಸ್ಫೋಟಿಸುವ ಹಂತ ತಲುಪಿತ್ತೆಂಬುದನ್ನು 'ಥಿಂಗ್ಸ್ ಫಾಲ್ ಅಪಾರ್ಟ್' ಸೂಚಿಸುತ್ತದೆ. ಜೊತೆಗೆ, ಆಫ್ರಿಕನ್ ಸಮಾಜದ ಎಷ್ಟೋ ಆಚರಣೆಗಳು ಎಷ್ಟು ಯಾಂತ್ರಿಕ ಹಾಗೂ ಕ್ರೂರವಾದ ಹಂತ ತಲುಪಿಬಿಟ್ಟಿದ್ದವೆಂದರೆ, ಬದಲಾವಣೆಗಾಗಿ ಆಂತರಿಕ ಕ್ರಾಂತಿ ಅಥವಾ ಪರಕೀಯ ಶಕ್ತಿಗಳ ಆಗಮನವಾಗಲೇಬೇಕಾದ ಅನಿವಾರ್ಯತೆಯನ್ನು ಅವು ಸೃಷ್ಟಿಸಿದ್ದವು.

ಅದೇ ಆಗ ಹೊಸಶಕ್ತಿಗಳ ಪ್ರವೇಶವಾಗಿರುವ 'ಥಿಂಗ್ಸ್ ಫಾಲ್ ಅಪಾರ್ಟ್'ನ ಉಮೋಫಿಯಾದಲ್ಲಿ ಹೊಸ ತಲೆಮಾರಿಗೆ ಸೇರಿದ ನೋಯೆಗೆ ತನ್ನ ಸಮಾಜ ಕುರಿತ ಅಸಹನೆ ಇಕೆಮೆಫುನಾನ ಬಲಿಯ ನಂತರ ಮತ್ತಷ್ಟು ಗಾಢವಾಗತೊಡಗುತ್ತದೆ. ಈ ಇಕೆಮೆಫುನಾ ಪಕ್ಕದ ಊರೊಂದು ಮಾಡಿದ ತಪ್ಪಿನ ಫಲವಾಗಿ ತಲೆದಂಡವಾಗಿ ಉಮೋಫಿಯಾಕ್ಕೆ ಒಪ್ಪಿಸಲಾದ ಮುಗ್ಧ ಹುಡುಗ. ಅವನ ಬಲಿಯಲ್ಲಿ ತಂದೆ ಪಾಲ್ಗೊಂಡಿದ್ದು ಮಗ ನೋಯೆಯಲ್ಲಿ ಆಳವಾದ ದಿಗ್ಭ್ರಮೆಯನ್ನುಂಟು ಮಾಡುತ್ತದೆ. ಈ ಮನಸ್ಥಿತಿಯಲ್ಲಿರುವ ನೋಯೆಗೆ, ಬಿಳಿಯ ಪಾದ್ರಿಯೊಬ್ಬ ನಿಮ್ಮ ದೇವರುಗಳು 'ನಿಮ್ಮ ಜನರನ್ನೂ ಮುಗ್ಧ ಮಕ್ಕಳನ್ನೂ ಕೊಲ್ಲಲೆಂದೇ ಇರುವ ಮೋಸಗಾರ ದೇವರುಗಳು' ಎಂದಾಗ ಅದು ಅವನ ಆಳಕ್ಕಿಳಿಯುತ್ತದೆ. ಜೊತೆಗೇ ಅವರ ಹಾಡೂ ಅವನನ್ನು ಸೆಳೆಯತೊಡಗುತ್ತದೆ. ಈ ಅಂಶ ಹೊಸ ಸಾಂಸ್ಕೃತಿಕ ಪರ್ಯಾಯಗಳ ಭಾಷೆ, ಧೋರಣೆ, ಪ್ರತಿಮೆಗಳು ಅನ್ಯ ಸಂಸ್ಕೃತಿಗಳನ್ನು ಪ್ರವೇಶಿಸುವ ಬಗೆಯೊಂದನ್ನು ಸಂಕೇತಿಸುತ್ತದೆ:

> ಅವನನ್ನು ಸೆಳೆದದ್ದು ಚರ್ಚಿನ ಹುಚ್ಚು ತರ್ಕವಲ್ಲ, ಅದೇನೆಂದು ಅವನಿಗೆ ಅರ್ಥವಾಗಲೂ ಇಲ್ಲ. ಆದರೆ ಅವನನ್ನು ಸೆಳೆದದ್ದು, ಆಳವಾಗಿ ಕಲಕಿದ್ದು ಹೊಸ ಧರ್ಮದ ಕಾವ್ಯ. ಕತ್ತಲಲ್ಲಿ ಕೂತ ಸೋದರರನ್ನು ಕುರಿತ ಆ ಹಾಡಿನಲ್ಲಿ ಅವನ ಎದೆಯಲ್ಲಿ ಸದಾ ಅನುರಣಿಸುತ್ತಿದ್ದ ಹಲವು ಪ್ರಶ್ನೆಗಳಿಗೆ,ಇಕೆಮೆಫುನಾನ ಕೊಲೆ ಹಾಗೂ ಕಾಡಲ್ಲಿ ಅಳುವ ಕಂದಮ್ಮಗಳ ಕಣ್ಣೀರನ್ನು ಕುರಿತ ಪ್ರಶ್ನೆಗಳಿಗೆ ಉತ್ತರವಿದ್ದಂತಿತ್ತು. ಆ ಹಾಡಿನ ಶಬ್ದ ಗಳು ಒಂದೊಂದಾಗಿ ಅವನೊಳಗಿಳಿಯುತ್ತಾ, ಕಾದು ಬಿರುಬಿಟ್ಟ ನೆಲಕ್ಕೆ ತಂಪೆರೆಯುವ ಮಳೆಹನಿಯಂತೆ ಅವನ ಘಾಸಿಗೊಂಡ ಆತ್ಮಕ್ಕೆ ಅವ್ಯಕ್ತ ನೆಮ್ಮದಿಯನ್ನು ನೀಡಲಾರಂಭಿಸಿದವು. ನೋಯೆಯ ಎಳೆಯ ಮನಸ್ಸು ಈ ವಿಚಿತ್ರಕ್ಕೆ ಬೆರಗಾಗತೊಡಗಿತು.

ಡೇವಿಡ್ ಕ್ಯಾರೊಲ್ ಗುರುತಿಸುವಂತೆ, 'ಕ್ರಿಶ್ಚಿಯನ್ ದೇವರು ಇಬೋ ಸಮಾಜವ

ನ್ನಾಳುತ್ತಿರುವ ಚುಕ್ವು ದೇವತೆಯ ಜೊತೆ ಸ್ಪರ್ಧಿಸಲಾರ. ಆದರೆ ತನ್ನ ಪ್ರೇಮದ ಭಾಷೆಯ ಮೂಲಕ, ಆತ್ಮೀಯತೆಯ ಮೂಲಕ ಉಮೋಫಿಯಾದ ಅವ್ಯಕ್ತ ಭಯಗಳನ್ನು ಈ ಹೊಸ ದೇವರು ನಿವಾರಿಸಲಾರಂಭಿಸುತ್ತಾನೆ. ನೋಯೆಯನ್ನು ಸೆಳೆಯುವುದು ಇಂಥ ಪ್ರೀತಿಯ ದೇವರು. ಈ ಬೆಳವಣಿಗೆಯನ್ನು ಮನಃಶಾಸ್ತ್ರೀಯ ದೃಷ್ಟಿಕೋನದಿಂದ ನೋಡಿದರೆ, ತನ್ನ ಸರ್ವಾಧಿಕಾರಿ ತಂದೆ ಹಾಗೂ ತನ್ನ ಸಮುದಾಯದ ದೇವರುಗಳೆರಡೂ ನೋಯೆಗೆ ಒಂದೇ ಥರ ಕಾಣಿಸಿದ್ದರೂ ಆಶ್ಚರ್ಯವಿಲ್ಲ. ಆದ್ದರಿಂದಲೇ ತನ್ನ ಮನೆ ಹಾಗೂ ಸಮುದಾಯ ಗಳೆರಡನ್ನೂ ತೊರೆದ ನೋಯೆ ಚರ್ಚು ಹಾಗೂ ಚರ್ಚಿನ ಶಾಲೆ ಸೇರುತ್ತಾನೆ.

ನೋಯೆಯಂತೆ, ಇಬೋಸಮಾಜದ ಒಸು* ಎಂಬ ಅಸ್ಪೃಶ್ಯವರ್ಗಕ್ಕೂ ಚರ್ಚು ಬಿಡುಗಡೆಯ ಹಾದಿಯಾಗಿ ಕಾಣುತ್ತದೆ.

> '...ಎಲ್ಲರಂತೆ ನೀವು ಕೂಡ ಮನುಷ್ಯರೇ, ನಿಮ್ಮನ್ನು ಕುಷ್ಠರೋಗ ಬಂದವರಂತೆ ಸಮಾಜ ಬಹಿಷ್ಕರಿಸಿಬಿಟ್ಟಿದೆ. ಇದು ತನ್ನನ್ನು ನಂಬಿದ ಎಲ್ಲರೂ ಬದುಕಲೆಂದು ಹಾರೈಸುವ ದೇವರ ಮನಸ್ಸಿಗೆ ವಿರುದ್ಧವಾದದ್ದು'

ಎನ್ನುವ ಪಾದ್ರಿಯ ಮಾತು ಈ ಒಸುಗಳಿಗೆ ಹೊಸ ಆತ್ಮವಿಶ್ವಾಸವನ್ನು ಕೊಡುತ್ತದೆ. ಹೀಗೆ ಮತಾಂತರಗೊಂಡ ಒಸುಗಳಲ್ಲೊಬ್ಬ ಇಬೋ ಸಮುದಾಯ ಪೂಜಿಸುವ ದೈವೀ ಹೆಬ್ಬಾವನ್ನು ಕೊಂದು, ಅದುವರೆಗೂ ತನಗೊಂದು ವ್ಯಕ್ತಿತ್ವವೇ ಇಲ್ಲದಂತೆ ಮಾಡಿದ್ದ ಪರಂಪರೆಯ ವಿರುದ್ಧ ಪ್ರತಿಭಟನೆಯನ್ನೂ ವ್ಯಕ್ತಪಡಿಸುತ್ತಾನೆ. ಪಾರಂಪರಿಕ ಸಮಾಜದ ಹಿಂಸೆಯನ್ನು ಆ ಸಮಾಜದೊಳಗೇ ಇದ್ದು ಅನುಭವಿಸಿರುವವರಿಗೆ ಈ ಬಗೆಯಲ್ಲಿ ಪರಂಪರೆಯನ್ನು ಸ್ಫೋಟಿಸುವ ಹಂಬಲ ಹಾಗೂ ಆಧುನಿಕ ಮೌಲ್ಯಗಳನ್ನು ಕುರಿತ ಅತಿಯಾದ ಶ್ರದ್ಧೆ ಹುಟ್ಟುವುದು ಸಹಜ. ಹೀಗೆ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡ ಮೊದಲ ತಲೆಮಾರಿನ ಈ ಬಗೆಯ ಸ್ಫೋಟದ ಹಂಬಲ ಕುರಿತು ಬರೆಯುತ್ತಾ, 'ತಮ್ಮ ಘನತೆಯನ್ನೂ ತಾವು ಮನುಷ್ಯರೆಂಬುದನ್ನೂ ಏಕಾಏಕಿ ಅರಿತುಕೊಂಡ ಶೋಷಿತರ ಮೊದಲ ಪ್ರತಿಕ್ರಿಯೆಯೇ ಭೂತದಲ್ಲಿ ತಮ್ಮನ್ನು ತುಳಿದ ವ್ಯವಸ್ಥೆಯನ್ನು ಛಿದ್ರಗೊಳಿಸುವ ಹಂಬಲ' ಎನ್ನುತ್ತಾನೆ ಒಬಿಚೀನಾ.

ಪಾರಂಪರಿಕ ನೆಲೆಗಳ ಸ್ಥಿತ್ಯಂತರಕ್ಕೆ, ಆಧುನಿಕತೆ ಬಳಸಬಲ್ಲ ಹಿಂಸಾಮಾರ್ಗ ಅಥವಾ ಅದು ಎತ್ತುವ ಹಲವು ನ್ಯಾಯಬದ್ಧ ಪ್ರಶ್ನೆಗಳಂತೆಯೇ ಆಧುನಿಕತೆಯ ಆರ್ಥಿಕ ಆಯಾಮದ ಆಕರ್ಷಣೆಗಳೂ ಮುಖ್ಯವಾಗಿರುವುದನ್ನು 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯ ಮುಂದಿನ ಭಾಗಗಳು ಗ್ರಹಿಸುತ್ತವೆ. ದೇಶೀ ಹಾಗೂ ವಿದೇಶೀ ಶಕ್ತಿಗಳ ಮುಖಾಮುಖಿಯ

---

*ಇಬೋ ಸಮುದಾಯದಲ್ಲಿ ದೇವರಿಗೆ ಬಿಡಲಾದ ಗಂಡು, ಹೆಣ್ಣುಗಳನ್ನು ಒಸು ಎಂದು ಕರೆಯುತ್ತಿದ್ದರು. ಒಸುಗಳು ಊರ ಹೊರಗೆ ವಾಸಿಸಬೇಕಾಗಿತ್ತು. ಅವರನ್ನು ಗುರುತಿಸಲು ಅವರ ಕಿವಿ ಅಥವಾ ಬೆರಳಿನ ಭಾಗವನ್ನು ಕತ್ತರಿಸುತ್ತಿದ್ದರು. ಇಬೊ ಸಮುದಾಯ ಅವರನ್ನು ಅಸ್ಪೃಶ್ಯರಂತೆ ಕಾಣುತ್ತಿತ್ತು. ಒಸುಗಳ ಅಸ್ಪೃಶ್ಯತೆ ವಂಶಪಾರಂಪರ್ಯವಾಗಿ ಮುಂದುವರಿಯುತ್ತಿತ್ತು.

ಮೊದಲ ಘಟ್ಟದ ನಂತರ ಸಾಮಾಜಿಕ ಹಾಗೂ ಆರ್ಥಿಕ ಅಂಶಗಳು ಮಹತ್ವ ಪಡೆಯ ತೊಡಗುತ್ತವೆ. ಆಫ್ರಿಕನ್ ಸಂದರ್ಭದಲ್ಲಿ ವಸಾಹತುಶಾಹಿ ಹಾಗೂ ಕ್ರಿಶ್ಚಿಯನ್ ಧರ್ಮ ದೇಶೀ ಧಾರ್ಮಿಕ ನೆಲೆಗಳ ಮೇಲೆ ದಾಳಿ ಮಾಡಿದ ನಂತರ ಶರವೇಗದಲ್ಲಿ ಬದಲಾವಣೆ ಗಳಾಗಲಾರಂಭಿಸಿದವು ಎಂಬುದನ್ನು 'ಥಿಂಗ್ಸ್ ಫಾಲ್ ಅಪಾರ್ಟ್' ಸೂಚಿಸುತ್ತದೆ. ಉಮೋಫಿಯಾದ ಎಷ್ಟೋ ಜನ ಗಂಡಸರು ಹಾಗೂ ಹೆಂಗಸರು ಈ ಹೊಸ ವಿಪತ್ತಿಗೆ ಒಕಾಂಕೋನಂತೆ ಉಗ್ರವಾಗಿ ಪ್ರತಿಕ್ರಿಯಿಸಲಿಲ್ಲ. 'ಬಿಳಿಯರು ಹುಚ್ಚು ಧರ್ಮವೊಂದನ್ನು ತಮ್ಮೊಡನೆ ತಂದಿದ್ದರು. ನಿಜ. ಆದರೆ ಅವರು ಮಾರುಕಟ್ಟೆಯನ್ನೂ ಅಂಗಡಿಯನ್ನೂ ತಂದಿದ್ದರು. ಮೊದಲ ಬಾರಿಗೆ ತಾಳೆ ಎಣ್ಣೆ ಹಾಗೂ ಕೊಬ್ಬರಿಯ ಬೆಲೆ ಹಿಂದೆಂದೂ ಇಲ್ಲದಂತೆ ಏರತೊಡಗಿತು. ಉಮೋಫಿಯಾಕ್ಕೆ ಹಣ ಹರಿಯತೊಡಗಿತು.'

ಆಧುನಿಕ ಪ್ರಗತಿಯ ಕಲ್ಪನೆ ಕೂಡ ಉಮೋಫಿಯಾದ ಸಾಂಪ್ರದಾಯಿಕರನ್ನು ಆಕರ್ಷಿಸಲಾರಂಭಿಸಿದ್ದ ಈ ಘಟ್ಟದಲ್ಲಿ ಅಭಿವೃದ್ಧಿ ಹಾಗೂ ಮಾರುಕಟ್ಟೆಯ ಮಂಪರು ದೇಶೀ ಸಮಾಜವನ್ನು ಕವಿಯತೊಡಗುತ್ತದೆ. ಹೀಗಾಗಿ ಏಳು ವರ್ಷ ಊರಿನಿಂದ ಹೊರಗಿದ್ದ ಉಮೋಫಿಯಾದ ಹೆಮ್ಮೆಯ ಮಗ ಒಕಾಂಕೋ ಮರಳಿ ಬಂದಾಗ 'ಅವನು ಬಂದದ್ದು ಸುದ್ದಿಯೇ ಆಗಲಿಲ್ಲ. ಹೊಸ ಸರಕಾರ ಹಾಗೂ ಹೊಸ ಧರ್ಮದ ಮಾತೇ ಎಲ್ಲೆಲ್ಲೂ.' ಹೊಸ ಜಗತ್ತು ದೇಶೀಯರಿಗೆ ಹಲವು ಬಗೆಯಲ್ಲಿ ಆಕರ್ಷಕವಾಗಿ ಕಾಣತೊಡಗುತ್ತದೆ. ಅದು ವಸಾಹತುಕಾರನಿಗೂ ಅಪಾರ ಲಾಭದ ಘಟ್ಟ. ವಸಾಹತೀಕರಣದ ಆರ್ಥಿಕ ಮುಖವನ್ನು ಶೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ನಾಟಕದ ಮೂಲಕ ಚರ್ಚಿಸುತ್ತಾ ನುಗುಗಿ ಹೇಳುವಂತೆ, ಕ್ಯಾಲಿಬನ್‌ನ ದ್ವೀಪವನ್ನು ಬಿಟ್ಟು ಪ್ರಾಸ್ಪರೋ ಹೊರಡದಿರುವುದಕ್ಕೆ ಕ್ಯಾಲಿಬನ್‌ನ ಉಪಯುಕ್ತತೆಯ ಅರಿವು ಅವನಿಗಿರುವುದು ಮುಖ್ಯ ಕಾರಣ. 'ಕ್ಯಾಲಿಬನ್ ನಮ್ಮ ಒಲೆ ಹೊತ್ತಿಸುತ್ತಾನೆ. ಕಟ್ಟಿಗೆ ತರುತ್ತಾನೆ. ನಮಗೆ ಲಾಭ ತರುವಂಥದ್ದನ್ನೆಲ್ಲ ಮಾಡುತ್ತಾನೆ' ಎನ್ನುತ್ತಾನೆ ಶೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ನಾಟಕದ ಪ್ರಾಸ್ಪರೋ. 'ವಸಾಹತುಕಾರ'ನಿಗೆ ವಸಾಹತೀಕರಣಗೊಂಡವನಿಂದ ದಕ್ಕುವ ಲಾಭದ ಆಕರ್ಷಣೆಯಿದ್ದರೆ, ವಸಾಹತೀಕರಣಗೊಂಡವನಿಗೆ ವಸಾಹತುಕಾರ ತರುವ ಹೊಸ ಆರ್ಥಿಕ ಲೋಕದ ಸೆಳೆತವಿರುತ್ತದೆ. ಈ ಹೊಸ ಆರ್ಥಿಕ ಜಗತ್ತು ದೇಶೀ ಆರ್ಥಿಕತೆಯ ಬೆನ್ನು ಮೂಳೆಯನ್ನೇ ಮುರಿಯುವುದರಿಂದಾಗಿ ಶುರುವಾಗುವ ಸಾಮೂಹಿಕ ಬಡತನ, ಹಸಿವು, ನಿರುದ್ಯೋಗಗಳು ಒಂದೆಡೆಯಿದ್ದರೆ, ಇನ್ನೊಂದೆಡೆ ಕೆಲವು ದೇಶೀವರ್ಗಗಳಿಗೆ ಹೊಸ ಗಳಿಕೆಯ ಸಾಧ್ಯತೆಗಳು ತೆರೆಯುತ್ತವೆ. ಈ ವರ್ಗ ವಸಾಹತುವಾದವನ್ನು ಬೆಂಬಲಿಸಿದ್ದರೆ ಆಶ್ಚರ್ಯವಲ್ಲ. ಚಿನುವ ಅಚೀಬೆಯ 'ಆರೋ ಆಫ್ ಗಾಡ್' ಕಾದಂಬರಿ ಕೂಡ ಸಂಪತ್ತು, ಹೊಸ ಜ್ಞಾನ, ಹೊಸ ಉದ್ಯೋಗಗಳು ಹಾಗೂ ಅಧಿಕಾರಗಳ ಮೂಲಕ ಆಧುನಿಕ ಲೋಕ ದೇಶೀಯರಿಗೆ ಆಕರ್ಷಕವಾಗಿ ಕಾಣುವುದನ್ನು ಚಿತ್ರಿಸುತ್ತದೆ. ಈ ಕಾದಂಬರಿಯ ನಾಯಕ ಎಝುಲುವಿನ ಮಗ ಒಡುಚೆಗೆ ತಾನು 'ವೆಸ್ಟ್ ಇಂಡೀಸಿನ ಪಾದ್ರಿ ಬ್ಲಾಕೆಟ್‌ನ ಜ್ಞಾನದಲ್ಲಿ ಹತ್ತನೇ ಒಂದು

ಭಾಗವನ್ನು ಪಡೆದರೂ ಸಾಕು, ಉಮುವಾರೋದಲ್ಲಿ ದೊಡ್ಡ ಮನುಷ್ಯನಾಗಬಲ್ಲೆ' ಎಂಬುದೇ ಪ್ರಧಾನ ಆಕರ್ಷಣೆ. ಹಾಗೆಯೇ 'ಥಿಂಗ್ಸ್ ಫಾಲ್ ಅಪಾರ್ಟ್'ನ ಉಮೋಫಿಯಾದಲ್ಲೂ ಹೊಸ ಶಾಲೆ ಹಾಗೂ ಆಸ್ಪತ್ರೆಗಳು ಜನರ ಕಣ್ಣಿಗೆ ಆಕರ್ಷಕವಾಗಿ, ಲಾಭದಾಯಕವಾಗಿ ಕಾಣತೊಡಗುತ್ತವೆ: 'ಬರಬರುತ್ತಾ, ಬಿಳಿಯ ಮನುಷ್ಯ ಕೊಡುವ ಔಷಧಿ ಬಹಳ ಬೇಗ ಖಾಯಿಲೆಯನ್ನು ವಾಸಿ ಮಾಡುತ್ತದೆ ಎಂದು ಜನ ಮಾತಾಡಿಕೊಳ್ಳ ತೊಡಗಿದರು. ಬ್ರೌನ್ ನಡೆಸುತ್ತಿದ್ದ ಶಾಲೆ ಕೂಡ ಬಲು ಬೇಗ ಹೊಸ ಅವಕಾಶಗಳನ್ನು ತರತೊಡಗಿತು. ಆ ಶಾಲೆಯಲ್ಲಿ ಏಳೆಂಟು ತಿಂಗಳು ಕಲಿತವರೆಲ್ಲಾ ಕೋರ್ಟಿನ ಅಮೀನರಾದರು, ಅಷ್ಟೇ ಏಕೆ, ಕೋರ್ಟಿನ ಗುಮಾಸ್ತರೂ ಆಗತೊಡಗಿದರು. ಆ ಶಾಲೆಯಲ್ಲೇ ಹೆಚ್ಚು ವರ್ಷ ಉಳಿದುಕೊಂಡವರು ಉಪಾಧ್ಯಾಯರುಗಳಾಗಿಬಿಟ್ಟರು. ಉಮೋಫಿಯಾದ ಕೂಲಿಕಾರರು(ಕ್ರಿಶ್ಚಿಯನ್)ದೇವರ ದ್ರಾಕ್ಷಿ ತೋಟದಲ್ಲಿ ಕೆಲಸ ಮಾಡಲು ಹೋಗಲಾರಂಭಿಸಿದರು.'

ಹೀಗೆ ಶಿಕ್ಷಣ, ಧಾರ್ಮಿಕ ಸಂಸ್ಥೆಗಳ ಜೊತೆಗೆ ಹೊಸ ಅಂತಸ್ತಿನ ಕಲ್ಪನೆಯ ಮೂಲಕವೂ ಆಧುನಿಕತೆ ಪಾರಂಪರಿಕ ಸಮಾಜದ ಆಳಕ್ಕಿಳಿಯಲು ಒಳದಾರಿಗಳನ್ನು ಹುಡುಕಿಕೊಳ್ಳುತ್ತದೆ. ಸಾಂಪ್ರದಾಯಿಕ ಉಮೋಫಿಯಾದ ನಿಷ್ಪ್ರಯೋಜಕರಿಗೆ ಹೊಸ ವ್ಯವಸ್ಥೆ ಪ್ರಾಮುಖ್ಯತೆ ತಂದುಕೊಟ್ಟದ್ದನ್ನು ಗಮನಿಸಿದರೆ, ಆಧುನಿಕತೆ ಆಕರ್ಷಣೆಯ ಅರಿವಾಗುತ್ತದೆ.

ಇಂಥ ಆಕರ್ಷಣೆಗಳು ಪರಂಪರೆಯ ವಿಘಟನೆಗೆ ಹಾದಿ ಮಾಡಿಕೊಡುವಂತೆ, ಆಧುನಿಕತೆ ಎತ್ತುವ ಕೆಲವು ಮುಖ್ಯ ಪ್ರಶ್ನೆಗಳನ್ನು ಅರಗಿಸಿಕೊಳ್ಳಲಾಗದ, ಗ್ರಹಿಸಲಾರದ ಪರಂಪರೆಯ ಅಸಾಮರ್ಥ್ಯ ಹಾಗೂ ಮೊಂಡುತನ ಕೂಡ ಪರಂಪರೆಯ ವಿಘಟನೆಗೆ ಹಾದಿ ಮಾಡಿಕೊಡುತ್ತದೆ. ತನ್ನ ಬಗೆಗೆ ಅತಿಯಾದ ಆತ್ಮವಿಶ್ವಾಸವುಳ್ಳ ಈ ಸಮಾಜ ಆತ್ಮವಿಮರ್ಶೆಯ ಬಲವಿಲ್ಲದ ಕಾರಣದಿಂದಾಗಿಯೂ ಕುಸಿಯುತ್ತದೆ.

'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿ ಸೂಚಿಸುವ ಮತ್ತೊಂದು ಅಂಶವೆಂದರೆ, ಆಧುನಿಕ ಶಕ್ತಿಗಳ ಆಗಮನದ ಮಾರಕ ಪರಿಣಾಮದಿಂದ ಉಂಟಾಗುವ ಸಾಮುದಾಯಿಕ ಐಕ್ಯತೆಯ ಹಾಗೂ ಸಾಮುದಾಯಿಕ ದನಿಯ ನಿರ್ನಾಮ. ಈ ಬೆಳವಣಿಗೆಯನ್ನು 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯ ಕೊನೆಯ ಭಾಗದಲ್ಲಿ ಒಬಿರಿಕಾ ವಿವರಿಸುತ್ತಾನೆ: '...ಆದರೆ ಅವನು(ಬಿಳಿಯ ಮನುಷ್ಯ) ಹೇಳುತ್ತಾನೆ-'ನಮ್ಮ ಪದ್ಧತಿಗಳೆಲ್ಲ ಕೆಟ್ಟವು' ಎಂದು. ಅವನ ಧರ್ಮಕ್ಕೆ ಸೇರಿದ ನಮ್ಮಣ್ಣ ತಮ್ಮಂದಿರು ಕೂಡ ನಮ್ಮ ಸಂಪ್ರದಾಯಗಳೆಲ್ಲ ಕೆಟ್ಟವೆಂದು ಹೇಳುತ್ತಾರೆ. ನಮ್ಮ ಅಣ್ಣತಮ್ಮಂದಿರೇ ನಮ್ಮ ವಿರುದ್ಧ ತಿರುಗಿಬಿದ್ದಿರುವಾಗ ನಾವು ಹೋರಾಡುವುದಾದರೂ ಹೇಗೆ? ಬಿಳಿಯ ಮನುಷ್ಯ ಬಲೇ ಜಾಣ. ಅವನು ಸದ್ದುಮಾಡದೆ, ಪ್ರಶಾಂತ ಮುಖ ಹೊತ್ತು ತನ್ನ ಧರ್ಮದೊಂದಿಗೆ ಬಂದ. ನಾವು ಅವನ ಮೂರ್ಖತನ ಕಂಡು ನಕ್ಕೆವು. ಇಲ್ಲೇ ಇರಲು ಬಿಟ್ಟೆವು. ಈಗ ಅವನು ನಮ್ಮಣ್ಣ ತಮ್ಮಂದಿರನ್ನು ಗೆದ್ದುಕೊಂಡಿದ್ದಾನೆ. ಇನ್ನು ನಮ್ಮ ಸಮುದಾಯ ಒಂದಾಗಿರುವುದು

ಸಾಧ್ಯವೇ ಇಲ್ಲ. ನಮ್ಮನ್ನು ಒಂದಾಗಿ ಹಿಡಿದಿಟ್ಟಿದ್ದ ಕೊಂಡಿಗಳ ಮೇಲೆ ಅವನು ಚೂರಿ ಇಟ್ಟ. ನಾವು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದೇವೆ.'

'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯಲ್ಲಿ ಆರಂಭದ ಭಾಗಗಳಲ್ಲಿ ಕಾಣುವ ಸಮುದಾಯದ ಸಭೆಗಳಿಗೂ ಆನಂತರದ ಸಭೆಗಳಿಗೂ ಇರುವ ವ್ಯತ್ಯಾಸವನ್ನು ಗಮನಿಸಿದರೆ, ಆಧುನಿಕತೆಯ ಪ್ರವೇಶದ ನಂತರ ಈ ಸಮುದಾಯಗಳು ಪಾರಂಪರಿಕ ಅರ್ಥದಲ್ಲಿ ಸಮುದಾಯಗಳಾಗಿ ಉಳಿದಿಲ್ಲವೆಂಬುದರ ಅರಿವಾಗುತ್ತದೆ. ಆದ್ದರಿಂದಲೇ ಸಾಮುದಾಯಿಕ ಐಕ್ಯತೆಯ ನಿರ್ನಾಮ ಕುರಿತ ದಿಗ್ಭ್ರಮೆ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯಲ್ಲೂ ದಟ್ಟವಾಗಿದೆ. ಸಮುದಾಯದ ಹಿರಿಯನೊಬ್ಬ ಹೇಳುತ್ತಾನೆ :

> ಒಕ್ಕೊರಲಿನಿಂದ ಮಾತಾಡುವುದೆಂದರೇನೆಂದು ಈ ಕಾಲದ ಹುಡುಗರಿಗೆ ಗೊತ್ತೇ ಇಲ್ಲ. ಇದರ ಪರಿಣಾಮವೇನೆಂದು ಗಮನಿಸಿದ್ದೀರಾ? ಹೇಸಿಗೆ ಹುಟ್ಟಿಸುವ ಧರ್ಮವೊಂದು ಬಂದು ನಿಮ್ಮ ನಡುವೆ ನೆಲೆಸಿಬಿಟ್ಟಿದೆ. ಹುಚ್ಚು ಹಿಡಿದ ಬೇಟೆನಾಯಿ ಬೇಟೆಗಾರನ ಮೇಲೇ ಎರಗುವಂತೆ ಮನುಷ್ಯ ಈಗ 'ತನ್ನ ತಂದೆಯನ್ನೂ ಅಣ್ಣತಮ್ಮಂದಿರನ್ನೂ ಬಿಟ್ಟು ಹೋಗಬಹುದು. ತನ್ನ ಹಿರೀಕರ ದೇವರುಗಳನ್ನೇ ಈಗ ಧಿಕ್ಕರಿಸಬಹುದಂತೆ. ನಿಮ್ಮ ಸ್ಥಿತಿ ಕಂಡು ನನಗೆ ಕಳವಳವಾಗುತ್ತಿದೆ. ಸಮುದಾಯದ ಸ್ಥಿತಿ ನೆನೆಸಿಕೊಂಡರೆ ನಡುಕ ಹುಟ್ಟುತ್ತದೆ.

ಉಮೋಫಿಯಾದ ಒಕ್ಕೊರಲಿನ ಧ್ವನಿ ಹಾಗೂ ಸಾಮುದಾಯಿಕ ಐಕ್ಯತೆ ಕಾದಂಬರಿಯ ಪೂರ್ವಾರ್ಧದಲ್ಲಿರುವಂತೆ ಉತ್ತರಾರ್ಧದಲ್ಲಿ ಇಲ್ಲದಿರುವುದು ನಿರೂಪಣಾ ಶೈಲಿಯಲ್ಲಿಯೂ ಸೂಚಿತವಾಗುವುದನ್ನು ಡೇವಿಡ್ ಕ್ಯಾರೊಲ್ ಗುರುತಿಸುತ್ತಾನೆ:

> ಕ್ರಿಶ್ಚಿಯನ್ ಧರ್ಮದ ಆಗಮನದೊಂದಿಗೆ ಹಾಗೂ ಕ್ರಮೇಣ ಅದು ಇಬೋ ಸಮಾಜವನ್ನು ಆಕ್ರಮಿಸಿಕೊಳ್ಳುವುದರೊಂದಿಗೆ ಸಮುದಾಯದ ಸಭೆಗಳು ವಿರಳವಾಗುತ್ತಾ ಹೋಗುತ್ತವೆ. ನಡೆಯುವ ಸಭೆಗಳಲ್ಲಿ ಒಮ್ಮತದ ಅಭಿಪ್ರಾಯಗಳೂ ಕಡಿಮೆಯಾಗುತ್ತಾ ಹೋಗುತ್ತವೆ. ಉಮೋಫಿಯಾದ ಮೊದಲ ದಿನಗಳನ್ನು ಕುರಿತು ಅಧಿಕಾರವಾಣಿಯಿಂದ, ಆತ್ಮವಿಶ್ವಾಸದಿಂದ, ಸಹಾನುಭೂತಿಯಿಂದ ವರ್ಣಿಸುತ್ತಿದ್ದ ನಿರೂಪಕ ದನಿ ಬರುಬರುತ್ತಾ ಆತ್ಮವಿಶ್ವಾಸ ಕಳೆದುಕೊಂಡಂತೆ, ವಿಭಿನ್ನ ಗುಂಪುಗಳ ಅಭಿಪ್ರಾಯಗಳನ್ನು ಸುಮ್ಮನೆ ವರದಿ ಮಾಡಲಾರಂಭಿಸುತ್ತದೆ.

'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯ ಕೊನೆಯಲ್ಲಿ ವಸಾಹತು ಶಕ್ತಿಗಳ ವ್ಯಾಪಕ ನಿಯಂತ್ರಣದ ಸ್ವರೂಪವನ್ನು ಅರಿಯಲಾಗದ ಕಾದಂಬರಿಯ ನಾಯಕ ಒಕಾಂಕೋ ಅತಿ ಆತ್ಮವಿಶ್ವಾಸದಿಂದಾಗಿ ದುಡುಕುತ್ತಾನೆ. ಉಮೋಫಿಯಾ ಗ್ರಾಮದ ಸಭೆಯನ್ನು ನಿಲ್ಲಿಸುವಂತೆ ವಸಾಹತು ಕೋರ್ಟಿನ ಆದೇಶವನ್ನು ತಂದ ಓಲೆಕಾರನ ತಲೆಯನ್ನು ತನ್ನ ಕತ್ತಿಯಿಂದ ಕಡಿದು

ಹಾಕುತ್ತಾನೆ. ತನ್ನ ಸಮುದಾಯ ತನ್ನ ಕ್ರಿಯೆಯನ್ನು ಬೆಂಬಲಿಸುತ್ತದೆ ಹಾಗೂ ವಸಾಹತು ಶಕ್ತಿಗಳ ವಿರುದ್ಧ ಯುದ್ಧ ಹೂಡುತ್ತದೆ ಎಂಬುದು ಒಕಾಂಕೋನ ನಿರೀಕ್ಷೆಯಾಗಿತ್ತು. ಆದರೆ ಒಕಾಂಕೋನ ನಿರೀಕ್ಷೆ ಹುಸಿಯಾಗುತ್ತದೆ. ಸಮುದಾಯ ತನ್ನ ಹೋರಾಟದ ಶಕ್ತಿಯನ್ನು ಕಳೆದುಕೊಂಡಿದೆ. ವಸಾಹತುವಾದಿ ಶಕ್ತಿಗಳ ವಿರುದ್ಧ ಹೋರಾಡುವಲ್ಲಿ ತನ್ನ ಬೆನ್ನಿಗೆ ನಿಲ್ಲಲು ಹಿಂಜರಿಯುವ ತನ್ನ ಸಮಾಜದ ಧೋರಣೆಯಿಂದ ಜಿಗುಪ್ಸೆಗೊಂಡು ಒಕಾಂಕೋ ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಒಕಾಂಕೋನ ಸಾವನ್ನು ಕುರಿತು ಅವನ ಗೆಳೆಯ ಒಬಿರಿಕಾ, ಬಿಳಿಯ ಅಧಿಕಾರಿಗೆ ಹೇಳುವ ಮಾತಿದು:

> ಈತ ಉಮೋಫಿಯಾದ ದೊಡ್ಡ ವ್ಯಕ್ತಿಗಳಲ್ಲೊಬ್ಬನಾಗಿದ್ದ. ನೀವು ಅವನನ್ನು ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡಿಬಿಟ್ಟಿರಿ. ನಾವೀಗ ಅವನನ್ನು ನಾಯಿಯಂತೆ ಹೂಳಬೇಕಾಗಿದೆ.

ಯಾವ ಭೂತಾಯಿ ಹಾಗೂ ಸಮುದಾಯವನ್ನೂ ಅವುಗಳ ಮೌಲ್ಯಗಳನ್ನೂ ರಕ್ಷಿಸಲು ಒಕಾಂಕೋ ರಣೋತ್ಸಾಹದಿಂದ ಸದಾ ಮುನ್ನುಗ್ಗುತ್ತಿದ್ದನೋ ಅಂಥ ಭೂತಾಯಿ ಹಾಗೂ ಸಮುದಾಯಗಳೆರಡರಿಂದಲೂ ಆತ್ಮಹತ್ಯೆಯ ಕಳಂಕದಿಂದಾಗಿ ಇಂದು ಅವನು ತಿರಸ್ಕೃತನಾಗಿದ್ದಾನೆ. ಸಮುದಾಯದಿಂದ ಬಹಿಷ್ಕೃತರಾದವರನ್ನು ಹೂಳಲಾಗುವ ಕೇಡಿನ ಕಾಡಿನಲ್ಲಿ ಸಮುದಾಯದ ನಾಯಕನಾದ ಒಕಾಂಕೋನನ್ನು ಹೂಳಬೇಕಾದ ಅವಮಾನಕರ ಸ್ಥಿತಿಯನ್ನು ವಸಾಹತು ಶಕ್ತಿಗಳು ಸೃಷ್ಟಿಸಿಬಿಟ್ಟಿವೆ. ಆದರೆ, ಇಡೀ ಸಮುದಾಯದ ಈ ದಿಗ್ಭ್ರಮೆಯ ಅರಿವೇ ಇಲ್ಲದ ವಸಾಹತುಕಾರನ ನಿರ್ಲಿಪ್ತ 'ಸಮಾಜಶಾಸ್ತ್ರೀಯ' ದೃಷ್ಟಿಕೋನ ಬಿಂಬಿಸುವ ಕ್ರೌರ್ಯ ಕಾದಂಬರಿಯ ಕೊನೆಯಲ್ಲಿದೆ. ಒಬಿರಿಕಾ ಸೂಚಿಸುತ್ತಿರುವ ದುರಂತದ ಪ್ರಜ್ಞೆಯೇ ತಟ್ಟದ ಜಿಲ್ಲಾಧಿಕಾರಿ, ತೂಗಾಡುವ ಹೆಣವನ್ನಿಳಿಸಲು ತನ್ನ ಸೇವಕರಿಗೆ ಹೇಳಿ, ಹೆಣವನ್ನೂ ಅಲ್ಲಿರುವ ಜನರನ್ನೂ ಕೋರ್ಟಿಗೆ ಹಾಜರುಪಡಿಸಲು ಹೇಳುತ್ತಾನೆ. ಕಾದಂಬರಿಯ ಕೊನೆಯ ಕೆಲವು ಸಾಲುಗಳಿವು:

> ಆಫ್ರಿಕಾಕ್ಕೆ ನಾಗರಿಕತೆ ತರಹೊರಟ ತನ್ನ ಹಲವು ವರ್ಷಗಳ ಸಾಹಸದಲ್ಲಿ(ಆ ಜಿಲ್ಲಾಧಿಕಾರಿ) ಹಲವು ಪಾಠಗಳನ್ನು ಕಲಿತಿದ್ದ. ಅದರಲ್ಲೊಂದೆಂದರೆ, ಮರಕ್ಕೆ ನೇಣುಹಾಕಿಕೊಂಡ ಮನುಷ್ಯರನ್ನು ಕೆಳಗಿಳಿಸುವಂಥ ಕ್ಷುಲ್ಲಕ ವಿಚಾರಗಳಿಗೆ ಜಿಲ್ಲಾಧಿಕಾರಿಯೊಬ್ಬ ತಲೆಹಾಕಬಾರದೆಂಬುದು. ಇಂಥ ವಿಚಾರಗಳಲ್ಲಿ ತಲೆ ಹಾಕುವುದೆಂದರೆ ಸ್ಥಳೀಯರ ದೃಷ್ಟಿಯಲ್ಲಿ ಅವನು ಕೆಳಗಿಳಿದಂತೆಯೇ. ತಾನು ಮುಂದೆ ಬರೆಯಲಿರುವ ಪುಸ್ತಕದಲ್ಲಿ ಈ ಅಂಶಕ್ಕೆ ಒತ್ತು ಕೊಡಬೇಕೆಂದುಕೊಂಡ. ಆವತ್ತು ಕೋರ್ಟಿಗೆ ಹೋಗುವ ದಾರಿಯಲ್ಲಿ, ತಲೆಯ ತುಂಬಾ ಆ ಪುಸ್ತಕದ ವಿಷಯವೇ. ಪ್ರತಿದಿನ ಒಂದಲ್ಲ ಒಂದು ಇಂಥ ಸರಕು ಸಿಗುತ್ತಲೇ ಇತ್ತು. ಸರಕಾರದ ಸಂದೇಶ

ತಂದವನನ್ನು ಕೊಂದು ತಾನೂ ನೇಣು ಹಾಕಿಕೊಂಡ ಈ ಮನುಷ್ಯನ ಕತೆ ಓದಲು ರೋಚಕವಾಗಿರಬಲ್ಲದು. ಇದರ ಬಗೆಗೆ ಒಂದು ಅಧ್ಯಾಯವನ್ನೇ ಬರೆಯಬಹುದೇನೋ. ಇಲ್ಲ. ಪ್ರಾಯಶಃ ಒಂದು ಒಳ್ಳೆಯ ಪ್ಯಾರಾದಷ್ಟು ಸಾಕೇನೋ. ಹೀಗೇ ಬರೆಯುತ್ತಾ ಹೋದರೆ, ಏನೇನೆಲ್ಲಾ ವಿವರಗಳನ್ನು ಸೇರಿಸಬೇಕಾಗುತ್ತದೆ. ವಿವರಗಳನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಬೇಕು. ಅವನ ಮನಸ್ಸಿನಲ್ಲಾಗಲೇ ಪುಸ್ತಕದ ಶೀರ್ಷಿಕೆಯೂ ಸಿದ್ಧವಾಗಿಬಿಟ್ಟಿತ್ತು: 'ಕೆಳ ನೈಜಿರ್ ಪ್ರದೇಶದ ಆದಿವಾಸಿ ಬುಡಕಟ್ಟುಗಳನ್ನು ಪಳಗಿಸಿದ ಕತೆ.'

ಈ ವ್ಯಂಗ್ಯಾತ್ಮಕ ಭಾಗದಲ್ಲಿ ಯುರೋಪು ಆಫ್ರಿಕಾವನ್ನು ಕಾದಂಬರೀಕರಿಸಿದ ಕ್ರಮವನ್ನೂ ಅಚೀಬೆ ಟೀಕಿಸುತ್ತಾನೆ. ಡೇವಿಡ್ ಕ್ಯಾರೊಲ್ ಗುರುತಿಸುವಂತೆ ಈ ಜಿಲ್ಲಾಧಿಕಾರಿ ಈಗಾಗಲೇ ಯುರೋಪಿಯನ್ ಕಾದಂಬರಿಗಳಲ್ಲಿ ಕಾಣಿಸಿಕೊಂಡಿದ್ದ ಇಂಗ್ಲಿಷ್ ಸಾಹಸಿಗಳು, ಆಡಳಿತಗಾರರು, ಮಿಷನರಿಗಳ ಪ್ರತಿರೂಪ. ಈ ವರ್ಗ ಆಫ್ರಿಕಾಕ್ಕೆ ಬಂದ ಮುಖ್ಯ ಉದ್ದೇಶಗಳಲ್ಲೊಂದೆಂದರೆ ತಮ್ಮ ಕಲ್ಪನೆಯಲ್ಲಿ ಚಿತ್ರಿತವಾಗಿದ್ದ ಆಫ್ರಿಕಾವನ್ನು ಕಾಣುವುದು. ಆದ್ದರಿಂದಲೇ ಈ ಆಧುನಿಕ ಕಣ್ಣಿಗೆ ಒಕಾಂಕೋನ ದುರಂತ 'ಆದಿವಾಸಿಗಳು ಪಳಗುತ್ತಿರುವ' ಸೂಚನೆಯಂತೆ ಕಾಣುತ್ತದೆ. ವಸಾಹತುವಾದ ದೇಶೀಯರನ್ನು ಮಾತ್ರವಲ್ಲದೆ, ವಸಾಹತು ಕಾರರನ್ನೂ ನಿರ್ಮಾನವೀಕರಣಗೊಳಿಸುವುದು ಹೀಗೆ. ಒಕಾಂಕೋನ ದುರಂತ ಹಾಗೂ ಆಫ್ರಿಕಾದ ಇಬೋ ಸಂಸ್ಕೃತಿಯ ದುರಂತ ಒಬ್ಬ ಬಿಳಿಯ ಜಿಲ್ಲಾಧಿಕಾರಿಗೆ ತನ್ನ ಪುಸ್ತಕಕ್ಕೊಂದು ಒಳ್ಳೆಯ ಪ್ಯಾರಾ ಆಗಿ ಕಾಣುವ ಈ ಧೋರಣೆಯಲ್ಲಿ ವಸಾಹತುಕಾರ ಆರಂಭಿಸಿದ ನಾಗರೀಕರಣದ ಯುದ್ಧ ಹೇಗೆ ವಸಾಹತುಕಾರನನ್ನೂ ನಿರ್ನಾಗರೀಕರಣ ಗೊಳಿಸಲಾರಂಭಿಸಿತ್ತು ಎಂಬುದರ ಸೂಚನೆಯಿದೆ.

**ವಸಾಹತೋತ್ತರ ಆಫ್ರಿಕಾ:**
**ಅವನತಿ, ಭ್ರಮನಿರಸನ, ಕನಸು ಮತ್ತು ನವವ್ಯಕ್ತಿತ್ವ ನಿರ್ಮಾಣ**

ಆಫ್ರಿಕಾ ಖಂಡದ ಕೆಲವು ದೇಶಗಳಲ್ಲಿ ವಸಾಹತುಶಾಹಿಯ ನಿರ್ಗಮನದ ನಂತರ ಕಂಡುಬಂದ ವಿವಿಧ ಬಗೆಯ ಬೆಳವಣಿಗೆಗಳನ್ನು ಚಿನುವ ಅಚೀಬೆಯ 'ಎ ಮ್ಯಾನ್ ಆಫ್ ದಿ ಪೀಪಲ್', 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ' ಹಾಗೂ ವೊಲೆ ಶೋಯಿಂಕಾನ 'ದಿ ಇಂಟರ್‌ಪ್ರಿಟರ್ಸ್' 'ಸೀಸನ್ ಆಫ್ ಅನೋಮಿ' ಕಾದಂಬರಿ ಗಳು ಶೋಧಿಸಲೆತ್ನಿಸುತ್ತವೆ. ಈ ಕಾದಂಬರಿಗಳಲ್ಲಿ ಕಾಣಬರುವ ವಸಾಹತೋತ್ತರ ಆಫ್ರಿಕಾದ ಚಿತ್ರಗಳು ಇವು:

ದೇಶೀ ಜಗತ್ತುಗಳಲ್ಲಿ ವಿಕಾಸಗೊಳ್ಳದೆ, ಹೇರಲಾದ ಸಂಸ್ಥೆಗಳು ಮತ್ತು ಜೀವನ ಕ್ರಮಗಳು, ಬಹುಸಂಖ್ಯಾತರಿಗೆ ಪರಕೀಯವಾಗಿ, ಅವರ ಮೇಲೆ ಸವಾರಿ ಮಾಡುವ ಪ್ರಭುತ್ವ, ರಾಷ್ಟ್ರೀಯ ಹೋರಾಟದ ಮುಂಚೂಣಿಯಲ್ಲಿದ್ದ ಬೂರ್ಜ್ವಾವರ್ಗ ಹಾಗೂ

ಆಧುನಿಕ ವಿದ್ಯಾಭ್ಯಾಸ ಪಡೆದ ವರ್ಗಗಳು ಅಧಿಕಾರ ಸೂತ್ರ ಹಿಡಿದ ನಂತರ ನಿರ್ಮಾಣವಾದ ಭ್ರಷ್ಟ ರಾಜಕೀಯ ಸನ್ನಿವೇಶ, ಅಲ್ಲಿ ಬಲಿಯಾಗುವ ಆದರ್ಶವಾದಿಗಳು, ಮಾರುಕಟ್ಟೆ ಕೇಂದ್ರಿತ ಆರ್ಥಿಕ ವ್ಯವಸ್ಥೆ, ವ್ಯವಸ್ಥೆಯ ಮೇಲೆ ತಮ್ಮ ನಿಯಂತ್ರಣವನ್ನು ಕಳೆದುಕೊಂಡ ಬಹುಸಂಖ್ಯಾತ ಸಾಮಾನ್ಯರನ್ನು ಮುತ್ತುವ ನಿರಾಶೆ, ಸಿನಿಕತನ, ಪ್ರಭುತ್ವದ ಹಿಂಸೆಯ ಹಲವು ಮುಖಗಳು, ಹೆಚ್ಚತೊಡಗಿದ ಸಾಮಾಜಿಕ ಅಸಮಾನತೆಯ ನಡುವೆಯೇ ಸಮಾನತೆಗಾಗಿ ನಡೆವ ಹೋರಾಟಗಳು, ಬುದ್ಧಿಜೀವಿಗಳ ಕನಸು, ಹತಾಶೆ, ದಿವಾಳಿತನ; ದಂಗೆ, ಮಿಲಿಟರಿ ದಂಗೆಗಳು, ಪ್ರಾಂತೀಯ ಹಾಗೂ ಬುಡಕಟ್ಟು ಹೋರಾಟಗಳು; ಹೊಸ ಪ್ರಾಂತೀಯ ಅಸ್ತಿತ್ವಗಳು, ವ್ಯವಸ್ಥೆಯ ವಿರುದ್ಧ ಹೋರಾಟ ರೂಪಿಸುವ ವರ್ಗಗಳು, ತೀವ್ರ ಭ್ರಮ ನಿರಸನದ ಸ್ಥಿತಿಯಲ್ಲೂ ಹೊಸ ಚಿಗುರಿನ, ಹೊಸ ಚಲನೆಗಳ ಆಸೆಗಳು.

ವಸಾಹತೋತ್ತರ ಪಶ್ಚಿಮ ಆಫ್ರಿಕಾದ ಕೆಲವು ದೇಶಗಳಲ್ಲಿ ವಸಾಹತುಕಾರನಿಂದ ಮುಂದುವರಿದ ರಾಜಕೀಯ ಅಥವಾ ಆರ್ಥಿಕ ಚೌಕಟ್ಟುಗಳಿಂದ ಈ ಸಮಾಜಗಳು ತಪ್ಪಿಸಿಕೊಳ್ಳುವುದು ವಸಾಹತುಕಾರನನ್ನು ನಿರ್ಗಮಿಸುವಂತೆ ಮಾಡಿದಷ್ಟು ಸುಲಭವಿರಲಿಲ್ಲ. ಇಡೀ ಆಡಳಿತ ವ್ಯವಸ್ಥೆಯಲ್ಲಿ ವಸಾಹತು ಮಾದರಿಗಳು ಉಳಿದೇಬಿಟ್ಟವು. 'ಮಾಜಿ ವಸಾಹತುಗಳು ಮತ್ತೆ ವಸಾಹತುವಾದೀ ದೇಶಗಳನ್ನೇ ಅವಲಂಬಿಸುವ ಸ್ಥಿತಿಯನ್ನು ವಸಾಹತುಶಾಹಿಯು ನಿರ್ಮಾಣ ಮಾಡಿರುವುದರಿಂದ ಸ್ವಾತಂತ್ರ್ಯ ದೇವತೆಯ ಪ್ರತಿಷ್ಠಾಪನೆಯೇ ಶಾಪವಾಗಿ ಕಾಡಲಾರಂಭಿಸುತ್ತದೆ. ವಸಾಹತುವಾದಿ ಪ್ರಭುತ್ವ ಹಾಕಿಕೊಟ್ಟ ಮಾರ್ಗಗಳನ್ನು ತೊರೆದರೆ ಪತನಗೊಂಡೇವೆಂಬ ಭಯ ಈ ದೇಶಗಳನ್ನು ಸದಾ ಕಾಡುತ್ತಿರುತ್ತದೆ' ಎನ್ನುತ್ತಾನೆ ಫ್ಯಾನನ್. 'ರಾಷ್ಟ್ರೀಯ ಪಕ್ಷಗಳ ನಿರ್ವಸಾಹತೀಕರಣ ಹೋರಾಟ ಯಾವಾಗಲೂ ವಸಾಹತುವಾದದೊಂದಿಗೆ ಒಪ್ಪಂದ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತದೆ' ಎಂದು ವಸಾಹತೋತ್ತರ ಸಮಾಜಗಳ ಅವನತಿಗೆ ನಿರ್ವಸಾಹತೀಕರಣ ನಿಜವಾದ ಅರ್ಥದಲ್ಲಿ ನಡೆಯದಿರುವುದೇ ಮುಖ್ಯ ಕಾರಣವೆಂದು ಫ್ಯಾನನ್ ಸೂಚಿಸುತ್ತಾನೆ. ವಸಾಹತು ಮೂಲ ದಿಂದ ಬಂದ 'ಆಧುನಿಕ ಸಂಸ್ಥೆಗಳು ಕೇವಲ ದಕ್ಷತೆಯ ಮಾತಾಡುತ್ತವೆಯೇ ಹೊರತು ವೈಯಕ್ತಿಕ ನೈತಿಕತೆಯ ಮಾತಾಡುವುದಿಲ್ಲ' ಎಂಬ ಗಾಂಧೀಜಿಯವರ ಅನುಮಾನದಲ್ಲೂ ವಸಾಹತುಮೂಲದ ಸಂಸ್ಥೆಗಳನ್ನು, ರಚನೆಗಳನ್ನು ಹಾಗೂ ಆಡಳಿತ ಮಾರ್ಗಗಳನ್ನು ಒಪ್ಪಿ ಕೊಳ್ಳಹೊರಟ ದೇಶಗಳಿಗೆ ತಗುಲಲಿರುವ ರೋಗಗಳ ಸೂಚನೆಯಿತ್ತು. ಈ ದೃಷ್ಟಿಯಿಂದ ನೋಡಿದಾಗ ಆಫ್ರಿಕನ್ ಕಾದಂಬರಿಗಳು ಪಶ್ಚಿಮದ ಸಂಸ್ಥೆಗಳು ಸೃಷ್ಟಿಸಿದ ವಿಘಟನೆಯ ಕತೆಯನ್ನೂ ಹೇಳುತ್ತವೆ. ಹಾಗೆಯೇ ಪಶ್ಚಿಮದಿಂದ ಬಂದ ಸಂಸ್ಥೆಗಳ ಹಾಗೂ ರಚನೆಗಳ ದಕ್ಷತೆಯೂ, ನೈತಿಕತೆಯೂ ಏಕಕಾಲಕ್ಕೆ ವಸಾಹತೋತ್ತರದಲ್ಲಿ ಮಾಯವಾದ ಸ್ಥಿತಿಯಿಂದಾಗಿ ಹುಟ್ಟಿದ ಅವನತಿಯ ಕತೆಯನ್ನೂ ಹೇಳುತ್ತವೆ. ವಸಾಹತೋತ್ತರವೆಂದರೆ, ಪಾರಂಪರಿಕ ಸ್ಮೃತಿ ಹಾಗೂ ವಸಾಹತು ಸ್ಮೃತಿಗಳೆರಡೂ ಒಂದನ್ನೊಂದು ಘರ್ಷಿಸುವ ಘಟ್ಟ. ಇದು ವಸಾಹತುವಾದೀ ರಚನೆಗಳು, ಮೌಲ್ಯಗಳು ಸೃಷ್ಟಿಸುವ ವಿಘಟನೆಯ ಜೊತೆಜೊತೆಗೇ

ಪಾರಂಪರಿಕ ಸಮಾಜಗಳ ವಿಕೃತ ಮೌಲ್ಯಗಳು ಹಲವು ರೂಪಗಳಲ್ಲಿ ಪ್ರತ್ಯಕ್ಷವಾಗುವ ಘಟ್ಟವೂ ಹೌದು. ನಯಪಾಲ್ ಹೇಳುವಂತೆ, 'ಇದು (ಪಶ್ಚಿಮದ) ಅನುಕರಣೆ ಹಾಗೂ ಸಂಶ್ಲೇಷಣೆಗಳು ಸೃಷ್ಟಿಸುವ ಗೊಂದಲ ಹಾಗೂ ದುರಂತಮಯ ಸನ್ನಿವೇಶವೂ ಹೌದು.'

ಆಫ್ರಿಕನ್ ಕಾದಂಬರಿಗಳು ವಸಾಹತೋತ್ತರ ಸಮಾಜಗಳ ಅವನತಿಗೆ ವಿವಿಧ ಕಾರಣಗಳನ್ನು ಸೂಚಿಸುತ್ತವೆ : ಚಿನುವ ಅಚೀಬೆಯ 'ಎ ಮ್ಯಾನ್ ಆಫ್ ದಿ ಪೀಪಲ್', 'ನೋ ಲಾಂಗರ್ ಅಟ್ ಈಸ್'(ಸ್ವಾತಂತ್ರ್ಯಪೂರ್ವದಲ್ಲಿ ಹುಟ್ಟಿದ ಕೃತಿಯಾದರೂ) ಆಧುನಿಕ ಆಫ್ರಿಕನ್ ಸಮಾಜದ ಆತ್ಮಕೇಂದ್ರಿತ ಆಧುನಿಕವರ್ಗ, ಪಾರಂಪರಿಕ ಸಾಮುದಾಯಿಕ ಪ್ರಜ್ಞೆಯ ನಾಶ, ಸಾಮುದಾಯಿಕ ನಿಯಂತ್ರಣದ ನಿರ್ನಾಮ, ಹಾಗೂ ವಸಾಹತುವಾದೀ ಶಕ್ತಿಗಳು, ಸಂಸ್ಥೆಗಳನ್ನು ಅವನತಿಯ ಮುಖ್ಯ ಕಾರಣಗಳೆಂದು ಪ್ರಧಾನವಾಗಿ ಸೂಚಿಸುತ್ತವೆ. 'ಭ್ರಮನಿರಸನದ ಕಾದಂಬರಿಗಳು' ಎಂದು ಆಫ್ರಿಕನ್ ವಿಮರ್ಶಕ ರ್‍ಯಾವಿನ್‌ಸ್ಕ್ರಾಫ್ಟ್ ಹೆಸರಿಸುವ ಅಚೀಬೆ, ಷೋಯಿಂಕಾ, ಅರ್ಮಾರ ವಸಾಹತೋತ್ತರ ಕಾದಂಬರಿಗಳಲ್ಲಿ ಅವನತಿಯ ಹಿನ್ನೆಲೆಯಲ್ಲಿರುವ ಆಂತರಿಕ ಹಾಗೂ ವಸಾಹತು ಶಕ್ತಿಗಳೆರಡಕ್ಕೂ ಸಮಾನ ಒತ್ತಿದೆ.

### ವಸಾಹತೋತ್ತರ ಆಫ್ರಿಕಾ: ವಸಾಹತುಶಾಹಿ ಸೃಷ್ಟಿಸಿದ ಗೊಂದಲ

'ಹೊಸ ರಾಷ್ಟ್ರದಲ್ಲಿ ಲೇಖಕನ ಪಾತ್ರ' ಎಂಬ ತನ್ನ ಪ್ರಬಂಧದಲ್ಲಿ ಅಚೀಬೆ ವಸಾಹತೋತ್ತರ ಆಫ್ರಿಕಾದ ಭ್ರಷ್ಟಾಚಾರವನ್ನು ಕುರಿತು ಚರ್ಚಿಸುತ್ತಾ, 'ಆಫ್ರಿಕನ್ ಪಾರಂಪರಿಕ ಸಮಾಜ ಲೌಕಿಕ ಸುಖಕ್ಕೆ ಒತ್ತುಕೊಡುವ ಗುಣಗಳನ್ನು ಮೊದಲಿನಿಂದಲೂ ಉಳಿಸಿಕೊಂಡು ಬಂದಿದ್ದರೂ..... ಆ ಸಮಾಜದಲ್ಲಿ ಯಾರೂ ಸಮುದಾಯವನ್ನು ಮುಳುಗಿಸಿ, ಸರ್ಕಾರದ ಹಣವನ್ನು ಕದ್ದು ಶ್ರೀಮಂತರಾಗಲು ಸಾಧ್ಯವಿರಲಿಲ್ಲ' ಎಂದು ವಾದಿಸುತ್ತಾನೆ. ಯೂಸ್ಟೇಸ್ ಪಾಮರ್ ಕೂಡ ಈ ಅಂಶವನ್ನು ಉಲ್ಲೇಖಿಸುತ್ತಾ 'ಈ ಬಗೆಯ ಭ್ರಷ್ಟಾಚಾರ ಆರಂಭವಾದದ್ದೇ ಬ್ರಿಟಿಷ್ ಆಡಳಿತ ಆರಂಭಿಸಿದ ಧನಾಧಾರಿತ (cash-based) ಆರ್ಥಿಕ ವ್ಯವಸ್ಥೆಯ ಮೂಲಕ; ಈ ಹೊಸ ವ್ಯವಸ್ಥೆಯ ಜೊತೆಗೇ ಅಧಿಕಾರಶಾಹಿಯ ಭಾಗವಾದ ಕೋರ್ಟ್ ಮೆಸೆಂಜರುಗಳು, ಪರೋಕ್ಷ ಆಡಳಿತದ ಮುಖ್ಯಸ್ಥರು ಮುಂತಾದವರು ಪಾರಂಪರಿಕ ಸಮಾಜದ ನೀತಿನಿಯಮಗಳಿಗೆ ಬದ್ಧರಾಗದಂಥ ಹಾಗೂ ತಮ್ಮ ಅಧಿಕಾರ ಸ್ಥಾನಗಳನ್ನು ಬೇಕಾದಂತೆ ಬಳಸಿಕೊಳ್ಳುವಂಥ ಅವಕಾಶಗಳನ್ನು ವಸಾಹತು ಆಡಳಿತ ಸೃಷ್ಟಿಸಿತು' ಎನ್ನುತ್ತಾನೆ. 'ಆರೋ ಆಫ್ ಗಾಡ್' ಕಾದಂಬರಿಯಲ್ಲಿ ಕೋರ್ಟಿನ ಪ್ರತಿನಿಧಿ ಎಝೆಲುವನ್ನು ಬಂಧಿಸಲು ಬಂದಾಗ ಹೇಳುವ ಮಾತಿದು: 'ಮುಖವಾಡದ ಭೂತ (ಆಫ್ರಿಕನ್ ಸಂಪ್ರದಾಯಸ್ಥರು ಪೂಜಿಸುವ ಭೂತಗಳಲ್ಲೊಂದು) ಮನೆಗೆ ಬಂದಾಗ ಅದರ ಪಾದಕ್ಕೆ ಕಾಣಿಕೆಯನ್ನೊಪ್ಪಿಸಬೇಕಾದ್ದು ನಿಯಮ. ಇವತ್ತಿನ ಮುಖವಾಡದ ಭೂತವೆಂದರೆ ಬಿಳಿಯ ಮನುಷ್ಯ'.

ಈ ಮಾತಿಗೆ ಅಸಹಾಯಕತೆಯಿಂದ ತಲೆದೂಗುತ್ತಾ ಎಝೆಲುವಿನ ಮಗ ಹೇಳುವ

ಮಾತಿದು: 'ಬಿಳಿಯ ಮನುಷ್ಯ ಹಾಗೂ ಅವನ ಸಂದೇಶ ತಂದವರೂ ಮುಖವಾಡದ ಭೂತಗಳೇ'. ಹೊಸ ಪ್ರಭುತ್ವ ತನ್ನ ಭ್ರಷ್ಟತೆಗೆ ಧಾರ್ಮಿಕ ಆಯಾಮವನ್ನೂ, ಧಾರ್ಮಿಕ ನ್ಯಾಯಬದ್ಧತೆಯನ್ನೂ ಸೃಷ್ಟಿಸಿಕೊಳ್ಳುವ ಕ್ರಮ ಇದು. ಈ ಕಾದಂಬರಿಯ ಕೊನೆಯಲ್ಲಿ ಚರ್ಚಿನ ಮೂಲಕವೂ ಪಾದ್ರಿ ಜಾನ್ ಗುಡ್‌ಕಂಟ್ರಿ ಇಂಥ ಪ್ರಯತ್ನವನ್ನಾರಂಭಿಸುತ್ತಾನೆ. ಇಬೋ ದೇಶೀ ಸಮುದಾಯದಲ್ಲಿ ಸುಗ್ಗಿ ಶುರುವಾಗುವ ಮೊದಲು ಒಂದೊಂದು ಗೆಣಸನ್ನು ಉಲು ದೇವತೆಗೆ ಕೊಡುವುದು ವಾಡಿಕೆ. ಆದರೆ ವಸಾಹತುಶಾಹಿ ಸೃಷ್ಟಿಸಿರುವ ಬಿಕ್ಕಟ್ಟಿನಿಂದ, ಧರ್ಮಗುರು ಎಝೆಲುವಿನ ಹಾಗೂ ಪರಂಪರೆಯ ಜಿಗುಟುತನದಿಂದ ಬೇಸತ್ತ ಜನ, ಆ ಸಲದ ಸುಗ್ಗಿಯನ್ನಾರಂಭಿಸಲು ಸಾಂಕೇತಿಕವಾಗಿ ಒಂದೊಂದು ಗೆಣಸನ್ನು ಅರ್ಪಿಸುವ ತಮ್ಮ ಎಂದಿನ ಆಚರಣೆಯನ್ನು ಅನಿವಾರ್ಯವಾಗಿ ಚರ್ಚಿನಲ್ಲಿ ನಡೆಸಬೇಕಾಗುತ್ತದೆ. ಆ ಘಟ್ಟದಲ್ಲಿ ಪಾದ್ರಿಯ ಪ್ರತಿಕ್ರಿಯೆ ಇದು: 'ಕೇವಲ ಒಂದೊಂದೇ ಗೆಣಸಲ್ಲ, ಆ ದೇವರು (ಕ್ರಿಶ್ಚಿಯನ್ ದೇವರು) ಕೊಟ್ಟ ಗೆಣಸನ್ನು ಎಷ್ಟಾದರೂ ತಂದು (ಚರ್ಚಿಗೆ) ಸಲ್ಲಿಸಬಹುದು. ಬರೀ ಗೆಣಸಲ್ಲ, ಯಾವ ಬೆಳೆಯನ್ನಾದರೂ, ಯಾವುದೇ ವಸ್ತುಗಳನ್ನಾದರೂ, ಹಣವನ್ನು ಬೇಕಾದರೂ ಸಲ್ಲಿಸಬಹುದು...' ಸಾಂಕೇತಿಕವಾದ ದೇಶೀ ಧಾರ್ಮಿಕ ಆಚರಣೆಯೊಂದಕ್ಕೆ ಆರ್ಥಿಕ ಸ್ಪರ್ಶವಾದ ತಕ್ಷಣ ಆರಂಭವಾಗುವ ಭ್ರಷ್ಟತೆಯನ್ನು ಈ ಪ್ರಸಂಗ ಸೂಕ್ಷ್ಮವಾಗಿ ಸೂಚಿಸುತ್ತದೆ.

ಆಫ್ರಿಕಾದಲ್ಲಿ ವಸಾಹತು ಆಡಳಿತ ಆರಂಭಿಸಿದ ಪರೋಕ್ಷ ಆಡಳಿತದ ಹೊಸ ವ್ಯವಸ್ಥೆ ಅರೆ-ಆಧುನಿಕರಾದ ವರ್ಗವೊಂದನ್ನು ಸೃಷ್ಟಿಸಿತು. ಮುಂದೆ ಸ್ವಾತಂತ್ರ್ಯೋತ್ತರ ಆಫ್ರಿಕಾದ ಆಳುವ ವರ್ಗವಾದವರೂ ಇವರೇ. ಚರ್ಚಿನ ಶಿಕ್ಷಣ ಪಡೆದ ಈ 'ವಾರಂಟ್ ಚೀಫ್'ಗಳು ವಸಾಹತು ಸರಕಾರಕ್ಕಾಗಿ ತೆರಿಗೆ ಸಂಗ್ರಹಿಸುವ ಹಾಗೂ ಹಳ್ಳಿಗಳನ್ನು ನಿಯಂತ್ರಿಸುವ ಕೆಲಸವನ್ನು ಮಾಡುವುದರ ಜೊತೆಗೇ ತಾವೂ ಶ್ರೀಮಂತರಾಗುವ ಸುಲಭ ಮಾರ್ಗ ಹುಡುಕಿಕೊಂಡರು. ದೇಶೀ ಸಮುದಾಯದ ನಿಯಮಗಳನ್ನು ಮೀರಿದ ಶಕ್ತಿಯೊಂದು (ಅಂದರೆ, ವಸಾಹತು ಶಕ್ತಿ) ಅವರ ಬೆನ್ನಿಗಿದ್ದುದರಿಂದ ಅವರನ್ನು ಸಮುದಾಯ ನಿಯಂತ್ರಿಸುವಂತಿರಲಿಲ್ಲ. 'ಆರೋ ಆಫ್ ಗಾಡ್'ನ ಜೇಮ್ಸ್ ಇಕೆಡಿಯ ಪ್ರಸಂಗ ಇದನ್ನು ಸೂಚಿಸುತ್ತದೆ. ಜೇಮ್ಸ್‌ನನ್ನು ವಸಾಹತುಶಾಹಿ ಆಡಳಿತ 'ಬುದ್ಧಿವಂತ'ನೆಂದು ಗುರುತಿಸಿ ಊರಿನ ಮುಖ್ಯಸ್ಥನನ್ನಾಗಿ ನೇಮಿಸಿದರೆ, ಆತ ಹಳ್ಳಿಗರನ್ನು ಹೆದರಿಸಲು ತನ್ನದೇ ಆದ ಜೈಲು, ಕೋರ್ಟುಗಳನ್ನು ಸ್ಥಾಪಿಸಿಕೊಳ್ಳುತ್ತಾನೆ. ಕಂಡ ಕಂಡ ಹೆಣ್ಣುಗಳನ್ನು ವಶವಾಗಿಸಿಕೊಳ್ಳಲೆತ್ನಿಸು ತ್ತಾನೆ. ರಸ್ತೆಯ ನಿರ್ಮಾಣದ ಘಟ್ಟದಲ್ಲಿ ತನಗೆ ಹಣ ಕೊಡದಿದ್ದವರ ಮನೆಯ ಮೇಲೇ ರಸ್ತೆ ಹೋಗುವಂತೆ ಮಾಡುತ್ತೇನೆಂದು ಹೆದರಿಸುತ್ತಾನೆ. ಜಾಯ್ಸ್ ಕ್ಯಾರಿಯ 'ಮಿಸ್ಟರ್ ಜಾನ್ಸನ್' ಕಾದಂಬರಿಯ ರಸ್ತೆ ಅಚೀಬೆಯ ಕಾದಂಬರಿಯಲ್ಲೂ ರೂಪಕವಾಗುತ್ತದೆ. ಜೇಮ್ಸ್‌ನ ಭ್ರಷ್ಟತೆಗೆ ವಸಾಹತು ಪ್ರಭುತ್ವ ಕಾರಣವೆಂದು ಜನರಿಗೆ ಅನಿಸತೊಡಗಿದರೆ, ಇದೇ ಭ್ರಷ್ಟತೆ ಕುರಿತು ವಸಾಹತು ಅಧಿಕಾರಿ ಕ್ಯಾಪ್ಟನ್ ವಿಂಟರ್‌ಬಾಟಮ್‌ಗೆ ಹೊಳೆಯುವ ಕಾರಣ ಇದು: 'ಕೇವಲ ಆಫ್ರಿಕಾ ಮಾತ್ರ ಸೃಷ್ಟಿಸಲು ಸಾಧ್ಯವಾಗುವ ಕ್ರೌರ್ಯದ ಮಾದರಿ

ಇದೆಂದು ಕ್ಯಾಪ್ಟನ್ ವಿಂಟರ್‌ಬಾಟಮ್ ಅಂದುಕೊಂಡ. ಆಫ್ರಿಕನ್ ಮನೋಸ್ಥಿತಿಯ ಆಳದಲ್ಲಿದ್ದ ಈ ಕ್ರೌರ್ಯವನ್ನು ಯುರೋಪಿಯನ್ನರು ಅರ್ಥ ಮಾಡಿಕೊಳ್ಳುವುದು ದುಃಸಾಧ್ಯವಾಗಿತ್ತು.'

ಇದೇ ಅಂಶ ಕುರಿತು ವಿಂಟರ್‌ಬಾಟಮ್‌ನ ಸಹಾಯಕ ಅಧಿಕಾರಿ ಕ್ಲಾರ್ಕ್ ಕೂಡ ಹೇಳುತ್ತಾನೆ:

> ಕೋರ್ಟ್ ಕ್ಲರ್ಕುಗಳು, ಕೋರ್ಟಿನ ಅಮೀನರು ಎಲ್ಲರದೂ ಇದೇ ಗುಣ. ಅವರು ತಮ್ಮ ಜನಗಳನ್ನೇ ತುಳಿಯುವ ಪುಟ್ಟಪುಟ್ಟ ಸರ್ವಾಧಿಕಾರಿಗಳಾಗಿ ರೂಪುಗೊಳ್ಳುತ್ತಿದ್ದಾರೆ. ಅದು ನೀಗ್ರೋಗಳ ವ್ಯಕ್ತಿತ್ವದಲ್ಲೇ ಇರುವ ಗುಣವಿರಬೇಕು. ನೋ ಲಾಂಗರ್ ಅಟ್ ಈಸ್' ಕಾದಂಬರಿಯ ವಸಾಹತು ಅಧಿಕಾರಿ ಗ್ರೀನ್‌ನ ಅಭಿಪ್ರಾಯ ಕೂಡ ಹೆಚ್ಚೂ ಕಡಿಮೆ ಇದೇ: 'ಈ ಆಫ್ರಿಕನ್ನರು ಹುಟ್ಟಾಭ್ರಷ್ಟರು. ಶತಶತಮಾನಗಳಿಂದ ಆಫ್ರಿಕನ್ನರು ಕ್ರೂರ ವಾತಾವರಣದ ಹಾಗೂ ಭಯಂಕರ ಹವಾಮಾನ ಹಾಗೂ ಭೀಕರ ರೋಗಗಳ ಬಲಿಪಶುಗಳು... ನಿಜ. ಆದರೆ ಅವರಿಗೆ ಪಶ್ಚಿಮದ ಶಿಕ್ಷಣ ನೀಡಿದ್ದೇವೆ. ಆದರೂ ಅದರಿಂದೇನು ಪ್ರಯೋಜನ?

ವಸಾಹತುಕಾರನ ಈ ದೃಷ್ಟಿಕೋನವನ್ನೂ ಆಫ್ರಿಕನ್ ವಾಸ್ತವವನ್ನೂ ಒಂದಕ್ಕೊಂದು ಎದುರಾಗಿಸಲೆತ್ನಿಸುತ್ತಾ, ಅಚೀಬೆ ಆಧುನಿಕ ಆಫ್ರಿಕಾದ ಅವನತಿಯ ಹಿಂದಿರುವ ಶಕ್ತಿಗಳನ್ನು ಶೋಧಿಸಲೆತ್ನಿಸುತ್ತಾನೆ. ಈ ಮೂವರೂ ವಸಾಹತು ಅಧಿಕಾರಿಗಳ ಧೋರಣೆಯಲ್ಲಿ ಎದ್ದು ಕಾಣುವ ಸಾಮಾನ್ಯ ಅಂಶವೆಂದರೆ, ಭ್ರಷ್ಟತೆಯ ಕಾರಣಗಳನ್ನು ಆಫ್ರಿಕನ್ ವ್ಯಕ್ತಿತ್ವದಲ್ಲಿಯೇ ಅವರು ಹುಡುಕುತ್ತಿರುವುದು. ಆದರೆ 'ನೋ ಲಾಂಗರ್ ಅಟ್ ಈಸ್', 'ಎ ಮ್ಯಾನ್ ಆಫ್ ದಿ ಪೀಪಲ್' ಹಾಗೂ 'ದಿ ಇಂಟರ್‌ಪ್ರಿಟರ್ಸ್'ನಂಥ ಕಾದಂಬರಿಗಳು ಮುಖ್ಯವಾಗಿ ಆಧುನಿಕ ಸಂಸ್ಥೆಗಳು ಹಾಗೂ ವಸಾಹತುವಾದೀ ರಚನೆಗಳೇ ಬಿತ್ತುವ ಭ್ರಷ್ಟತೆಯ ಬೀಜಗಳನ್ನು, ಆಧುನಿಕ ಶಿಕ್ಷಣ ಪಡೆದ ವರ್ಗದ ಭ್ರಷ್ಟತೆಯನ್ನು ಹಾಗೂ ಅದು ಆಫ್ರಿಕನ್ ಸಮಾಜಕ್ಕೆ ತರುತ್ತಿರುವ ವಿಪತ್ತನ್ನು ಸೂಚಿಸುತ್ತವೆ. 'ನೋ ಲಾಂಗರ್ ಅಟ್ ಈಸ್' ಕಾದಂಬರಿಯ ಲಾಗೋಸ್ ನಗರದ ಆಧುನಿಕರಿಗೆ-ವಿದ್ಯಾವಂತ ವರ್ಗಕ್ಕೆ-ಭ್ರಷ್ಟತೆ ಕುರಿತು ದಿಗ್ಭ್ರಮೆಯೇ ಇಲ್ಲ. ಒಬಿ ಲಂಚ ಪಡೆದು ಸಿಕ್ಕಿಬಿದ್ದಾಗ ಉಮೋಫಿಯಾ ಸಂಘದ ಅಧ್ಯಕ್ಷನ ಪ್ರತಿಕ್ರಿಯೆ ಇದು:

> ಸೀನಿಯರ್ ಸರ್ವೀಸ್ ಹುದ್ದೆಯಲ್ಲಿರುವ ಮನುಷ್ಯನೊಬ್ಬ ಇಪ್ಪತ್ತು ಪೌಂಡಿಗಾಗಿ ಜೈಲಿಗೆ ಹೋಗುವುದು ನಾಚಿಕೆಗೇಡಿನ ವಿಚಾರ ಎಂದು ಹೇಳಿದ ಉಮೋಫಿಯಾ ಸಂಘದ ಅಧ್ಯಕ್ಷರು, 'ಇಪ್ಪತ್ತು ಪೌಂಡುಗಳಿಗೆ' ಎಂಬ ಪದವನ್ನು ಒತ್ತಿ ಒತ್ತಿ ಹೇಳಿದರು.

ಆಧುನಿಕ ಸಮಾಜದ ಕಲ್ಪನೆ, ಹಾಗೂ 'ಹೇಗಾದರೂ ಮಾಡಿ 'ಪ್ರಗತಿ' ಹೊಂದುವ' ಕಲ್ಪನೆಗಳೆರಡೂ ಜೊತೆಜೊತೆಗೇ ಹುಟ್ಟಿರುವುದನ್ನು ಕಾದಂಬರಿ ಸೂಚಿಸುತ್ತದೆ. 'ಎ ಮ್ಯಾನ್ ಆಫ್ ದಿ ಪೀಪಲ್' ಕಾದಂಬರಿಯ ಹೊತ್ತಿಗೆ ಆಫ್ರಿಕನ್ ಸಮಾಜ ಎಂಥ ಸ್ಥಿತಿ ತಲುಪಿದೆಯೆಂದರೆ, ಗ್ರಾಮೀಣ ಸಮಾಜ ಕೂಡ ಇಂಥ ನೈತಿಕ ಪತನವನ್ನು ಗಂಭೀರವಾಗಿ ಪರಿಗಣಿಸಲಾರದಂಥ ಮಂಕು ಕವಿದುಕೊಂಡಿದೆ. ಕಾದಂಬರಿಯ ನಿರೂಪಕ ಓಡಿಲಿ ಸಾಮುಲುವಿಗೆ ತನ್ನ ಊರು ಭ್ರಷ್ಟ ಮಂತ್ರಿ ನಂಗಾನನ್ನು ಸ್ವಾಗತಿಸಲು ಹರ್ಷದಿಂದ ಕುಣಿಯುತ್ತಿದ್ದಾಗ, ಇಡೀ ಸಮುದಾಯಕ್ಕೆ ನಂಗಾನ ನಿಜಸ್ವರೂಪ ಕುರಿತು ಹೇಳಬೇಕೆನಿಸುತ್ತದೆ. ಆದರೆ,ಅದರ ಜೊತೆಗೇ ಅವನನ್ನು ಮುತ್ತುವ ನಿರಾಶೆ ಇದು: 'ಆದರೆ ಅದರಿಂದೇನೂ ಫಲವಿಲ್ಲ. ಜನ ಬರೀ ದಡ್ಡರಷ್ಟೇ ಅಲ್ಲ, ಸಿನಿಕರೂ ಆಗಿಬಿಟ್ಟಿದ್ದಾರೆ. ತನ್ನ ಸ್ಥಾನವನ್ನು ಬಳಸಿಕೊಂಡು ಈ ಮಂತ್ರಿ ಶ್ರೀಮಂತನಾಗಿದ್ದಾನೆ ಎಂದು ಅವರಿಗೆ ಹೇಳಿದರೆ ಅವರಿಂದ ಬರುವ ಉತ್ತರ ಇದು: 'ಅದೃಷ್ಟವಶಾತ್ ಬಾಯೊಳಕ್ಕೇ ಯಾರಾದರೂ ಸಿಹಿಯಾದ ತುತ್ತಿಟ್ಟರೆ ಯಾವ ಜಾಣನೂ ಆಚೆ ಉಗಿಯುವುದಿಲ್ಲ.'

ಇದೇ ಕಾದಂಬರಿಯ ಕೊನೆಯಲ್ಲಿ ಆಫ್ರಿಕನ್ ರಾಜಕಾರಣಿಗಳ ಭ್ರಷ್ಟತೆ ಕುರಿತು ಜನಸಾಮಾನ್ಯರ ಪ್ರತಿಕ್ರಿಯೆ ಇದು:

> 'ಬಿಳಿಯರು ತಿಂದಂತೆ ಇವರೂ ತಿನ್ನಲಿ ಬಿಡಿ. ಬಿಳಿಯರು ಎಲ್ಲಾ ತಿನ್ನುತ್ತಿದ್ದಾಗ ನಾವೇನು ಆತ್ಮಹತ್ಯೆ ಮಾಡಿಕೊಂಡೆವೆ? ಈಗ ಬಿಳಿಯ ಎಲ್ಲಿದ್ದಾನೆ? ಅವನು ಬಂದ, ತಿಂದ, ಹೊರಟ. ಆದರೆ ನಾವು ಇಲ್ಲೇ ಬದುಕಿದ್ದೇವೆ. ಯಾರಿಗೆ ಗೊತ್ತು, ನಾಳೆ ನಿನ್ನ ಸರದಿಯೂ ಬರಬಹುದು. ನಿನ್ನ ಮಗನೂ ನಿನ್ನ ಪಾಲು ತರಬಹುದು.'

ಇದು 'ರಾಷ್ಟ್ರ'ದ ಕಲ್ಪನೆ ಸೃಷ್ಟಿಸಿದ ಸಂಬಂಧರಹಿತ ಸ್ಥಿತಿಯಿಂದ ಹುಟ್ಟಿದ ಧೋರಣೆ ಕೂಡ. ಅಚೀಬೆಯ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯ ಉಮೋಫಿಯಾ ಹಳ್ಳಿಯಂತೆ, 'ರಾಷ್ಟ್ರ'ವೆನ್ನುವುದು ತಮ್ಮದು ಹಾಗೂ ಅದನ್ನು ಕಾಯ್ದುಕೊಳ್ಳಬೇಕಾದವರೂ ತಾವೇ ಎಂಬ ಕಲ್ಪನೆಯೂ ಇಲ್ಲಿ ಸುಳಿಯಲಾರದು. ಇಂಥ ಸ್ಥಿತಿಯಲ್ಲಿ ನಂಗಾನಂಥ 'ಜನತೆಯ ಮನುಷ್ಯ'ರು ಹುಟ್ಟುತ್ತಾರೆ. ಇಲ್ಲಿ 'ಜನತೆಯ ಮನುಷ್ಯ' ಎಂಬುದನ್ನು ಅಚೀಬೆ ವ್ಯಂಗಾತ್ಮಕವಾಗಿ ಬಳಸಿದ್ದಾನೆ. ಹೇಗಾದರೂ ಮಾಡಿ ಚುನಾವಣೆ ಗೆಲ್ಲುವುದೊಂದೇ ಮುಖ್ಯವಾದ ಈ ಬಗೆಯ 'ಜನತೆಯ ಮನುಷ್ಯರು,' 'ಸಾಮುದಾಯಿಕ ಪ್ರಜ್ಞೆ'ಯ ಮಾತಾಡುವುದೇ ಬುಡಕಟ್ಟುಗಳ ನಡುವೆ ಯುದ್ಧಗಳನ್ನು ಪ್ರೇರೇಪಿಸಲು. ತಮ್ಮನ್ನು ಬೆಂಬಲಿಸದ ಹಳ್ಳಿಗಳಿಗೆ ಮೀಸಲಾದ ವಿದ್ಯುತ್ ಕಂಬಗಳನ್ನು, ಕೊಳಾಯಿಗಳನ್ನು ಅವರು ರಾತ್ರೋರಾತ್ರಿ ಹಿಂತೆಗೆದುಕೊಳ್ಳಬಲ್ಲರು. ಅವರು ರಸ್ತೆಗಳನ್ನು ನಿರ್ಮಿಸುವುದೇ ಆ

ಬಾಬಿನಿಂದ ಬಂದ ಹಣದಲ್ಲಿ ಕೊಂಡ ಬಸ್ಸುಗಳನ್ನು ಅಲ್ಲಿ ಓಡಿಸಿ ಇನ್ನಷ್ಟು ಹಣ ಗಳಿಸುವ ಉದ್ದೇಶದಿಂದ. ಸಿ.ಪಿ.ಸಿ. ಪಕ್ಷದ ನಾಯಕ ಮ್ಯಾಕ್ಸ್ ಹೇಳುವಂತೆ 'ಹೆಂಗಸರು, ಕಾರುಗಳು, ಆಸ್ತಿ, ಇಷ್ಟೇ ಅವರ ಆಸಕ್ತಿ!' ತನ್ನ ಜನತೆಯನ್ನೇ ನಾಶಮಾಡುವ ಇಂಥ ಧೋರಣೆಯನ್ನು ನಿರ್ವಸಾಹತೀಕರಣ ಹೋರಾಟದ ಮುಂಚೂಣಿಯಲ್ಲಿದ್ದ ದೇಶೀ ವರ್ಗಗಳು ವಸಾಹತು ಕಾರನಿಂದಲೂ ಕಲಿಯುತ್ತವೆಂಬುದನ್ನು ಗ್ರಹಿಸುವ ಫ್ಯಾನನ್, 'ವಸಾಹತುವಾದೀ ಬೂರ್ಜ್ವಾಗಳ ಪ್ರಭಾವದಿಂದ ಕಲಿತ ಹಲವು ಪಾಠಗಳಿಂದಲೂ ದಿಕ್ಕು ತಪ್ಪಿದ ಈ ವರ್ಗ ಹೊಸ ರಾಷ್ಟ್ರೀಯ ಸರಕಾರಗಳ ಮುಂಚೂಣಿಯಲ್ಲಿ ನಿಂತು ದೇಶದ ಸಂಪತ್ತಿನ ಲೂಟಿಯನ್ನಾರಂಭಿಸುತ್ತದೆ' ಎನ್ನುತ್ತಾನೆ.

ಕಡೆಯಪಕ್ಷ ವಸಾಹತುವಾದಕ್ಕಿದ್ದ 'ನಾಗರೀಕರಣ'ದ ಹಾಗೂ 'ಅಭಿವೃದ್ಧಿ'ಯ ಕಲ್ಪನೆಯನ್ನಾದರೂ ಗಂಭೀರವಾಗಿ ಸ್ವೀಕರಿಸದ ದೇಶೀವರ್ಗವೊಂದು ಉದ್ಘಾಟಿಸುವ ಬೆಳವಣಿಗೆ ಇದು. ಈ ವರ್ಗ ಹೇಳುವ 'ದೇಶೀವಾದ' ಎಷ್ಟು ವಿಕೃತ ಎನ್ನುವುದು ಎಲ್ಲ ವಸಾಹತೋತ್ತರ ಸಮಾಜಗಳಿಗೂ ಪರಿಚಿತ. ಕುಡಿಯುವ ಕಾಫಿಯಿಂದ ಹಿಡಿದು ಎಲ್ಲದರಲ್ಲೂ ಪಶ್ಚಿಮದಿಂದ ಬಂದ ವಸ್ತುಗಳನ್ನೇ ಬಯಸುವ ಈ ವರ್ಗ, ದೇಶೀವಾದದ ಮಾತಾಡುವುದು ಕೂಡ ತನ್ನ ಭ್ರಷ್ಟತೆಯನ್ನು ಸಮರ್ಥಿಸಿಕೊಳ್ಳುವ ಸಲುವಾಗಿ ಎಂಬುದಕ್ಕೆ ಕಾದಂಬರಿಯ ನಿರೂಪಕ ಓಡಿಲಿ ಸಾಮುಲು ಪ್ರಸಂಗವೊಂದನ್ನು ಉಲ್ಲೇಖಿಸುತ್ತಾನೆ. ಈ ಪ್ರಸಂಗದಲ್ಲಿ 'ದೇಶೀವಾದ'ಕ್ಕೆ ಬಲಿಯಾಗುವವನು ಅರ್ಥಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದ ಅರ್ಥಮಂತ್ರಿ. ಕಾಫಿ ಮಾರುಕಟ್ಟೆಯ ದೊಡ್ಡ ಬಿಕ್ಕಟ್ಟನ್ನೆದುರಿಸಲು 'ಈ ಮಂತ್ರಿ ಹಾಕಿಕೊಟ್ಟ ಯೋಜನೆಗೆ ಪ್ರಧಾನಮಂತ್ರಿ ಅಸಮ್ಮತಿ ಸೂಚಿಸಿದರು. ಅದೂ ಚುನಾವಣೆಯ ಸಮಯ ದಲ್ಲಿ ಕಾಫಿ ಪ್ಲಾಂಟರುಗಳಿಗೆ ಕೊಡುವ ಬೆಲೆಯನ್ನು ಕಡಿತಗೊಳಿಸುವುದರಿಂದ ಹುಟ್ಟುವ ಅಪಾಯವನ್ನೆದುರಿಸಲು ಅವರು ಸಿದ್ಧರಿರಲಿಲ್ಲ. ತಕ್ಷಣ ನ್ಯಾಷನಲ್ ಬ್ಯಾಂಕು ಹದಿನೈದು ಮಿಲಿಯನ್ ಪೌಂಡುಗಳನ್ನು ಅಚ್ಚುಹಾಕಬೇಕೆಂಬ ಅವರ ತೀರ್ಮಾನವನ್ನು ಮಂತ್ರಿಮಂಡಲದ ಬಹುತೇಕರು ಒಪ್ಪಿದರು. ಒಪ್ಪದವರನ್ನು ಮಂತ್ರಿಮಂಡಲದಿಂದ ಹೊರ ಹಾಕಲಾಯಿತು. ಅವರು ವಿದೇಶೀ ಶಕ್ತಿಗಳ ಜೊತೆಗೂಡಿ ಹೊಸ ರಾಷ್ಟ್ರವನ್ನು ಉರುಳಿಸುವ ಸಂಚಿನಲ್ಲಿ ಭಾಗಿಯಾಗಿದ್ದಾರೆಂದು ಆರೋಪಿಸಲಾಯಿತು.' ಈ ಬಗೆಯ 'ರಾಷ್ಟ್ರಭಕ್ತಿ'ಯನ್ನು ಸಮರ್ಥಿಸಿ ಪಾರ್ಟಿಯ ಅಧಿಕೃತ ಪತ್ರಿಕೆ ಬರೆಯುವ ಸಂಪಾದಕೀಯ ಇದು: 'ನಾವು ಆಫ್ರಿಕನ್ನರೆಂದು ಹೆಮ್ಮೆಯಿಂದ ಹೇಳಿಕೊಳ್ಳೋಣ. ಆಕ್ಸ್‌ಫರ್ಡ್, ಕೇಂಬ್ರಿಡ್ಜ್ ಅಥವಾ ಹಾರ್ವರ್ಡಿನ ಡಿಗ್ರಿ ಪಡೆದವರು ನಮ್ಮ ನಿಜವಾದ ಜನ ನಾಯಕರಲ್ಲ. ನಮ್ಮ ಜನನಾಯಕ ರೆಂದರೆ ಜನತೆಯ ಭಾಷೆಯಲ್ಲಿ ಮಾತಾಡುವವರು. ಆಫ್ರಿಕಾದ ಮಹಾನ್ ಸಂಸ್ಕೃತಿಯಿಂದ ಆಫ್ರಿಕನ್ನರನ್ನು ಬೇರ್ಪಡಿಸುವ ಯೂನಿವರ್ಸಿಟಿ ಶಿಕ್ಷಣಕ್ಕೆ ಧಿಕ್ಕಾರವಿರಲಿ.'

ಈ ಸರ್ಕಾರಿ ಸಂಪಾದಕೀಯದಲ್ಲಿ 'ದೇಶೀ' 'ವಿದೇಶೀ' ಎಂಬ ಕಲ್ಪನೆಗಳು ಎಷ್ಟು ಉಪಾಯದಿಂದ ಬಳಕೆಯಾಗಿವೆ! ಈ ಸಂಪಾದಕೀಯವೂ ನಿರ್ವಸಾಹತೀಕರಣ ಸಿದ್ಧಾಂತಗಳ

ಪರಿಭಾಷೆಯನ್ನೇ ಬಳಸುತ್ತಾ ದೇಶೀವಾದವನ್ನು ವಿಕೃತಗೊಳಿಸುವುದನ್ನು ಅಚೀಬೆ ಸೂಕ್ಷ್ಮವಾಗಿ ಸೂಚಿಸುತ್ತಾನೆ. ಪರಕೀಯ ಮೌಲ್ಯಗಳ ವಿರೋಧವೇ ದೇಶೀ ಭ್ರಷ್ಟತೆಯ ಸಮರ್ಥನೆಯಾಗಿಬಿಡುವ ಈ ಘಟ್ಟದಲ್ಲಿ ಪ್ರಧಾನಮಂತ್ರಿಯವರ ಪ್ರಖ್ಯಾತ ಘೋಷಣೆಯೂ ಮೊಳಗುತ್ತದೆ:

> ನಾವು ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯವನ್ನು ನಾವೀಗ ಹುಮ್ಮಸ್ಸಿನಿಂದ ಮುನ್ನುಗ್ಗಿ ರಕ್ಷಿಸಿಕೊಳ್ಳಬೇಕಾಗಿದೆ. ಆಫ್ರಿಕಾ ಹಾಗೂ ಆಫ್ರಿಕನ್ ಜನತೆಯ ಹಣೆಬರಹವನ್ನು ನಿರ್ಧರಿಸುವ ಅವಕಾಶವನ್ನು ಎಂದೂ ಈ ಪಶ್ಚಿಮದ ಶಿಕ್ಷಣ ಪಡೆದ, ತಮ್ಮ ಸುಖಕ್ಕಾಗಿ ತಮ್ಮ ತಾಯಂದಿರನ್ನೇ ಮಾರಬಲ್ಲ, ದುರಹಂಕಾರಿ ಬುದ್ಧಿಜೀವಿಗಳ ಕೈಗೆ ಮಾತ್ರ ಕೊಡಬಾರದು.

ಕಾದಂಬರಿಯ ಕೇಂದ್ರ ಪಾತ್ರ ನಂಗಾ-ಈ ಪ್ರಕರಣ ನಡೆಯುವಾಗ ಹಿಂದಿನ ಬೆಂಚಿನಲ್ಲಿ ಕೂತು 'ದೇಶವಿರೋಧಿ' ಮಂತ್ರಿಗಳ ಮೇಲೆ ಅಬ್ಬರವೆಬ್ಬಿಸುವ ನಂಗಾ-ಸರಕಾರದಲ್ಲಿ ಆಯಕಟ್ಟಿನ ಸ್ಥಾನಗಳಿಸುವುದು, ಸಂಸ್ಕೃತಿ ಸಚಿವನಾಗುವುದು ಈ ಘಟ್ಟದಲ್ಲೇ. ಕಾದಂಬರಿಯ ನಿರೂಪಕ ಓಡಿಲಿ ಸಾಮುಲುವಿಗೆ ಒಮ್ಮೆ ಉಪಾಧ್ಯಾಯನಾಗಿದ್ದ ನಂಗಾ ಓಡಿಲಿಯ ವಿರೋಧಿಯಾಗುವುದು ಒಂದು ವಿಚಿತ್ರ ಸನ್ನಿವೇಶದಲ್ಲಿ. ನಂಗಾನ ಆಹ್ವಾನದಂತೆ ವಿದೇಶೀ ಸ್ಕಾಲರ್‌ಶಿಪ್ಪಿನ ಆಸೆಯಿಂದ ರಾಜಧಾನಿಗೆ ಬಂದು ನಂಗಾನ ಮನೆಯಲ್ಲಿದ್ದು, ಕ್ರಮೇಣ ತಾನು ಒಮ್ಮೆ ತೀವ್ರವಾಗಿ ದ್ವೇಷಿಸುತ್ತಿದ್ದ ಐಷಾರಾಮವನ್ನು ಅನುಭವಿಸಲಾರಂಭಿಸುವ ಓಡಿಲಿಸಾಮುಲು ನಂಗಾನ ವಿರೋಧಿಯಾಗುವುದು ತನ್ನ ಗೆಳತಿ ಎಲ್ಸಿಯನ್ನು ನಂಗಾ ಒಂದು ರಾತ್ರಿ ತನ್ನ ಕಣ್ಮುಂದೆಯೇ ಹಾರಿಸಿಕೊಂಡು ಹೋದಾಗ. ಆ ನಂತರ ಮ್ಯಾಕ್ಸ್ ಎಂಬ ತನ್ನ ಎಡಪಂಥೀಯ ಗೆಳೆಯನ ಸಿ.ಪಿ.ಸಿ.(ಕಾಮನ್ ಪೀಪಲ್ಸ್ ಕನ್ವೆನ್ಷನ್) ಪಾರ್ಟಿ ಸೇರಿದ ಓಡಿಲಿ ಭ್ರಷ್ಟಾಚಾರದ ವಿರುದ್ಧ ಹೋರಾಟವನ್ನಾರಂಭಿಸುತ್ತಾನೆ. ಆದರೆ, ವಿಮರ್ಶಕ ಡೇವಿಡ್ ಕ್ಯಾರೊಲ್ ಸೂಚಿಸುವಂತೆ, ಆಧುನಿಕ ಆಫ್ರಿಕನ್ ರಾಜಕಾರಣದ ನೈತಿಕ ಕೇಂದ್ರದಲ್ಲಿರುವ ಎರಡು ಮುಖ್ಯ ಸಮಸ್ಯೆಗಳನ್ನು ನಂಗಾ ಹಾಗೂ ಓಡಿಲಿ ಪ್ರತಿನಿಧಿಸುತ್ತಾರೆ: 'ಯುರೋಪಿಯನ್ ಮಾದರಿಯ ಶಿಕ್ಷಣ ಪಡೆದ ಓಡಿಲಿ ಸಾಮುಲು ಸಾರ್ವಜನಿಕ ನೈತಿಕತೆ ಕುರಿತಂತೆ ಕಟುವಾದ ಹಾಗೂ ಸೈದ್ಧಾಂತಿಕ ನಿಲುವನ್ನು ತಳೆದವನು ಹಾಗೂ ದೇಶದ ರಾಜಕೀಯ ಸ್ಥಿತಿ ಕುರಿತು ಭ್ರಮನಿರಸನಗೊಂಡವನು. ಆದರೆ, ಹಳ್ಳಿಗರ ರಾಜಕಾರಣದ ಹಲವು ಮುಖಗಳನ್ನು ಗ್ರಹಿಸಲಾರದೆ ಅವನ್ನು 'ಆದಿವಾಸಿ ನಂಟುಗಳು' ಎಂದು ಕರೆದವನು. ಆದ್ದರಿಂದಲೇ ಅವನು ತನ್ನ ವಸ್ತುನಿಷ್ಠವಾದ ದೃಷ್ಟಿಕೋನದಿಂದ, ಜನತೆಯಿಂದ ದೂರವಾದ ನೆಲೆಯಲ್ಲಿ ನಿಂತು ಭ್ರಷ್ಟಾಚಾರವನ್ನು ಖಂಡಿಸುತ್ತಾನಾದರೂ ಎಲ್ಲರಿಂದಲೂ ದೂರ ಉಳಿಯುತ್ತಾನೆ. ಆದರೆ, ಇವನಿಗೆ ತದ್ವಿರುದ್ಧವಾಗಿರುವ ನಂಗಾ ತನ್ನ ಮತದಾರರಿಗೆ ಏನು ಬೇಕೆಂದು ಅರಿತವನು. ತಾನು ಪ್ರತಿನಿಧಿಸುವ ಜನರೊಂದಿಗೆ ಸಂಬಂಧವಿಟ್ಟುಕೊಂಡವನು. ಜನರ 'ಪ್ರಿಮಿಟಿವ್' ನಂಟುಗಳನ್ನು ಅವನು ಧಿಕ್ಕರಿಸುವುದಿಲ್ಲ.

ಕೇಡಿನ ಪ್ರತಿರೂಪದಂತೆ ಕಾಣುವ ನಂಗಾನ ಗೆಲುವನ್ನೂ, ಜನತೆಗೆ ಓಡಿಲಿಯಂಥವರಿಗಿಂತ ನಂಗಾನಂಥವರೇ ಏಕೆ ಪ್ರಿಯವೆಂಬುದನ್ನೂ ಈ ಅಂಶಗಳು ಸೂಚಿಸುತ್ತವೆ. ಆದರೆ, ನಂಗಾನಂಥವರು ಪ್ರತಿನಿಧಿಸುವ ಕೊಳಕು ರಾಜಕಾರಣ ಎಂಥ ಸಿನಿಕತೆಯನ್ನೂ, ನಿರ್ಲಕ್ಷ್ಯ ವನ್ನೂ ಜನತೆಯಲ್ಲಿ ಸೃಷ್ಟಿಸಿದೆಯೆಂದರೆ, ಈ ಸ್ಥಿತಿಯೇ ಸಹಜವೆಂಬಂತೆ ಒಪ್ಪಿಕೊಂಡುಬಿಡುವ ಹಂತವನ್ನೂ ಜನ ತಲುಪಿದ್ದಾರೆ. ಇಂಥ ನಿರಾಶಾದಾಯಕ ಸ್ಥಿತಿಯಲ್ಲಿ ಹೊಸ ಪಕ್ಷ ವನ್ನಾರಂಭಿಸುವ ಮ್ಯಾಕ್ಸ್, ಚುನಾವಣಾ ಪ್ರಚಾರದಲ್ಲಿ ಹಾಲೀ ಸರಕಾರದ ಭ್ರಷ್ಟತೆ ಕುರಿತು ಜನತೆಗೆ ಹೇಳುತ್ತಿದ್ದರೆ, ಜನತೆಯ ಸಿನಿಕ ಪ್ರತಿಕ್ರಿಯೆ ಇದು: 'ಕೇವಲ ಐದು ವರ್ಷದ ಹಿಂದೆ ತಿನ್ನಲು ಗತಿಯಿಲ್ಲದವರಂತಿದ್ದ ನಮ್ಮ ನಾಯಕರು ನಮ್ಮ ಕಣ್ಮುಂದೆಯೇ ಕೋಟ್ಯಾಧಿಪತಿ ಗಳಾಗಿದ್ದನ್ನು ಕುರಿತು ಮ್ಯಾಕ್ಸ್ ಒಂದರ ಮೇಲೊಂದು ಉದಾಹರಣೆ ಕೊಡುತ್ತಿದ್ದರೆ, ಜನ ನಗುತ್ತಿದ್ದರು. ತಮ್ಮ ಹಾಲೀ ಸ್ಥಿತಿಯನ್ನು ಸುಮ್ಮನೆ ಒಪ್ಪಿಕೊಂಡವರ ನಗು ಅದು. ಅಲ್ಲಿ ನೆರೆದಿದ್ದ ಒಬ್ಬನಲ್ಲಾದರೂ ಸಿಟ್ಟಿನ ಅಥವಾ ಹೋರಾಟದ ಸೂಚನೆ ಕಾಣಲಿಲ್ಲ.'

ಇಂಥ ಸನ್ನಿವೇಶದಲ್ಲಿ ಕಡೆಯಪಕ್ಷ ಒಂದು ಮಟ್ಟದ ಆದರ್ಶವನ್ನೂ ಬದ್ಧತೆಯನ್ನೂ ತೋರುವ ಓಡಿಲಿ ಸಾಮುಲು, ನಂಗಾನೆದುರು ಚುನಾವಣೆಗೆ ನಿಂತಾಗ ಮುದುಕಿಯೊಬ್ಬಳ ಪ್ರತಿಕ್ರಿಯೆ ಇದು: 'ಅವರಿಬ್ಬರೂ ಬಿಳಿಯ ಮನುಷ್ಯನ ಕಡೆಯವರೇ. ಅವರಿಬ್ಬರ ನಡುವೆ ಏನೇನು ಒಪ್ಪಂದವಾಗಿದೆಯೋ ನಮಗೇನು ಗೊತ್ತು? 'ಇಂಥ ಸಿನಿಕತೆ ಅಸಹಾಯಕತೆಯಿಂದಲೂ ಹುಟ್ಟಿರಬಹುದೆಂಬುದನ್ನು ಓಡಿಲಿಸಾಮುಲು ಕಂಡುಕೊಳ್ಳುವುದು ಜೋಸಯ್ಯ ಎಂಬ ವರ್ತಕನನ್ನು ಕುರಿತ ಊರಿನ ಪ್ರತಿಕ್ರಿಯೆಯ ಸಂದರ್ಭದಲ್ಲಿ. ಊರಿನ ಅಂಗಡಿಯ ಮಾಲಿಕ ಜೋಸಯ್ಯ ಒಮ್ಮೆ ಕುರುಡು ಭಿಕ್ಷುಕನೊಬ್ಬನ ಕೋಲು ಕದಿಯುತ್ತಾನೆ. ಊರ ಹೆಂಗಸೊಬ್ಬಳು ಹೇಳುವಂತೆ'

> 'ಅವನ ಅಂಗಡಿಯ ಸಾಮಾನುಗಳನ್ನು ನಾವೆಲ್ಲಾ ಕಣ್ಣು ಮುಚ್ಚಿಕೊಂಡು ಕೊಂಡುಕೊಳ್ಳುವಂತೆ ಮಾಡಬಲ್ಲ ಮದ್ದು ತಯಾರಿಸಲು ಅವನು ಆ ಕೋಲು ಕದ್ದಿದ್ದ'. ಜೋಸಯ್ಯನ ಅನೈತಿಕ ಮಾರ್ಗ ಕಂಡು ಸಿಟ್ಟಾದ ಜನ ಅವನ ಅಂಗಡಿಯನ್ನು ಬಹಿಷ್ಕರಿಸುತ್ತಾರೆ. ಒಂದೇ ವಾರದಲ್ಲಿ ಅವನು ದಿವಾಳಿಯಾಗುತ್ತಾನೆ. ಜೋಸಯ್ಯ ಎಷ್ಟೊಂದನ್ನು ತೆಗೆದುಕೊಂಡುಬಿಟ್ಟಿದ್ದಾ ನೆಂದರೆ, ಅದು ಒಡೆಯನಿಗೂ ಗೊತ್ತಾಗುವಂತಿತ್ತು'

-ಎಂದು ಜನ ತಮ್ಮ ನಿರ್ಧಾರವನ್ನು ಸಮರ್ಥಿಸಿಕೊಳ್ಳುತ್ತಾರೆ. ಈ ಗಾದೆ ಸೂಚಿಸುತ್ತಿರುವ 'ಒಡೆಯ'ನೆಂದರೆ ಸಮುದಾಯದ ಅಂತಃಸಾಕ್ಷಿ ಅಥವಾ ಇಚ್ಛಾಶಕ್ತಿ(will). ಡೇವಿಡ್ ಕ್ಯಾರೊಲ್ ಹೇಳುವಂತೆ, ಕಾದಂಬರಿಯಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ

> 'ಒಡೆಯನೂ ಗುರುತಿಸುವಷ್ಟನ್ನು ಅವನು ಕದ್ದುಬಿಟ್ಟಿದ್ದಾನೆ' ಎಂಬ ಗಾದೆ ಈ ಸಮಾಜ ಕಳೆದುಕೊಂಡುಬಿಟ್ಟಿರುವ ಶಕ್ತಿಯೊಂದರ ಕಡೆಗೆ ನಮ್ಮ ಗಮನ ಸೆಳೆಯುತ್ತದೆ. ಜೋಸಯ್ಯನ ಪ್ರಸಂಗದಲ್ಲಿ ಪ್ರತಿಕ್ರಿಯಿಸಿದಷ್ಟು

ತೀವ್ರವಾಗಿ ನಂಗಾನ ವಿಚಾರದಲ್ಲೂ ಪ್ರತಿಕ್ರಿಯಿಸುವ ಶಕ್ತಿಯನ್ನು ದೇಶೀ ಸಮಾಜ ಕಳೆದುಕೊಂಡಿದೆ. ಅಂದರೆ, ಜನತೆಯ ಇಚ್ಛಾಶಕ್ತಿ ವರ್ತಮಾನದ ರಾಜಕಾರಣ ಸೃಷ್ಟಿಸುವ ಸಮಸ್ಯೆಗಳನ್ನು ಎದುರಿಸುವ, ನಿಯಂತ್ರಿಸುವ ಶಕ್ತಿಯನ್ನು ಕಳೆದುಕೊಂಡಿದೆ. ಆಧುನಿಕ ರಾಜಕಾರಣದಲ್ಲಿ ದೇಶೀ ಜನರ ನಿಯಂತ್ರಣ ಸೀಮಿತವಾಗತೊಡಗಿದ್ದನ್ನು ಇದು ತೋರಿಸುತ್ತದೆ. ಪಾರಂಪರಿಕ ಆಫ್ರಿಕಾದ ಉಮೋಫಿಯಾ, ಉಮುವಾರೋಗಳಂತೆ ಈ ಸಮಾಜ ತನ್ನ ಸಾಮುದಾಯಿಕ ಇಚ್ಛಾಶಕ್ತಿ ಹಾಗೂ ನೈತಿಕ ಕಟ್ಟುಗಳಿಗೆ ಎಲ್ಲರನ್ನೂ ಬದ್ಧರನ್ನಾಗಿಸುವ ಹಕ್ಕನ್ನು ಕಳೆದುಕೊಂಡಿದೆ. 'ಜೋಸಯ್ಯನ ಪ್ರಸಂಗದಲ್ಲಿ ಕಾಣುವ ಸಾಮುದಾಯಿಕ ತೀರ್ಮಾನದ ಅನುಷ್ಠಾನ ಆಫ್ರಿಕನ್ ಸಾಮಾಜಿಕ ಬದುಕಿನಲ್ಲಿ ಇನ್ನೂ ಉಳಿದಿರಬಹುದಾದ ಪಾರಂಪರಿಕ ಆಫ್ರಿಕಾದ ಶಕ್ತಿಯ ಅವಶೇಷ ಮಾತ್ರ'

ಡೇವಿಡ್ ಕ್ಯಾರೋಲ್, ವಸಾಹತೋತ್ತರ ಆಫ್ರಿಕಾದಲ್ಲಿ ಸಾಮುದಾಯಿಕ ಅಂತಃಸಾಕ್ಷಿಯೂ ವಿಕೃತಗೊಂಡಿರುವುದನ್ನು ಗುರುತಿಸುತ್ತಾನೆ: 'ಜೋಸಯ್ಯನನ್ನು ಶಿಕ್ಷಿಸಿದ ಸಮುದಾಯವೇ ಮಂತ್ರಿ ನಂಗಾನನ್ನು ಆದರಿಸುತ್ತದೆ. ತನ್ನ ಸಮಾಜದ ಪಾರಂಪರಿಕ ಮೌಲ್ಯಗಳ ನೆಲೆಗಟ್ಟನ್ನೂ, ಆಧುನಿಕ ಪ್ರಭುತ್ವ ಸೃಷ್ಟಿಸಿರುವ ಗೊಂದಲಮಯ ಸ್ಥಿತಿಯಲ್ಲಿ ಪಾರಂಪರಿಕ ಸಮಾಜದ ಏಕಮಾತ್ರ ಮಾರ್ಗದರ್ಶಿಯಾದ ಮೌಲ್ಯಜಗತ್ತನ್ನೂ ನಂಗಾ ಕದ್ದೊಯ್ದಿದ್ದಾನೆ. ಈಗ ಜನ ತಮ್ಮ ಉಳಿವಿಗಾಗಿ ಅವನನ್ನೇ ಅವಲಂಬಿಸುವಂಥ ಸನ್ನಿವೇಶವನ್ನೂ ಅವನು ನಿರ್ಮಿಸಿದ್ದಾನೆ.

ಆದರೆ, ಇಂಥ ರಾಜಕಾರಣಿ ನಂಗಾನನ್ನು ಜನ ಹದ್ದುಬಸ್ತಿನಲ್ಲಿಡಲಾರರು. ಇದನ್ನು ಕುರಿತು ಊರ ಜನ ಅಸಹಾಯಕತೆಯಿಂದ ಹೇಳುವುದಿಷ್ಟೆ: 'ದೇಶದ ವ್ಯವಹಾರಗಳಲ್ಲಿ ಒಡೆಯ ಏನೂ ಮಾಡಲಾರ'. ಗ್ರಾಮದ ನಿಯಮಗಳೆಲ್ಲ ಹೀಗೆ ಹೊಸ ರಾಷ್ಟ್ರದಲ್ಲಿ ಬಲಹೀನವಾಗಿಬಿಟ್ಟಿವೆ. ಕಡೆಯಪಕ್ಷ ಪಾರಂಪರಿಕ ಜಗತ್ತು ಅನುಸರಿಸುತ್ತಿದ್ದ, ಬಹುಸಂಖ್ಯಾತರ ತೀರ್ಮಾನಕ್ಕೆ ಬದ್ಧವಾಗಿರಬೇಕಾದ, ಪ್ರಜಾಪ್ರಭುತ್ವದ ಮೊದಲ ಲಕ್ಷಣವನ್ನೇ ಆಧುನಿಕ ಪ್ರಜಾಪ್ರಭುತ್ವ ಗಾಳಿಗೆ ತೂರಿಬಿಟ್ಟಿದೆಯೆಂಬ ಅಂಶ ಚುನಾವಣೆಯ ದಿನಗಳ ಒಂದು ರಾತ್ರಿ ತಳವಾರ ಸಾರಿದ ಸುದ್ದಿ ಕೇಳಿದಾಗ ಓಡಿಲಿಗೆ ಹೊಳೆಯುತ್ತದೆ: 'ಆ ರಾತ್ರಿ ತಮಟೆಯವನು ಸಾರುತ್ತಿದ್ದ ಸುದ್ದಿ ಎಂದಿನಂತಿರಲಿಲ್ಲ. ಮೊದಲೆಲ್ಲಾ ಯಾವುದಾದರೊಂದು ಗಂಭೀರ ಸಮಸ್ಯೆಯನ್ನು ಬಗೆಹರಿಸಬೇಕಾದಾಗ ಊರ ಸಭೆ ಕರೆಯುತ್ತಿದ್ದರು, ಮತ್ತು ಸಭೆಯ ತೀರ್ಮಾನವನ್ನು ನಂತರ ಸಾರಲಾಗುತ್ತಿತ್ತು. ಆದರೆ ಆ ರಾತ್ರಿ ಅವನು ಸಾರಿದ ರೀತಿ ಹೊಸದಾಗಿತ್ತು. ಈಗಾಗಲೇ ತೀರ್ಮಾನವಾದ ವಿಷಯವೊಂದನ್ನು-ಅಂದರೆ ಊರವರೆಲ್ಲಾ ಮಂತ್ರಿ ನಂಗಾನಿಗೆ ಮತ ನೀಡಬೇಕೆಂಬ ತೀರ್ಮಾನವನ್ನು-ಅವನು ಸಾರುತ್ತಿದ್ದುದು ಕೇಳಿಸಿತು.'

ಹೀಗೆ ಪಾರಂಪರಿಕ ಆಫ್ರಿಕಾದ ಮೌಲ್ಯಗಳು ವಿಕೃತಗೊಳ್ಳುವುದರ ಜೊತೆಗೇ,

ಪಾರಂಪರಿಕ ಸಮಾಜ ಪೂಜಿಸುತ್ತಿದ್ದ ಧಾರ್ಮಿಕ ಸಂಕೇತಗಳಾದ ಮುಖವಾಡದ ದೇವತೆಗಳು ಚುನಾವಣೆಯ ಸಂದರ್ಭದಲ್ಲಿ ತಮಾಷೆಯಾಗಿ ಕುಣಿಯಲು ಬರುವುದು ಈ ಸಮಾಜದ ಅವನತಿಯ ಇನ್ನೊಂದು ಮುಖವನ್ನು ಕಾಣಿಸುತ್ತದೆಂದು ಕಿಲ್ಲಮ್ ಗುರುತಿಸುತ್ತಾನೆ. ಇದು ತನ್ನ ಸಮಾಜದ ಎಲ್ಲ ಮುಖಿಗಳನ್ನೂ ಭ್ರಷ್ಟಗೊಳಿಸಿ ಚುನಾವಣೆಗಳನ್ನು ಗೆಲ್ಲಬಲ್ಲ ನಂಗಾನಂಥವರ ಆಫ್ರಿಕಾ. ನಂಗಾನಂಥ ರಾಜಕಾರಣಿ ತಮ್ಮೂರಿಗೆ 'ಕೊಳವೆಯಲ್ಲಿ ನೀರು, ವಿದ್ಯುತ್ ಕಂಬಗಳನ್ನು ತರಬಲ್ಲ'ನೆಂದು, ಜನ 'ಅವನೂ ತಿನ್ನಲಿ ಬಿಡಿ' ಎನ್ನುತ್ತಾರೆ. ಈ ಅಂಶವನ್ನು ಸೂಕ್ಷ್ಮವಾಗಿ ಗಮನಿಸಿದರೆ, ಆಧುನೀಕರಣದ ತೀವ್ರ ಹಂಬಲದಲ್ಲಿ ಒಂದು ಸಮೂಹ ತನ್ನ ನೈತಿಕ ನೆಲೆಗಳನ್ನು ಪ್ರಜ್ಞಾಪೂರ್ವಕವಾಗಿಯೇ ನಿರ್ಲಕ್ಷಿಸಿ ಮುಂದು ವರಿಯಲು ಸಿದ್ಧವಾಗಿರುತ್ತದೆಂಬುದರ ಅರಿವಾಗುತ್ತದೆ.

ಇಂಥ ನಂಗಾನನ್ನು ವಿರೋಧಿಸುವ ಎಡಪಂಥೀಯ ನಾಯಕ ಮ್ಯಾಕ್ಸ್‌ನಂಥವರ ಪಕ್ಷವೂ ಹಾಲೀ ಸರಕಾರದ ಮಂತ್ರಿಯೊಬ್ಬನಿಂದ ಚುನಾವಣೆಗಾಗಿ ಹಣ ಪಡೆಯಬೇಕಾಗುತ್ತದೆ. ಇಲ್ಲಿ ಏಕಕಾಲಕ್ಕೆ ಆಧುನಿಕ ಪ್ರಜಾಪ್ರಭುತ್ವ ವ್ಯವಸ್ಥೆ ಹಾಗೂ ವೈಯಕ್ತಿಕ ನೈತಿಕತೆಯ ಪ್ರಶ್ನೆಗಳೆರಡರ ಸಮಸ್ಯೆಯೂ ಬೆರೆಯುತ್ತದೆ. ಮಾರ್ಕ್ಸ್‌ವಾದಿ ಮ್ಯಾಕ್ಸ್‌ನ ಪತನದ ಹಿನ್ನೆಲೆಯಲ್ಲಿರುವ ಶಕ್ತಿಗಳು ಹೊಸ ರಾಜಕೀಯ ವ್ಯವಸ್ಥೆಯಲ್ಲೇ ಇವೆ. ಇಂಥ ವ್ಯವಸ್ಥೆ ಎಂಥ ಆದರ್ಶವಾದಿಗಳನ್ನೂ ನುಂಗಿಬಿಡಬಲ್ಲದು. ಡೇವಿಡ್ ಕುಕ್ ಹೇಳುವಂತೆ, 'ತನ್ನ ಭೂತದಿಂದ ಸಂಪೂರ್ಣವಾಗಿ ಕಡಿದುಕೊಳ್ಳಹೊರಟಿರುವ ಆಧುನಿಕ ಆಫ್ರಿಕನ್ ಪ್ರಭುತ್ವದ ಚಿತ್ರವನ್ನು ಅಚೀಬೆ ಇಲ್ಲಿ ಕೊಡುತ್ತಾನೆ. ಅದರ ಫಲವಾಗಿ ಏಕಾಂಗಿ 'ವ್ಯಕ್ತಿಗಳು' ಯಾಂತ್ರಿಕ ಆಡಳಿತ ವ್ಯವಸ್ಥೆಯನ್ನು ಮುಖಾಮುಖಿಯಾಗಬೇಕಾಗುತ್ತದೆ.'

**ವಸಾಹತೋತ್ತರ ಆಫ್ರಿಕಾ:**

**ನಾಗರಿಕ ಸಮಾಜದಿಂದ ರಾಜಕೀಯ ಸಮಾಜದತ್ತ**

ಇಂಥ ವಸಾಹತೋತ್ತರ ಆಫ್ರಿಕನ್ ಸಮಾಜದ ಸಂಪೂರ್ಣ ಭ್ರಮನಿರಸನದ ಸ್ಥಿತಿಯ ತಾರ್ಕಿಕ ಕೊನೆಯೆಂಬಂತೆ ಅಚೀಬೆಯ 'ಎ ಮ್ಯಾನ್ ಆಫ್ ದಿ ಪೀಪಲ್' ಕಾದಂಬರಿಯ ಕೊನೆಯ ಭಾಗ ಮಿಲಿಟರಿ ದಂಗೆಯ ಭವಿಷ್ಯ ನುಡಿದದ್ದು ನೈಜೀರಿಯಾದ ಸಂದರ್ಭದಲ್ಲಿ ನಿಜವಾಗಿಬಿಟ್ಟಿತು. ವಸಾಹತೋತ್ತರ ನೈಜೀರಿಯಾ ಮಿಲಿಟರಿ ಆಡಳಿತಕ್ಕೂ ಒಳಗಾಯಿತು. ಈ ಘಟ್ಟದ ನೈಜೀರಿಯಾದ ಕತೆಯನ್ನು 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ' (ಸವನ್ನಾದ ಹುತ್ತಗಳು) ಹೇಳುತ್ತದೆ. ಆಫ್ರಿಕಾದ ಕೆಲವು ಸ್ವತಂತ್ರ ರಾಷ್ಟ್ರಗಳಲ್ಲಿ ನಡೆದ ದಂಗೆ, ಪ್ರತಿದಂಗೆ, ಅವು ಸೃಷ್ಟಿಸಿದ ಸರ್ವಾಧಿಕಾರಿಗಳು ಹಾಗೂ ರೂಪುಗೊಂಡ ಹೊಸ ದಮನಕಾರಿ ಶಕ್ತಿಗಳು ಮತ್ತು ಜನತೆಯ ಹೋರಾಟಗಳನ್ನು ಕುರಿತ ರೂಪಕ 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ'. ಎಪ್ಪತ್ತು-ಎಂಭತ್ತರ ದಶಕದ ಆಫ್ರಿಕಾದ ಕೆಲವು ರಾಷ್ಟ್ರಗಳ ಪ್ರತಿರೂಪದಂತೆ ಕಾಣುವ ಕಂಗನ್ ದೇಶದ ಮೂಲಕ ನಾಗರಿಕ (ಸಿವಿಲ್) ಸಮಾಜದಿಂದ ರಾಜಕೀಯ

(ಪೊಲಿಟಿಕಲ್) ಸಮಾಜದತ್ತ ಆಫ್ರಿಕಾದ ದುರಂತಮಯ ಚಲನೆಯನ್ನು ಕಾದಂಬರಿ ಶೋಧಿಸುತ್ತದೆ. ಗ್ರಾಮ್‌ಷಿಯ ಪ್ರಕಾರ, ನಾಗರಿಕ ಹಾಗೂ ರಾಜಕೀಯ ಸಮಾಜಗಳ ನಡುವಣ ವ್ಯತ್ಯಾಸ ಇದು: 'ನಾಗರಿಕ ಸಮಾಜವನ್ನು ಮೂಲತಃ ಖೈಚಾರಿಕವಾದ ಹಾಗೂ ದಮನಕಾರಿಯಲ್ಲದ ಸಂಸ್ಥೆಗಳಾದ ಶಾಲೆ, ಕುಟುಂಬ, ಯೂನಿಯನ್‌ಗಳಂಥ ಸಂಸ್ಥೆಗಳು ರೂಪಿಸಿದರೆ, ಪೊಲಿಟಿಕಲ್ ಸಮಾಜವನ್ನು ದಬ್ಬಾಳಿಕೆಯನ್ನೇ ಗುರಿಯನ್ನಾಗಿರಿಸಿಕೊಂಡ ಪ್ರಭುತ್ವದ ಸಂಸ್ಥೆಗಳು-ಸೈನ್ಯ, ಪೊಲೀಸ್, ಅಧಿಕಾರಶಾಹಿ-ರೂಪಿಸಿರುತ್ತವೆ.'

'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ'ದ ಕಂಗನ್ ರಾಜ್ಯ ಹೆಚ್ಚೂಕಡಿಮೆ ಇಂಥ ರಾಜಕೀಯ ಸಮಾಜವಾಗಿ ಕಾಣುತ್ತದೆ. ವಸಾಹತೋತ್ತರ ಆಫ್ರಿಕಾದ ಘಾನಾ, ಉಗಾಂಡಾ, ರೊಡೇಷಿಯಾ, ನೈಜೀರಿಯಾಗಳ ಪ್ರತಿರೂಪ ಕಂಗನ್. ಕಂಗನ್ ರಾಜ್ಯದ ಸರ್ವಾಧಿಕಾರಿ ಸ್ಯಾಮ್ 'ನಾನು ರಾಜಕಾರಣಿಯಲ್ಲ, ಸೈನಿಕ' ಎಂದು ತಾನು ದೇಶದಲ್ಲಿ ತರಲೆತ್ನಿಸುವ ಶಿಸ್ತನ್ನು ಸಮರ್ಥಿಸಿಕೊಳ್ಳಲೆತ್ನಿಸುತ್ತಾನೆ. ಅಚೀಬೆ ತನ್ನ 'ದಿ ಟ್ರಬಲ್ ವಿತ್ ನೈಜೀರಿಯಾ' ಪುಸ್ತಕದಲ್ಲಿ ಹೇಳುವಂತೆ'

> ಮಿಲಿಟರಿ ಆಡಳಿತ ಜಾರಿಗೆ ಬಂದ ತಕ್ಷಣ ಇಡೀ ಆಧುನಿಕ ನೈಜೀರಿಯಾ ಶಿಸ್ತಿನಿಂದ ವರ್ತಿಸತೊಡಗುತ್ತಿರುವಂತೆ ಕಾಣುತ್ತದೆ. ಕಚೇರಿಗಳ ಕೆಲಸ ಚುರುಕಾದಂತೆ, ರಸ್ತೆಗಳು ತಮ್ಮ ಅಸ್ತವ್ಯಸ್ತ ವಾಹನ ಸಂಚಾರವನ್ನು ಕಳೆದುಕೊಂಡಂತೆ, ಎಲ್ಲವೂ ನೆಟ್ಟಗಾದಂತೆ ಕಾಣತೊಡಗುತ್ತದೆ.

ಅಂದರೆ, ವಸಾಹತೋತ್ತರ ನೈಜೀರಿಯಾದಲ್ಲಿ ದಿಕ್ಕೆಟ್ಟ ಜನತೆಗೆ ಮಿಲಿಟರಿ ಸರ್ವಾಧಿಕಾರವೂ ಹೊಸ ಪರ್ಯಾಯವೆಂಬ ಭ್ರಮೆ ಹುಟ್ಟಿಸುತ್ತದೆ. ಸ್ವತಃ ಕಂಗನ್‌ನ ಸರ್ವಾಧಿಕಾರಿ ಸ್ಯಾಮ್ ಕೂಡ ಅಂಥ ನಂಬಿಕೆಯಿಂದಲೇ ಹೊರಡುತ್ತಾನೆ. ಆದರೆ ಕಡೆಯ ಪಕ್ಷ 'ಎ ಮ್ಯಾನ್ ಆಫ್ ದಿ ಪೀಪಲ್'ನ ಭ್ರಷ್ಟನಂಗಾನಂಥವರ ರೀತಿಯಲ್ಲಾದರೂ ಜನತೆಯ ಸಂಪರ್ಕವಿಲ್ಲದ ಈ ಬಗೆಯ ಪ್ರಭುತ್ವ ಕೊನೆಗೆ ಜನತೆಯ ಬೇಟೆಯನ್ನಾರಂಭಿಸುತ್ತದೆ. ಸರ್ವಾಧಿಕಾರಿ ಸ್ಯಾಮ್‌ನ ಆರಾಧನೆಯನ್ನೇ ತಮ್ಮ ಏಕಮಾತ್ರ ಗುರಿಯಾಗಿರಿಸಿಕೊಂಡ ಮಂತ್ರಿಗಳು(ಇದನ್ನೇ ಕಾದಂಬರಿಯ ಕವಿ-ಪತ್ರಕರ್ತ ಇಕೆಮ್ 'ಆಸ್ಥಾನ ವಿದೂಷಕರು ಕಟ್ಟಿದ ಗೋಡೆ' ಎನ್ನುತ್ತಾನೆ.) ಸರಕಾರ ಹೇಳಿದ್ದನ್ನೇ ಪ್ರತಿಧ್ವನಿಸುವ ರೇಡಿಯೋ, ಟೆಲಿವಿಷನ್, ಪ್ರಭುತ್ವವು ನಿಯಂತ್ರಿಸಲೆತ್ನಿಸುವ ಪತ್ರಿಕೆಗಳು-ಇವೆಲ್ಲದರ ಮೂಲಕ 'ಆಫ್ರಿಕನ್ ಸಮಾಜದ ಕೆನೆ (cream) ಮತ್ತು ಕಪ್ಪು ಜನಾಂಗದ ಆಶಾಕಿರಣ'ವಾದ ಅಲ್ಪಸಂಖ್ಯಾತ ವಿದ್ಯಾವಂತ ವರ್ಗ ಸ್ವಾತಂತ್ರ್ಯೋತ್ತರ ಆಫ್ರಿಕಾವನ್ನು ಸೆರೆಮನೆಯಾಗಿಸತೊಡಗುತ್ತದೆ.

ಸಣ್ಣಪುಟ್ಟ ಭಿನ್ನಮತಗಳನ್ನೂ ತನಗೆ, ತನ್ನ ಪ್ರಭುತ್ವಕ್ಕೆ, ತನ್ನ ದೇಶಕ್ಕೆ ಗಂಡಾಂತರವೆಂಬಂತೆ ಕಾಣುವ ಅಧ್ಯಕ್ಷ ಸ್ಯಾಮ್, ಕಂಗನ್ ರಾಜ್ಯದಲ್ಲಿ ಉಸಿರು ಕಟ್ಟಿಸುವ ಸ್ಥಿತಿ ಸೃಷ್ಟಿಸುತ್ತಾನೆ. 'ತಲೆಯಿಂದ ಪಾದದವರೆಗೂ ಶಸ್ತ್ರಾಸ್ತ್ರಗಳನ್ನಿಟ್ಟುಕೊಂಡ ಈ ಮಿಲಿಟರಿ ನಾಯಕ ಜನರನ್ನು, ಶಾಂತಿಯುತ ಮೆರವಣಿಗೆಗಳನ್ನು ಕಂಡರೂ ಹೆದರುತ್ತಾನೆ'. ಅಧ್ಯಕ್ಷ ಸ್ಯಾಮ್‌ಗೆ ಆಜೀವಪರ್ಯಂತ

ಅಧ್ಯಕ್ಷಗಿರಿಯ ಹುಚ್ಚು ಹತ್ತಿದ ನಂತರ ಮಿಲಿಟರಿ ಸರಕಾರದ ಹಲ್ಲುಗಳು ಮೊನಚಾಗತೊಡಗುತ್ತವೆ. ಈ ಹುಚ್ಚಿಗೆ ಮತ ನೀಡದ ಅಬಜಾನ್ ಪ್ರದೇಶವನ್ನು ಸವಲತ್ತುಗಳಿಲ್ಲದೆ ಕೊಳೆಸುವುದರಲ್ಲಿ ವ್ಯಕ್ತವಾಗುವ ಸ್ಯಾಮ್‌ನ ಕ್ರೌರ್ಯ ಆಫ್ರಿಕನ್ ದೇಶಗಳಲ್ಲಿ ಸರ್ವಾಧಿಕಾರ ಸೃಷ್ಟಿಸಿದ ನರಕದ ರೂಪಕ. ಅಬಜಾನ್‌ನ ನಿಯೋಗದೊಂದಿಗೆ ಬಂದ ಅದ್ಭುತ ಮಾತುಗಾರನಾದ ಹಿರಿಯ ಹೇಳುವಂತೆ,

> 'ನಾವು ಸೂರ್ಯನ ಕೆಂಗಣ್ಣಿಗೆ ತುತ್ತಾಗಿದ್ದೇವೆ. ತನ್ನ ಆಜೀವಪರ್ಯಂತ ಅಧ್ಯಕ್ಷಗಿರಿಗೆ ನಡೆದ ಮತದಾನದಲ್ಲಿ 'ಹೂಂ' ಎನ್ನದ ನಮ್ಮ ಪ್ರದೇಶದ ಬೋರ್‌ವೆಲ್‌ಗಳನ್ನು ಅಧ್ಯಕ್ಷ ಮುಚ್ಚಿಸಿದ್ದಾನೆ'.

ಆದ್ದರಿಂದ ನೂರಾರು ಮೈಲಿ ದೂರದ ರಾಜಧಾನಿಗೆ ಬಂದಿಳಿದ ಈ ನಿಯೋಗದ ಸ್ಥಿತಿ ಹೊಸ ರಾಷ್ಟ್ರದ ಕೇಂದ್ರೀಕೃತ ವ್ಯವಸ್ಥೆ ಆಫ್ರಿಕನ್ ಗ್ರಾಮಸಮಾಜದ ಬೆನ್ನೆಲುಬನ್ನು ಮುರಿದಿದ್ದನ್ನೂ ಸಂಕೇತಿಸುತ್ತದೆ. 'ನಾವೀಗ ಹೊಸ ಮಾರ್ಗಗಳನ್ನು ಕಲಿತು, ಹಳೆಯ ನಿರುಪಯುಕ್ತ ಮಾರ್ಗಗಳನ್ನು ಬಿಟ್ಟು ಬಿಡಬೇಕೆಂದಿದ್ದೇವೆ' ಎನ್ನುವ ನಿಯೋಗದ ನಾಯಕತ್ವ ವಹಿಸಿದ ಮುದುಕನ ವಿಷಾದಕರ ಮಾತಿನಲ್ಲಿ ವ್ಯಕ್ತವಾಗುತ್ತಿರುವುದು ರಾಷ್ಟ್ರ ಪ್ರಭುತ್ವದಲ್ಲಿ ಗ್ರಾಮಗಳು ಅನುಭವಿಸುವ ಆಳದ ಅಸಹಾಯಕತೆಯೂ ಹೌದು. ವಸಾಹತುವಾದೀ ಸರಕಾರಗಳ ಪಡಿಯಚ್ಚಿನಂತೆ ದೇಶೀ ಸರಕಾರಗಳೂ ಜನತೆಯ ಆತ್ಮವಿಶ್ವಾಸವನ್ನು ನಿರ್ನಾಮ ಮಾಡುವ ಕೆಲಸವನ್ನೇ ಮುಂದುವರಿಸುವುದರ ಸೂಚನೆಯಿದು. ಅಬಜಾನ್‌ನಿಂದ ಬಂದ ನಿಯೋಗದ ನಾಯಕನಾದ ಹಿರಿಯನನ್ನು- ಕತೆ, ಉಪಕತೆಗಳ ಮೂಲಕ ಆಕರ್ಷಕವಾಗಿ ತನ್ನ ಪ್ರದೇಶದ ಅಭಿಪ್ರಾಯವನ್ನು ಮಂಡಿಸುವ ಮುದುಕನನ್ನು- ಅತಿಭದ್ರತೆಯ ಸೆರೆಮನೆಯಲ್ಲಿ ಬಂಧನದಲ್ಲಿಡುವುದನ್ನು ಕುರಿತು ಪತ್ರಕರ್ತ ಇಕೆಮ್ ಹೇಳುತ್ತಾನೆ: 'ಏಕೆಂದರೆ ಕತೆಗಾರರು ಯಾವಾಗಲೂ ಅಪಾಯಕಾರಿ ವ್ಯಕ್ತಿಗಳು. ಮಾನವನನ್ನು ಆಳಬಯಸುವ ಹಾಗೂ ನಿಯಂತ್ರಿಸಬಯಸುವವರಿಗೆಲ್ಲ ಅವರನ್ನು ಕಂಡರೆ ಭಯ. ಮಾನವನ ಸ್ವಾತಂತ್ರ್ಯದ ಹಕ್ಕನ್ನು ಹತ್ತಿಕ್ಕುವ ಪ್ರಭುತ್ವ, ಚರ್ಚು, ಮಸೀದಿ, ರಾಜಕೀಯ ಪಕ್ಷಗಳು ಹಾಗೂ ವಿಶ್ವವಿದ್ಯಾಲಯಗಳಿಗೂ ಕತೆಗಾರರನ್ನು ಕಂಡರೆ ಭಯ.'

ಇದು ವಸಾಹತೋತ್ತರ ಆಫ್ರಿಕಾದ ಕಂಗನ್‌ನ ಸರ್ವಾಧಿಕಾರೀ ಪ್ರಭುತ್ವದ ಒಂದು ಮುಖ. 'ಆಫ್ರಿಕಾದ ಇಂದಿನ ಆಡಳಿತಗಾರರು ಮಧ್ಯಯುಗದ ಸರ್ವಾಧಿಕಾರಿಗಳ ಪ್ರತಿ ರೂಪಗಳು' ಎನ್ನುತ್ತಾನೆ ಇಕೆಮ್. ಸುಮಾರು ಇಪ್ಪತ್ತೈದು ವರ್ಷಗಳಿಂದ ಪರಸ್ಪರರನ್ನು ಬಲ್ಲ ಇಕೆಮ್ ಒಸೋಡಿ (ಕವಿ, ಪತ್ರಕರ್ತ, ಕಾದಂಬರಿಕಾರ)' ಸ್ಯಾಮ್ (ಕಂಗನ್‌ನ ಅಧ್ಯಕ್ಷ), ಕ್ರಿಸ್ಟೊಫರ್ (ಕ್ರಿಸ್ ಎಂದು ಕರೆಯಲಾಗುವ ಈತ ಇದೇ ಸರಕಾರದ ವಾರ್ತಾ ಮಂತ್ರಿ) ಈ ಮೂವರು ಗೆಳೆಯರು ಇಂಗ್ಲೆಂಡಿನಲ್ಲಿ ಓದಿ ಆಫ್ರಿಕಾಕ್ಕೆ ಹಿಂದಿರುಗಿ ಬಂದವರು.

ಒಮ್ಮೆ ಈ ಮೂವರನ್ನೂ ಕುರಿತು ಕ್ರಿಸ್‌ನ ಗೆಳತಿ ಬೀಟ್ರಿಸ್ 'ನಿಮ್ಮ ಮೂವರ ಕತೆಯೇ ಈ ದೇಶದ ಕತೆಯೆಂದು ನೀವು ತಿಳಿದಂತಿದೆ', ಎಂದು ಹಾಸ್ಯದಿಂದ ಹೇಳುವುದು

ಒಂದರ್ಥದಲ್ಲಿ ನಿಜ ಕೂಡ. ಒಂದು ಮಟ್ಟದ ಬದ್ಧತೆಯಿಂದಲೇ ಅಧಿಕಾರವನ್ನು ಕೈಗೆತ್ತಿಕೊಳ್ಳುವ ಸ್ಯಾಮ್‌ನನ್ನು ಕೇಂದ್ರೀಕೃತ ಅಧಿಕಾರ ಭ್ರಷ್ಟಗೊಳಿಸುತ್ತದೆ. ಇಕೆಮ್ ಪತ್ರಿಕೆಯ ಮೂಲಕ ಎತ್ತುವ ನ್ಯಾಯಬದ್ಧ ಪ್ರಶ್ನೆಗಳೂ ತನ್ನ ಸರಕಾರಕ್ಕೆ ಗಂಡಾಂತರಗಳೆಂಬಂತೆ ಕಾಣುತ್ತವೆ. ಇಕೆಮ್ ಅಬಜಾನ್‌ನ ಹಿರಿಯರ ಜೊತೆ ನಡೆಸುವ ಸಂವಾದ ವಿದೇಶೀ ಸಂಚಿನಂತೆ ಕಾಣಿಸುತ್ತದೆ. ಇಕೆಮ್‌ನನ್ನು ಪತ್ರಿಕೆಯಿಂದ ಹೊರಗಟ್ಟಲಾಗುತ್ತದೆ. ಆ ನಂತರ ಇಕೆಮ್‌ನ ಭಾಷಣದ ವರದಿ ಅವನ ಬಂಧನಕ್ಕೂ ನಂತರ ಹುಸಿ ಎನ್‌ಕೌಂಟರಿನಲ್ಲಿ ಕೊಲೆಗೂ ಕಾರಣವಾಗುತ್ತದೆ. ಅವನ ಬಂಧನಕ್ಕೆ ಕಾರಣವಾದ ವರದಿಯ ಹಿನ್ನೆಲೆ ಇದು: ವಿದ್ಯಾರ್ಥಿಗಳ ಜೊತೆಗಿನ ಸಂವಾದದಲ್ಲಿ ಸಭಿಕನೊಬ್ಬ ಕಂಗನ್ ರಾಜ್ಯದ ಹಾಲೀ ಅಧ್ಯಕ್ಷರ ತಲೆಯನ್ನು ನೋಟುಗಳ ಮೇಲೆ ಛಾಪಿಸುವ ಸುದ್ದಿ ಕುರಿತು ಇಕೆಮ್‌ನ ಪ್ರತಿಕ್ರಿಯೆ ಕೇಳುತ್ತಾನೆ. ಇಕೆಮ್‌ನ ಉತ್ತರ ಇದು: '... ನನಗೇನನ್ನಿಸುತ್ತೇ ಅಂದರೆ, ಯಾವುದೇ ಹಾಲಿ ರಾಷ್ಟ್ರಪತಿ ನಾಣ್ಯದ ಮೇಲೆ ತನ್ನ ತಲೇನ ಹಾಕುವಷ್ಟು ಮೂರ್ಖನಾಗಿದ್ದರೆ, ಅದನ್ನ, ಅಂದರೆ ಆ ತಲೇನ, ತೆಗೀಲಿ ಅಂತ ಜನರನ್ನ ತಾನು ಪ್ರಚೋದಿಸ್ತಾ ಇದ್ದಾನೆ ಅನ್ನೋದಾದರೂ ಅವನಿಗೆ ಗೊತ್ತಿರಬೇಕು.'

ಈ ಲಘುಧಾಟಿಯ ಮಾತಿನ ವರದಿಯನ್ನು ಇಕೆಮ್‌ನ ಬಂಧನಕ್ಕೆ ಪೂರ್ವಭಾವಿಯಾಗಿ ಸರಕಾರಿ ಪತ್ರಿಕೆ ಪ್ರಕಟಿಸುವ ಬಗೆ ಇದು: 'ರಾಜಹತ್ಯೆಗೆ ಮಾಜಿ ಸಂಪಾದಕನ ಕರೆ!' ಇದನ್ನೇ ನೆಪವಾಗಿಟ್ಟುಕೊಂಡು ಸಂಪಾದಕ ಇಕೆಮ್‌ನನ್ನು ಕೊಲೆ ಮಾಡಿಸಲಾಗುತ್ತದೆ. ಮಂತ್ರಿ ಹುದ್ದೆಗೆ ರಾಜೀನಾಮೆ ಕೊಟ್ಟ ಕ್ರಿಸ್ ಭೂಗತನಾಗುತ್ತಾನೆ. ಪ್ರಭುತ್ವ ಕ್ರೂರವಾಗತೊಡಗುತ್ತದೆ. ಸ್ಟೇಟ್ ರಿಸರ್ಚ್ ಕೌನ್ಸಿಲ್ ಎಂಬ ಪೊಲೀಸ್ ಸಂಸ್ಥೆ ದಮನದ ಹೊಸ ಮಾರ್ಗಗಳನ್ನು ಸಂಶೋಧಿಸಲಾರಂಭಿಸುತ್ತದೆ. ಪ್ರಜೆಗಳ ಮಲಗುವ ಕೋಣೆಗೆ ಪ್ರಭುತ್ವದ 'ತುರಿ ನೆರಳು' ಬೀಳುವುದನ್ನು, ಪ್ರಭುತ್ವ ಅಕ್ಷರಶಃ ಅಲ್ಲಿಗೆ ಕಾಲಿಕ್ಕುವುದನ್ನು ಕ್ರಿಸ್‌ನ ಗೆಳತಿ ಬೀಟ್ರಿಸ್‌ಳ ಮನೆಯ ನಡುರಾತ್ರಿಯ ಶೋಧ ದಾಖಲಿಸುತ್ತದೆ:

> ಎಲ್ಲೋ ಕನಸಿನಲ್ಲೆಂಬಂತೆ ಕಾರಿನ ಬೆಳಕು ಕಂಡ ಬೀಟ್ರಿಸ್ ಎಚ್ಚೆತ್ತರೆ, ಜೀಪಿನ ಟೈರುಗಳು ಉಜ್ಜಿದ ಸದ್ದು. ಅವಳು ಥಟ್ಟನೆ ಮೇಲೆದ್ದಳು. ಕಿಟಕಿಯ ಗಾಜಿನ ಮೂಲಕ ಕಂಡದ್ದು ಹೆಡ್‌ಲೈಟು ಹಚ್ಚಿ ನಿಂತ ಮೂರು ಜೀಪುಗಳು. ಎದೆ ಹೊಡೆದುಕೊಳ್ಳತೊಡಗಿತು. ಜೀನ್ಸ್ ತೊಟ್ಟು ಗೌನು ಹಾಕಿಕೊಂಡಳು...
>
> ಬಾಗಿಲು ಬಡಿವ ಭಯಂಕರ ಸದ್ದು.
>
> 'ಮಿಸ್ ಒಕೋ. ಇದು ಸ್ಟೇಟ್ ಸೆಕ್ಯುರಿಟಿ. ಹೂಂ, ಬಾಗಿಲು ತೆಗಿ!'
>
> ..........
>
> 'ಮಿಸ್ ಒಕೋ...ಕೊನೇ ಎಚ್ಚರಿಕೆ. ಹೂಂ, ಬಾಗಿಲು ತೆಗಿ; ಸ್ಟೇಟ್

ಸೆಕ್ಯುರಿಟಿ'.

'ಬರ್ತಿದೀನಿ.'

'ಹೂಂ, ಬೇಗ'

.....ನಡುಗುವ ಕೈಗಳು ಬೀಗ ತೆಗೆಯುತ್ತವೆ...ಭಾರೀ ಗಾತ್ರದ ಸೈನಿಕನೊಬ್ಬ ಇಬ್ಬರು ಹೆಂಗಸರನ್ನೂ ತನ್ನೆರಡೂ ಕೈಗಳಿಂದಲೂ ಬದಿಗೆ ತಳ್ಳಿದ ರಭಸಕ್ಕೆ ಎಲಿವಾ ನೆಲದ ಮೇಲುರುಳುತ್ತಾಳೆ.....

ಕೆಂಡಗಣ್ಣಿನ ಸಾರ್ಜೆಂಟ್ ಬೀಟ್ರಿಸ್‌ಳ ಬೆಡ್‌ರೂಮ್ ಪ್ರವೇಶಿಸಿದವನು ಹಾಸಿಗೆಯ ಬೆಡ್‌ಶೀಟ್‌ಗಳನ್ನು ತೆಗೆತೆಗೆದು ಒಗೆದ. ಕ್ರೂರವಾಗಿ ಒಂದೊಂದೇ ವಸ್ತುವನ್ನು ದಿಟ್ಟಿಸುತ್ತಾ ಇನ್ನೊಂದಕ್ಕೆ ಹೋಗುತ್ತಿದ್ದ. ಸೂಟ್‌ಕೇಸಿನಲ್ಲಿದ್ದ ಬಟ್ಟೆಗಳು ಚೆಲ್ಲಾಪಿಲ್ಲಿಯಾಗಿ ನೆಲದ ಮೇಲೆ ಬಿದ್ದವು. 'ಕಳೆದುಹೋದ ಕುದುರೆಗಾಗಿ' ಎಲ್ಲೆಡೆ ಹುಡುಕಿದ ಅವನು ಬೀಟ್ರಿಸ್‌ಳ 'ನಿದ್ದೆ ಕೆಡಿಸಿದ್ದಕ್ಕೆ ಸಾರಿ' ಎಂದ. ಸೆಲ್ಯೂಟ್ ಹೊಡೆದ. ಹೊರಟ.

ಡೇವಿಡ್ ಕ್ಯಾರೋಲ್ ಹೇಳುವಂತೆ, 'ಮನೆಮನೆಗಳ ಶೋಧನೆ, ನಡುರಾತ್ರಿಯ ಬಂಧನಗಳು, ಸುಳ್ಳುಸುದ್ದಿಗಳನ್ನು ಸಾರುವ ಸರಕಾರಿ ಮಾಧ್ಯಮಗಳು ಹಾಗೂ ಗಾಳಿ ಸುದ್ದಿಗಳು ರೂಪಿಸುತ್ತಿರುವ ಸ್ವಾತಂತ್ರ್ಯೋತ್ತರ ಪಶ್ಚಿಮ ಆಫ್ರಿಕಾದ ಪ್ರತಿರೂಪವಾಗಿ ಕಂಗನ್ ಕಾಣುತ್ತದೆ.' 'ಎಲ್ಲ ಬಗೆಯ ಅಧೋಗತಿಗೂ ಸಾಮ್ರಾಜ್ಯಶಾಹಿಯನ್ನು ದೂರುವುದು ಈಗ ಅಸಂಗತ' ಎನ್ನುವ ಕಾದಂಬರಿಯ ಕೇಂದ್ರ ಪಾತ್ರವಾದ ಪತ್ರಕರ್ತ ಇಕೆಮ್ ವಸಾಹತೋತ್ತರ ಆಫ್ರಿಕಾದ ವಿಘಟನೆಯ ಮೂಲವೆಲ್ಲಿದೆಯೆಂದು ಹುಡುಕುತ್ತಾನೆ. ದೇಶವನ್ನು ಮುತ್ತಿರುವ ಭ್ರಷ್ಟಾಚಾರ, ವಿದೇಶೀ ಶಕ್ತಿಗಳೆದುರು ಆಫ್ರಿಕಾದ ಗುಲಾಮಗಿರಿ, ಬಂಡವಾಳಶಾಹಿ ವ್ಯವಸ್ಥೆ, ಕೆಲಸ ಮಾಡದ ಕಾರ್ಮಿಕರು, ಯೂನಿಯನ್ನುಗಳು, ರಾಜಕಾರಣಿಗಳ ತದ್ರೂಪಾಗಿರುವ ವಿದ್ಯಾರ್ಥಿಗಳು-ಹೀಗೆ ಹಲವು ಕಾರಣಗಳು ಇಕೆಮ್‌ಗೆ ಗೋಚರಿಸತೊಡಗುತ್ತವೆ. ಆದರೆ, ಇವೆಲ್ಲಕ್ಕಿಂತ ಮುಖ್ಯವಾಗಿ ಆಫ್ರಿಕಾದ ಸೋಲು ಎಂದರೆ 'ಬಡವರು ಹಾಗೂ ನಿರ್ಗತಿಕರ ಜೊತೆ ದಿವ್ಯವಾದ, ಆಳವಾದ ಸಂಬಂಧಗಳನ್ನು ಮರುಸ್ಥಾಪಿಸಲಾಗದ, ದೇಶದ ಅಂತರಾಳದಲ್ಲಿ ನೋವಿನಿಂದ ನರಳುವ ಗಾಯಗೊಂಡ ಹೃದಯಗಳ ಜೊತೆ ಸಂವಾದಿಸಲಾಗದ ನಮ್ಮ ನಾಯಕರ ಸೋಲು' ಎನಿಸುತ್ತದೆ. ಈ ಮಾತುಗಳು ಭಾರತದ ಸ್ವಾತಂತ್ರ್ಯೋತ್ತರ ರಾಜಕಾರಣ ಕುರಿತ ವ್ಯಾಖ್ಯಾನದಂತೆಯೇ ಕೇಳಿಸುತ್ತವೆ. 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ' ಕಾದಂಬರಿಯಲ್ಲಿ ಆಫ್ರಿಕಾದಲ್ಲಿ ದೇಶೀ ಸ್ವತಂತ್ರ ಸರ್ಕಾರಗಳು ಸೃಷ್ಟಿಸಿದ ಗೊಂದಲ ಕಂಡ ಆಫ್ರಿಕನ್ ಜನಸಾಮಾನ್ಯನೊಬ್ಬ ನಗುತ್ತಾ ಇನ್ನೊಬ್ಬನಿಗೆ ಹೇಳುತ್ತಾನೆ : ಗಂಡಸರು, ಹೆಂಗಸರು, ಮಕ್ಕಳು ಇನ್ನೂ ಹುಟ್ಟದೇ ಇರುವ ಕಂದಗಳು ಎಲ್ಲರಿಂದಲೂ ತಲಾ ಇಪ್ಪತ್ತು ಮನಿಲಾ(ಪೈಸೆ) ಚಂದಾ ಎತ್ತಿಕೊಂಡು ಬಾರಯ್ಯಾ.

ಅದನ್ನು ನಾನು ಇಂಗ್ಲೆಂಡಿಗೆ ತಗೊಂಡು ಹೋಗಿ ಐ.ಎಂ.ಎಫ್. ಜೊತೆ ಒಪ್ಪಂದ ಮಾಡಿಕೊಂಡು ಬಿಳಿಯ ಮನುಷ್ಯನ್ನ ಮತ್ತೆ ನಮ್ಮ ಕಂಗನ್ ದೇಶಕ್ಕೆ ಕರಕೊಂಡು ಬರ್‍ತೀನಿ'. ಇದು ಆಫ್ರಿಕನ್ ವಸಾಹತೋತ್ತರ ಸಮಾಜದ ದುರಂತ. ಮೇಲಿನ ಮಾತುಗಳಲ್ಲಿ ಕಾಣುವ ವಸಾಹತುಕಾರನ ಆರಾಧನೆಯ ಮೂಲ ದೇಶೀ ಸರ್ಕಾರಗಳ ಹಾಗೂ ದೇಶೀ ವ್ಯವಸ್ಥೆಯ ವೈಫಲ್ಯಗಳಲ್ಲಿದೆ. 'ದಮನಕ್ಕೊಳಗಾದವನೂ ದಮನಕಾರನ ಸದ್ಗುಣಗಳನ್ನು ಕುರಿತು ಹಾಡ ತೊಡಗುವುದು ದಮನಕಾರಿ ವ್ಯವಸ್ಥೆಯ ಅಂತಿಮ ಗೆಲುವು' ಎನ್ನುತ್ತಾನೆ ಆಫ್ರಿಕನ್ ಚಿಂತಕ ನುಗುಗಿ.

ಅಚೀಬೆಯ ಕಾದಂಬರಿಗಳೆರಡೂ ಮಂಡಿಸುವ ವಸಾಹತು ಆಕೃತಿಗಳು ಹಾಗೂ ದೇಶೀ ವ್ಯಕ್ತಿತ್ವದ ಪತನಗಳಿಂದ ಸೃಷ್ಟಿಗೊಂಡ ಅಧಃಪತನದ ಇನ್ನೊಂದು ಮುಖದಲ್ಲಿ(ಷೋಯಿಂಕಾನ ಕಾದಂಬರಿಗಳು ಸೂಚಿಸುವಂತೆ) ಅಕ್ಷರಸ್ಥ ವರ್ಗದ ಅಧಃಪತನ ಹಾಗೂ ತನ್ನ ದೇಶೀ ಭೂತದೊಂದಿಗೆ ಸಂಪರ್ಕ ಕಡಿದುಕೊಳ್ಳಹೊರಟಿರುವ ಕಾರಣದಿಂದಾಗಿ 'ಅನೈತಿಕ'ಗೊಳ್ಳ ತೊಡಗಿರುವ ವಸಾಹತೋತ್ತರ ಆಫ್ರಿಕಾವಿದೆ. ಆಧುನಿಕ ಆಫ್ರಿಕಾದ ಸೂತ್ರ ಹಿಡಿದ ಶಕ್ತಿಗಳಂತೆ, ಆಧುನಿಕ ಆಫ್ರಿಕಾವನ್ನು ರೂಪಿಸುತ್ತಿರುವ ಬುದ್ಧಿಜೀವಿವರ್ಗದ ಒಂದು ಗುಂಪಿನ ಭ್ರಷ್ಟತೆ, ಇನ್ನೊಂದು ಬಗೆಯ ಬುದ್ಧಿಜೀವಿ ಗುಂಪಿನ ಅಸಹಾಯಕತೆ-ಇವು ಕೂಡ ವಸಾಹತೋತ್ತರ ಅವನತಿಗೆ ಕಾರಣ. ಆಫ್ರಿಕಾವನ್ನು ಮರಳಿ ಕಟ್ಟಲು ಶಕ್ತಿಯಿರುವ ಸ್ಯಾಗೋ ಹಾಗೂ ಸೆಕೋನಿಯಂಥ ಆಧುನಿಕ ಆದರ್ಶವಾದಿಗಳು ತಮ್ಮ ಮೇಲೆ ಹೇರಲಾದ ಜೀವನ ಕ್ರಮದ ಬಲಿಪಶುಗಳಾಗಬೇಕಾಗುತ್ತದೆ. ಪತ್ರಕರ್ತನಾಗಲು ಸ್ಯಾಗೋ ಸಂದರ್ಶನಕ್ಕೆಂದು ಹೋದರೆ, ಅಲ್ಲಿರುವ ಸಂದರ್ಶನ ಸಮಿತಿಯ ಸದಸ್ಯರೆಲ್ಲ 'ಚುನಾವಣೆ ಗೆಲ್ಲಲಾಗದವರು, ಮಂತ್ರಿಯಾಗದವರು, ಮಂತ್ರಿಗಳ ದಲ್ಲಾಳಿಗಳು' ಹಾಗೂ ಕೆಲಸ ಕೊಡಲು ಲಂಚ ಕೇಳುವ ಸದಸ್ಯರು. ಹಣಕ್ಕಾಗಿ ಏನನ್ನಾದರೂ ಬರೆಯಲು ಸಿದ್ಧವಿರುವ ನ್ಯಾಬುಜರ್‌ನಂಥವರು ಈ ಪತ್ರಿಕೆಯ ಸಂಪಾದಕರು. ಸ್ಯಾಗೋ ತನ್ನ ಸುತ್ತಲಿನ ಕೊಳಕನ್ನು ಕುರಿತು ಬರೆದ ವರದಿಯನ್ನು 'ತಾಂತ್ರಿಕ' ಕಾರಣಗಳಿಗೆ ತಿರಸ್ಕರಿಸುವ ಈ ಸಂಪಾದಕನ ಧ್ಯೇಯ ವಾಕ್ಯ ಇದು: '(ಪತ್ರಕರ್ತನ ಕೆಲಸ) ತೀರಾ ಸಿಂಪಲ್. ನೀನು ನಿನ್ನ ಬಾಯಿ ಮುಚ್ಚಿಕೊಂಡಿರು; ನಾನು ನನ್ನ ಬಾಯಿ ಮುಚ್ಚಿಕೊಂಡಿರುತ್ತೇನೆ.'

ಬುದ್ಧಿಜೀವಿಗಳು ಹಾದಿತಪ್ಪಿದ ಅಥವಾ ಅಸಹಾಯಕರಾದ ಈ ಸಮಾಜದ ಅಧಿಕಾರ ಕೇಂದ್ರಗಳನ್ನು ಹಿಡಿಯುವವರು ಚೀಫ್ ವಿನ್ಸಾಲನಂಥ ಅವಕಾಶವಾದಿಗಳು. ಕಾದಂಬರಿಯ ಕೇಂದ್ರದಲ್ಲಿರುವ ಐದು ಜನ ಗೆಳೆಯರಲ್ಲಿ- ಆಧುನಿಕ ಆಫ್ರಿಕನ್ ಸಮಾಜದ 'ವ್ಯಾಖ್ಯಾನ ಕಾರ'ರಲ್ಲಿ- ಕಾಣುವ ಸಿನಿಕತೆ, ಹತಾಶೆ ಹಾಗೂ ವ್ಯಗ್ರತೆ ಸುತ್ತಲಿನ ಸಮಾಜದ ಪ್ರತಿಬಿಂಬವೂ ಹೌದು. ಆರ್ಥರ್ ಶ್ಯಾಟ್ಟೋ ಗೋಕ್ವಂಡಿ ಹೇಳುವಂತೆ, 'ಇಡೀ ಸಮಾಜ ಅಧಿಕಾರ ಸೂತ್ರ ಹಿಡಿದವರು ಸೃಷ್ಟಿಸಿದ ಕೊಳಕಿನಿಂದ ತುಂಬಿಹೋಗಿದೆ. ಕಾದಂಬರಿಯುದ್ದಕ್ಕೂ ಸ್ಯಾಗೋ ಹೇಳುವಂತೆ ಮಲ ಹಾಗೂ ಮಲ ತುಂಬಿದ ಬಕೆಟ್ಟುಗಳಿಂದ ಬರುವ ವಾಸನೆ ಈ

ಸಮಾಜವನ್ನು ಆವರಿಸಿಕೊಂಡಿದೆ.' ಸ್ಯಾಗೋ ಒಂದು ಸಂದರ್ಭದಲ್ಲಿ ಹೇಳುವ ಮಾತಿದು: '... ನಮ್ಮ ಈ ಪ್ರೀತಿಯ ದೇಶದಲ್ಲಿ ಸಾವನ್ನು ಬಿಟ್ಟರೆ ಅತ್ಯಂತ ದೇಶೀಯವಾದ ಅಂಶ ವೆಂದರೆ ಮಲ...'

ಸ್ಯಾಗೋನ 'ಶೂನ್ಯವಾದ'ದ ಸಿನಿಕತೆಯ ಸಿದ್ಧಾಂತ ಹುಟ್ಟುವುದು ಈ ಘೋರ ನಿರಾಶಾದಾಯಕ ಸ್ಥಿತಿಯ ಫಲವಾಗಿ. ಅವನ ಕುಡುಕತನ, ಫ್ಯಾಂಟಸಿಗಳು ಕೂಡ ಈ ನಿರಾಶೆಯಿಂದ ತಪ್ಪಿಸಿಕೊಳ್ಳುವ ಕರುಣಾಜನಕ ಪ್ರಯತ್ನಗಳು. ಸ್ಯಾಗೋನಂತೆ ಕೋಲಾ ಅಥವಾ ಎಗ್ಬೋರ ವ್ಯಂಗ್ಯ ಕೂಡ ಆಳದ ಕಹಿಯಿಂದ ಹುಟ್ಟಿದ ಪ್ರತಿಕ್ರಿಯೆಯೇ. ಸ್ಯಾಗೋನಷ್ಟೇ ಸಾಮಾಜಿಕ ಬದ್ಧತೆಯುಳ್ಳ ಸೆಕೋನಿಯನ್ನು ಸಮಾಜದ ಕೊಳಕು ಇನ್ನೊಂದು ರೀತಿಯಲ್ಲಿ ಎದುರಾಗುತ್ತದೆ. ವಿದೇಶದಲ್ಲಿ ಎಂಜಿನಿಯರಿಂಗ್ ಕಲಿತು ಬಂದ ಸೆಕೋನಿಗೆ ಅತ್ಯಾಧುನಿಕ ವಿದ್ಯುತ್ ಕೇಂದ್ರಗಳು, ಸೇತುವೆಗಳು, ವಿಜ್ಞಾನಕೇಂದ್ರಗಳ ಮೂಲಕ ತನ್ನ ಸಮಾಜವನ್ನು ಹೊಸ ಜಗತ್ತಿಗೆ ಅಣಿಗೊಳಿಸುವ ಕನಸು. ಸೆಕೋನಿಯ ವೈಜ್ಞಾನಿಕ ಪ್ರಯೋಗಗಳಿಗೆ ಅಡ್ಡಿಯಾಗಿರುವುದು ಅಧಿಕಾರಶಾಹಿಯ ಭ್ರಷ್ಟತೆ ಹಾಗೂ ನಿರ್ಲಕ್ಷ್ಯ. ಇದರ ಫಲವಾಗಿ ಸೆಕೋನಿಯಂಥ ಪ್ರತಿಭಾವಂತರು 'ಅರ್ಜಿಗೆ ಸಹಿ ಹಾಕುವ, ಗುಮಾಸ್ತರಿಗೆ ಬೈಸಿಕಲ್ ಮುಂಗಡ ಕೊಡುವ, ಮೀಟಿಂಗುಗಳಿಗೆ ಫೈಲು ಹೊತ್ತುಕೊಂಡು ಹೋಗಿ ಕಾಯುವ' ಕೆಲಸ ಮಾಡಬೇಕಾಗುತ್ತದೆ. ಕಡೆಗೂ ಹೋರಾಡಿ, ಸೆಕೋನಿ ನಿರ್ಮಿಸುವ ಪ್ರಾಯೋಗಿಕ ವಿದ್ಯುತ್‌ಕೇಂದ್ರ, ಕಾಂಟ್ರಾಕ್ಟರು-ಎಂಜಿನಿಯರುಗಳ ಜಾಲದಿಂದಾಗಿ 'ನಿರುಪಯುಕ್ತ'ವೆಂದು ಘೋಷಿಸಲ್ಪಡುತ್ತದೆ. ತನ್ನ ಕನಸಿನ ಕೂಸಾದ ಈ ಕೇಂದ್ರವನ್ನು ಪರೀಕ್ಷಿಸಲು ಹೊರಟ ಸೆಕೋನಿಯನ್ನು ಪೊಲೀಸರು ಬಂಧಿಸುವುದು, ನಂತರ 'ಹುಚ್ಚು ಎಂಜಿನಿಯರ್' ಎಂಬ ಹಣೆಪಟ್ಟಿಯೊಂದಿಗೆ ಅವನು ಮಾನಸಿಕ ರೋಗಿಗಳ ಆಸ್ಪತ್ರೆ ಸೇರಬೇಕಾಗಿ ಬರುವುದು ವಸಾಹತೋತ್ತರ ಆಫ್ರಿಕಾ ಖಾಯಂ ಚಿತ್ರದಂತಿದೆ.

**ವಸಾಹತೋತ್ತರ ಆಫ್ರಿಕಾ:**
**ನವವಸಾಹತು ಪ್ರಭುಗಳ ಆಗಮನ**

ಸ್ಯಾಗೋನನ್ನು ಸಿನಿಕನನ್ನಾಗಿಸುವ ಪತ್ರಿಕಾಲಯ, ಸೆಕೋನಿಯನ್ನು ಹುಚ್ಚನನ್ನಾಗಿಸುವ ಎಲೆಕ್ಟ್ರಿಸಿಟಿ ಬೋರ್ಡುಗಳಷ್ಟೇ ವಿಕೃತವಾಗಿ ಇಲ್ಲಿನ ವಿಶ್ವವಿದ್ಯಾಲಯಗಳು, ಇಲ್ಲಿನ ಅನುಕರಣಶೂರರು, ರಾತ್ರಿ ಪಾರ್ಟಿಗಳು ಹಾಗೂ ಗಾಳಿ ಸುದ್ದಿಗಳ ಲೋಕವಿದೆ. ಹೀಗೆ ದಿಕ್ಕೆಟ್ಟ ಸ್ವಾತಂತ್ರ್ಯೋತ್ತರ ಆಫ್ರಿಕನ್ ಸಮಾಜವನ್ನು ಸಹಜವಾಗಿಯೇ ನವ ವಸಾಹತುಶಾಹಿ ಶಕ್ತಿಗಳು ತಮ್ಮ ಪ್ರಯೋಗಭೂಮಿಯನ್ನಾಗಿ ಮಾಡಿಕೊಳ್ಳುತ್ತವೆ. ಈ ಘಟ್ಟದ ಬೆಳವಣಿಗೆ ಯನ್ನು ಷೋಯಿಂಕಾನ ಎರಡನೆಯ ಕಾದಂಬರಿ 'ಸೀಸನ್ ಆಫ್ ಅನೋಮಿ' ಶೋಧಿಸು ತ್ತದೆ. ಸ್ವಾತಂತ್ರ್ಯೋತ್ತರ ನೈಜೀರಿಯಾದ ತೀವ್ರ ಬಿಕ್ಕಟ್ಟಿನ ಘಟ್ಟದಲ್ಲಿ ಹುಟ್ಟಿದ ಈ ಕೃತಿಯಲ್ಲಿ ಆಫ್ರಿಕನ್ ಭೂತವನ್ನೂ, ಅನಾಧುನಿಕ ಆಫ್ರಿಕಾದ ಸಾಮುದಾಯಿಕ ಪ್ರಜ್ಞೆಯನ್ನೂ,

ಜೀವನಕ್ರಮವನ್ನೂ ಪ್ರತಿನಿಧಿಸುವ ಅಯೇರೋ ಪ್ರದೇಶ ಹಾಗೂ ಆಧುನಿಕ ಕೇಂದ್ರೀಕೃತ ವ್ಯವಸ್ಥೆ ಹಾಗೂ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಸಹಜ ಫಲವಾದ ಕಾರ್ಟೆಲ್ ಸಂಸ್ಥೆಯ ನಡುವೆ ಸಂಘರ್ಷವಿದೆ. ಅಯೇರೋವನ್ನು ತನ್ನ ವಶಕ್ಕೆ ತೆಗೆದುಕೊಳ್ಳಲೆತ್ನಿಸುವ ಹಾಗೂ ಅದರ ಮೇಲೆ ಪ್ರಭುತ್ವ ಸ್ಥಾಪಿಸಲೆತ್ನಿಸುವ ಕಾರ್ಟೆಲ್ ಸುತ್ತ ಹೆಣೆದ ಈ ಕತೆ ಸ್ವಾತಂತ್ರ್ಯೋತ್ತರ ಆಫ್ರಿಕಾದಲ್ಲಿ ಅನಾಧುನಿಕ ಆಫ್ರಿಕಾದ ದಿವ್ಯ ಜೀವನಕ್ರಮಗಳು ಒಂದೊಂದಾಗಿ ನಾಶವಾದ ಕತೆಯೂ ಹೌದು. 'ಸ್ವತಂತ್ರ ಮಾನವಲೋಕದ ಪ್ರತೀಕ ಅಯೇರೋ; ನಮ್ಮ ಜೀವನಕ್ರಮಗಳು ಯುಗಯುಗಗಳಿಂದಲೂ ಮಾನವ ಕಾಣುತ್ತ ಬಂದ ಕನಸುಗಳು' ಎನ್ನುವ ಕಾದಂಬರಿಯ ಕೇಂದ್ರಪಾತ್ರ ಒಫೇಯಿಯ ಮಾತು ಅಯೇರೋ ಪ್ರತಿನಿಧಿಸುವ ಆದರ್ಶ ಜಗತ್ತನ್ನು ಸೂಚಿಸುತ್ತದೆ. ಆದ್ದರಿಂದಲೇ, ಮಿಲಿಟರಿ ಸರ್ಕಾರ, ಹಣ ಹಾಗೂ ಪ್ರಚಾರಗಳ ಬಲದಿಂದ ದೇಶದ ಕೊಕೋ ಬೆಳೆಯ ಮೇಲೆ ಸ್ವಾಮ್ಯ ಸ್ಥಾಪಿಸಲೆತ್ನಿಸುವ ಕಾರ್ಟೆಲ್‌ಗೆ ಉತ್ತರವಾಗಿ ಒಫೇಯಿ ಅಯೇರೋವನ್ನು ಅರಸುತ್ತಾ ಹೊರಡುತ್ತಾನೆ.

ನವ ವಸಾಹತುಶಾಹಿ ಘಟ್ಟದ ಮಿಲಿಟರಿ ರಾಜ್ಯ ಹಾಗೂ ಬಹುರಾಷ್ಟ್ರೀಯವಾದಿ ಶಕ್ತಿಗಳು ಸ್ಥಾಪಿಸಲೆತ್ನಿಸುವ ಅಧಿಕಾರ ಕೇಂದ್ರದ ಪ್ರತಿನಿಧಿಯಾದ ಕಾರ್ಟೆಲ್ ಎಂಬ ಕಂಪನಿ 'ಸಮಕಾಲೀನ ಮರುಭೂಮಿ; ಆಧುನಿಕ ಜಗತ್ತಿನ ದುಃಸ್ವಪ್ನ'. 'ಕೇವಲ ಬೆರಳೆಣಿಕೆಯಷ್ಟು ಜನ ಇಡೀ ಭೂಮಂಡಲದ ದರೋಡೆಗೆ ಕಾರಣವಾಗುವುದರ ಪ್ರತೀಕವಾದ ಕಾರ್ಟೆಲ್ ಸಂಸ್ಥೆ ರಾಜಕೀಯ ಹಾಗೂ ಸಾಮಾಜಿಕ ದಮನ ಮತ್ತು ದಬ್ಬಾಳಿಕೆಯ ಸಂಕೇತ ಕೂಡ.' ವಸಾಹತುವಾದೀ ಧೋರಣೆಗಳ ಫಲವಾಗಿ ಆಫ್ರಿಕನ್ ಚರಿತ್ರೆಯುದ್ದಕ್ಕೂ ನಡೆದ ಗುಲಾಮರ ಮಾರಾಟ ಹಾಗೂ ಗುಲಾಮ ಮಾರುಕಟ್ಟೆ ವಸಾಹತೋತ್ತರದ ಜಾಗತೀಕರಣ ಘಟ್ಟದಲ್ಲಿ ಇನ್ನೊಂದು ಬಗೆಯಲ್ಲಿ ಮುಂದುವರಿಯುತ್ತದೆ. 'ದರೋಡೆ ಮತ್ತು ಕೊಲೆಗಳ ತನ್ನ ಮೇಲು ರಚನೆಯ ಮೂಲಕ ನಗರಗಳೆಂಬ ಮರುಭೂಮಿಗಳನ್ನು'ಸೃಷ್ಟಿಸುವ ಕಾರ್ಟೆಲ್, ಮ್ಯಾಮೊನ್ ಎಂಬ ರಕ್ತಪಿಪಾಸು ದೇವರನ್ನು ಪೂಜಿಸುತ್ತದೆ. ಅದು 'ಭೂಮಿಯನ್ನು ಬಂಜೆಯಾಗಿಸುತ್ತಾ' 'ಮದ್ದು ಗುಂಡುಗಳ ಕಾಡನ್ನು ಬಿತ್ತುತ್ತಾ' 'ಮೊನಚಾದ ಹಲ್ಲುಗಳ ಸರ್ಪಗಳನ್ನು ಬೆಳೆಯುತ್ತದೆ.' ಕಾದಂಬರಿಯ ನಿರೂಪಕ ಒಂದು ಸಂದರ್ಭದಲ್ಲಿ ಹೇಳುವಂತೆ, ಕಾರ್ಟೆಲ್ 'ಹಸುವನ್ನು ಬಿತ್ತಿ ಸರ್ಪಗಳನ್ನು ಬೆಳೆಯುತ್ತದೆ.' ಒಫೇಯಿ ಹೇಳುವಂತೆ, 'ನಾಡು ಸಹಜವಾಗಿ ಬೆಳೆಯಲು ಬಿಡದ ರೋಗವಾಗಿರುವ ಕಾರ್ಟೆಲ್, ವಿಷ ಬೀಜಗಳನ್ನು ಬಿತ್ತುತ್ತದೆ.' ಆಧುನಿಕ ಬಂಡವಾಳಶಾಹಿ ಹಾಗೂ ತಾಂತ್ರಿಕ ಪ್ರಗತಿಗಳೆರಡರ ವಿಚಿತ್ರ ಮಿಶ್ರಣವಾದ ಕಾರ್ಟೆಲ್‌ನ ಮುಖ್ಯಸ್ಥ ಬಟೋಕಿ ಹಾಗೂ ಅವನ ಐ.ಕ್ಯೂ (Intellectual Quota of his Directors) ತೈಲ ವ್ಯಾಪಾರ ಹಾಗೂ ಕೊಕೋವಾದ ನಿಯಂತ್ರಣದ ಮೂಲಕ ದೇಶದ ಮಾರುಕಟ್ಟೆಯನ್ನೂ, ಮಿಲಿಟರಿಯ ಮೂಲಕ ದೇಶದ ಜನತೆಯನ್ನೂ, ಪ್ರಚಾರದ ಮೂಲಕ ಜನರ ಪ್ರಜ್ಞೆಯನ್ನೂ ನಿಯಂತ್ರಿಸಲೆತ್ನಿಸುತ್ತದೆ. ಕಾರ್ಟೆಲ್‌ನ

ಮೂಲಮಂತ್ರವೇ ಹಿಂಸೆ ಎಂಬುದನ್ನು ಕಾರ್ಟೆಲ್‌ನ ಮುಖ್ಯಸ್ಥ ಬಟೋಕಿ ಥಣ್ಣಗೆ ಹೇಳುವ ಮಾತು ಸೂಚಿಸುತ್ತದೆ: 'ಒಂದಿಬ್ಬರನ್ನು ಕೊಂದು, ಹತ್ತು ಜನರನ್ನು ಕಂಬಿ ಹಿಂದೆ ತಳ್ಳಿದರೆ ಸಾಕು, ಉಳಿದವರು ಥಣ್ಣಗಾಗುತ್ತಾರೆ. ಆಗಲೂ ಆಗದಿದ್ದರೆ (ಆ ಹತ್ತಕ್ಕೆ) ಒಂದು ಸೊನ್ನೆ ಸೇರಿಸು. ಆಮೇಲೂ ಥಣ್ಣಗಾಗದಿದ್ದರೆ ಇನ್ನಷ್ಟು ಸಾವಿರ ಜನರನ್ನು ಮುಗಿಸಿದರಾಯಿತು.'

ಇಂಥ ಕಾರ್ಟೆಲ್, ಇರೆನ್.ಡಿ.ಅಲ್ಮೇರಾ ಹೇಳುವಂತೆ, 'ಪೆನ್ನು ಮತ್ತು ಹಣದ ಥೈಲಿಯ ವಿಕೃತ ಸಂಬಂಧದ ಫಲ. ಅದು ರಾಜಕೀಯ ಅಧಿಕಾರದ ಕೇಂದ್ರ ಹಾಗೂ ಆರ್ಥಿಕತೆಯ ಸರ್ವಸ್ವಾಮ್ಯ ಹೊಂದಿದ ದಮನಕಾರೀ ಶಕ್ತಿ'. ಕಾರ್ಟೆಲ್‌ನ ಬೆಂಬಲಕ್ಕಿರುವ ನ್ಯಾಯಾಂಗ, ಕಾರ್ಟೆಲ್‌ನ ಜೈಲು, ಅದು ಹಿಡಿದಿಟ್ಟಿರುವ ಅಸಹಾಯಕರು, ಕಡಿದುರುಳಿಸಿದ ತಲೆಗಳು... ಇವೆಲ್ಲಕ್ಕಿಂತ ಭೀಕರವಾದ ಅಂಶವೆಂದರೆ 'ಜನತೆ ಬದುಕುವ ಶಕ್ತಿಯನ್ನೇ ನಿರ್ನಾಮ ಮಾಡುವ ಅದರ ಪ್ರಯತ್ನ'. ಕಾರ್ಟೆಲ್ ವಿರುದ್ಧ ಅಯೇರೋದ ಜನರನ್ನು ಸಂಘಟಿಸುವ ಒಫೇಯಿ ಕಾರ್ಟೆಲ್‌ನ ಪ್ರಚಾರಾಧಿಕಾರಿಯಾಗಿಯೇ ಕಾರ್ಟೆಲ್ ವಿರುದ್ಧ ಬುಡಮೇಲು ಕೃತ್ಯವನ್ನಾರಂಭಿಸುತ್ತಾನೆ. ಒಫೇಯಿ ಕಾರ್ಟೆಲ್‌ನ ಪ್ರಚಾರಕ್ಕಾಗಿ ಬರೆಯುವ ಹಾಡು ಸೂಕ್ಷ್ಮವಾಗಿ ಕಾರ್ಟೆಲ್‌ನ ಮಾರಕ ಗುಣಗಳನ್ನು ಬಯಲಿಗೆಳೆಯುತ್ತದೆ:

> ಅವರು ಕೋಕೋ ಮರಗಳ ಹಾಲು ಕರೆದರು, ಅವರು ಜೇನುಕಿತ್ತರು
> ಹೊನ್ನು ದೋಚಿದರು, ಅವರು ಮರಗಳ ನೆತ್ತರು ಹರಿಸಿದರು. ಮುದಿ
> ಯಾದವು ಮರಗಳು ಬಿರಬಿರನೆ. ನಾಳೆಯ ನಾಡಿಗೆ ಹಸುರಿಲ್ಲ, ನಾಳೆಯ
> ನಾಡಿಗೆ ಹೊನ್ನಿಲ್ಲ...

ವಸಾಹತೋತ್ತರ ಆಫ್ರಿಕಾದ ದೇಶಗಳಲ್ಲಿ ಜಾಗತೀಕರಣದ ನವವಸಾಹತುಶಾಹಿ ಸಾಧನಗಳಾದ ಬಹುರಾಷ್ಟ್ರೀಯ ಕಂಪನಿಗಳ ರೂಪಕ ಈ ಕಾರ್ಟೆಲ್ ಸಂಸ್ಥೆ. ಎಲ್ಲ ರಂಗಗಳಿಗೂ ಚಾಚಿಕೊಳ್ಳಲಾರಂಭಿಸುವ ಕಾರ್ಟೆಲ್ ಎಂಬುದು 'ವಿಷಮಯ ಗಾಯವೊಂದರ ಮೊಳಕೆ' ಎಂಬುದು ಒಫೇಯಿಗೆ ಗೋಚರವಾಗುತ್ತಾ ಹೊಗುತ್ತದೆ. 'ಅದು ಸೋಕಿದ ಮನುಷ್ಯನಿಗೆ ಸಾವು ಖಾತ್ರಿ... ಆದರೆ ಹೀಗೆ ಲೆಕ್ಕಕ್ಕೆ ಸಿಕ್ಕುವ ಸಾವುಗಳಿಗಿಂತ ಮುಖ್ಯವಾಗಿ ಭೂಮಿಯ ಆಳದಲ್ಲಿ ಅದು ಆರಂಭಿಸಿರುವ ನಿರ್ನಾಮದ ಪ್ರಕ್ರಿಯೆ, ಪರಿಸರ ಹಾಗೂ ಮಾನವ ಜೀವಿಗಳ ಮೇಲೆ ಅದು ನಡೆಸಿರುವ ಹಲ್ಲೆ ಮರಣಾಂತಿಕವಾದದ್ದು'. ಪರಿಸರದ ಮೇಲಿನ ಹಲ್ಲೆ ಒಂದು ಸಂಸ್ಕೃತಿಯ ವಿನಾಶಕ್ಕೆ ಕಾರಣವಾಗುವುದನ್ನು ಹಾಗೂ ಮಾನವನ ಬದುಕಿಗೆ ತರುವ ದುರಂತಗಳನ್ನು ಷೋಯಿಂಕಾ ಸೂಚಿಸುತ್ತಿದ್ದಾನೆ. ಹೀಗೆ ಆಧುನಿಕ ಆಫ್ರಿಕಾದ ದಿಕ್ಕನ್ನು ನಿರ್ಧರಿಸುವ ಕಾರ್ಟೆಲ್ ಎಂಬ ವ್ಯವಸ್ಥೆಯ ಭೀಕರ ರೂಪ ಅದು ಅಯೇರೋದ ಮೇಲೆ ನಡೆಸುವ ದಾಳಿಯಲ್ಲಿ ಹಾಗೂ ಶೇಜ್ ಡ್ಯಾಮ್ ನರಮೇಧದಲ್ಲಿದೆ. ಅರವತ್ತರ ದಶಕದ ಕೊನೆಯಲ್ಲಿ ನೈಜೀರಿಯಾದ ಅಂತರ್ಯುದ್ಧದ ಸಮಯದಲ್ಲಿ ಸಹಸ್ರಾರು ಇಬೋ ಜನಾಂಗೀಯರ ಹತ್ಯೆ ಹಾಗೂ ಅದರ ಹಿಂದಿನ ನವವಸಾಹತುಶಾಹಿ ಶಕ್ತಿಗಳ ಕತೆಯನ್ನೂ ಈ ಭಾಗ ಹೇಳುತ್ತದೆ. ಇಂಥ ರಾಜ್ಯದಲ್ಲಿ 'ತಾನು ಹುಚ್ಚುನಾಯಿಯಾಗಿ ಬಿಡುವ

ದುಃಸ್ವಪ್ನವೊಂದು' ಒಫೇಯಿಯನ್ನು ಸದಾ ಕಾಡುತ್ತಾ ಹೋಗುವುದು 'ದಿ ಇಂಟರ್ ಪ್ರಿಟರ್ಸ್' ಕಾದಂಬರಿಯ ಸೆಕೋನಿ ಹುಚ್ಚಾಸ್ಪತ್ರೆಗೆ ಸೇರುವುದರ ಇನ್ನೊಂದು ರೂಪದಂತೆಯೇ ಕಾಣುತ್ತದೆ. ಸೆಕೋನಿಯ 'ಹುಚ್ಚು' ವಸಾಹತೋತ್ತರ ಆಫ್ರಿಕನ್ ಸಮಾಜ ಅಸಹಾಯಕ ಸೂಕ್ಷ್ಮಜ್ಞರಲ್ಲಿ ಸೃಷ್ಟಿಸಿದ ರೋಗವೂ ಹೌದು.

ಅಚೀಬೆಯ 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ'ದ ಮಿಲಿಟರಿ ಸರ್ವಾಧಿಕಾರ ಸೃಷ್ಟಿಸುವ ಹಿಂಸೆಗಿಂತ ಭಿನ್ನವಾದ, ಅಗೋಚರವಾದ, ಅತಿ ಸೂಕ್ಷ್ಮವಾದ ಹಿಂಸೆಗಳನ್ನು ಕಾರ್ಟೆಲ್ ಎಂಬ ಬಹುರಾಷ್ಟ್ರೀಯ ಕಂಪನಿ ಸೃಷ್ಟಿಸುತ್ತದೆ. ಇದು ಕಾರ್ಟೆಲ್ ಬಂಧಿಸಿಟ್ಟ ತನ್ನ ಗೆಳತಿ ಇರಿಯಿಸೆಯನ್ನು ಹುಡುಕಿಕೊಂಡು ಒಫೇಯಿ ಹೋಗುವಾಗ ಕಾಣುವ ಜೈಲಿನ ಚಿತ್ರದಲ್ಲಿ ಎದ್ದು ಕಾಣುತ್ತದೆ. ಕಾರ್ಟೆಲ್‌ನ ಶಕ್ತಿ ಅದೆಷ್ಟು ಭಯಾನಕವಾದದ್ದೆಂದರೆ ಮಸೀದಿ, ಚರ್ಚು, ದೇವಸ್ಥಾನಗಳೆಲ್ಲದರ ಶಕ್ತಿಯನ್ನೂ ಅದು ಬಲಹೀನಗೊಳಿಸಿಬಿಟ್ಟಿದೆ. ಚರ್ಚೊಂದು ಜೈಲಾಗಿ ಪರಿವರ್ತಿತಗೊಳ್ಳುವ ದೃಶ್ಯ ಈ ದೃಷ್ಟಿಯಿಂದ ಪ್ರಾತಿನಿಧಿಕವಾದದ್ದು. ಇಂಥ ಹಿಂಸೆಯನ್ನು ಪ್ರತಿಹಿಂಸೆಯಿಂದ ಮಾತ್ರ ಮುಖಾಮುಖಿಯಾಗಬಹುದೆಂಬ ಕಾದಂಬರಿಯ ಎರಡು ಮುಖ್ಯ ಪಾತ್ರಗಳಾದ ಒಫೇಯಿ ಹಾಗೂ ಡೆಂಟಿಸ್ಟರ ಅಂತಿಮ ನಿಲುವು ಹಿಂಸೆಯ ಸಿಡಿಮದ್ದಿನ ಮೇಲೆ ನಿರ್ಮಿತವಾದ ಮಿಲಿಟರಿ ರಾಜ್ಯಗಳಲ್ಲಿ ಹುಟ್ಟುವ ತಾರ್ಕಿಕ ಕೊನೆ ಕೂಡ. ವಸಾಹತೋತ್ತರ ಸಮಾಜಗಳ ಅವನತಿಗೆ ಉತ್ತರವಾಗಿ ಕಂಡುಕೊಳ್ಳಲಾಗುವ ಹಲವು ಮಾರ್ಗಗಳಲ್ಲಿ ಈ ಪ್ರತಿಹಿಂಸೆಯ ಮಾರ್ಗ ಕುರಿತ ವಿಸ್ತೃತ ಚರ್ಚೆ ಮುಂದಿನ ಭಾಗದಲ್ಲಿದೆ.

**ಹಿಂಸೆ, ಪ್ರಜಾಪ್ರಭುತ್ವ ಹಾಗೂ ವರ್ಗಸಂಘರ್ಷ**

ಸ್ವಾತಂತ್ರ್ಯ ಬಂದ ಕೆಲವೇ ದಶಕಗಳಲ್ಲಿ 'ವಸಾಹತು ಸುವರ್ಣಯುಗ'ದ ಹಿರಿಮೆಯನ್ನು ಕೀರ್ತಿಸುವ ದುರ್ಗತಿಯನ್ನೆದುರಿಸಿದ ಆಫ್ರಿಕನ್ ಸಮಾಜಗಳಲ್ಲಿ ಆಧುನಿಕ ಶಿಕ್ಷಣ ಪಡೆದ ಒಂದು ವರ್ಗ ಭ್ರಮನಿರಸನದ ಸ್ಥಿತಿಯನ್ನು ಬದಲಿಸುವ ಹೋರಾಟವನ್ನೂ ಆರಂಭಿಸುತ್ತದೆ. ಇಂಥ ಪ್ರಯತ್ನಗಳು ಹಲವೆಡೆ ಸೀಮಿತವೆಂಬಂತೆ ಕಂಡರೂ ವಸಾಹತೋತ್ತರ ಸಮಾಜಗಳ ಮುಖ್ಯ ಹೋರಾಟಗಳನ್ನು ಈ ವರ್ಗವೇ ಕೆಲವು ಸಲ ಪುಟ್ಟ ಗುಂಪುಗಳ ಮೂಲಕ, ಹಲವೊಮ್ಮೆ ಬಹುಸಂಖ್ಯಾತ ಜಗತ್ತಿನ ಸಾತ್ತ್ವಿಕ ಸಿಟ್ಟನ್ನು ಬಡಿದೆಬ್ಬಿಸುತ್ತಾ ರೂಪಿಸುತ್ತದೆ. ಈ ಹಿನ್ನೆಲೆಯಲ್ಲಿ ಈವರೆಗೆ ಚರ್ಚಿಸಿದ ವಿವಿಧ ಆಫ್ರಿಕನ್ ಕಾದಂಬರಿಗಳ ಓಡಿಲಿ ಸಾಮುಲು ಹಾಗೂ ಮ್ಯಾಕ್ಸ್, ಇಕೆಮ್, ಕ್ರಿಸ್, ಬೀಟ್ರಿಸ್, ಸ್ಯಾಗೋ, ಒಫೇಯಿ ಮುಂತಾದ ಪಾತ್ರಗಳು ಆಫ್ರಿಕನ್ ಸಮಾಜದ ಒಳಗಿನ ವಸಾಹತೋತ್ತರ ಹೋರಾಟಗಳ ಕೆಲವು ಮುಖ್ಯ ಮಾದರಿಗಳನ್ನು ಪ್ರತಿನಿಧಿಸುತ್ತವೆ.

'ಎ ಮ್ಯಾನ್ ಆಫ್ ದಿ ಪೀಪಲ್'ನ ಓಡಿಲಿ ಸಾಮುಲು, ಮ್ಯಾಕ್ಸ್‌ರಂಥವರು ಚುನಾವಣೆಯ ಮೂಲಕವೇ ವ್ಯವಸ್ಥೆಯನ್ನು ಸರಿಯಾದ ಹಾದಿಗೆ ಒಯ್ಯಬಹುದೆಂದು ನಂಬಿ ಹೊರಡುತ್ತಾರೆ. ಈ ದಿಕ್ಕಿನಲ್ಲಿ ಮತ್ತೊಂದು ಬಗೆಯ ಪ್ರಯತ್ನ 'ಆ್ಯಂಟ್‌ಹಿಲ್ಸ್ ಆಫ್

ದಿ ಸವನ್ನಾ'ದಲ್ಲೂ ಇದೆ. ಇದೇ ಕಾದಂಬರಿಯ ಇಕೆಮ್, ಕ್ರಿಸ್ಟೋಫರ್‌ರಂತೆ, 'ಸೀಸನ್ ಆಫ್ ಅನೋಮಿ'ಯ ಒಫೇಯಿ ಕೂಡ ಏಕಾಂಗಿ ಹೋರಾಟಗಳಿಂದ ಸಾಮೂಹಿಕ ಹೋರಾಟಗಳತ್ತ ತೆರಳುವ ಅನಿವಾರ್ಯತೆಯನ್ನು ಗ್ರಹಿಸುತ್ತಾನೆ. ಇವೆಲ್ಲದರ ನಡುವೆ ಆಫ್ರಿಕನ್ ಸಮಾಜದ ಈ ಅವನತಿಯನ್ನು ಕೊನೆಗೊಳಿಸಲು ಹಿಂಸಾಮಾರ್ಗವೇ ಉತ್ತರ ಎಂಬಂಥ ನಂಬಿಕೆಗಳೂ ಹುಟ್ಟಲಾರಂಭಿಸುತ್ತವೆ. 'ಎ ಮ್ಯಾನ್ ಆಫ್ ದಿ ಪೀಪಲ್'ನ ಯೂನಿಸ್, 'ಸೀಸನ್ ಆಫ್ ಅನೋಮಿ'ಯ ಡೆಂಟಿಸ್ಟ್ ಮತ್ತು ಒಫೇಯಿಯಂಥವರಲ್ಲಿ ಇಂಥ ಹಿಂಸಾ ಮಾರ್ಗ ಕುರಿತ ಸಿದ್ಧಾಂತಗಳು ಕ್ರಿಯೆಯಾಗಿ ರೂಪುಗೊಳ್ಳಲಾರಂಭಿಸುತ್ತವೆ. 'ಎ ಮ್ಯಾನ್ ಆಫ್ ದಿ ಪೀಪಲ್' ಕಾದಂಬರಿಯ ಕೊನೆಯ ಭಾಗದಲ್ಲಿ ಚೀಫ್ ಕೊಕೋನೆದುರು ಚುನಾವಣೆಗೆ ನಿಂತ ಮ್ಯಾಕ್ಸ್‌ನ ಮೇಲೆ ಕೊಕೋನ ಜೀಪು ನುಗ್ಗಿ ಕೊಲ್ಲು ವುದನ್ನು ಕಣ್ಣೆದುರೇ ಕಾಣುವ ಯೂನಿಸ್‌ಗೆ ಕೊಕೋನ ಮೇಲೆ ಗುಂಡು ಹಾರಿಸುವುದನ್ನು ಬಿಟ್ಟು ಬೇರೆ ಮಾರ್ಗವೇ ಕಾಣದಂತಿರುವುದು ಸಹಜ. 'ಅದು ಗೆಳೆಯನ ಸಾವಿನ ವಿರುದ್ಧ ಸೇಡು ತೀರಿಸಿಕೊಳ್ಳುವ ಏಕೈಕ ಮಾರ್ಗವಾಗಿತ್ತು' ಎಂದು ಕಾದಂಬರಿಯ ನಿರೂಪಕ ಯೂನಿಸ್‌ಳ ಸ್ಫೋಟವನ್ನು ಸಮರ್ಥಿಸುತ್ತಾನೆ.

ಆದರೆ, ಅಚೀಬೆಯ ಕಾದಂಬರಿಯ ಈ ವ್ಯಗ್ರ ನಿಲುವಿಗೂ ಷೋಯಿಂಕಾನ 'ಸೀಸನ್ ಆಫ್ ಅನೋಮಿ' ಖಚಿತ ತಾತ್ವಿಕ ನೆಲೆಗಟ್ಟಿನ ಮೂಲಕ ಪ್ರತಿಪಾದಿಸುವ 'ಪ್ರತಿಹಿಂಸೆ'ಗೂ ವ್ಯತ್ಯಾಸವಿದೆ. ನಿರ್ವಸಾಹತೀಕರಣ ಘಟ್ಟದಲ್ಲಿ ಫ್ಯಾನನ್ ಅಥವಾ ಸಾರ್ತರ್ ಹೇಳುವ 'ಹೊಸ ಸೃಷ್ಟಿಯ ಹಿಂಸೆ'ಯ (regenarative violence) ಮಾದರಿ ಇದು. ಎಡಪಂಥೀಯ ಉಗ್ರಗಾಮಿ ಪಂಥಗಳು ಹಾಗೂ ಲೆನಿನ್ ಪ್ರತಿಪಾದಿಸಿದ ಮಾದರಿಯ 'ಸೃಜನಶೀಲ ಹಿಂಸೆ'ಯ ಬಳಕೆಯನ್ನು 'ಸೀಸನ್ ಆಫ್ ಅನೋಮಿ' ಕಾದಂಬರಿಯಲ್ಲಿ 'ಡೆಂಟಿಸ್ಟ್' ಎಂದೇ ಕರೆಯಲಾಗುವ ಡೆಮಾಕಿನ್ ಪ್ರತಿಪಾದಿಸುತ್ತಾನೆ. ಅವನ ಪ್ರಕಾರ, ಕೊಳೆತ ಹಲ್ಲೊಂದು ಇಡೀ ದಂತ ಪಂಕ್ತಿಯನ್ನೇ ಕೊಳೆಯುವಂತೆ ಮಾಡುತ್ತದೆ. ಅಂದರೆ ವ್ಯವಸ್ಥೆಯ ಒಂದು ಅಂಗಕ್ಕೆ ತಗುಲಿದ ರೋಗ ಅದರ ಉಳಿದ ಅಂಗಗಳನ್ನೂ ಭ್ರಷ್ಟಗೊಳಿಸುತ್ತದೆ. ಆದ್ದರಿಂದ 'Extraction before infection' (ಸೋಂಕಿನ ಮುನ್ನ ಕೀಳುವುದು) -ಇದು ಅವನ ತರ್ಕ. ಬಹುರಾಷ್ಟ್ರೀಯ ಕಂಪನಿಯಾದ ಕಾರ್ಟೆಲ್‌ನ ದಮನಕ್ಕೆ ಪ್ರತಿಯಾದ 'ರಕ್ಷಣಾತ್ಮಕ ಹಿಂಸೆ' ಇದು ಎನ್ನುವ 'ಡೆಂಟಿಸ್ಟ್' ಕೊಲ್ಲುವ ಮಾದರಿಯೊಂದನ್ನು ಸಿದ್ಧಪಡಿಸುತ್ತಾನೆ: 'ಕೊಲೆ ಮಾಡುವ ಕರಾರುವಾಕ್ಕಾದ ಮಾದರಿಯೊಂದನ್ನು ನಾವೀಗ ಹುಟ್ಟು ಹಾಕಬೇಕು. ನಿಜವಾದ ಖದೀಮರು ಯಾರೆಂಬುದನ್ನು ಕಂಡು ಹಿಡಿದು ಅವರನ್ನು ಮುಗಿಸಬೇಕು. ಇದು ತೀರ ಸರಳವಾದ ಕೆಲಸ. ಹಾವನ್ನು ನಿರುಪದ್ರವಿಯನ್ನಾಗಿ ಮಾಡಲು ಅದರ ತಲೆಯ ಮೇಲೆ ಬಾರಿಸುವುದೊಂದೇ ಮಾರ್ಗ... ಕೊಲ್ಲುವ ಕಲೆಯಲ್ಲಿ ತರಬೇತಿ ಪಡೆದವನು ನಾನು; ಆ ಕಲೆಯನ್ನು ಸಮಾಜದ ಪರವಾಗಿ ಬಳಸಿಕೊಳ್ಳುತ್ತಿದ್ದೇನಷ್ಟೇ'.

ಆದರೆ, ವ್ಯವಸ್ಥೆಯ ಅಸ್ತ್ರಗಳ ಮೂಲಕವೇ ಅದನ್ನು ಬುಡಮೇಲುಗೊಳಿಸಬಯಸುವ, ಕಾರ್ಟೆಲ್ಲಿನ ಪ್ರಚಾರಕ್ಕಾಗಿ ರಚಿಸುವ ಜಾಹಿರಾತಿನ ಹಾಡುಗಳನ್ನು ಅದರ ವಿರುದ್ಧವೇ ತಿರುಗುವಂತೆ ಮಾಡಹೊರಡುವ 'ಕಪ್ಪು ಆರ್ಫಿಯಸ್' (ಆರ್ಫಿಯಸ್: ಗ್ರೀಕ್ ಪುರಾಣಗಳಲ್ಲಿ ಬರುವ ಕವಿ-ಸಂಗೀತಗಾರ.) ಒಫೇಯಿಗೆ ಡೆಂಟಿಸ್ಟನ ಮಾರ್ಗ ಕುರಿತು ಹಲವು ಅನುಮಾನಗಳಿವೆ. ಆದರೂ, ಅವನು ವ್ಯವಸ್ಥೆಯ ಹಿಂಸೆಯ ಭೀಕರ ಸ್ವರೂಪವನ್ನರಿಯುತ್ತಾ ಹೋದಂತೆ, ಡೆಂಟಿಸ್ಟ್ ಸೂಚಿಸುವ ಮಾರ್ಗವೇ ಬಿಡುಗಡೆಯ ಏಕೈಕ ಮಾರ್ಗವಾಗಿ ಕಾಣುತ್ತದೆ. ಆದ್ದರಿಂದಲೇ ಏಷಿಯಾದ ಅನುಭಾವಿ ತೈಲಾಳ ವಿಧಿವಾದ, ಪರವಶತೆ, ಶಾಂತಿಮಾರ್ಗ ಕುರಿತು ಒಫೇಯಿಗೆ ಅದಮ್ಯ ಆಕರ್ಷಣೆ ಇದ್ದರೂ, ಹಿಂಸೆಯೂ ರೋಗವನ್ನು ಗುಣಪಡಿಸುವ ಸಾಧನವಾಗಬಲ್ಲದು ಎಂಬುದು ಅವನಿಗೆ ಖಾತ್ರಿಯಾಗ ತೊಡಗುತ್ತದೆ. ಅಯೇರೋದ ಹಿರಿಯ ಪಾಅಹಿಮೆಗೆ ಹಿಂಸೆಯ ಅನಿವಾರ್ಯತೆ ಕುರಿತು ಒಫೇಯಿ ಹೇಳುತ್ತಾನೆ: 'ಈ ಕಾಲದಲ್ಲಿ ಒಂದು ತತ್ತ್ವವನ್ನು ಬಿತ್ತಲು ಹೊರಡುವವರು ಸಸಿಯನ್ನು ರಕ್ಷಿಸುವ ಜವಾಬ್ದಾರಿಯನ್ನೂ ಹೊರಬೇಕು. ಹಾಗೆ ಸಸಿಯನ್ನು ರಕ್ಷಿಸಲು ಹಿಂಸಾಮಾರ್ಗ ಬಳಸಿದರೂ ತಪ್ಪಿಲ್ಲ'. ಆದರೆ ಈ ಮಾರ್ಗ ಕುರಿತು ಅನುಮಾನಗಳನ್ನುಳ್ಳ ಪಾ ಅಹಿಮೆ ಒಫೇಯಿಯನ್ನು ಎಚ್ಚರಿಸುತ್ತಾನೆ: 'ಹೊಸ ತತ್ತ್ವವನ್ನು ಬಿತ್ತುವ ಮುನ್ನ, 'ಗಾಳಿಯನ್ನು ಬಿತ್ತಿ ಬಿರುಗಾಳಿಯನ್ನು ಬೆಳೆದಂತೆ' ಎಂಬ ಗಾದೆ ನಿನ್ನ ನೆನಪಲ್ಲಿರಲಿ'. ಈ ಮಾತಿಗೆ ಒಫೇಯಿಯ ಪ್ರತಿಕ್ರಿಯೆ ಇದು: 'ಬಿರುಗಾಳಿಯನ್ನು ಬಿತ್ತಿದ್ದು ಕಾರ್ಟೆಲ್. ಆ ಬಿರುಗಾಳಿ ಅದರ ವಿರುದ್ಧವೇ ತಿರುಗುವಂತೆ ಮಾಡದಿದ್ದರೆ ನಮ್ಮ ಕತೆ ಮುಗಿದಂತೆಯೇ'.

ಒಫೇಯಿಯ ಹಿಂಸೆಯ ಹಿಂದೆ ನಿರ್ದಿಷ್ಟ ರೀತಿಯ ಸಮತಾ ಸಮಾಜವೊಂದರ ಸೃಷ್ಟಿಯ ಹಂಬಲವಿದೆ. ವಿವಿಧ ವಸಾಹತೋತ್ತರ ದೇಶಗಳಲ್ಲಿ ಸಂಘಟಿತ ಹಿಂಸೆಯ ಪರವಾಗಿರುವ ಅನೇಕ ಗುಂಪುಗಳ ನಂಬಿಕೆ ಇದು. ಹಿಂಸೆಯ ಮೂಲಕ ದಮನಕಾರಿ ಶಕ್ತಿಗಳನ್ನು ನಿರ್ನಾಮ ಗೊಳಿಸಿದ ಬಳಿಕ ಆಧುನಿಕಪೂರ್ವ ಆಫ್ರಿಕಾದ ಕೆಲವು ಮುಖ್ಯ ಮೌಲ್ಯಗಳನ್ನೊಳಗೊಂಡ ಅಯೇರೋ ಪ್ರತಿನಿಧಿಸುವ ಸಮಾಜವಾದೀ ಸಮಾಜದ ನಿರ್ಮಾಣದ ಹಂಬಲವನ್ನು 'ಸೀಸನ್ ಆಫ್ ಅನೋಮಿ' ಮಂಡಿಸುತ್ತದೆ. ವಿಮರ್ಶಕ ಚಿಡಿ ಅಮೂಟ ಹೇಳುವಂತೆ, 'ಒಫೇಯಿಯ ಕ್ರಾಂತಿಕಾರಕ ಚಟುವಟಿಕೆಗಳು ಅಯೇರೋ ಸಮಾಜದ ನೆಲೆಗಳನ್ನು ಮರಳಿ ಶೋಧಿಸಲೆತ್ನಿಸುತ್ತವೆ ಹಾಗೂ ಅವನ್ನು ಸಮಕಾಲೀನ ಆಫ್ರಿಕಾದ 'ಅರಾಜಕ ಋತು'ವಿಗೆ ಉತ್ತರವೆಂಬಂತೆ ಕಾಣುತ್ತವೆ.' ಒಫೇಯಿ ಯೊರೂಬಾ ಪುರಾಣಗಳ ಓಗುನ್ ದೇವತೆಯ ಮಾನವ ರೂಪ. ಷೋಯಿಂಕಾನ ಪ್ರಕಾರ, 'ಓಗುನ್ ಕೇವಲ ಯುದ್ಧಾಕಾಂಕ್ಷಿ ದೇವತೆಯಲ್ಲ; ಅವನು ಆಧುನಿಕ ಅರ್ಥದಲ್ಲೂ ಕ್ರಾಂತಿಕಾರಿ ದೇವತೆ.' ಓಗುನ್ ದೇವತೆಯ ಒಂದು ಮುಖ ಪ್ರತಿನಿಧಿಸುವ ಹಿಂಸೆಯನ್ನು ಒಫೇಯಿ-ಡೆಂಟಿಸ್ಟರ ಜೋಡಿ ಬದಲಾವಣೆಗೆ ಅತ್ಯಗತ್ಯವಾದ ಸಿದ್ಧಾಂತವನ್ನಾಗಿ ಸ್ವೀಕರಿಸುತ್ತದೆ. ಓಗುನ್ ದೇವತೆಯಂತೆ ಈ ಜೋಡಿ ಕೂಡ ಹಿಂಸೆ, ರಕ್ತಪಾತಗಳನ್ನು ಹೊಸ ಸೃಷ್ಟಿಯೊಂದರ ಆರಂಭದ ಘಟ್ಟವೆಂಬಂತೆ

ಕಾಣುತ್ತದೆ. ಆದರೆ, ಓಗುನ್ ದೇವತೆಯ ಪ್ರೇರಣೆ ಇಲ್ಲಿರುವಂತೆ ಕಂಡರೂ ಇದು ಎಡಪಂಥೀಯ ರಾಜಕಾರಣದಲ್ಲಿ ಕಾಣಬರುವ ಸೃಷ್ಟಿಶೀಲ ಹಿಂಸೆಯ ಪ್ರತಿಪಾದನೆಯ ಒಂದು ಮಾದರಿ ಎಂಬುದನ್ನು ಮರೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಪಶ್ಚಿಮ ಆಫ್ರಿಕಾದ ವಸಾಹತೋತ್ತರ ಘಟ್ಟದಲ್ಲಿ ಅಚೀಬೆ ಹಾಗೂ ಷೋಯಿಂಕಾರ ಎರಡು ಕೃತಿಗಳಲ್ಲಿ (ಅನುಕ್ರಮವಾಗಿ 'ಎ ಮ್ಯಾನ್ ಆಫ್ ದಿ ಪೀಪಲ್', 'ಸೀಸನ್ ಆಫ್ ಅನೋಮಿ' ಕಾದಂಬರಿಗಳಲ್ಲಿ) ಪ್ರಭುತ್ವದ ಹಿಂಸೆಗೆ ಪ್ರತಿಹಿಂಸೆಯೇ ಅನಿವಾರ್ಯ ಉತ್ತರವೆಂಬಂತೆ ಕಂಡಿರುವುದು ಗಮನಾರ್ಹ. ಹೀಗೆ ಸೃಜನಶೀಲ ಹಿಂಸೆ, ಇಕೆಮ್ ಹಾಗೂ ಕ್ರಿಸ್ಟೋಫರ್‌ರಂಥವರು ಆರಂಭಿಸಲೆತ್ನಿಸುವ ಸಾಮೂಹಿಕ ಸಂಘಟನೆ, ಮ್ಯಾಕ್ಸ್‌ನ ಚುನಾವಣಾ ರಾಜಕಾರಣ ಮೊದಲಾದ ಅಂಶಗಳ ಮೂಲಕ ವಸಾಹತೋತ್ತರ ಆಫ್ರಿಕನ್ ಸಮಾಜಗಳು ತಮ್ಮ ಅವನತಿಯಿಂದ ಪಾರಾಗಲು ಕೆಲವು ಮಾರ್ಗಗಳನ್ನು ಕಂಡುಕೊಳ್ಳುತ್ತವೆ. ಈ ಉತ್ತರಗಳಂತೆಯೇ, ಎಗ್ವೋ ಅಥವಾ ಕೋಲಾ ಮುಂತಾದವರ ಅನುಭಾವೀ ಮಾರ್ಗಗಳೂ-ಅವು ವಸಾಹತೋತ್ತರ ಅವನತಿಗೆ ತತ್‌ಕ್ಷಣದ ಉತ್ತರಗಳಲ್ಲದಿದ್ದರೂ-ಆಕರ್ಷಕವಾಗಿ ಕಾಣುತ್ತವೆ. ಎಗ್ವೋ ಹಾಗೂ ಕೋಲಾ ಇಬ್ಬರಲ್ಲೂ ಕಾಣುವ ಪೌರಾಣಿಕ ಹಾಗೂ ಆಧ್ಯಾತ್ಮಿಕ ಆಫ್ರಿಕಾಕ್ಕೆ ಮರಳುವ ಪ್ರಯತ್ನಗಳು, 'ಸೀಸನ್ ಆಫ್ ಅನೋಮಿ'ಯ ಒಫೇಯಿಗೆ ತೈಲಾಳ ಅನುಭಾವ ಕುರಿತ ಸೆಳೆತಗಳು ಕೂಡ ಒಂದು ದೃಷ್ಟಿಯಿಂದ 'ಇರುವ' ಸ್ಥಿತಿಯನ್ನು ಮೀರಿ, 'ಆಗುವ', 'ರೂಪುಗೊಳ್ಳುವ' ಪ್ರಯತ್ನಗಳು.

ವಸಾಹತೋತ್ತರ ಅವನತಿಯ ಘಟ್ಟದಲ್ಲಿ ಆಫ್ರಿಕನ್ ಕಾದಂಬರಿಗಳ ಪಾತ್ರಗಳು ತಮ್ಮ ಅನಾಧುನಿಕ ಅಥವಾ ದೇಶೀ ಸಮಾಜದ ಮೌಲ್ಯಗಳತ್ತ ಆಸೆಗಣ್ಣಿನಿಂದ ತಿರುಗಿ ನೋಡುತ್ತಲೂ ಇರುತ್ತವೆ. ಜೊತೆಗೆ, ಆಫ್ರಿಕನ್ ಕಾದಂಬರಿಗಳು ವಸಾಹತೋತ್ತರದಲ್ಲಿ ಹೊಸ ಆಕಾರ ಪಡೆಯುತ್ತಿರುವ, ಹೊಸ ಜವಾಬ್ದಾರಿಗಳನ್ನು ನಿರ್ವಹಿಸುತ್ತಿರುವ ಸ್ತ್ರೀಶಕ್ತಿಯ ಸಾಧ್ಯತೆಗಳನ್ನು ಕೂಡ ಚರ್ಚಿಸುತ್ತವೆ. 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ'ದ ಎಲಿವಾಳಂಥ ಅನಕ್ಷರಸ್ಥ ಮಹಿಳೆಯರ ಸ್ಥೈರ್ಯ; ಬೀಟ್ರಿಸ್, ಯೂನಿಸ್, ಇರಿಯಿಸೆ ರೀತಿಯ ಅಕ್ಷರಸ್ಥ ಹೆಣ್ಣುಗಳು ತಂತಮ್ಮ ಸಮಾಜಗಳ ಬಿಕ್ಕಟ್ಟಿನ ಗಳಿಗೆಗಳಲ್ಲಿ ಇಡುವ ದೃಢ ಹೆಜ್ಜೆಗಳು ವಸಾಹತೋತ್ತರ ಆಫ್ರಿಕನ್ ಸಮಾಜಗಳು ರೂಪುಗೊಳ್ಳುವ ನಿಟ್ಟಿನಲ್ಲಿ ಮಹತ್ತರ ಹೆಜ್ಜೆಗಳು. 'ಆ್ಯಂಟ್‌ಹಿಲ್ಸ್ ಆಫ್ ದಿ ಸವನ್ನಾ' ಕಾದಂಬರಿಯ ಕೊನೆಯ ಭಾಗದಲ್ಲಿ, ಕಂಗನ್ ದೇಶವನ್ನು ಬದಲಿಸುವ ಕನಸು ಹೊತ್ತು ಮಡಿದ ಇಕೆಮ್ ಹಾಗೂ ಕ್ರಿಸ್ಟೋಫರರ ಹೋರಾಟವನ್ನು ಮುಂದುವರಿಸುವ ಜವಾಬ್ದಾರಿಯನ್ನು ಹೊರಬೇಕಾದವರು ಎಲಿವಾ ಹಾಗೂ ಬೀಟ್ರಿಸ್ ಎಂಬ ಇಬ್ಬರು ಹೆಣ್ಣುಮಕ್ಕಳು ಎಂಬುದು ಅತ್ಯಂತ ಸಾಂಕೇತಿಕ. ತಮ್ಮ ಪ್ರಿಯಕರರನ್ನು ಕಳೆದುಕೊಂಡ ಎಲಿವಾ ಹಾಗೂ ಬೀಟ್ರಿಸ್ ಅಂಥ ಕತ್ತಲಿನಲ್ಲೂ ಕ್ರಿಯಾಶೀಲ ಚಿಂತಕ ಇಕೆಮ್‌ನ ಮಗುವಿಗೆ- 'ಬದುಕಿ ಉಳಿದ ಇಕೆಮ್‌ನ ತುಣುಕಿಗೆ'- ಇಡುವ ಹೆಸರು

‘ಅಮೆಚಿನಾ’: ಅಂದರೆ, ‘ಹಾದಿ ಎಂದೆಂದಿಗೂ ಮುಗಿಯದಿರಲಿ.’

ಇಂಥ ನಿರಂತರ ಕನಸುಗಾರರು ಮಾತ್ರ ವಸಾಹತೋತ್ತರ ಸಮಾಜಗಳ ಅವನತಿಯ ನಡುವೆಯೂ ಭರವಸೆಯ ಎಳೆಗಳನ್ನು ಹೆಕ್ಕಿಕೊಳ್ಳುತ್ತಾ ಮುನ್ನಡೆಯುತ್ತಿರುತ್ತಾರೆ. ‘ಸೀಸನ್ ಆಫ್ ಅನೋಮಿ’ ಕಾದಂಬರಿಯಲ್ಲಿ ವ್ಯವಸ್ಥೆಯ ಭೀಕರ ಹಿಂಸೆಯನ್ನೆದುರಿಸಿ ಕೊನೆಗೂ ತಾನು ರಕ್ಷಿಸುವ ಗೆಳತಿ ಮೇಲ್ನೋಟಕ್ಕೆ ನಿರ್ಜೀವ ಕೋಕೋ ಬೀಜದಂತೆ ಕಂಡರೂ ಒಳಗೇ ಚಿಗುರಲು ಹಾತೊರೆಯುತ್ತಿರುವ ಮೊಳಕೆಯಂತೆ ಒಫೇಯಿಗೆ ಗೋಚರಿಸುತ್ತಾಳೆ.

ಇವೆಲ್ಲ ಕನಸುಗಳು ಹಾಗೂ ಕಾಣ್ಕೆಗಳು ಆಫ್ರಿಕಾದ ವಸಾಹತೋತ್ತರ ಸಮಾಜಗಳು ತಮ್ಮ ದಿಕ್ಕೆಟ್ಟ ಸ್ಥಿತಿಗಳ ನಡುವೆ ಹುಡುಕುತ್ತಿರುವ ಹೊಸ ಮಾರ್ಗಗಳನ್ನು ಪ್ರತಿನಿಧಿಸುತ್ತವೆ. ಈ ಕನಸಿನ ‘ಹಾದಿ ಎಂದೆಂದಿಗೂ ಮುಗಿಯದಿರಲಿ’ ಎಂಬ ಷೋಯಿಂಕಾನ ಕಾದಂಬರಿಯ ನಿರೀಕ್ಷೆಯನ್ನು ಆಫ್ರಿಕನ್ ಸಮಾಜಗಳ ಬುದ್ಧಿಜೀವಿಗಳು, ಸೂಕ್ಷ್ಮ ಮನಸ್ಸಿನ ನಾಯಕರು, ಸಾಮಾನ್ಯರು ನಿರಂತರವಾಗಿ ಹೊತ್ತೊಯ್ಯುವಂತೆ ತೋರುತ್ತದೆ.

(ಟಿಪ್ಪಣಿ: ಈ ಸುದೀರ್ಘ ಬರಹದಲ್ಲಿ ಬಳಸಿರುವ ನೂರಾರು ಉಲ್ಲೇಖಗಳ ವಿವರಗಳನ್ನು ಸ್ಥಳಾಭಾವ ದಿಂದ ಇಲ್ಲಿ ಕೊಡಲಾಗಿಲ್ಲ. ಈ ಉಲ್ಲೇಖಗಳನ್ನು ಕುರಿತ ಕೊನೆ ಟಿಪ್ಪಣಿಗಳಿಗಾಗಿ ಆಸಕ್ತ ಓದುಗರು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿರುವ ಇದೇ ಲೇಖಕರ ‘ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ’ ಪುಸ್ತಕದಲ್ಲಿ ಕ್ರಮವಾಗಿ ಪು.ಸಂ. ೩೮-೪೦; ೧೦೯-೧೧೧; ೧೫೫-೧೫೭; ೧೮೭-೧೮೯; ೨೧೪-೨೧೫; ೨೭೫-೨೭೬ ಇವುಗಳನ್ನು ಗಮನಿಸಬಹುದು. ಇಲ್ಲಿ ಬಳಸಲಾದ ಕಾದಂಬರಿಗಳ ಹಾಗೂ ವಿವಿಧ ಸಿದ್ಧಾಂತಗಳ ಉಲ್ಲೇಖಗಳನ್ನು ಈ ಬರಹದ ಲೇಖಕರು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿಕೊಂಡಿದ್ದಾರೆ.)

೧೦

# ನೆಲ್ಸನ್ ಮಂಡೇಲಾ ಹೋರಾಟದ ಗಾಥೆ

## ರಂಜಾನ್ ದರ್ಗಾ

### ಪ್ರವೇಶ

೧೯೬೨ನೇ ನವೆಂಬರ್ ೭ರಿಂದ ದಕ್ಷಿಣ ಆಫ್ರಿಕಾದ ಕುಪ್ರಸಿದ್ಧ ಜೈಲುಗಳಲ್ಲಿದ್ದು ೧೯೯೦ನೇ ಫೆಬ್ರುವರಿ ೧೧ರಂದು ಬಿಡುಗಡೆ ಹೊಂದಿರುವ ನೆಲ್ಸನ್ ಮಂಡೇಲಾ 'ವಿಶ್ವಮಾನವ' ಆಗಿ ಬೆಳೆದಿದ್ದಾರೆ. ಜಗತ್ತಿನ ಎಲ್ಲಾ ಸ್ವಾತಂತ್ರ್ಯಪ್ರಿಯರ ನೆಚ್ಚಿನ ನಾಯಕರಾಗಿ ಕಂಗೊಳಿಸುತ್ತಿದ್ದಾರೆ. ಶಾಂತಿ, ಸಮಾನತೆ, ಸ್ವಾತಂತ್ರ್ಯ ಮತ್ತು ಮಾನವ ಘನತೆಯ ಪ್ರತೀಕವಾದ ನೆಲ್ಸನ್ ಮಂಡೇಲಾ ಅವರ ಚೈತನ್ಯವನ್ನು ಬಂಧಿಸುವಲ್ಲಿ ದಕ್ಷಿಣ ಆಫ್ರಿಕಾದ ಅಮಾನುಷ ವರ್ಣಭೇದ ನೀತಿಯ ಸರ್ಕಾರ ವಿಫಲವಾಯಿತು. ೨೮ ವರ್ಷಗಳ ಜೈಲುವಾಸ ಅವರ ಆತ್ಮಸ್ಥೈರ್ಯವನ್ನು ಕುಂದಿಸಲಿಲ್ಲ. ಕಷ್ಟಗಳ ಸಂಕೋಲೆಗಳಲ್ಲಿ ಸಿಕ್ಕ ಅವರ ಜನರಲ್ಲಿ ಅವರಿಗೆ ಇರುವ ವಿಶ್ವಾಸವನ್ನು ಕಡಿಮೆಗೊಳಿಸಲಿಲ್ಲ. ಪ್ರಜಾಪ್ರಭುತ್ವದಲ್ಲಿನ ನಂಬಿಕೆಯನ್ನು ನಾಶಪಡಿಸಲಿಲ್ಲ. ಹೋರಾಟದ ಹಾದಿಯನ್ನು ಬದಲಿಸಲಿಲ್ಲ. ಮಾನವೀಯತೆಯನ್ನು ಕದಲಿಸಲಿಲ್ಲ. ವಿಸ್ತಾರವಾದ ಜೈಲು ಗೋಡೆಗಳಿಂದ ಅವರ ಕೀರ್ತಿಯನ್ನು ತಡೆಯಲಿಕ್ಕಾಗಲಿಲ್ಲ. ಭಾರವಾದ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಅವರ ಹೋರಾಟದ ಸಂದೇಶಗಳನ್ನು ಬಚ್ಚಿಡಲಿಕ್ಕಾಗಲಿಲ್ಲ. ಜೀವಿತದಲ್ಲೇ ದಂತಕಥೆ ಆದ ಅವರ ಬದುಕು ಎಲ್ಲ ದೌರ್ಜನ್ಯಗಳನ್ನು ದಾಟಿ ಸ್ವಾತಂತ್ರ್ಯದೆಡೆಗೆ ಮುನ್ನಡೆಯಿತು. ಜಗತ್ತಿನ ಎಲ್ಲ ದೇಶಗಳ ಎಲ್ಲ ಜನಾಂಗಗಳ ಹೃದಯಗಳನ್ನು ತಟ್ಟಿತು. ಹೀಗಾಗಿ ಮಂಡೇಲಾ ಎಲ್ಲ ದೇಶಗಳ ಪ್ರಜೆ ಆಗಿದ್ದಾರೆ. ದಬ್ಬಾಳಿಕೆಯನ್ನು ನಿಗ್ರಹಿಸುತ್ತ ವಿಶ್ವಪ್ರೇಮವನ್ನು ಸಾರುವ ಶಕ್ತಿ ಆಗಿದ್ದಾರೆ.

* ದಲಿತ ಸಂಘರ್ಷ ಸಮಿತಿ ಕೋಲಾರದಿಂದ ೧೯೮೦ರಲ್ಲಿ ಪ್ರಕಟಗೊಂಡ ಶ್ರೀ ರಂಜಾನ ದರ್ಗಾ ಅವರ ನೆಲ್ಸನ್ ಮಂಡೇಲಾ ಎಂಬ ಕೃತಿಯನ್ನು ಯಥವತ್ತಾಗಿ ಬಳಸಿಕೊಳ್ಳಲಾಗಿದೆ. ಇದಕ್ಕೆ ಒಪ್ಪಿಗೆ ನೀಡಿದ ಲೇಖಕರಿಗೆ ಕೃಜ್ಞತೆಗಳು. -ಸಂ

ಈ ಕಪ್ಪು ಮನುಷ್ಯ ಇಡೀ ಜಗತ್ತನ್ನು ಹೇಗೆ ಆಕರ್ಷಿಸಿದ? ಈತ ಜೈಲಿಗೆ ಹೋದ ನಂತರ ಈ ಭೂಮಿಗೆ ಬಂದವರು ಈತನ ಚೈತನ್ಯಕ್ಕೆ ಸ್ಪಂದಿಸುತ್ತ ಜೀವವನ್ನೇ ಪಣಕ್ಕಿಟ್ಟು ವರ್ಣಭೇದ ನೀತಿಯ ವಿರುದ್ಧ ಹೋರಾಟ ಮಾಡಲು ಹೇಗೆ ಸಾಧ್ಯ? ದಬ್ಬಾಳಿಕೆಯನ್ನೇ ಕಾನೂನುಬದ್ಧಗೊಳಿಸಿದ ದಕ್ಷಿಣ ಆಫ್ರಿಕಾ ಸರ್ಕಾರ ಕೊನೆಗೂ ಈತನಿಗೆ ಜೀವಾವಧಿ ಶಿಕ್ಷೆ ವಿಧಿಸಲು ಸೋತ ಕಾರಣವೇನು? ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದು ಅವಶ್ಯವಾಗಿದೆ. ಈ ಉತ್ತರಕ್ಕಾಗಿ ದಕ್ಷಿಣ ಆಫ್ರಿಕಾದ ಭೂತ, ವರ್ತಮಾನ ಮತ್ತು ಭವಿಷ್ಯದ ಕಡೆ ಕಣ್ಣರಳಿಸಬೇಕಾಗಿದೆ.

ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿ ಮಾನವ ಚರಿತ್ರೆಯಲ್ಲಿ ಒಂದು ಕರಾಳ ಅಂಶವಾಗಿದೆ. ವಿಶ್ವವೇ ಅದನ್ನು ಕೈಬಿಡುವಂತೆ ಕರೆ ನೀಡಿದರೂ ಅಲ್ಲಿನ ಸರ್ಕಾರಕ್ಕೆ ಕೇಳಿಸುತ್ತಿಲ್ಲ. ಆದರೆ ಶತಮಾನಗಳಿಂದ ಹೆಪ್ಪುಗಟ್ಟಿದ ಕರಿಯ ರೋಷ ಈಗ ಉಕ್ಕಿ ಹರಿಯುತ್ತಿದೆ. ದಕ್ಷಿಣ ಆಫ್ರಿಕಾದಲ್ಲಿ ಇಂದು ಕರಿಯರ ಪ್ರತಿಭಟನೆ ಇಲ್ಲದ ಘಳಿಗೆ ಇಲ್ಲ. ಆಫ್ರಿಕಾ ಖಂಡದ ಹೆಬ್ಬಾಗಿಲು ಎಂದು ಕರೆಯಿಸಿಕೊಳ್ಳುವ ದಕ್ಷಿಣ ಆಫ್ರಿಕಾ ಇಡೀ ಖಂಡದಲ್ಲೇ ಶ್ರೀಮಂತ ದೇಶ. ಆದರೆ ಅಲ್ಲಿನ ಮೂಲ ನಿವಾಸಿಗಳು ಕಡುಬಡವರು. ಅಪಾರ್ಥೈಡ್(ವರ್ಣಭೇದ) ವ್ಯವಸ್ಥೆ ಮೂಲಕ ಅಲ್ಲಿನ ಬಿಳಿಯರು ದೇಶವನ್ನು ತಮ್ಮ ಕಪಿಮುಷ್ಟಿಯಲ್ಲಿ ಹಿಡಿದಿದ್ದಾರೆ. ಆಫ್ರಿಕಾ ಖಂಡದ ಕೆಳತುದಿಯಲ್ಲಿ ದಕ್ಷಿಣ ಆಫ್ರಿಕಾ ಇದೆ. ವಾಯುವ್ಯ ದಿಕ್ಕಿನ ಗಡಿಗೆ ಹೊಂದಿಕೊಂಡು ನಮೀಬಿಯಾ ಇದೆ. ಉತ್ತರಕ್ಕೆ ಬೋಟ್ಸ್ ವಾನಾ(ಬೆಚುವಾನಾಲ್ಯಾಂಡ್) ಮತ್ತು ಜಿಂಬಾಬ್ವೆ ದೇಶಗಳಿವೆ ಈಶಾನ್ಯ ಗಡಿಗೆ ಹೊಂದಿಕೊಂಡು ಮೊಜಾಂಬಿಕ್ ಇದೆ. ಪೂರ್ವಕ್ಕೆ ಸ್ವಾಜಿಲ್ಯಾಂಡ್ ಇದೆ. ದಕ್ಷಿಣ ಆಫ್ರಿಕಾ ಇಡೀ ಲೆಸೊತೋ (ಬಸುತೊಲ್ಯಾಂಡ್) ದೇಶವನ್ನು ಸುತ್ತುವರಿದಿದೆ. ೪,೭೧,೪೪೫ ಚದರ ಮೈಲಿ ವಿಸ್ತೀರ್ಣದ ದಕ್ಷಿಣ ಆಫ್ರಿಕಾದಲ್ಲಿ ಶೇ.೧೧.೧೬ರಷ್ಟು ಕೃಷಿ ಭೂಮಿ ಇದೆ. ಶೇ.೬೫.೪೦ರಷ್ಟು ಹುಲ್ಲುಗಾವಲಿದೆ. ಶೇ.೩.೪೦ರಷ್ಟು ಅರಣ್ಯವಿದೆ. ಶೇ.೨೦.೦೪ರಷ್ಟು ಇತರ ಭೂಮಿ ಇದೆ. ಶೇ.೧೧ರಷ್ಟು ವ್ಯವಸಾಯ ಯೋಗ್ಯ ಭೂಮಿ ಇದೆ. ೧೭೮೦ ಮೈಲಿಗಳಷ್ಟು ಉದ್ದದ ಕರಾವಳಿ ಪ್ರದೇಶವಿದೆ. ೩೯೯೦ ಮೈಲಿಗಳಷ್ಟು ಉದ್ದದ ಗಡಿ ಇದೆ. ದಕ್ಷಿಣ ಆಫ್ರಿಕಾ ಒಟ್ಟು ಜನಸಂಖ್ಯೆ ೩೫೭ ಲಕ್ಷ. ಅವರಲ್ಲಿ ೨೫೩ ಲಕ್ಷ ಕರಿಯರು, ೬೦ ಲಕ್ಷ ಬಿಳಿಯರು, ೩೨ ಲಕ್ಷ ಮಿತ್ರವರ್ಣೀಯರು ಮತ್ತು ೧೧ ಲಕ್ಷ ಏಷ್ಯನ್ನರು ಇದ್ದಾರೆ. ಏಷ್ಯನ್ನರಲ್ಲಿ ೩.೫ ಲಕ್ಷ ಮಂದಿ ಹಿಂದೂಗಳಿದ್ದಾರೆ. ಮುಸ್ಲಿಮರ ಸಂಖ್ಯೆ ೨.೫ ಲಕ್ಷ, ೧.೨ ಲಕ್ಷ ಯಹೂದಿಗಳೂ ಉಂಟು.

ಬಿಳಿಯರಲ್ಲಿ ಶೇ.೬೦ರಷ್ಟು ಆಫ್ರಿಕನ್ನರಿದ್ದಾರೆ. ಶೇ.೪೦ರಷ್ಟು ಬಿಳಿಯರು ಆಂಗ್ಲ ಸಂತತಿಗೆ ಸೇರಿದವರಾಗಿದ್ದಾರೆ. ಆಫ್ರಿಕನ್ ಜನಾಂಗದಲ್ಲಿ ಬಹುಪಾಲು ಮಂದಿ ಡಚ್ ಸಂತತಿಗೆ ಸೇರಿದವರಿದ್ದಾರೆ. ಉಳಿದವರು ಜರ್ಮನ್ ಮತ್ತು ಫ್ರೆಂಚ್ ಮೂಲದವರಾಗಿದ್ದಾರೆ.

ಡಚ್ ಬಿಳಿಯರ ಆಫ್ರಿಕನ್ ಭಾಷೆ ಮತ್ತು ಬ್ರಿಟಿಷ್ ಬಿಳಿಯರ ಇಂಗ್ಲಿಷ್ ಭಾಷೆ ಆಡಳಿತ ಭಾಷೆಗಳಾಗಿವೆ. ಪ್ರಿಟೋರಿಯಾ ನಗರ ಆಡಳಿತಕ್ಕೆ ಸಂಬಂಧಿಸಿದ ರಾಜಧಾನಿ. ಕೇಪ್ ಟೌನ್ ಶಾಸಕಾಂಗದ ರಾಜಧಾನಿಯಾದರೆ ಬ್ಲೋಯೆಮ್ ಫೊಂಟೀನ್ ನ್ಯಾಯಾಂಗಕ್ಕೆ ಸಂಬಂಧಿಸಿದ ರಾಜಧಾನಿ. ಇಲ್ಲಿ ಚಲಾವಣೆಯಲ್ಲಿರುವ ನಾಣ್ಯದ ಹೆಸರು ರ್ಯಾಂಡ್.

ಅನಾದಿ ಕಾಲದಿಂದಲೂ ಆಫ್ರಿಕಾ ಖಂಡ ಕರಿಯರ ವಾಸಸ್ಥಳವಾಗಿದೆ. ಖೊಯಿ ಖೊಯಿ ಎಂಬ ಕಪ್ಪು ಜನಾಂಗ ಕ್ರಿ.ಶ.೧೦೦೦ಕ್ಕೆ ಮೊದಲು ಮಧ್ಯ ಆಫ್ರಿಕಾದಿಂದ ಈ ಪ್ರದೇಶಕ್ಕೆ ವಲಸೆ ಬಂದಿತು. ಟ್ರಾನ್ಸ್ ವಾಲ್‌ನಲ್ಲಿ ತಳವೂರಿತು. ಜುಲು ಮತ್ತು ಕ್ಸೋಸಾ ಜನಾಂಗದ ಮೂಲದವರು ಕ್ರಿ.ಶ.೧೫೦೦ರ ವೇಳೆಗೆ ಪೂರ್ವದ ಕರಾವಳಿಯ ಬಹುಭಾಗದಲ್ಲಿ ಜೀವನ ಸಾಗಿಸಿದ್ದರು.

ಪೋರ್ತುಗೀಜ್‌ನ ಶೋಧಕ ಬಾರ್ತೊಲೊಮೆನ್ ಡಿಯಾಜ್ ೧೪೮೮ರಲ್ಲಿ ಕೇಪ್ ಆಫ್ ಗುಡ್ ಹೋಪ್ ತಲುಪಿದ. ಆಫ್ರಿಕಾ ಖಂಡದ ದಕ್ಷಿಣ ತುದಿಯಲ್ಲೆಲ್ಲ ಸುತ್ತಾಡಿದ. ಕ್ರಿ.ಶ.೧೬೦೦ರ ವೇಳೆಗೆ ಇಂಗ್ಲಿಷರು, ಡಚ್ಚರು ಮತ್ತು ಫ್ರೆಂಚರು ಭಾರತೀಯ ವ್ಯಾಪಾರದ ಮೇಲೆ ಹಿಡಿತ ಸಾಧಿಸಿದ್ದರು. ಭಾರತಕ್ಕೆ ಹೋಗುವ ವ್ಯಾಪಾರಿ ಹಡಗುಗಳಿಗೆ ದಕ್ಷಿಣ ಆಫ್ರಿಕಾ ತಂಗುದಾಣವಾಯಿತು. ೧೬೫೨ನೇ ಏಪ್ರಿಲ್ ೬ರಂದು ಡಚ್ ಈಸ್ಟ್ ಇಂಡಿಯಾ ಕಂಪೆನಿಯ ಜಾನ್ ವಾನ್ ರಿಬೀಕ್ ಮೂರು ಹಡಗುಗಳೊಂದಿಗೆ ಬಂದಿಳಿದ. ನಾವಿಕರಿಗೆ ತಾಜಾಮಾಂಸದ ಅವಶ್ಯಕತೆ ಇತ್ತು. ಮುಂದೆ ಬಹುದೂರ ಸಾಗಬೇಕಿತ್ತು. ವಿಶ್ರಾಂತಿಯ ಈ ಸ್ಥಾನದ ಮೇಲೆ ಇಂಗ್ಲಿಷ್ ಮತ್ತು ಫ್ರೆಂಚರ ಕಣ್ಣು ಬಿದ್ದಿತ್ತು. ಆದರೆ ಜಾನ್ ವಾನ್ ರಿಬೀಕ್ ತನ್ನ ನಾವಿಕರೊಂದಿಗೆ ಅಲ್ಲೇ ತಳವೂರಿದ. ಆ ಪ್ರದೇಶದ ಸಾನ್ ಮತ್ತು ಖೊಯಿ ಜನಾಂಗದವರಿಂದ ಭೂಮಿ ಮತ್ತು ದನಗಳನ್ನು ತೆಗೆದುಕೊಳ್ಳಲಾಯಿತು. ಅವರನ್ನು ಹತ್ತಿಕ್ಕಲಾಯಿತು. ಹೀಗೆ ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರ ದಬ್ಬಾಳಿಕೆ ಶುರುವಾಯಿತು.

ಡಚ್ ಈಸ್ಟ್ ಇಂಡಿಯಾ ಕಂಪೆನಿ ೧೬೫೨ರಲ್ಲಿ ಸರಬರಾಜು ಕೇಂದ್ರ ಸ್ಥಾಪಿಸಿದ ನಂತರ ಬಿಳಿಯರು ಕೇಪ್ ಟೌನ್‌ನಲ್ಲಿ ಶಾಶ್ವತವಾಗಿ ಉಳಿದರು. ಡಚ್ ಸೈನಿಕರನ್ನು ಸೇವೆಯಿಂದ ಬಿಡುಗಡೆ ಮಾಡಿ ಆಹಾರ ಧಾನ್ಯ ಬೆಳೆಯಲು ಅವಕಾಶ ನೀಡಲಾಯಿತು. ೧೬೮೮ರಲ್ಲಿ ಫ್ರೆಂಚರು ಬಂದು ನೆಲಸಿದರು. ೧೭೯೫ರಲ್ಲಿ ಬ್ರಿಟಿಷರು ಬಂದು ಡಚ್ ಕಾಲೋನಿ ಆಗಿದ್ದ ಕೇಪ್ ಆಫ್ ಗುಡ್ ಹೋಪ್ ಗೆ ಮುತ್ತಿಗೆ ಹಾಕಿದರು. ಅಂದಿನಿಂದ ಆಫ್ರಿಕನರು ಮತ್ತು ಆಂಗ್ಲರ ಮಧ್ಯೆ ಕಿತ್ತಾಟ ಪ್ರಾರಂಭವಾಯಿತು. ೧೬೫೭ರಲ್ಲಿ ಕೃಷಿ ಕೆಲಸಕ್ಕಾಗಿ ಪಶ್ಚಿಮ ಆಫ್ರಿಕಾ ಮತ್ತು ಏಷ್ಯಾದಿಂದ ಗುಲಾಮರನ್ನು ತರಲಾಯಿತು.

೧೮೨೦ರವರೆಗೆ ಡಚ್ ಭಾಷೆಯಲ್ಲಿ ಆಡಳಿತ ನಡೆಯುತ್ತಿತ್ತು. ನಂತರ ಇಂಗ್ಲಿಷ್ ಆಡಳಿತ ಭಾಷೆ ಆಯಿತು. ಬ್ರಿಟಿಷರ ರಾಜಕೀಯ ಹಿಡಿತ ಮತ್ತು ಸಾಂಸ್ಕೃತಿಕ ಪ್ರಾಬಲ್ಯದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ೧೮೩೬ರಲ್ಲಿ ಬೋಅರ್(ಆಫ್ರಿಕಾನರ್ ರೈತರು)ಗಳು ಉತ್ತರದ ಕಡೆ

ವಲಸೆ ಹೋದರು. ಇದಕ್ಕೆ 'ದಿ ಗ್ರೇಟ್ ಟ್ರೆಕ್' ಎಂದು ಕರೆಯುತ್ತಾರೆ. ೧೦ ಸಾವಿರದಷ್ಟು ಬೋಅರ್ ಗಂಡಸರು ಮತ್ತು ಹೆಂಗಸರು ತಮ್ಮ ಮನೆ ಮಠ ಬಿಟ್ಟು ಕೇಪ್‌ನಲ್ಲಿನ ಬ್ರಿಟಿಷ್ ಸರ್ಕಾರದಿಂದ ಸಾಧ್ಯವಾದಷ್ಟು ದೂರ ದೂರ ಹೋದರು. ಇದರಿಂದಾಗಿ ತುಂಬ ಕಷ್ಟ-ನಷ್ಟ ಅನುಭವಿಸಿದರು. ಈ ಸಂದರ್ಭದಲ್ಲಿ ಅವರು ಜುಲುಗಳ ಜತೆ ಹೋರಾಡಬೇಕಾಯಿತು. ೧೮೩೮ರಲ್ಲಿ ಬೋಅರ್‌ಗಳು ಜುಲು ಜನರನ್ನು ಸೋಲಿಸಿದರು. ೧೮೫೨ ಮತ್ತು ೧೮೫೪ರಲ್ಲಿ ಟ್ರಾನ್ಸ್ ವಾಲ್ ಮತ್ತು ಆರೇಂಜ್ ಫ್ರೀ ಸ್ಟೇಟ್‌ಗಳೆಂಬ ಬೋಅರ್ ಗಣರಾಜ್ಯಗಳನ್ನು ಸ್ಥಾಪಿಸಲಾಯಿತು. ಬ್ರಿಟಿಷರು ಅವರ ಮೇಲೆ ಯುದ್ಧ ಸಾರುತ್ತಲೇ ಇದ್ದರು. ಉತ್ತರ ನತಾಲ್‌ನಲ್ಲಿ ಜುಲುಗಳ ಪ್ರಾಬಲ್ಯ ಇನ್ನೂ ಇತ್ತು. ೧೮೭೯ರಲ್ಲಿ ಬ್ರಿಟಿಷರು ಅವರ ಮೇಲೆ ದಾಳಿ ಮಾಡಿ ಜುಲು ಸೈನ್ಯವನ್ನು ಧ್ವಂಸ ಮಾಡಿದರು. ಜುಲುಲ್ಯಾಂಡ್ ಮೇಲೆ ಪ್ರಭುತ್ವ ಸ್ಥಾಪಿಸಿದರು.

೧೮೬೭ರಲ್ಲಿ ಕಿಂಬರ್ಲಿಯಲ್ಲಿ ವಜ್ರದ ನಿಕ್ಷೇಪ ಪತ್ತೆ ಆಯಿತು. ೧೯ ವರ್ಷಗಳ ನಂತರ ಟ್ರಾನ್ಸ್ ವಾಲ್ ಪ್ರದೇಶದ ವಿಟ್ ವಾಟರ್ಸ್ ರ್ಯಾಂಡ್‌ನಲ್ಲಿ ಚಿನ್ನದ ನಿಕ್ಷೇಪ ಪತ್ತೆ ಆಯಿತು. ತದನಂತರ ಯುರೋಪಿಯನ್ನರು ಮುಖ್ಯವಾಗಿ ಬ್ರಿಟಿಷರು ದಕ್ಷಿಣ ಆಫ್ರಿಕಾಕ್ಕೆ ನುಗ್ಗತೊಡಗಿದರು. ಈ ಸಂಪತ್ತು ದಕ್ಷಿಣ ಆಫ್ರಿಕಾದ ರಾಜಕೀಯ ಮತ್ತು ಆರ್ಥಿಕ ಸ್ಥಿತಿಯನ್ನೇ ಬದಲಾಯಿಸಿತು.

ಈ ನಿಕ್ಷೇಪಗಳಿಂದಾಗಿ ಬ್ರಿಟಿಷರು ಬೋಅರ್‌ಗಳ ಮೇಲೆ ತೀವ್ರ ದಾಳಿ ಪ್ರಾರಂಭಿಸಿದರು. ಇವು ಆಂಗ್ಲೋ-ಬೋಅರ್ ಯುದ್ಧಗಳೆಂದು ಪ್ರಸಿದ್ಧವಾಗಿದೆ. ೧೮೮೦-೮೧ ಮತ್ತು ೧೮೯೯-೧೯೦೨ರಲ್ಲಿ ಈ ಯುದ್ಧಗಳು ನಡೆದವು. ಕೊನೆಯ ಯುದ್ಧ ಭಯಂಕರವಾಗಿತ್ತು. ಬೋಅರ್ ಗಣರಾಜ್ಯಗಳ ಪ್ರತಿಯೊಂದು ಹೊಲ-ತೋಟ ಧ್ವಂಸವಾಗಿತ್ತು. ಬೋಅರ್ ಗಣರಾಜ್ಯಗಳ ಪ್ರತಿಯೊಂದು ಹೊಲ-ತೋಟ ಧ್ವಂಸವಾಗಿತ್ತು. ೨೬ ಸಾವಿರ ಬೋಅರ್ ಹೆಂಗಸರು ಮತ್ತು ಮಕ್ಕಳು ಬ್ರಿಟಿಷರ ಯಾತನಾ ಶಿಬಿರಗಳಲ್ಲಿ ಸಾಂಕ್ರಾಮಿಕ ರೋಗದಿಂದ ಅಸುನೀಗಿದರು. ಯುದ್ಧದಲ್ಲಿ ೬ ಸಾವಿರ ಬೋಅರ್ ಸೈನಿಕರು ಮತ್ತು ೭೭೯೨ ಬ್ರಿಟಿಷ್ ಸೈನಿಕರು ಸತ್ತರು. ೩೫ ಸಾವಿರ ಬೋಅರ್‌ಗಳು ಮತ್ತು ಮೂರು ಲಕ್ಷ ಬ್ರಿಟಿಷರು ಯುದ್ಧದಲ್ಲಿ ಭಾಗವಹಿಸಿದ್ದರು. ಯುದ್ಧದಲ್ಲಿ ಗೆದ್ದ ಬ್ರಿಟಿಷರು ಬೋಅರ್ ಗಣರಾಜ್ಯಗಳನ್ನು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡರು.

೧೯೧೦ನೇ ಮೇ ೩೧ರಂದು ಕೇಪ್ ಮತ್ತು ನತಾಲ್ ಬ್ರಿಟಿಷ್ ಕಾಲೋನಿ ಮತ್ತು ಹಾಗೂ ಬೋಅರ್ ಗಣರಾಜ್ಯಗಳನ್ನು ಸೇರಿಸಿ ಬ್ರಿಟಿಷ್ ಸಾಮ್ರಾಜ್ಯದ ಅಡಿಯಲ್ಲಿ 'ಯೂನಿಯನ್ ಆಫ್ ಸೌತ್ ಆಫ್ರಿಕಾ' ಸ್ಥಾಪಿಸಲಾಯಿತು. ಜೂನ್ ೧೯೩೪ರಲ್ಲಿ ದಕ್ಷಿಣ ಆಫ್ರಿಕಾ ಸ್ವತಂತ್ರ ದೇಶವಾಯಿತು. ೧೯೬೧ನೇ ಮೇ ೩೧ ರಂದು ಬ್ರಿಟಿಷ್ ಹಿಡಿತದಿಂದ ಬಿಡಿಸಿಕೊಂಡು 'ಗಣರಾಜ್ಯ'ವಾಯಿತು.

ಆಡಳಿತ ನಡೆಸುತ್ತಿರುವ ನ್ಯಾಷನಲ್ ಪಾರ್ಟಿ ಆಫ್ರಿಕಾನರ್‌ಗೆ ಸೇರಿದ್ದರೆ ಆಂಗ್ಲರ ಪ್ರೊಗ್ರೆಸ್ಸಿವ್ ಫೆಡರಲ್ ಪಾರ್ಟಿ 'ದಿ ಯುನೈಟೆಡ್ ಪಾರ್ಟಿ' ವಿರೋಧ ಪಕ್ಷವಾಗಿದೆ. ಇ ಗಣರಾಜ್ಯದಲ್ಲಿ ಕರಿಯರಿಗೆ ಮತ ಚಲಾಯಿಸುವ ಹಕ್ಕು ಇಲ್ಲ. ಗಣಿ ಉದ್ಯಮ ಈ ದೇಶದ ಅರ್ಥ ವ್ಯವಸ್ಥೆಯ ಬೆನ್ನೆಲುಬಾಗಿದೆ. ಇಲ್ಲಿ ೭೦ ಪ್ರಕಾರದ ಖನಿಜಗಳ ಗಣಿಗಳಿವೆ. ಬಂಡವಾಳಶಾಹಿ ಜಗತ್ತಿನ ಶೇ.೭೦ರಷ್ಟು ಬಂಗಾರ ಇಲ್ಲಿಯೇ ದೊರೆಯುತ್ತದೆ. ಕ್ರೋಮಿಯಂ, ಕಲ್ಲಿದ್ದಲು, ಮ್ಯಾಂಗನೀಸ್, ಕಬ್ಬಿಣ, ರತ್ನ, ವಜ್ರ, ಯುರೇನಿಯಂ, ಪ್ಲಾಟಿನಂ, ತಾಮ್ರ ಮುಂತಾದವುಗಳಿಗೆ ದಕ್ಷಿಣ ಆಫ್ರಿಕಾ ಪ್ರಸಿದ್ಧವಾಗಿದೆ. ಇಲ್ಲಿ ೧೨೦೦ ಬ್ರಿಟಿಷ್ ಕಂಪೆನಿಗಳಿವೆ. ೩೫೦ ಅಮೆರಿಕನ್, ೧೬೫ ಫ್ರೆಂಚ್ ಮತ್ತು ೪೫೦ ಪಶ್ಚಿಮ ಜರ್ಮನಿ ಕಂಪೆನಿಗಳಿವೆ. ಬಿಳಿಯರು ಇಡೀ ದೇಶವನ್ನು 'ಅಪಾರ್ಥೈಡ್' ನೀತಿ ಮೂಲಕ ಲೂಟಿ ಮಾಡುತ್ತಿದ್ದಾರೆ. ಕರಿಯರು ತಮ್ಮ ನಾಡಿನಲ್ಲೇ ಪರಕೀಯರಾಗಿದ್ದಾರೆ. ದಕ್ಷಿಣ ಆಫ್ರಿಕಾದ ಚಿನ್ನದ ಗಣಿಗಳಲ್ಲಿ ಪ್ರತಿವರ್ಷ ಕನಿಷ್ಠ ೬೦೦ ಮಂದಿ ಸಾಯುತ್ತಾರೆ ಎಂದು ಅಧಿಕೃತ ಪ್ರಕಟನೆಯ ತಿಳಿಸಿದೆ. ನಿಜವಾದ ಅಂಕಿ ಸಂಖ್ಯೆ ಇದಕ್ಕೂ ಭೀಕರವಾಗಿರುತ್ತದೆ.

**ಅಪಾರ್ಥೈಡ್**

ಆಫ್ರಿಕನ್ ಭಾಷೆಯಲ್ಲಿ ಅಪಾರ್+ಥೈಡ್ ಎಂದರೆ ಪ್ರತ್ಯೇಕ ಅಭಿವೃದ್ಧಿ ಎಂದು ಅರ್ಥ. ಇದು 'ವರ್ಣಭೇದ ನೀತಿ' ಎಂದು ಕುಪ್ರಸಿದ್ಧವಾಗಿದೆ. ಬಿಳಿಯರು ಕಿರಿಯರನ್ನು ಸಂವಿಧಾನಾತ್ಮಕವಾಗಿ ದ್ವೇಷಿಸಲು ಮತ್ತು ಅವರಿಗೆ ಯಾವುದೇ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸೌಲಭ್ಯಗಳನ್ನು ದೊರೆಯದಂತೆ ಮಾಡಲು ಅಪಾರ್ಥೈಡ್ ಬಹು ಸಹಕಾರಿಯಾಗಿದೆ.

ಈ ಅಪಾರ್ಥೈಡ್ ನೀತಿಯ ಪ್ರಕಾರ ದಕ್ಷಿಣ ಆಫ್ರಿಕಾದ ಶೇ.೮೩ರಷ್ಟು ಭೂಮಿ ಶೇ.೧೭ರಷ್ಟಿರುವ ಬಿಳಿಯರಿಗೆ ಮೀಸಲಾಗಿದೆ. ಶೇ.೧೩ರಷ್ಟು ಪಾಳುಬಿದ್ದ ಭೂಮಿ ಶೇ.೭೧ರಷ್ಟಿರುವ ಕರಿಯರ ಪಾಲಿಗೆ ಬಂದಿದೆ! ಐಹಿಕ ಅಭ್ಯುದಯದಿಂದ ಬಿಳಿಯರು ಉನ್ಮತ್ತರಾಗಿದ್ದಾರೆ. ಕರಿಯರಿಗೆ ಜೀವಿಸಲು ಬೇಕಾದಷ್ಟು ಮಾತ್ರ ಸಿಗುತ್ತದೆ. ಬಿಳಿಯರ ಕೆಲಸ ಮಾಡಲು ಕರಿಯರು ಬದುಕಬೇಕಾಗಿದೆ. ಬಿಳಿಯ ಕಾರ್ಮಿಕರು ಕರಿಯರು ಪಡೆಯುವ ಕೂಲಿಗಿಂತ ಆರು ಪಟ್ಟು ಹೆಚ್ಚು ಪಡೆಯುತ್ತಾರೆ. ಕೆಲ ವರ್ಷಗಳ ಹಿಂದೆ ಅವರು ೨೦ಪಟ್ಟು ಜಾಸ್ತಿ ಪಡೆಯುತ್ತಿದ್ದರು. ಕರಿಯರಿಗೆ ಯಾವುದೇ ಕುಶಲ ಕೆಲಸ ಕಲಿಯುವ ಅವಕಾಶವಿಲ್ಲ. ಡಚ್ಚರು ಬಂದೊಡನೆ ಈ ಅಪಾರ್ಥೈಡ್ ವ್ಯವಸ್ಥೆ ಜಾರಿಗೆ ಬಂದಿತು. ೧೯೪೮ರ ಚುನಾವಣೆಯಲ್ಲಿ ಇದೊಂದು ಸಿದ್ಧಾಂತವಾಗಿ ರೂಪಗೊಂಡಿತು. ಆ ಚುನಾವಣೆ ಸಂದರ್ಭದಲ್ಲಿ ನ್ಯಾಷನಲ್ ಪಾರ್ಟಿಯ ಡೇನಿಯರ್ ಎಫ್. ಮಲಾನ್ ಈ ಸಿದ್ಧಾಂತ ಬಳಸಿ ವಿಜಯ ಸಾಧಿಸಿದ ಈ ಜನಾಂಗ ಭೇದ ನೀತಿ ಇಂದಿಗೂ ನ್ಯಾಷನಲ್ ಪಾರ್ಟಿಯ ಸಿದ್ಧಾಂತವಾಗಿದೆ.

ವರ್ಣಭೇದ ನೀತಿಯಿಂದಾಗಿ ಕರಿಯರ ಬದುಕು ಅತ್ಯಂತ ಹೀನ ಸ್ಥಿತಿಯನ್ನು ತಲುಪಿದೆ. ದಕ್ಷಿಣ ಆಫ್ರಿಕಾದಲ್ಲಿ ಪ್ರತಿವರ್ಷ ೩೦ ಸಾವಿರದಷ್ಟು ಕರಿಯ ಮಕ್ಕಳು ಪೌಷ್ಟಿಕ ಆಹಾರದ

ಕೊರತೆಯಿಂದ ಸಾಯುತ್ತಾರೆ. ೪೦೦ ಬಿಳಿಯರಿಗೆ ಒಬ್ಬ ವೈದ್ಯನಿದ್ದರೆ ೪೦ ಸಾವಿರ ಕರಿಯರಿಗೆ ಒಬ್ಬ ವೈದ್ಯನಿದ್ದಾನೆ. ಇಲ್ಲಿ ಜನಾಂಗ ಹತ್ಯೆ ಅವ್ಯಾಹತವಾಗಿದೆ. ಇಲ್ಲಿಯಷ್ಟು ಕ್ರೂರ ಕಾನೂನುಗಳು ಯಾವ ದೇಶದಲ್ಲೂ ಇಲ್ಲ. ಈ ಕಾನೂನುಗಳು ಬಿಳಿಯರ ರಕ್ಷಾಕವಚಗಳಾಗಿವೆ. ಕರಿಯರ ಬದುಕು ಹೀರುವ ಸಾಧನಗಳಾಗಿವೆ. ಇಲ್ಲಿನ ಜೈಲುಗಳಲ್ಲಿ ಪ್ರತಿ ವರ್ಷ ಕನಿಷ್ಠ ೨,೭೦೦,೦೦ ಕರಿಯರನ್ನು ತುಂಬಲಾಗುತ್ತಿದೆ. ಗಲ್ಲುಶಿಕ್ಷೆ ವಿಧಿಸುವಲ್ಲಿ ಈ ದೇಶ ವಿಶ್ವದಲ್ಲೇ ಪ್ರಥಮಸ್ಥಾನ ಪಡೆದಿದೆ. ಇಲ್ಲಿನ ಪೊಲೀಸರು ಸಾಮೂಹಿಕ ಹತ್ಯೆ ಮಾಡುವಲ್ಲಿ ನಿಸ್ಸೀಮರು. ಕರಿಯರು ಗುಂಡಿಗಷ್ಟೇ ಆಹುತಿ ಆಗುವುದಿಲ್ಲ. ಜೈಲುಗಳಲ್ಲಿ ಅವರನ್ನು ಹೊಡೆದು ಸಾಯಿಸಲಾಗುತ್ತಿದೆ. ವಿದ್ಯುತ್ ಸ್ಪರ್ಶದಿಂದ ಕೊಲ್ಲಲಾಗುತ್ತದೆ. ನಿದ್ದೆಗೆಡಿಸಿ ಉಪವಾಸವಿಟ್ಟು ಜೀವ ತೆಗೆದುಕೊಳ್ಳಲಾಗುತ್ತದೆ.

ಅಪಾರ್ಥೈಡ್ ನೀತಿ ಬರ್ಬರವಾಗಿದೆ. ಯಾವುದೇ ನಾಗರಿಕ ಸಮಾಜ ಹೇಸಿಕೊಳ್ಳುವಷ್ಟು ಜನಾಂಗದ್ವೇಷದಿಂದ ತುಂಬಿದೆ. ವಿಶ್ವಶಾಂತಿಗೆ ಬೆದರಿಕೆ ಒಡ್ಡುವಂಥದ್ದಾಗಿದೆ. ಇದರಿಂದಾಗಿ ದಕ್ಷಿಣ ಆಫ್ರಿಕಾ ಮಿಲಿಟರಿ ಮತ್ತು ಪೊಲೀಸ್ ರಾಜ್ಯವಾಗಿದೆ. ಈ ವರ್ಣಭೇದ ನೀತಿಯ ಜನಾಂಗವಾದಿ ಸರ್ಕಾರದ ಜತೆ ಸಹಕರಿಸುವುದು, ವಿಶ್ವಸಂಸ್ಥೆಯ ಉದ್ದೇಶ ಮತ್ತು ತತ್ವಗಳ ವಿರುದ್ಧವಾಗಿದೆ ಎಂದು ವಿಶ್ವಸಂಸ್ಥೆ ಘೋಷಿಸಿದೆ. ಅಪಾರ್ಥೈಡ್ ವ್ಯವಸ್ಥೆಯಿಂದಾಗಿ ಬಿಳಿಯರು ಕರಿಯರನ್ನು ಪ್ರಾಣಿಗಳಂತೆ ಕಾಣುತ್ತಾರೆ. ಬಿಳಿಯರು ಎದುರು ಬಂದರೆ ಕರಿಯರು (ತಲೆಯ ಮೇಲೆ ಹ್ಯಾಟ್ ಇದ್ದರೆ ತೆಗೆದು) ಪಕ್ಕಕ್ಕೆ ಸರಿಯಬೇಕು. ಬಿಳಿಯರಿಗೆ ಮೀಸಲಾಗಿರುವ ಹೋಟೆಲ್, ಬಸ್, ರೈಲ್ವೆ ಬೋಗಿ, ಪಾರ್ಕ್ ಮುಂತಾದ ಸ್ಥಳಗಳಲ್ಲಿ ಕಾಲಿಡಬಾರದು. ಕರಿಯ ಪುರುಷ ಟ್ರಾಕ್ಟರ್ ಚಾಲಕನಾಗುವುದೆಂದರೆ ಅತಿ ದೊಡ್ಡ ಹುದ್ದೆ ಪಡೆದಂತೆ. ಕರಿಯ ಮಹಿಳೆ ನರ್ಸ್ ಆಗುವುದೆಂದರೆ ಅತಿ ದೊಡ ಸಾಧನೆ ಮಾಡಿದಂತೆ. ಉನ್ನತ ವಿದ್ಯಾಭ್ಯಾಸಕ್ಕಾಗಿ ಕರಿಯರಿಗೆ ಯಾವುದೇ ರೀತಿಯ ಅವಕಾಶಗಳಿಲ್ಲ. ಅಪಾರ್ಥೈಡ್ ಎಂದರೆ ಬಿಳಿಯರ ಸುಖದ ಅಭಿವೃದ್ಧಿ ಮತ್ತು ಕರಿಯರ ದುಃಖದ ಅಭಿವೃದ್ಧಿ.

**ಬಂಟುಸ್ತಾನ್‌ಗಳು**

ಕ್ಸೋಸಾ ಭಾಷೆಯಲ್ಲಿ 'ಬಂಟು' ಎಂದರೆ ಜನಾಂಗ. ದಕ್ಷಿಣ ಆಫ್ರಿಕಾದಲ್ಲಿ ಮುಖ್ಯವಾಗಿ ೧೦ ಬುಡಕಟ್ಟುಗಳಿವೆ. ಈ ಜನಾಂಗಗಳಿಗೆ ೧೦ ತಾಯ್ನಾಡುಗಳಿವೆ. ಅವುಗಳಿಗೆ ಬಂಟುಸ್ತಾನ್‌ಗಳೆಂದು ಕರೆಯುತ್ತಾರೆ. ಬಂಟುಸ್ತಾನ್ ವ್ಯವಸ್ಥೆ ಮತ್ತು ವರ್ಣಭೇದ ನೀತಿ ಒಂದಕ್ಕೊಂದು ಪೂರಕವಾಗುವಂತೆ ಸರ್ಕಾರ ನೋಡಿಕೊಂಡಿದೆ. ಕರಿಯರನ್ನು ಪ್ರತ್ಯೇಕವಾಗಿ ಇಡುವುದರ ಮೂಲಕ ಅವರಲ್ಲಿ ಒಗ್ಗಟ್ಟು ಮೂಡದಂತೆ ಪ್ರಯತ್ನಿಸಿದೆ.

ಹತ್ತು ಬಂಟುಸ್ತಾನ್‌ಗಳು ಮತ್ತು ಜನಾಂಗಗಳು ಈ ರೀತಿ ಇವೆ : (ಆವರಣದಲ್ಲಿ ಜನಾಂಗಗಳ ಹೆಸರುಗಳಿವೆ) ಬೊಫುಥಾಟ್ಸ್ ವಾನಾ(ಟ್ಸ್ವಾನಾ) ಸಿಸ್ಕೇಯಿ(ಕ್ಸೋಸಾ) ಟ್ರಾನ್ಸ್ ಕೆಯಿ(ಕ್ಸೋಸಾ) ವೆಂಡಾ(ವೆಂಡಾ) ಕಂಗ್ವಾನೆ(ಸ್ವಾಮಿ) ಕ್ವಾಜುಲು(ಜುಲು) ಲೆಬೋವಾ (ಉಸೋತೊ) ಕ್ವಾಕ್ವಾ(ದಸೋತೊ) ಗಜಾಂಕುಲು(ಶಾಂಗಾನ್-ತ್ಸೋಂಗಾ) ಕ್ವಾಂಡೆಬೆಲೆ(ನ್ಡೇಬೆಲೆ) ಈ ಬಂಟುಸ್ತಾನ್‌ಗಳು ಬೃಹತ್ ಬಯಲು ಬಂದೀಖಾನೆಗಳಂತಿವೆ. ಟ್ರಾನ್ಸ್ ಕೆಯಿ,

ಬೊಫುಥಾಟ್ಸ್ ವಾನಾ, ವೆಂಡಾ ಮತ್ತು ಸಿಸ್ಕೇಯಿ ಬಂಟುಸ್ತಾನ್‌ಗಳಿಗೆ ಸ್ವಾತಂತ್ರ್ಯ ಘೋಷಿಸಲಾಗಿದೆ. ಉಳಿದ ಬಂಟುಸ್ತಾನ್‌ಗಳಲ್ಲಿ ಸ್ವಯಂ ಆಡಳಿತ ಪದ್ಧತಿ ಇದೆ ಎಂದು ದಕ್ಷಿಣ ಆಫ್ರಿಕಾ ಸರ್ಕಾರ ಹೇಳುವುದು ಹಾಸ್ಯಾಸ್ಪದವಾಗಿದೆ. ಜಗತ್ತಿನ ಯಾವುದೇ ದೇಶ ಇವುಗಳಿಗೆ ಮಾನ್ಯತೆ ನೀಡಿಲ್ಲ.

ಅಪಾರ್ಥೈಡ್ ವ್ಯವಸ್ಥೆಯನ್ನು ಗಟ್ಟಿಗೊಳಿಸುವುದಕ್ಕಾಗಿಯೇ ಬಂಟುಸ್ತಾನ್‌ಗಳನ್ನು ಸೃಷ್ಟಿಸಲಾಗಿದೆ. ಇವು ನಿಜವಾದ ಅರ್ಥದಲ್ಲಿ ನಿರುದ್ಯೋಗಿಗಳ ಕೊಳಚೆ ಪ್ರದೇಶಗಳಾಗಿವೆ. ಬಂಟುಸ್ತಾನ್‌ಗಳ ಕರಿಯ ನಾಯಕರನೇಕರು ಬಿಳಿಯರ ಬಾಲಂಗೋಚಿಗಳಾಗಿದ್ದಾರೆ. ಕರಿಯರ ಹೋರಾಟಗಳಿಗೆ ಅಡ್ಡಗಾಲು ಹಾಕುತ್ತಲೇ ಇರುತ್ತಾರೆ. ಈ ಬಂಟುಸ್ತಾನ್‌ಗಳಲ್ಲಿ ವಾಸಿಸುವವರಿಗೆ ಯಾವುದೇ ಪೌರ ಸೌಲಭ್ಯಗಳಿಲ್ಲ. ಕರಿಯರು ಈ ಬಂಟುಸ್ತಾನ್‌ಗಳನ್ನು ಬಿಟ್ಟು ಬಿಳಿಯರು ಇರುವ ಸ್ಥಳಗಳಿಗೆ ಬರುವಂತಿಲ್ಲ. ಬಿಳಿಯರಿಗೆ ಕೂಲಿಗಳೂ ಬೇಕಾದಾಗ ಈ ಬಂಟುಸ್ತಾನ್‌ಗಳಿಂದ ಕರಿಯರನ್ನು ಕರೆಸಿಕೊಳ್ಳುತ್ತಾರೆ. ಅವಾಗ ಮಾತ್ರ ಬಂಟುಸ್ತಾನ್ ಗಳ ಕರಿಯರಿಗೆ ಬಿಳಿಯರು ಇರುವಲ್ಲಿಗೆ ಬರುವ ಅವಕಾಶವಿದೆ. ಅದಕ್ಕಾಗಿ ಪಾಸ್ ಕಾಯ್ದೆಯನ್ನು ಜಾರಿಗೊಳಿಸಲಾಗಿದೆ. ದಕ್ಷಿಣ ಆಫ್ರಿಕಾದಲ್ಲಿ ೧೬ ವರ್ಷ ಮೀರಿದ ಕರಿಯರು ಪಾಸ್ ಕಾಯ್ದೆ ಪ್ರಕಾರ ಗುರುತಿನ ಪುಸ್ತಕ ಇಟ್ಟುಕೊಳ್ಳಬೇಕು. ಅದರಲ್ಲಿ ಅವರ ಗುರುತಿನ ನಂಬರ್, ಭಾವ ಚಿತ್ರ, ಬುಡಕಟ್ಟಿನ ಹೆಸರು ಹಾಗೂ ಅವರು ಎಲ್ಲಿ ದುಡಿಯುವರೊ ಆ ಮಾಲೀಕರ ಹೆಸರು ಮತ್ತು ಇತರ ಮಾಹಿತಿಗಳು ಇರುತ್ತವೆ. ಪತ್ನಿಯ ಗುರುತಿನ ಚೀಟಿಯಲ್ಲಿ ಪತಿಯ ವಿವರಗಳೂ ಇರಬೇಕು. ಈ ಗುರುತಿನ ಪುಸ್ತಕವನ್ನು ಅಧಿಕಾರಿಗಳು ಕೇಳಿದಾಗ ತೋರಿಸಬೇಕು. ಇದಿಲ್ಲದೆ ಬಂಟುಸ್ತಾನ್ ಬಿಟ್ಟು ಹೊರಬರುವಂತಿಲ್ಲ. ಈ ಕಾಯಿದೆ ಅಡಿ ಪ್ರತಿವರ್ಷ ಸರಾಸರಿ ಐದು ಲಕ್ಷ ಮಂದಿ ಕರಿಯರಿಗೆ ಶಿಕ್ಷೆ ವಿಧಿಸಲಾಗುತ್ತಿದೆ.

**ಕಪ್ಪು ಮಹಿಳೆ**

ಕೊನೆಗೊಂಡಿತು ಕಾಳಗ
ಆದರೆ ಬಹಳ ವರುಷಗಳ ನಂತರ
ಕಥೆ ಹೇಳುವರು ಅಜ್ಜಿಗಳು
ತಮ್ಮ ಪುಟ್ಟ ಮರಿಗಳಿಗೆ - ನಾ ಬಲ್ಲೆ
ಹಳೆಯ ಅನಿಷ್ಟದ ದಿನಗಳಲ್ಲಿ
ವಾಯಿಹೋಕ್‌ನ ಮಹಿಳೆಯರು
ಎಂಥ ಧೈರ್ಯದಿಂದ ಹೋರಾಡಿದರು
ಎಂಬ ದೀರ್ಘ ಕಥೆಯನ್ನು
ಹೇಳಲಾಗುವುದು
ಅಭಿಮಾನದೊಂದಿಗೆ,
ನಗೆಯೊಂದಿಗೆ

ದಕ್ಷಿಣ ಆಫ್ರಿಕಾದ ಆರೇಂಜ್ ಫ್ರೀ ಸ್ಟೇಟ್‌ನ ಕಪ್ಪು ಮಹಿಳೆಯರು ನೆಲ್ಸನ್ ಮಂಡೇಲಾ ಅವರು ಹುಟ್ಟುವುದಕ್ಕೆ ಐದು ವರ್ಷಗಳ ಮುಂಚೆ (ಜೂನ್ ೬, ೧೯೧೩) ಪಾಸ್ ಕಾಯ್ದೆ ವಿರುದ್ಧ ಹೋರಾಡಿದರು. ಅದಿಲ್ಲದೆ ಕರಿಯರು ತಮ್ಮ ವಾಸಸ್ಥಾನಗಳಾದ ಬಂಟುಸ್ತಾನ್‌ಗಳನ್ನು ಬಿಟ್ಟು ಹೊರಬರುವಂತಿಲ್ಲ. ಆದರೆ ಆ ದಿನ ಆರುನೂರು ಮಂದಿ ಮಹಿಳೆಯರು ಅಪಮಾನದ ಸಂಕೇತವಾದ ಪಾಸ್ ಪುಸ್ತಕಗಳ ಬದಲಿಗೆ ಅಭಿಮಾನದ ಸಂಕೇತವಾದ ಬಡಿಗೆಗಳನ್ನು ಹಿಡಿದುಕೊಂಡು ಮೆರವಣಿಗೆ ಹೊರಡಿಸಿದರು. ಅವರು ಯುದ್ಧಕ್ಕೆ ಹೊರಡದಂತೆ ಘೋಷಣೆ ಕೂಗುತ್ತಿದ್ದರು. ಅವರ ಆವೇಶವನ್ನು ನೋಡಿದ ನ್ಯಾಯಾಧೀಶ ನಡುಗಿದ. ಆದರೆ ಪೊಲೀಸ್ ಪೇದೆಯೊಬ್ಬ ಮಹಿಳೆಯೊಬ್ಬಳ ಕಾಲರ್ ಅನ್ನು ಗಟ್ಟಿಯಾಗಿ ಹಿಡಿದದ್ದೇ ತಡ ಆರುನೂರು ಬಡಿಗೆಗಳಿಗೆ ಬಲಿಯಾದ.

ಹೀಗೆ ಕೊನೆಗೊಂಡ ಕಾಳಗವನ್ನು ಕುರಿತು ಅಂತ್ಯಪ್ರಾಸದಿಂದ ಕೂಡಿದ ಸುಂದರ ಕವನವನ್ನು ಅಜ್ಞಾತ ಕವಿಯೊಬ್ಬ 'ಜಾನಿ ದಿ ಆಫೀಸ್ ಬಾಯ್ ' ಎಂಬ ಕಾವ್ಯನಾಮದಿಂದ ಬರೆದ. ಮಿಶ್ರ ವರ್ಣೀಯರ ಸಂಘಟನೆಯಾದ ಆಫ್ರಿಕನ್ ಪೀಪಲ್ಸ್ ಆರ್ಗನೈಸೇಷನ್ ೧೯೧೩ನೇ ಜೂನ್ ೨೭ರ ತನ್ನ ಪತ್ರಿಕೆಯಲ್ಲಿ ಈ ಕವನವನ್ನು ಪ್ರಕಟಿಸಿತು. ಮೇಲೆ ತಿಳಿಸಿದಂತೆ ಆ ಕವನ ಆಶಾದಾಯಕವಾಗಿ ಕೊನೆಗೊಳ್ಳುವುದು. ಆದರೆ ಆ ಘಟನೆ ಸಂಭವಿಸಿ ೭೭ ವರ್ಷಗಳಾದರೂ ಕಾಳಗ ಕೊನೆಗೊಂಡಿಲ್ಲ. ಬಿಳಿಯರ ಸರ್ಕಾರ ಕಪ್ಪು ಮಹಿಳೆಯನ್ನು ಅತ್ಯಂತ ಹೀನಾಯಮಾನವಾಗಿ ಕಾಣುವುದನ್ನು ಬಿಟ್ಟಿಲ್ಲ.

ಬಂಡವಾಳಶಾಹಿ ವ್ಯವಸ್ಥೆಗೆ ಕಾರಣವಾದ ಬಿಳಿಯರು ತಳವೂರುವುದಕ್ಕೆ ಮೊದಲಿನ ದಕ್ಷಿಣ ಆಫ್ರಿಕಾ ಸಮಾಜದಲ್ಲಿ ವಿವಿಧ ಗುಂಪುಗಳು ತಮ್ಮ ಪಾಲಿನ ಕೆಲಸ ನಿರ್ವಹಿಸುತ್ತಿದ್ದವು. ಒಂದು ಗುಂಪು ಉತ್ಪಾದನಾ ಸಾಧನಗಳನ್ನು ಹೊಂದಿದ್ದು ವಿನಿಮಯವನ್ನು ಹತೋಟಿಯಲ್ಲಿಟ್ಟುಕೊಂಡಿತ್ತು. ಬೇರೆ ಗುಂಪುಗಳು ತಮಗೆ ಸಂಬಂಧಿಸಿದ ಉತ್ಪಾದನೆಯಲ್ಲಿ ತೊಡಗಿರುತ್ತಿದ್ದವು. ನಿರ್ಣಾಯಕ ಉತ್ಪಾದನಾ ಸಾಧನಗಳನ್ನು ಮತ್ತು ಭೂಮಿಯನ್ನು ಸಾಮೂಹಿಕ ಒಡೆತನಕ್ಕೆ ಒಳಪಡಿಸಲಾಗಿತ್ತು. ದನ-ಕರುಗಳನ್ನು ಜನ ಖಾಸಗಿಯಾಗಿ ಸಾಕುತ್ತಿದ್ದರು. ಅವರು ಜೀವನ ವಿಧಾನದಲ್ಲಿ ಬದಲಾವಣೆಯಾದ ನಂತರ ಲೈಂಗಿಕ ಆಧಾರದ ಮೇಲೆ ಶ್ರಮ ವಿಭಜನೆಯಾಯಿತು. ನಂತರ ಕೃಷಿ ಕಾರ್ಯ ಮತ್ತು ಜಾನುವಾರು ಸಾಕಣೆಯನ್ನು ಒಂದೇ ಮನೆಯವರು ಮಾಡಿದರೂ ಉಳುವ ಕೆಲಸವನ್ನು ಮಹಿಳೆ ವಹಿಸಿಕೊಂಡಳು. ಜಾನುವಾರು ಸಾಕಣೆ ಗಂಡಸಿನದಾಯಿತು. (ಆಫ್ರಿಕಾದ ಬಹಳಷ್ಟು ಕಡೆಗಳಲ್ಲಿ ಈ ಪದ್ಧತಿ ಜಾರಿಯಲ್ಲಿತ್ತು) ದುಡಿಮೆಯ ಈ ಎರಡೂ ಕ್ಷೇತ್ರಗಳೂ ಆರ್ಥಿಕ ಮತ್ತು ಸಾಮಾಜಿಕ ಮಹತ್ವವನ್ನು ಪಡೆದಿದ್ದವು. ಆದರೆ ಮಹಿಳೆಯರು ವಿಶೇಷ ಗೌರವಕ್ಕೆ ಅರ್ಹರಾಗಿದ್ದರು. ಏಕೆಂದರೆ ಸಂತತಿ ಮತ್ತು ಆಹಾರ ಉತ್ಪಾದನೆಯಲ್ಲಿ ಅವರ ಪಾತ್ರ ಪ್ರಮುಖವಾಗಿತ್ತು.

ಆಫ್ರಿಕಾದಲ್ಲಿ ಲೊಬೋಲಾ (ಕನ್ಯಾ ಸಂಪತ್ತು) ಎಂಬ ಪದ್ಧತಿ ಇದೆ. ಮದುವೆ ಸಮಯದಲ್ಲಿ ವರನಾದವನು ಕನ್ಯೆಯ ಮನೆಯವರಿಗೆ 'ಪರಿಹಾರ' ರೂಪದಲ್ಲಿ ಲೊಬೋಲಾ ಕೊಡಬೇಕಾಗುತ್ತದೆ. ಮಹಿಳೆಯ ದುಡಿಮೆ ಮತ್ತು ಜಾಣ್ಮೆಯನ್ನು ಗೌರವಿಸುವ ರೀತಿ ಇದು. ಸಮಾಜದ ಸಮಸ್ಯೆಗಳ ಪರಿಹಾರ ಮತ್ತು ನೀತಿ ನಿಯಮಗಳನ್ನು ನಿರ್ಧರಿಸುವುದಕ್ಕಾಗಿ ಕರೆಯುವ ಸಭೆಯಲ್ಲಿ ಭಾಗವಹಿಸುವ ಹಕ್ಕು ಮಹಿಳೆಗೆ ಇಲ್ಲ. ಮದುವೆಗೆ ಮುಂಚೆ ಮಹಿಳೆಯಾದವಳು ತಂದೆ, ಅಣ್ಣ ಇಲ್ಲವೇ ಸೋದರ ಮಾವನ ಆಧೀನದಲ್ಲಿರುತ್ತಾಳೆ. ಮದುವೆಯ ನಂತರ ಗಂಡನ ಆಧೀನದಲ್ಲಿರುತ್ತಾಳೆ. ಮಕ್ಕಳನ್ನು ಸಾಕುವ ಕೆಲಸ ಅವಳದಾಗಿದ್ದರೆ ಹೊರಗಿನ ಕೆಲಸವನ್ನು ಗಂಡ ನಿಭಾಯಿಸುತ್ತಾನೆ. ಇಂಥ ಸಂಪ್ರದಾಯದ ಸಮಾಜದಲ್ಲಿ ಕೂಡ ಆಫ್ರಿಕಾದ ಮಹಿಳೆ ಅನೇಕ ಹಕ್ಕುಗಳನ್ನು ಪಡೆದಿದ್ದಾಳೆ. ಸೂಲಗಿತ್ತಿಯರು ನಾಟಿ ವೈದ್ಯೆಯರು ಮತ್ತು ಕಣಿ ಹೇಳುವವರು -ಹೀಗೆ ಮಹಿಳೆಯರು ತಮ್ಮ ಜಾಣ್ಮೆಯ ಮೂಲಕ ಗಳಿಸುವ ಹಣದಲ್ಲಿ ಗಂಡನಿಗೆ ಯಾವುದೇ ಪಾಲಿಲ್ಲ. ಅದೇ ಪ್ರಕಾರ ಚಾಪೆ ಹೆಣೆಯುವ, ಮಡಿಕೆ ಮಾಡುವ ಮತ್ತು ಚರ್ಮದ ವಸ್ತುಗಳನ್ನು ತಯಾರಿಸುವ ಮಹಿಳೆಯರು ಕೂಡ ತಮ್ಮ ಗಳಿಕೆಯನ್ನು ಪ್ರತ್ಯೇಕವಾಗಿ ಇಟ್ಟುಕೊಳ್ಳುವ ಹಕ್ಕನ್ನು ಪಡೆದಿದ್ದಾರೆ. ಈ ರೀತಿಯ ವೈಯಕ್ತಿಕ ಆಸ್ತಿಯಲ್ಲದೆ ಮದುವೆ ಸಮಯದಲ್ಲಿ ತವರು ಮನೆಯವರು ಬಳುವಳಿಯಾಗಿ ಕೊಟ್ಟ ದನ (ಉಬುಲುಂಗಾ) ಕೂಡ ಎಂಥ ಪ್ರಸಂಗದಲ್ಲೂ ಗಂಡನ ಆಸ್ತಿಯಲ್ಲಿ ಸೇರ್ಪಡೆಯಾಗುವುದಿಲ್ಲ. ಮಹಿಳೆ ಸತ್ತ ನಂತರ ವೈಯಕ್ತಿಕ ಆಸ್ತಿಯೆಲ್ಲ ಆಕೆಯ ಕೊನೆಯ ಕೂಸಿಗೆ ಹೋಗುವುದು. ಗಂಡನ ಸಾಲ ತೀರಿಸಲು ಹೆಂಡತಿ ಆಸ್ತಿಯನ್ನು ಬಳಸುವಂತಿಲ್ಲ. ಒಂದು ವೇಳೆ ವಿವಾಹ ವಿಚ್ಛೇದನವಾದರೆ ತನ್ನೆಲ್ಲ ಆಸ್ತಿಯನ್ನು ಆಕೆ ತೆಗೆದುಕೊಂಡು ಹೋಗುವಳು. ಹಿಂದಿನ ಕಾಲದಲ್ಲಿ ಹೆಂಡತಿಯನ್ನು ಹೊಡೆಯುವುದು ನಾಚಿಕೆಗೇಡಿತನದ ವಿಚಾರವಾಗಿತ್ತು. ಆತ ಸಾಮಾಜಿಕ ತಿರಸ್ಕಾರಕ್ಕೆ ಒಳಗಾಗುತ್ತಿದ್ದ.

ವಸಾಹತುಶಾಹಿ ವ್ಯವಸ್ಥೆ ಬಂದಾಗ ಕೃಷಿಯಲ್ಲಿ ಕೂಡ ಗಂಡಸರ ಪಾತ್ರ ಪ್ರಧಾನವಾಗಿ ಹೆಂಗಸರ ಕೆಲಸ ಅಡುಗೆ ಮನೆಗೆ ಸೀಮಿತವಾಯಿತು. ಮಹಿಳೆ ಉತ್ಪಾದಿಸುತ್ತಿದ್ದ ಮಡಿಕೆ, ಚಾಪೆ, ಸೋರೆ ಬುರುಡೆ ಮುಂತಾದವುಗಳಿಗೆ ಬೇಡಿಕೆ ಕಡಿಮೆಯಾಗಿ ಅವುಗಳ ಬದಲಿಗೆ ಬಂಡವಾಳಶಾಹಿ ಪದ್ಧತಿಯಿಂದ ಉತ್ಪಾದಿಸಿದ ವಸ್ತುಗಳು ಬಳಕೆಗೆ ಬಂದವು.

ದಕ್ಷಿಣ ಆಫ್ರಿಕಾದಲ್ಲಿ 'ವಲಸೆ ಕಾರ್ಮಿಕರ ವ್ಯವಸ್ಥೆ' ಎಂಬ ಅಮಾನುಷ ವ್ಯವಸ್ಥೆಯೊಂದಿಗೆ ಬಿಳಿಯರ ನಗರಗಳಲ್ಲಿ ಕರಿಯರನ್ನು ಗುತ್ತಿಗೆ ಕೂಲಿಗಳನ್ನಾಗಿ ನೇಮಿಸಿಕೊಳ್ಳಲಾಗುತ್ತದೆ. ಆದರೆ ಬಂಟುಸ್ತಾನಗಳಿಂದ ಬರುವ ಕರಿಯರು ಜೊತೆಯಲ್ಲಿ ತಮ್ಮ ಹೆಂಡಿರು, ಮಕ್ಕಳು ಮತ್ತು ವೃದ್ಧ ತಾಯಿ-ತಂದೆಗಳನ್ನು ಕರೆದುಕೊಂಡು ಬರುವಂತಿಲ್ಲ. ಎಲ್ಲವನ್ನೂ ಕಳೆದುಕೊಂಡ ಕರಿಯರು ಹೊಟ್ಟೆಪಾಡಿಗಾಗಿ ಕೊನೆಗೆ ತಮ್ಮ ಕುಟುಂಬವನ್ನೂ 'ಕಳೆದುಕೊಂಡು' ನಗರಗಳಿಗೆ ಬರುತ್ತಾರೆ. ಅಲ್ಲಿಯ ಯಾವುದೇ ಸರಿಯದ ಸೌಲಭ್ಯಗಳಿರದ ಪುರುಷರ ವಸತಿ ಗೃಹಗಳೆಂಬ ಕಡೆ ವಾಸಿಸುತ್ತಾರೆ. ಅವನ್ನು ಕರಿಯ ಕೂಲಿಗಳಿಗಾಗಿಯೇ ನಿರ್ಮಿಸಲಾಗಿದೆ.

ಅಂಥ ಅಸಹ್ಯ ಸ್ಥಳಗಳಲ್ಲಿ ಕೂಡ ಎಷ್ಟೋ ಕೂಲಿಕಾರರಿಗೆ ಉಳಿದುಕೊಳ್ಳಲು ಅವಕಾಶ ಸಿಗುವುದಿಲ್ಲ. ಹೀಗೆ ದಕ್ಷಿಣ ಆಫ್ರಿಕಾ ಸರ್ಕಾರದ ಕಣ್ಣಲ್ಲಿ ಕಪ್ಪು ಗಂಡಸರೆಂದರೆ ದುಡಿಯುವ ಯಂತ್ರಗಳು, ಹೆಂಗಸರೆಂದರೆ ಕೂಲಿಗಳನ್ನು ಹಡೆಯುವ ಯಂತ್ರಗಳು!

ಬರಗಾಲದಿಂದಾಗಿ ಕರಿಯರ ತುಂಡು ಭೂಮಿಗಳು ನಿರುಪಯುಕ್ತವಾಗಿವೆ. ಸಾಂಕ್ರಾಮಿಕ ರೋಗದಿಂದಾಗಿ ದನ-ಕರುಗಳನ್ನು ಕಳೆದುಕೊಂಡಿದ್ದಾರೆ. ಬರಡು ಭೂಮಿಯಲ್ಲಿ ದುಡಿಯುತ್ತ ಬಂಟುಸ್ತಾನಗಳಲ್ಲಿ ದಿನ ಕರೆಯುವ ಹೆಂಗಸರು ಅನ್ನ ಬಟ್ಟೆಗಳಿಗಾಗಿ ವಲಸೆ ಹೋದ ಗಂಡಂದಿರು ಮತ್ತು ಮಕ್ಕಳು ಕಳಿಸುವುದನ್ನು ಕಾಯುತ್ತ ಕುಳಿತಿರುತ್ತಾರೆ. ಭೂಮಿ ಕಾಯ್ದೆ, ಪಾಸ್ ಕಾಯ್ದೆ ಮತ್ತು ನಗರ ಪ್ರದೇಶದ ಕಾಯ್ದೆಗಳಿಂದಾಗಿ ಕಪ್ಪು ಮಹಿಳೆಯ ಜೀವನ ಬಂಟುಸ್ತಾನ್‌ಗಳಿಗೆ ಸೀಮಿತವಾಗಿದೆ. 'ವಲಸೆ ಕಾರ್ಮಿಕ ವ್ಯವಸ್ಥೆ'ಯಿಂದಾಗಿ ಆಕೆ ಇನ್ನಷ್ಟು ನಿರ್ಗತಿಕಳಾಗಿದ್ದಾಳೆ. ಹೀಗೆ ಬಿಳಿಯರ ಆಮದೀಕರಣ ಕಪ್ಪು ಮಹಿಳೆಗೆ ಎಲ್ಲ ರೀತಿ ಯಿಂದಲೂ ಮಾರಕವಾಗಿದೆ. ಸ್ಥಳೀಯರ ಆಡಳಿತ ಕಾಯ್ದೆ ೧೯೨೭ರ ಪ್ರಕಾರ ಮಹಿಳೆಯರು ಸದಾ ಅಪ್ರಾಪ್ತ ವಯಸ್ಕರು, ಅವರ ಪಾಲನೆ-ಪೋಷಣೆ ಮಾಡುವ ಅಧಿಕಾರ ತಂದೆ ಇಲ್ಲವೇ ಗಂಡಂದಿರ ಕೈಯಲ್ಲಿದೆ. ಇಡೀ ಕರಿಯ ಜನಾಂಗವನ್ನು ಸಂವಿಧಾನ ಬದ್ಧವಾಗಿ ಕಡೆಗಣಿಸಲಾಗಿದೆ. ಜನಾಂಗ, ಲಿಂಗ ಮತ್ತು ವರ್ಗಭೇದಗಳಿಂದಾಗಿ ಕಪ್ಪು ಮಹಿಳೆ ಅತ್ಯಂತ ಕೆಳಸ್ತರದಲ್ಲಿದ್ದಾಳೆ.

೧೯೮೩-೮೪ರ ಅವಧಿಯಲ್ಲಿ ವಿಪರೀತ ಬರಗಾಲ ಎದುರಿಸಿ ಸಾಂಕ್ರಾಮಿಕ ರೋಗದಿಂದಾಗಿ ಲಕ್ಷ ಗಟ್ಟಲೆ ದನಕರುಗಳನ್ನು ಕಳೆದುಕೊಂಡ ನಂತರ ಕಪ್ಪು ಮಹಿಳೆಯರು ನಗರಗಳ ಕಡೆಗೆ ಬರಲು ಪ್ರಾರಂಭಿಸಿದರು. ನಗರದ ಬಿಳಿಯರು ಮನೆಗಳಲ್ಲಿ ಮನೆಗೆಲಸದವರಾಗಿ ಸೇರಿಕೊಂಡರು. ಕೂಲಿಗಳನ್ನು ಪಡೆಯುವುದು ಬಿಳಿಯರಿಗೆ ಗೌರವದ ಪ್ರತೀಕ ಕೂಡ ಆಗಿದೆ. ದುಡಿಯುವ ಕಪ್ಪು ಮಹಿಳೆಯರಲ್ಲಿ ಶೇಕಡಾ ೮೦ರಷ್ಟು ಮಂದಿ ಮನೆಗೆಲಸ ಮತ್ತು ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದ್ದರೆ ಶೇಕಡಾ ೪ರಷ್ಟು ಮಹಿಳೆಯರು ಕೈಗಾರಿಕಾ ಕ್ಷೇತ್ರದಲ್ಲಿದ್ದು ಉಳಿದವರು ಹೆಚ್ಚಾಗಿ ದಾದಿ, ಶಿಕ್ಷಕಿಯರಾಗಿದ್ದಾರೆ.

ಇಡೀ ಕಪ್ಪು ಜನಾಂಗದಲ್ಲಿ ಅತ್ಯಂತ ಹೀನ ಸುಲಿಗೆ ಮತ್ತು ದಬ್ಬಾಳಿಕೆಗೆ ಒಳಗಾದವ ರೆಂದರೆ ಕೃಷಿ ಕೂಲಿ ಮಾಡುವವರು. ಅವರಿಗೆ ಯಾವುದೇ ರೀತಿಯ ಸಂರಕ್ಷಣೆ ಇಲ್ಲ. ರಾಜಕೀಯ ಆಂದೋಲನ ಅವರಿಗೆ ತಲುಪಿಲ್ಲ. ಕೃಷಿ ಕ್ಷೇತ್ರದಲ್ಲಿ ಬೇಡಿಕೆಗಿಂತ ಹೆಚ್ಚಿನ ಕೂಲಿಗಳಿರುವುದರಿಂದ ಒಂದಷ್ಟು ಕೂಲಿಗೆ ಅವರು ದುಡಿಯಲು ಸಿದ್ಧರಿದ್ದಾರೆ. ಕೃಷಿ ಕೂಲಿಕಾರರಿಗೆ ತಿಂಗಳಿಗೆ ಮತ್ತು ರ್‍ಯಾಂಡ್ ಕೂಲಿ ಮತ್ತು ಒಂದು ಚೀಲದಷ್ಟು ಮುಸುಕಿನ ಜೋಳದ ಹಿಟ್ಟನ್ನು ಕೊಡಲಾಗುವುದು. ಅವರು ಕೆಲವು ಸಲ ೧೭ ಗಂಟೆಗಳಷ್ಟು ಕಾಲ ಕೆಲಸ ಮಾಡಬೇಕಾಗುವುದು. ಅಲ್ಲಿ ಬಾಲಕಾರ್ಮಿಕರನ್ನು ಕಾನೂನುಬದ್ಧವಾಗಿ ನೇಮಿಸಿ ಕೊಳ್ಳಬಹುದು. ಅವರಿಗೆ ವಾಸಿಸಲು ಕೊಡುವ ಮನೆಗಳು ದನದ ಕೊಟ್ಟಿಗೆಯಂತೆ ಇರುತ್ತವೆ.

ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರು, ಭಾರತೀಯರು ಮತ್ತು ಮಿಶ್ರ ವರ್ಣೀಯರಿಗಿಂತ ಆಫ್ರಿಕದ ಗಂಡಸರು ಕಡಿಮೆ ಕೂಲಿ ಪಡೆಯುತ್ತಾರೆ. ಅವರ ಹೆಂಡಂದಿರಿಗೆ ಅವರಿಗಿಂತ ಶೇಕಡಾ ೨೦ರಷ್ಟು ಕಡಿಮೆ ಕೂಲಿ ಕೊಡಲಾಗುತ್ತದೆ. ನತಾಲ್ ಪ್ರಾಂತದಲ್ಲಿ ಅವರ ಪರಿಸ್ಥಿತಿ ಇನ್ನೂ ಅಸಹ್ಯವಾಗಿದೆ. ಗುತ್ತಿಗೆ ರೀತಿಯಲ್ಲಿ ಅಲ್ಲಿ ಎರಡು ಲಕ್ಷ ಕೂಲಿಗಳು ದುಡಿಯುತ್ತಿದ್ದಾರೆ. ಕುಟುಂಬದ ಯಜಮಾನನಿಗೆ ತಿಂಗಳಿಗೆ ೫ ರ್ಯಾಂಡ್ ಮತ್ತು ಒಂದು ಚೀಲ ಮುಸುಕಿನ ಜೋಳದ ಹಿಟ್ಟನ್ನು ಕೊಡಲಾಗುವುದು. ಹಿರಿಯ ಮಗನಿಗೆ ತಂದೆ ಪಡೆಯುವ ಅರ್ಧದಷ್ಟು ಸಿಗುವುದು. ಹೆಂಡತಿ, ಹೆಣ್ಣುಮಕ್ಕಳು ಮತ್ತು ಬಾಲಕರು ಅಲ್ಲಿ ಪುಕ್ಕಟೆ ದುಡಿಯುತ್ತಾರೆ ! ಒಂದೇ ಕಡೆ ಬದುಕುವುದೊಂದೇ ಅವರಿಗೆ ಸಿಗುವ ಪ್ರತಿಫಲ. ಆರು ತಿಂಗಳುಗಳವರೆಗೆ ಮಾತ್ರ ಅವರಿಗೆ ಅಲ್ಲಿ ಕೃಷಿ ಕೆಲಸ ಸಿಗುವುದು. ನಂತರ ಗಂಡಸರು ಗುತ್ತಿಗೆ ಕೆಲಸಕ್ಕಾಗಿ ನಗರಗಳಿಗೆ ವಲಸೆ ಹೋಗುವರು. ಮತ್ತೆ ಹೆಂಡತಿಯರು, ಮಕ್ಕಳು ಬಂಟುಸ್ತಾನ್ ಸೇರುವರು. ದಾರಿದ್ರ್ಯ ಮತ್ತು ಒಂಟಿತನಕ್ಕೆ ಬೇಸತ್ತು ಕಪ್ಪು ಮಹಿಳೆಯರು ಕಾನೂನಿನಗೆ ವಿರುದ್ಧವಾಗಿ ನಗರಗಳಿಗೆ ವಲಸೆ ಹೋಗುವಾಗ ರಸ್ತೆಗಳಲ್ಲಿ ತಡೆಯಲಾಗುವುದು. ಗುರುತಿನ ಪುಸ್ತಕವನ್ನು ಚೆಕ್ ಮಾಡುವ ನೆಪದಲ್ಲಿ ಪೊಲೀಸರು ಅವರ ಮೈ ತುಂಬ ಕೈಯಾಡಿಸುವರು. ಪ್ರತಿಭಟಿಸಿದರೆ ಕಡಿದು ಓಡಿಸುವಲ್ಲಿ ತರಬೇತಿ ಪಡೆದ ನಾಯಿಗಳನ್ನು ಅವರ ಮೇಲೆ ಬಿಡುವರು. ಹೀಗೆ ಪಾಸ್ ಕಾಯ್ದೆ ಮೂಲಕ ಮಹಿಳೆಯರು ಮಾನಸಿಕ ಹಿಂಸೆ ಅನುಭವಿಸುತ್ತಾರೆ. ತಮ್ಮ ಗಂಡಸರು ಮತ್ತು ಮಕ್ಕಳಿಂದ ಬೇರೆಯಾಗಿ ಬಂಟುಸ್ತಾನಗಳೆಂಬ 'ಯಾತಾನಾ ಶಿಬಿರ'ಗಳಲ್ಲಿ ಬದುಕುತ್ತಾರೆ.

ದಿ ಫೆಡರೇಷನ್ ಆಫ್ ಸೌತ್ ಆಫ್ರಿಕನ್ ವುಮೆನ್ ೧೯೫೬ನೆಯ ಅಗಸ್ಟ್ ೯ರಂದು ಪಾಸ್ ಕಾಯ್ದೆಯನ್ನು ತಿರಸ್ಕರಿಸಿ ಇಪ್ಪತ್ತು ಸಾವಿರ ಮಹಿಳೆಯರ ಮೆರವಣಿಗೆ ಹೊರಡಿಸಿ ಅಪಾರ್ಥೈಡ್ ಸರ್ಕಾರದ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸಿತು. ಅನೇಕ ಮಹಿಳೆಯರು ಹೋರಾಟದ ಮೂಲಕ ನಗರದ ಹೊರ ವಲಯಗಳಲ್ಲಿ ತಾವು ಬೀಡುಬಿಟ್ಟ ಸ್ಥಳದಲ್ಲೇ ಉಳಿಯುವಲ್ಲಿ ಸಫಲರಾಗಿದ್ದಾರೆ. ಆದರೆ ಸರ್ಕಾರ ಯಾವುದೇ ರೀತಿಯ ಮೂಲಭೂತ ಸೌಲಭ್ಯಗಳನ್ನು ನೀಡಿಲ್ಲ. ಅವರಿಗೆ ತಮ್ಮ ಮನೆ ದುರಸ್ತಿ ಮಾಡಿಕೊಳ್ಳುವ ಹಕ್ಕೂ ಇಲ್ಲ. ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತ ಅನೇಕ ಮಹಿಳೆಯರು ಸಾವಿಗೀಡಾಗಿದ್ದಾರೆ. ಅಪಾರ್ಥೈಡ್ ಸರ್ಕಾರ ಜೈಲಿನಲ್ಲಿ ಕೂಡ ಅನೇಕ ಮಹಿಳೆಯರ ಕೊಲೆ ಮಾಡಿದೆ.

ಪೊಲೀಸರ ಹಿಂಸೆಗೆ ಬೇಸರಪಟ್ಟು ಬಂಟುಸ್ತಾನಗಳಲ್ಲೇ ಉಳಿಯುವ ಮಹಿಳೆಯರಲ್ಲಿ ಕೆಲವರು ವೇಶ್ಯಾವಾಟಿಕೆಗೆ ಇಳಿದರೆ ಮತ್ತೆ ಕೆಲವರು ಹತಾಶರಾಗಿ ಕುಡಿತದ ಚಟಕ್ಕೆ ಬಲಿಯಾಗಿದ್ದಾರೆ. ಮಹಿಳೆಯರು ತಮ್ಮ ಗಂಡಂದಿರೊಡನೆ ಬದುಕುವ ಹಕ್ಕನ್ನು ಕೇಳುತ್ತಾರೆ. ಗುತ್ತಿಗೆ ವ್ಯವಸ್ಥೆಯ ಕೂಲಿಯ ನೆಪದಲ್ಲಿ ಗಂಡ ಹೆಂಡಂದಿರನ್ನು ಬೇರ್ಪಡಿಸುವ ತಂತ್ರವನ್ನು ಅವರು ವಿರೋಧಿಸುತ್ತಾರೆ. ಅವರು ಪುನರ್ವಸತಿ ಕೇಂದ್ರಗಳಲ್ಲಿ ಇಲ್ಲವೆ ಬಂಟುಸ್ತಾನಗಳಲ್ಲಿ

ಕೈತುಂಬ ಕೆಲಸವಿಲ್ಲದೆ ಅರೆ ಹೊಟ್ಟೆಯಿಂದ ಒಂಟಿಯಾಗಿ ಬದುಕುವುದನ್ನು ತಿರಸ್ಕರಿಸುತ್ತಾರೆ. ಆ ಪ್ರದೇಶಗಳಲ್ಲಿ ದುಃಖವೊಂದನ್ನುಳಿದು ಮತ್ತೇನೂ ಇಲ್ಲ.

ದಕ್ಷಿಣ ಆಫ್ರಿಕಾದ ಶೇ.೯೯ರಷ್ಟು ಸಂಪತ್ತು ಅಲ್ಪಸಂಖ್ಯಾತ ಬಿಳಿಯರ ಕೈಯಲ್ಲಿದೆ. ಬಹುಸಂಖ್ಯಾತ ಕರಿಯರ ಆರ್ಥಿಕ ಸ್ಥಿತಿ ಮತ್ತು ಅವರ ಉತ್ಪಾದನಾ ಸಾಮರ್ಥ್ಯ ಎಷ್ಟರ ಮಟ್ಟಿಗೆ ಇದೆ ಎಂಬುದಕ್ಕೆ ಇದೊಂದು ವಾಸ್ತವಾಂಶ ಸಾಕು. ಕರಿಯರಿಗೆ ಮಕ್ಕಳೇ ಸಂಪತ್ತು. ವೃದ್ಧಾಪ್ಯದಲ್ಲಿ ಆಸರೆಗೆ ಬರುವ ಬೇರೆ ಸಂಪತ್ತಿಲ್ಲವಾದ್ದರಿಂದ ಅವರು ಎಲ್ಲ ಭರವಸೆಯನ್ನು ಮಕ್ಕಳ ಮೇಲೆ ಇಟ್ಟಿರುತ್ತಾರೆ. ಚಿಂತಾಜನಕವಾದ ಇಂಥ ಆರ್ಥಿಕ ಪರಿಸ್ಥಿತಿ ಇದ್ದರೆ ಬಿಳಿಯರು ಕೂಡ 'ಮಕ್ಕಳೇ ಆಸರೆ' ಎಂದು ಭಾವಿಸಿದೆ ಗತ್ಯಂತರವಿರುತ್ತಿರಲಿಲ್ಲ. ಆದರೆ ಹೆಚ್ಚು ಮಕ್ಕಳನ್ನು ಹೆರುವ ಕರಿಯರ ಬಗ್ಗೆ ಸರ್ಕಾರಕ್ಕೆ ತಿರಸ್ಕಾರವಿದೆ. ಅವರನ್ನು ನಿರ್ನಾಮಗೊಳಿಸುವ ಹುಚ್ಚು ಕಲ್ಪನೆಯೊಂದಿಗೆ ಕಪ್ಪು ಮಹಿಳೆಯರಿಗೆ ಒತ್ತಾಯದಿಂದ ಮತ್ತು ಅನೇಕ ಸಲ ಅರಿಯದಂತೆ ಕೂಡ ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಮಾಡುತ್ತದೆ.

> ಮನುಕುಲದಲ್ಲಿ ಉಳ್ಳವರು, ಬಡವರು ಎಂಬ ಎರಡು ಗುಂಪುಗಳಿವೆ. ಉಳ್ಳವರು ಉತ್ಪಾದನಾ ಸಾಮರ್ಥ್ಯದೊಂದಿಗೆ ಜಾಣರೂ ಆಗಿದ್ದಾರೆ. ನಾಗರಿಕತೆಯುಳ್ಳ ಅವರಿಗೆ ಹೊಣೆಗಾರಿಕೆ ಪ್ರಜ್ಞೆ ಇದೆ. ಬಡವರು ಕಡಿಮೆ ಜವಾಬ್ದಾರಿಯುಳ್ಳವರಾಗಿದ್ದು ಮುಂದಾಲೋಚನೆ ಇಲ್ಲದೆ ಹುಟ್ಟಿಸುತ್ತಾರೆ.

ಇದು ಬಿಳಿಯರ ಕುಟುಂಬ ಯೋಜನಾ ಪ್ರಚಾರ ವೈಖರಿ ! ಕಪ್ಪು ಮಹಿಳೆಯರು ಕುಟುಂಬ ಯೋಜನೆಗೆ ವಿರೋಧವಾಗಿಲ್ಲ ಆದರೆ ಒತ್ತಾಯದ ಶಸ್ತ್ರ ಚಿಕಿತ್ಸೆಯನ್ನು ವಿರೋಧಿಸುತ್ತಾರೆ. ಅಪಾರ್ಥೈಡ್ ಸುಲಿಗೆಯಿಂದ ಕಪ್ಪು ಮಹಿಳೆಯ ಬದುಕು ಅತ್ಯಂತ ಕೀಳು ಮಟ್ಟವನ್ನು ತಲುಪಿದೆ. ಅವಳು ಅನುಭವಿಸುತ್ತಿರುವ ಅಸಾಧ್ಯ ಕಷ್ಟ ಜಗತ್ತಿನ ಯಾವ ಮಹಿಳೆಯೂ ಅನುಭವಿಸಿಲ್ಲ.

ಕಪ್ಪು ಮಹಿಳೆ ಕೂಲಿ ಕೆಲಸದ ಜೊತೆ ಮನೆಯ ಕೆಲಸವನ್ನೂ ನೋಡಿಕೊಳ್ಳುತ್ತಾಳೆ. ಹೆಚ್ಚಿನ ಕೂಲಿಗಾಗಿ ಗಂಡನಿಗೆ ಜೊತೆಯಾಗಿ ಹೋರಾಡುತ್ತಾರೆ. ಆತನೊಡನೆ ಬದುಕುವುದಕ್ಕಾಗಿ ಪೊಲೀಸರ ಲಾಟಿ ಎದುರಿಸುತ್ತಾಳೆ. ಮಕ್ಕಳ ಶಿಕ್ಷಣಕ್ಕಾಗಿ ಪ್ರತಿಭಟಿಸುತ್ತಾಳೆ. ವಿಮೋಚನಾ ಹೋರಾಟದಲ್ಲಿ ಸತ್ತ ಮಕ್ಕಳಿಗಾಗಿ ಅಳುತ್ತಾಳೆ. ಜೀವದ ಹಂಗು ತೊರೆದು ರಾಜಕೀಯ ಕೈದಿಗಳಿಗೆ ಬೆಂಬಲ ವ್ಯಕ್ತಪಡಿಸುತ್ತಾಳೆ. ವರ್ಣದ್ವೇಷ ನೀತಿಯ (ಅಪಾರ್ಥೈಡ್) ವಿರುದ್ಧದ ಹೋರಾಟದಲ್ಲಿ ತನ್ನತನವನ್ನು ತೋರಿಸುತ್ತಾಳೆ. ಅನೇಕ ಮಹಿಳೆಯರು ಮೂವತ್ತು ತಲುಪುವುದರೊಳಗಾಗಿ ವಿಧವೆಯರಾಗುತ್ತಾರೆ. ಚಿನ್ನದ ಗಣಿಯಲ್ಲಿ ಕೆಲಸ ಮಾಡಿ ಮರಳಿದ ಗಂಡಸರು ಎಲುಬಿನ ಗೂಡಾಗಿರುತ್ತಾರೆ. ದಿಕ್ಕು ತೋಚದ ನಿರಕ್ಷರಿ ಹೆಣ್ಣು ಮಕ್ಕಳು ಒಂದಿಷ್ಟು ಕೂಲಿಗಾಗಿ ಜೀವ ಸವೆಸುತ್ತಾ ದಿನ ಕಳೆಯುತ್ತಾರೆ. ಸರಿಯಾದ ಆಹಾರವಿಲ್ಲದೆ ಅನಾರೋಗ್ಯಕರವಾದ ವಾತಾವರಣದಲ್ಲಿ ಬದುಕುವುದರಿಂದಾಗಿ ಅನೇಕರು ಕ್ಷಯರೋಗ ಪೀಡಿತರಾಗಿದ್ದಾರೆ. ಅಕಾಲ ಮರಣಗಳ ಸಂಖ್ಯೆ ಹೆಚ್ಚಿದೆ. ಹೀಗೆ ಅವರ ಬದುಕೊಂದು ದುಃಖದ ನೀಳ್ಗವನವಾಗಿದೆ. ಸ್ಥಳೀಯ ನೀತಿಯ ಪ್ರಕಾರ ಕರಿಯರು ಬಂಟುಸ್ತಾನಗಳಲ್ಲೇ

ವಾಸಿಸಬೇಕು. ಕೂಲಿಗಳು ತಮ್ಮ ಕೆಲಸವನ್ನು ಬದಲಾಯಿಸಬಾರದು. ಕರಿಯರು ತಾವು ಬೀಡುಬಿಟ್ಟಿರುವ ಪ್ರದೇಶಗಳಿಂದ ಬೇರೆಡೆ ಹೋಗಲು ಸರ್ಕಾರ ಆಜ್ಞೆ ಮಾಡಿದಾಗ ಗಂಟು ಮೂಟೆ ಕಟ್ಟಿಕೊಂಡು ಹೋಗಬೇಕು. ಈ ಎಲ್ಲ ಕಟ್ಟುಪಾಡುಗಳು ಕಪ್ಪು ಮಹಿಳೆಯ ಮೇಲೆ ನೇರವಾದ ದುಷ್ಪರಿಣಾಮ ಬೀರುತ್ತವೆ.

ಮಹಿಳೆಯರ ವಿಮೋಚನೆ ಇಲ್ಲದೆ ರಾಷ್ಟ್ರೀಯ ವಿಮೋಚನೆ ಇಲ್ಲ,
ರಾಷ್ಟ್ರೀಯ ವಿಮೋಚನೆ ಇಲ್ಲದೆ ಮಹಿಳೆಯರ ವಿಮೋಚನೆ ಇಲ್ಲ

ಎಂಬುದನ್ನು ದಕ್ಷಿಣ ಆಫ್ರಿಕಾದ ಸ್ವಾತಂತ್ರ್ಯಪ್ರಿಯರು ಮನಗಂಡಿದ್ದಾರೆ. ವಿಶ್ವ ಮಹಿಳೆ ದಿನವಾಗಿ ಮಾರ್ಚ್ ೮ ಅನ್ನು ಸಂಭ್ರಮದಿಂದ ಆಚರಿಸಿದರೂ ಆಗಸ್ಟ್ ಆಫ್ರಿಕಾದ ಮಹಿಳೆಯರ ದಿನವಾಗಿದೆ. ಅಂದು ಅವರು ಏಕತೆಯ ಮೂಲಕ ತಮ್ಮ ಬಲ ಪ್ರದರ್ಶನ ಮಾಡುವುದಷ್ಟೇ ಅಲ್ಲದೆ ತಮ್ಮ ಹೋರಾಟದ ಪರಂಪರೆಯಲ್ಲಿ ತ್ಯಾಗ, ಬಲಿದಾನ ಮಾಡಿದವರನ್ನು ಸ್ಮರಿಸುತ್ತಾರೆ. ಹೀಗೆ ಅನ್ಯಾಯ, ದಬ್ಬಾಳಿಕೆಗಳ ವಿರುದ್ಧ ಗಂಡಸರ ಹೆಗಲಿಗೆ ಹೆಗಲು ಕೊಟ್ಟು ಹೋರಾಡುವುದರ ಮೂಲಕ ಕಪ್ಪು ಮಹಿಳೆಯರು ಸಾಮಾನತೆಯನ್ನು ಕೂಡ ಸಾಧಿಸುವ ಸಾಧ್ಯತೆಯನ್ನು ತೋರಿಸಿದ್ದಾರೆ.

ಮೇಲೆ ಸರ್ಕಾರದ ಕಾನೂನಿನ ಖಡ್ಗ ನೇತಾಡುತ್ತಿದ್ದರೂ ಕಪ್ಪು ಪುಟ್ಟ ಬಂಡವಾಳಶಾಹಿಗಳು ಆಫ್ರಿಕಾ ಜನಾಂಗದ ಮಧ್ಯೆ ತೀವ್ರ ಬಡತನವಿರುವ ಪ್ರದೇಶಗಳಲ್ಲಿ ತಮ್ಮ ವ್ಯವಹಾರ ನಡೆಸುತ್ತಾರೆ. ಪುಟ್ಟ ಬಂಡವಾಳಶಾಹಿ ಮನೆತನಕ್ಕೆ ಸೇರಿದ ಮಹಿಳೆಯರು ಆಫ್ರಿಕನ್ ಮಹಿಳಾ ಸಮಾಜದ ಸಂಘಟನೆಗಳ ನಾಯಕಿಯರಾಗಿದ್ದಾರೆ. ರಾಜಿ ರಾಜಕೀಯ ನೀತಿ ಮತ್ತು ಮಧ್ಯಮ ವರ್ಗದ ನಡವಳಿಕೆಯನ್ನು ಅವರು ಹೊಂದಿದ್ದಾರೆ. ಉಪನಗರಗಳ ಬಿಳಿ ಮಹಿಳೆಯರು ಅವರಿಗೆ ಮಾದರಿಯಾಗಿದ್ದಾರೆ. ಬಿಳಿ ಮಹಿಳೆಯರ ಹುಡುಗಾಟಿಕೆ ಮತ್ತು ನ್ಯೂನತೆಯನ್ನು ಶ್ಲಾಘ್ಯವೆಂದೇ ಭ್ರಮಿಸಿ ಅವರು ಹೆಮ್ಮೆ ಪಡುತ್ತಾರೆ.

ದುಡಿಯುವ ವರ್ಗದ ಕಪ್ಪು ಮಹಿಳೆಯರು ಇತರ ಜನಾಂಗಗಳೊಡನೆ ದುಡಿಯುತ್ತ ಬದುಕುವುದರಿಂದ ಅವರ ಮಧ್ಯೆ ಸಾಮರಸ್ಯವೇರ್ಪಟ್ಟು ಜನಾಂಗೀಯ ಎಲ್ಲೆಗಳು ಮಾಯವಾಗುತ್ತವೆ. ಹೀಗೆ ಒಂದುಗೂಡುವುದರ ಮೂಲಕ ವಿಮೋಚನಾ ಪ್ರಜ್ಞೆ ತೀವ್ರಗೊಳ್ಳುತ್ತದೆ. ಆಫ್ರಿಕನ್ ಜನಾಂಗ ಮತ್ತು ಮಿಶ್ರವರ್ಣೀಯ ಕೆಲಸಗಾರರ ಮಧ್ಯೆ ಬಿಕ್ಕಟ್ಟನ್ನುಂಟುಮಾಡಲು ಸರ್ಕಾರ ಅನೇಕ ಸಲ ವಿಫಲ ಪ್ರಯತ್ನ ಮಾಡಿದೆ. ದಕ್ಷಿಣ ಆಫ್ರಿಕಾದ ಅನೇಕ ಖ್ಯಾತ ನಾಯಕಿಯರು ದುಡಿಯುವ ವರ್ಗದಿಂದಲೇ ಬಂದಿದ್ದಾರೆ.

ಬಿಳಿಯರ ಮನೆಗೆಲಸ ಮಾಡುವ ಮಹಿಳೆಯರು ಬೃಹತ್ ಪ್ರಮಾಣದಲ್ಲಿದ್ದು ಬಿಳಿಯ ಹೆಂಗಸರು ಅವರನ್ನು ಕೀಳಾಗಿ ಕಾಣುತ್ತಾರೆ. ಅವರೆಲ್ಲ ಒಂಟಿಯಾಗಿ ಕೆಲಸ ಮಾಡುವುದರಿಂದ ಅವರನ್ನು ಸಂಘಟಿಸುವುದು ಕಠಿಣ ಕೆಲಸವಾಗಿದೆ. ಆದರೆ ದೇಶದಲ್ಲಿ ನಡೆಯುತ್ತಿರುವ ಯಾವುದೇ ಪ್ರತಿಭಟನೆ ತಾವು ಅನುಭವಿಸುತ್ತಿರುವ ಹಿಂಸೆಗೆ ವಿರೋಧವಾಗಿಯೇ ಇದೆ ಎಂಬುದರ ಅರಿವು ಅವರಿಗಿದೆ. ಹೀಗಾಗಿ ಅವರ ಯಾವುದೇ ತೆರನಾದ ಪ್ರತಿಭಟನೆ ಕ್ರಾಂತಿಗೆ ಪೂರಕವಾಗೇ ಇರುತ್ತದೆ.

ಮಹಿಳೆಯರ ಹೋರಾಟ ಮತ್ತು ರಾಷ್ಟ್ರೀಯ ವಿಮೋಚನೆಯ ಅಂತಿಮ ಗುರಿ ಸಾಮಾಜಿಕ ಬದಲಾವಣೆ ಆದ್ದರಿಂದ ಕಪ್ಪು ಮಹಿಳೆಯರ ಹೋರಾಟ ಅಪಾರ್ಥೈಡ್ ವಿರುದ್ಧದ ಹೋರಾಟದ ಒಂದು ಮಹತ್ವದ ಅಂಗವಾಗಿದೆ.

ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನಲ್ಲಿ ಮಹಿಳೆಯರಿಗೆ ಸಮಾನ ಸ್ಥಾನವಿದೆ. ಉಮ್ ಖೊಂಟೊ ವೆ ಸಿಜ್ವೆ ದೇಶದ ಈಟಿ ಎಂಬ ಹೆಸರಿನ ಅದರ ಮಿಲಿಟರಿ ವಿಭಾಗದಲ್ಲಿ ಅವರಿಗೆ ಸರಿಸಮಾನವಾದ ತರಬೇತಿ ನೀಡಲಾಗುತ್ತಿದೆ. ಆದರೆ ಅನೇಕ ವರ್ಷಗಳಿಂದ ಶಿಕ್ಷಣವಿಲ್ಲದೆ ಹಾಗೂ ತಲೆತಲಾಂತರದಿಂದ ಬಂದ ಕೀಳರಿಮೆಯಿಂದಾಗಿ ಅನೇಕ ಮಹಿಳೆಯರು ಮುಂದುವರಿಯಲಿಕ್ಕಾಗುತ್ತಿಲ್ಲ. ವಿಮೋಚನಾ ಹೋರಾಟದಲ್ಲಿನ ಪುರುಷರು ತಮ್ಮ ಸ್ತ್ರೀಯರನ್ನು ಸಮಾನವಾಗಿ ಕಾಣುತ್ತಾರೆ. ಸಾಂಪ್ರದಾಯಿಕ ಸಮಾಜದಲ್ಲಿ ಕೂಡ ಈ ಪ್ರಜ್ಞೆ ಮೂಡುತ್ತಿದೆ.

ದಬ್ಬಾಳಿಕೆ ನಡೆಸುವವರಿಗೆ ಶರಣಾಗತರಾಗದಿರುವುದೇ ಸ್ವಾತಂತ್ರ್ಯ ಹೋರಾಟದ ಮೂಲವಾಗಿರುತ್ತದೆ. ಇಂದು ಪ್ರಜ್ಞಾವಂತ ಕಪ್ಪು ಮಹಿಳೆಯರು ಅಪಾರ್ಥೈಡ್ ಸರ್ಕಾರಕ್ಕೆ ಮತ್ತು ಗಂಡುಮಯವಾದ ಸಾಂಪ್ರದಾಯಿಕ ಸಮಾಜಕ್ಕೆ ಶರಣಾಗದೆ ಹೋರಾಡುತ್ತಿದ್ದಾರೆ. 'ಮಹಿಳೆಯರೇ ಎದ್ದೇಳಿ, ಒಂದುಗೂಡಿ, ಏಕತೆ ಸಾಧಿಸಿ' ಇದು ಅವರ ಘೋಷಣೆ.

## ವಿಶ್ವಮಾನವ

ಗುಲಾಮಗಿರಿಯನ್ನು ರಾಜಕೀವಾಗಿ ಕ್ರಮಬದ್ಧಗೊಳಿಸಿರುವ ದೇಶವೆಂದರೆ ದಕ್ಷಿಣ ಆಫ್ರಿಕಾ ಒಂದೇ. ಒಂದು ಜನಾಂಗವನ್ನು ಸದಾಕಾಲ ಗುಲಾಮಗಿರಿಯಲ್ಲಿಡಲಿಕ್ಕಾಗದು ಎನ್ನುವುದಕ್ಕೆ ಇತಿಹಾಸ ಸಾಕ್ಷಿ ಇದೆ. ಕರಿಯರ ಹೋರಾಟಗಳ ಸಂಕೇತವಾಗಿರುವ ನೆಲ್ಸನ್ ಮಂಡೇಲಾ ಟ್ರಾನ್ಸ್ ಕೆಯಿ ಬಂಟುಸ್ತಾನದ ಉಮ್ ಟಾಟಾ ಬಳಿಯ ಕುನು ಗ್ರಾಮದಲ್ಲಿ ೧೯೧೮ನೇ ಜುಲೈ ೧೮ರಂದು ಜನಿಸಿದರು. ಅವರದು ಥೆಂಬು ರಾಜ ಮನೆತನಕ್ಕೆ ಸೇರಿದ ಕುಟುಂಬ. ತಂದೆ ಹೆನ್ರಿ ಗಾಡ್ಲಾ ಮಂಡೇಲಾ ಅವರು ಥೆಂಬುಗಳ ನಾಯಕರಾಗಿದ್ದರು. ಥೆಂಬುಗಳ ಸಾರ್ವಭೌಮ ನಾಯಕ ಡೇವಿಡ್ ಡಲಿಂಡಿ ಯೆಬೊಗೆ ಮುಖ್ಯ ಸಲಹೆಗಾರರಾಗಿದ್ದರು.

ಬಹುಪತ್ನೀಕ ಹೆನ್ರಿಗೆ ನಾಲ್ವರು ಹೆಂಡಂದಿರಿದ್ದರು. ನೆಲ್ಸನ್ ತಾಯಿಯ ಹೆಸರು ನೊಂಕಾಫಿ. ಮನೆಯಲ್ಲಿ ಕರೆಯುವ ಹೆಸರು ನೊಸೆಕೆನಿ. ಆಕೆ ದೃಢ ಮನಸ್ಸಿನ ಹಾಗೂ ಘನತೆ ಗೌರವಗಳಿಂದ ಕೂಡಿದ ಮಹಿಳೆ ಆಗಿದ್ದಳು.

ಹಿಂದೂ ಮಹಾಸಾಗರದಿಂದಾಗಿ ಪೂರ್ವ ಕರಾವಳಿ ಹೊಂದಿರುವ ಟ್ರಾನ್ಸ್ ಕೆಯಿ ಬಂಟುಸ್ತಾನದ ಪರ್ವತಶ್ರೇಣಿಯ ಸುಂದರ ಕೊಳ್ಳದಲ್ಲಿ ಮಬಷೆ ನದಿಯ ಪಕ್ಕದಲ್ಲಿ, ಸಮೃದ್ಧ ಮುಸುಕಿನ ಜೋಳದ ಪ್ರದೇಶದಲ್ಲಿ ಹಾಗೂ ಹಚ್ಚನೆ ಹಸಿರು ತುಂಬಿದ ಹುಲ್ಲುಗಾವಲುಗಳಲ್ಲಿ ಅವರು ಬಾಲ್ಯದ ದಿನಗಳನ್ನು ಕಳೆದರು. ನಿಸರ್ಗ ರಮ್ಯ ವಾತಾವರಣ, ತಾಯಿಯ ಆತ್ಮಾಭಿಮಾನ ಮತ್ತು ತಂದೆಯ ಶಿಸ್ತುಗಳ ಮಧ್ಯೆ ರಾಜ

ಮನೆತನಕ್ಕೆ ತಕ್ಕಂಥ ಗೌರವ ಸಂಪ್ರದಾಯ ಹಾಗೂ ಹೊಣೆಗಾರಿಕೆಯೊಂದಿಗೆ ನಿಶ್ಚಿಂತವಾಗಿ ಬೆಳೆದರು. ಅವರ ಗ್ರಾಮದ ವಯೋವೃದ್ಧರು ರಾತ್ರಿ ವೇಳೆ ಬೆಂಕಿಯ ಸುತ್ತ ಕುಳಿತು ಬಿಳಿಯರು ಬರುವುದಕ್ಕೆ ಮುಂಚಿನ ಸುಖದ ಹಳೆಯ ದಿನಗಳ ಕುರಿತು ಮಾತನಾಡುತ್ತಿದ್ದುದನ್ನು ಅವರು ಆಸಕ್ತಿಯಿಂದ ಕೇಳಿದರು. ಆಗ ಅವರಲ್ಲಿ ಮೊದಲ ಬಾರಿಗೆ ರಾಜಕೀಯ ಪ್ರಜ್ಞೆ ಮೂಡಿತು.

> ವಿಮೋಚನೆ ಮತ್ತು ದೇಶ ರಕ್ಷಣೆಗಾಗಿ ನಮ್ಮ ಪೂರ್ವಜರು ಮಾಡಿದ ಹೋರಾಟ ಮತ್ತು ಆ ವೀರಗಾಥೆಯ ದಿನಗಳಲ್ಲಿ ಸೇನಾಪತಿಗಳು ಮತ್ತು ಸೈನಿಕರು ತೋರಿದ ಪರಾಕ್ರಮದ ಕುರಿತು ಹಿರಿಯರು ನಮಗೆ ಹೇಳುತ್ತಲೇ ಇದ್ದರು. ಬದುಕು ನನಗೆ ಕೊಡಬಹುದಾದ ಸಂತೋಷಗಳಲ್ಲಿ ನನ್ನ ಜನರ ಸೇವೆ ಮಾಡುವ ಅವಕಾಶವೂ ಇರುವುದು. ಸ್ವಾತಂತ್ರ್ಯಕ್ಕಾಗಿ ಅವರು ನಡೆಸುವ ಹೋರಾಟಕ್ಕೆ ವಿನಮ್ರ ಕಾಣಿಕೆ ಅರ್ಪಿಸಬೇಕು ಎಂದು ನಾನು ಆಶಿಸಿದೆ; ನಂತರ ಪ್ರತಿಜ್ಞೆ ಮಾಡಿದೆ

ಎಂದು ಅವರು ತಮ್ಮ ಜೀವನ ಚರಿತ್ರೆಯ ಟಿಪ್ಪಣಿಯಲ್ಲಿ ಬರೆದಿದ್ದಾರೆ.

ಹದಿಹರೆಯದ ಮನದಲ್ಲಿ ಸಾಹಸದ ಬೀಜಗಳು ಮೊಳಕೆ ಒಡೆದವು. ಮಿಷನ್ ಸ್ಕೂಲಿಗೆ ಸೇರಿದಾಗ ಅವರಿಗೆ ಅಚ್ಚರಿ ಕಾದಿತ್ತು. ಇತಿಹಾಸ ಗ್ರಂಥಗಳಲ್ಲಿ ಬಿಳಿಯ ವೀರರು ಮಿಂಚುತ್ತಿದ್ದರು. ಕರಿಯರು ಅನಾಗರಿಕರು ಮತ್ತು ದನಗಳ್ಳರು ಎಂದು ಮೂಲೆಗುಂಪಾಗಿದ್ದರು!

### ಹೃದಯವಿದ್ರಾವಕ ಘಟನೆಗಳು

ಈಸ್ಟನ್‌ರ ಕೇಪ್‌ನ ಬುಲ್ ಹೊಯೆಕ್ ಬಳಿ ಯಹೂದ್ಯರ ಪಂಗಡದವರು ವಾಸವಾಗಿದ್ದರು. ಆ ಪ್ರದೇಶ ಬಿಟ್ಟು ತೊಲಗಬೇಕೆಂದು ಸರ್ಕಾರ ೧೯೨೧ರಲ್ಲಿ ಅಜ್ಞೆ ಮಾಡಿತು. ಆ ಊರೊಟ್ಟಿನ ಜಮೀನನ್ನು ಬಿಟ್ಟು ಬೇರೆ ಕಡೆ ವಲಸೆ ಹೋಗಲು ಅವರು ಒಪ್ಪಲಿಲ್ಲ. ಆಗ ಪ್ರಧಾನಿ ಆಗಿದ್ದ ಜನರಲ್ ಸ್ಮುಟ್ಸ್ ಸೈನ್ಯ ಕಳಿಸಿ ಅವರ ಮೇಲೆ ದಾಳಿ ಮಾಡಿಸಿದ. ಆ ಹತ್ಯಾಕಾಂಡದಲ್ಲಿ ೧೬೩ ಮಂದಿ ಪುರುಷರು, ಮಹಿಳೆಯರು ಮತ್ತು ಮಕ್ಕಳು ಸತ್ತರು.

ದಕ್ಷಿಣ ಆಫ್ರಿಕಾದ ಆಳ್ವಿಕೆಗೆ ಒಳಪಟ್ಟಿದ ನಮೀಬಿಯಾದ ಬೊಂಡೆಲ್ಸ್ ವಾಟ್ಸ್ ಪ್ರದೇಶದ ಜನರು ಸಾಕಿದ ನಾಯಿಗಳ ಮೇಲೆ ಕರ ಹೇರಲಾಯಿತು. ತೀರ ಬಡವರಾದ ಅವರು ನಾಯಿಕರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಹೀಗಾಗಿ ನಿರಾಕರಿಸಿದರು. ಆಗ ಸ್ಮುಟ್ಸ್ ಕೋಪೋದ್ರಿಕ್ತನಾದ. ವಿಮಾನಗಳ ಮೂಲಕ ಅವರ ಮೇಲೆ ಬಾಂಬು ದಾಳಿ ಮಾಡಿಸಿದ. ಆಗ ನೂರಾರು ಮಂದಿ ಅಮಾಯಕರು ಅಸು ನೀಗಿದರು. ಈ ಹೃದಯ ವಿದ್ರಾವಕ ಘಟನೆಗಳು ಯುವ ನೆಲ್ಸನ್ ಮನಸ್ಸಿನ ಮೇಲೆ ಆಳವಾದ ಪರಿಣಾಮ ಬೀರಿದವು. ಬೋಅರ್ ಯುದ್ಧದ ಮೂಲಕ ಯಾದವೀ ಕಲಹದ ದುರಂತವನ್ನು ಅರಿತುಕೊಂಡರು.

ಡಚ್ ಮತ್ತು ಆಂಗ್ಲ ಬಿಳಿಯರು ಎಷ್ಟೇ ಕಾದಾಡಿದರೂ ಕರಿಯರ ವಿಚಾರ ಬಂದಾಗ ಎಲ್ಲ ಮರೆತು ಒಂದಾಗುತ್ತಾರೆ ಎಂಬುದನ್ನು ಅವರು ಮರೆಯಲಿಲ್ಲ.

೧೯೩೦ರಲ್ಲಿ ತಂದೆ ಹೆನ್ರಿ ನಿಧನರಾದರು. ನಂತರ ನೆಲ್ಸನ್ ಅವರ ಯೋಗಕ್ಷೇಮವನ್ನು ಸಾರ್ವಭೌಮ ನಾಯಕ ಡೇವಿಡ್ ನೋಡಿಕೊಂಡರು. ಆ ಸಾರ್ವಭೌಮ ನಾಯಕನ ಪ್ರದೇಶವಾದ ಮಕೆಕೆಜ್ವೆನಿಗೆ ಬಂದಾಗ ನೆಲ್ಸನ್‌ಗೆ ೧೨ ವರ್ಷ.

> ಹದಿನಾರನೇ ವಯಸ್ಸಿಗೆ ನಮ್ಮ ಪದ್ಧತಿಯ ಪ್ರಕಾರ ನಾನು ಮಬಷೆ ನದಿ ದಂಡೆಯಲ್ಲಿರುವ ಸುನತಿ ಮಠಕ್ಕೆ ಹೋದೆ. ನನ್ನ ಅನೇಕ ಪೂರ್ವಜರಿಗೆ ಆ ಸ್ಥಾನದಲ್ಲಿ ಸನತಿ ಆಗಿತ್ತು. ನನ್ನ ಬುಡಕಟ್ಟಿನ ದರ್ಜೆಯ ಪ್ರಕಾರ ಸದ್ಯ ನಾನು ಇಂಬಿಜೊ ಬುಡಕಟ್ಟಿನ ಲೋಕಸಭೆಯಲ್ಲಿ ಭಾಗವಹಿಸಲು ಸಿದ್ಧನಾದ ವ್ಯಕ್ತಿಯಾಗಿದ್ದೆ

ಎಂದು ಮಂಡೇಲಾ ತಿಳಿಸಿದ್ದಾರೆ. ಈ ಸಮಯದಲ್ಲಿ, ಅವರು ಸಮೀಪದ ಕ್ಲಾರ್ಕಬರಿ ತರಬೇತಿ ಮಹಾವಿದ್ಯಾಲಯ ಸೇರಿದ್ದರು.

ರಜೆಯ ದಿನಗಳಲ್ಲಿ ನಾಯಕ ಸಾರ್ವಭೌಮ ಡೆವಿಡ್ ತನ್ನ ಬುಡಕಟ್ಟು ನ್ಯಾಯಾಲಯದಲ್ಲಿ ತೀರ್ಪು ನೀಡುವುದನ್ನು ಆಸಕ್ತಿಯಿಂದ ಗಮನಿಸುತ್ತಿದ್ದರು. ಡೇವಿಡ್ ಬೇರೆ ಅನೇಕ ಬುಡಕಟ್ಟುಗಳ ನಾಯಕರ ಹಾಗೆ ಬಿಳಿಯರ ಗುಮಾಸ್ತರಂತೆ ಇರದೆ ಸ್ವಾಭಿಮಾನಿ ಆಗಿದ್ದರು. ಜನರ ಗೌರವವನ್ನೂ ಸಂಪಾದಿಸಿದ್ದರು. ಇದನ್ನೆಲ್ಲ ನೋಡಿದ ನೆಲ್ಸನ್ ನ್ಯಾಯವಾದಿ ಆಗುವ ಕನಸು ಕಂಡರು. ಹೆಲ್ಡ್ ಟನ್ ಮೆಥೊಡಿಸ್ಟ್ ಪ್ರೌಢಶಾಲೆಯಿಂದ ಮೆಟ್ರಿಕ್ ಪಾಸಾದ ನಂತರ ಈಸ್ಟರ್ನ್ ಕೇಪ್‌ನಲ್ಲಿ ಇರುವ ಅಲಿಸೆ ಗ್ರಾಮದ ಫೋರ್ಟ್ ಹ್ಯಾರೆ ಕಾಲೇಜಿಗೆ ಬಿ.ಎ. ಓದಲು ಸೇರಿದರು. ದಕ್ಷಿಣ ಆಫ್ರಿಕಾ ಅಷ್ಟೇ ಅಲ್ಲ, ಪೂರ್ವ ಮತ್ತು ಮಧ್ಯ ಆಫ್ರಿಕಾದ ಅನೇಕ ಕಪ್ಪು ನಾಯಕರು ಆ ಕಾಲೇಜಿನಲ್ಲೇ ಓದಿದವರಾಗಿದ್ದರಿಂದ ಅದಕ್ಕೊಂದು ವಿಶೇಷ ಮಹತ್ವವಿತ್ತು. ಕಾಲೇಜಿನಲ್ಲಿ ಒಂದು ವರ್ಷ ಹಿರಿಯರಾಗಿದ್ದ, ಸದ್ಯ ಎ.ಎನ್.ಸಿ. ಅಧ್ಯಕ್ಷರಾಗಿರುವ ಆಲಿವರ್ ಟಾಂಬೊ ಅವರ ಪರಿಚಯವಾಯಿತು. ಮುಂದೆ ಸ್ವಲ್ಪ ಸಮಯದ ನಂತರ ವಿದ್ಯಾರ್ಥಿ ಚಳವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಅವರಿಬ್ಬರನ್ನು ಕಾಲೇಜಿನಿಂದ ಸಸ್ಪೆಂಡ್ ಮಾಡಲಾಯಿತು. ಡೇವಿಡ್ ಡಲಿಂಡಿಯೆ ಬೊರವರ ಬಳಿಗೆ ವಾಪಸ್ ಹೋದಾಗ ನೆಲ್ಸನ್ ೨೨ ವರ್ಷದ ಯುವಕರಾಗಿದ್ದರು. ಅವರ ಮದುವೆ ಮಾಡಬೇಕೆಂದು ಬಯಸಿದ ಡೇವಿಡ್ ಕನ್ಯೆಯನ್ನು ಆಯ್ಕೆ ಮಾಡಿದರು. ಲೊಬೋಲೊ (ಕನ್ಯಾದಕ್ಷಿಣೆ) ಕೂಡ ಕೊಟ್ಟಾಯಿತು. ಮದುವೆ ಏರ್ಪಾಟುಗಳು ನಡೆದವು. ಮದುವೆ ನಂತರ ಅವರನ್ನು ಥೆಂಬುಗಳ ನಾಯಕರನ್ನಾಗಿ ಮಾಡಲು ನಿರ್ಧರಿಸಲಾಯಿತು.

> ಆತ (ಡೇವಿಡ್) ನನ್ನನ್ನು ಬಹಳವಾಗಿ ಪ್ರೀತಿಸಿದರು. ಆದರೆ ಅವರು ಪ್ರಜಾಪ್ರಭುತ್ವವಾದಿ ಆಗಿರಲಿಲ್ಲ. ಮದುವೆ ಹೆಣ್ಣಿನ ವಿಚಾರದಲ್ಲಿ ನನ್ನ

ಸಲಹೆ ಕೇಳುವುದು ಪ್ರಯೋಜನಕಾರಿ ಎಂದು ಆತ ಯೋಚಿಸಿರಲಿಲ್ಲ.

ದಪ್ಪನೆಯ ಮತ್ತು ಗೌರವಸ್ಥಳಾದ ಹುಡುಗಿಯನ್ನು ಆಯ್ಕೆ ಮಾಡಿದರು ಎಂದು ನೆಲ್ಸನ್ ಮಂಡೇಲಾ ಹೇಳಿದ್ದಾರೆ. ಥೆಂಬುಗಳ ನಾಯಕನಾಗುವುದು ಇನ್ನೂ ಹೆಚ್ಚಿನ ಬೇಸರ ಹುಟ್ಟಿಸುವ ವಿಚಾರವಾಗಿತ್ತು. ತುಳಿತಕ್ಕೊಳಗಾದ ಜನರನ್ನು ಎಂದೂ ಆಳಬಾರದು ಎಂದು ನಿರ್ಧರಿಸಿದ ಅವರು ಸೋದರಳಿಯ ಮಿತಿರಾರಾ ಜತೆ ಜೊಹಾನ್ಸ್ ಬರ್ಗ್‌ಗೆ ಓಡಿ ಹೋದರು. ಅಂದಿನಿಂದ ಅವರು ಹೋರಾಟದ ಸಾಗರವನ್ನೂ ಈಜತೊಡಗಿದರು. ಕರಿಯರ ಕೋಸ್ಸಾ ಭಾಷೆಯಲ್ಲಿ ಅವರ ಹೆಸರು ರೋಲಿ ಹ್ ಲಾಹ್ಲಾ. ಅಂತೆಯೆ ನೆಲ್ಸನ್ ರೋಲಿಹ್ ಲಾಹ್ಲಾ ಮಂಡೇಲಾ ಎಂದು ಕರೆಯುತ್ತಾರೆ. ರೋಲಿಹ್ ಲಾಹ್ಲಾ ಎಂದರೆ ಕಷ್ಟಗಳನ್ನು ಕೆದಕುವವ ಎಂದರ್ಥ. ೧೯೪೧ರಲ್ಲಿ ಬೃಹತ್ ಔದ್ಯೋಗಿಕ ಕೇಂದ್ರವಾದ ಜೊಹಾನ್ಸ್ ಬರ್ಗ್‌ಗೆ ಬರುವ ಹೊತ್ತಿಗೆ ಅವರು ಭರವಸೆ ಹುಟ್ಟಿಸುವ ಕ್ರೀಡಾಪಟು ಆಗಿದ್ದರು. ಬಾಕ್ಸಿಂಗ್‌ನಲ್ಲಿ ಅವರಿಗೆ ವಿಶೇಷ ಆಸಕ್ತಿ ಇತ್ತು. ರಾಜ ಮನೆತನದ ಗಾಂಭೀರ್ಯ ಮತ್ತು ಕ್ರೀಡಾಪಟುವಿನ ತೇಜಸ್ಸನ್ನು ಹೊಂದಿದ್ದ ಮಂಡೇಲಾ ಸುರಕ್ಷಿತ ಬದುಕಿನಿಂದ ಚಂಡಮಾರುತಗಳಿಂದ ಕೂಡಿದ ಬದುಕಿಗೆ ಕಾಲಿಟ್ಟರು. ಜೊಹಾಬರ್ಗ್‌ನ ಜನಸಾಗರದಲ್ಲಿ ಒಂದಾಗಿ ಹೋದರು.

ಭೂಮಿಯನ್ನು ಕಳಕೊಂಡ ಕರಿಯರು ಹೊಟ್ಟೆಪಾಡಿಗಾಗಿ ಗಣಿಕಾರ್ಖಾನೆಗಳಲ್ಲಿ ಕಡಿಮೆ ಕೂಲಿಗೆ ದುಡಿಯುವುದು ಸಹಜವಾಗಿ ಹೋಗಿತ್ತು. ಆ ವೇಳೆಗೆ ಬಹಳಷ್ಟು ಕರಿಯರು ಕಪ್ಪು ಕಾರ್ಮಿಕ ವರ್ಗವಾಗಿ ರೂಪಗೊಂಡಿದ್ದರು. ನಗರಕ್ಕೆ ಬಂದ ಮಂಡೇಲಾ ಇದೇ ತೆರನಾದ ಕೆಲಸ ಮಾಡಲು ಸಿದ್ಧವಾದರು. ಜೊಹಾನ್ಸ್ ಬರ್ಗ್‌ನ ಕ್ರೌನ್ ಮೈನ್ಸ್‌ನಲ್ಲಿ ಗೇಟು ಕಾಯುವ ಕೆಲಸ ಮಾಡಿದರು ಕೆಲದಿನಗಳ ನಂತರ ಥೆಂಬುಗಳ ನಾಯಕ ಸಾರ್ವಭೌಮನ ಪ್ರತಿನಿಧಿ ಬಂದಾಗ ನೆಲ್ಸನ್ ಅಲ್ಲಿಂದ ಕಾಲು ಕೀಳಬೇಕಾಯಿತು. ಜೊಹಾನ್ಸ್ ಬರ್ಗ್‌ನ ಹೊರವಲಯದಲ್ಲಿರುವ ಅಲೆಕ್ಸಾಂಡ್ರಾ ಉಪನಗರದಲ್ಲಿ ಕೋಣೆಯೊಂದು ಸಿಕ್ಕಿತು. ನಂತರ ವಾಲ್ಟೇರ್ ಸಿಸುಲು ಅವರ ಭೇಟಿಯಾಯಿತು. ಕರಿಯರ ಭೂ ವ್ಯವಹಾರಕ್ಕೆ ಸಂಬಂಧಿಸಿದಂತೆ ಸಿಸುಲು ಚಿಕ್ಕ ಎಸ್ಟೇಟ್ ಏಜನ್ಸಿ ನಡೆಸುತ್ತಿದ್ದರು. ನೆಲ್ಸನ್ ಆ ಏಜೆನ್ಸಿಯಲ್ಲಿ ಏಜೆಂಟ್ ಆಗಿ ಒಂದು ವರ್ಷದವರೆಗೆ ಕೆಲಸ ಮಾಡಿದರು. ಆಗ ತಿಂಗಳಿಗೆ ಎರಡು ಪೌಂಡ್ ಮತ್ತು ಸ್ವಲ್ಪ ಕಮೀಷನ್ ಬರುತ್ತಿತ್ತು. ಅದರ ಬದುಕಿನ ಅತ್ಯಂತ ಕಠಿಣ ಸಮಯ ಅದಾಗಿತ್ತು. ಇದೇ ಸಮಯದಲ್ಲಿ ಅಂಚೆ ಮೂಲಕ ಬಿ.ಎ.ಪದವಿ ಪಡೆದರು. ಅದಕ್ಕಾಗಿ ಸಿಸುಲು ಆರ್ಥಿಕ ಸಹಾಯ ಮಾಡಿದರು. ಸಿಸುಲು ಸಹಾಯದಿಂದ ೧೯೪೨ರಲ್ಲಿ ಜೊಹಾನ್ಸ್ ಬರ್ಗ್‌ನಲ್ಲಿನ ವಿಟ್ ಕಿನ್, ಸಿಡೆಲ್ಸ್ ಕಿ ಮತ್ತು ಈಡೆಲ್ ಮನ್ ವ್ಯವಹಾರ ಪ್ರತಿನಿಧಿಗಳ ಸಂಸ್ಥೆ ಸೇರಿದರು. ಇದರಿಂದಾಗಿ ವಿಟ್ ವಾಟರ್ಸ್ ರ್ಯಾಂಡ್ ವಿಶ್ವವಿದ್ಯಾನಿಲಯದ ಕಾನೂನು ವಿದ್ಯಾರ್ಥಿ ಆಗಲೂ ಸಾಧ್ಯವಾಯಿತು. 'ಈ ಸಂಸ್ಥೆಗಳಲ್ಲಿ ನಾನು ಪಡೆದ ಅನುಭವಗಳಲ್ಲಿ ಎರಡು ದಾಖಲಾತಿಗೆ ಯೋಗ್ಯವಾಗಿವೆ' ಎಂದು ನೆಲ್ಸನ್ ತಿಳಿಸಿದ್ದಾರೆ.

**ಹೊಸ ಬಟ್ಟಲು-ಹಳೆಮನಸ್ಸು**

ಮೊದಲ ದಿನ ಕಚೇರಿಗೆ ಹೋದಾಗ ಬಿಳಿಯ ಹಿರಿಯ ಟೈಪಿಸ್ಟ್ ಹೇಳಿದಳು.

> ನೋಡಿ ನೆಲ್ಸನ್ ಇಲ್ಲಿ ವರ್ಣದ ಅಡೆತಡೆ ಇಲ್ಲ. ಚಹದ ಹುಡುಗ ಚಹಾ ತಂದಾಗ ತಟ್ಟೆಯಿಂದ ನಿಮ್ಮದನ್ನು ತೆಗೆದುಕೊಳ್ಳಿ. ನಿಮಗೆ ಮತ್ತು ಗೌರ್ ರಾದಿಕೆ(ಇನ್ನೊಬ್ಬ ಕರಿಯ ನೌಕರ)ಗಾಗಿ ನಾವು ಹೊಸ ಬಟ್ಟಲುಗಳನ್ನು ತಂದಿದ್ದೇವೆ ನೀವು ಅವುಗಳನ್ನು ಉಪಯೋಗಿಸಿಕೊಳ್ಳಿ. ನಿಮ್ಮ ಬಟ್ಟಲುಗಳ ವಿಚಾರದಲ್ಲಿ ಗೌರ್‌ಗೆ ಹೇಳಿ. ಆತನ ಬಗ್ಗೆ ಎಚ್ಚರದಿಂದಿರಿ. ನೆಲ್ಸನ್ ಆತ ಕೆಟ್ಟ ಪ್ರಭಾವ ಬೀರುವಂಥವನಾಗಿದ್ದಾನೆ.

ನಾನು ಗೌರ್‌ಗೆ ಸಕಾಲದಲ್ಲಿ ಹೇಳಿದೆ 'ನಾನು ನಿಮಗೆ ತೋರಿಸುವೆ ನಾನು ಮಾಡಿದ ಹಾಗೆ ಮಾಡಿ' ಎಂದು ಆತ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಚಹಾ ಬಂದಾಗ ಗೌರ್ ಹೊಸ ಬಟ್ಟಲುಗಳನ್ನು ಬಹಿಷ್ಕರಿಸಿದರು. ಹಳೆಯದರಲ್ಲಿನ ಒಂದು ಬಟ್ಟಲನ್ನು ಎತ್ತಿಕೊಂಡರು. ಅವರ ಜೊತೆಗಾಗಲಿ ಹಿರಿಯ ಟೈಪಿಸ್ಟ್ ಜೊತೆಗಾಗಲಿ ಜಗಳ ಮಾಡುವ ಇಚ್ಛೆ ನನಗಿರಲಿಲ್ಲ. ಆದ್ದರಿಂದ ತಿಂಗಳು ಗಟ್ಟಲೆ ನಾನು ಚಹಾ ಕುಡಿಯಲಿಲ್ಲ.

ಕೆಲ ತಿಂಗಳುಗಳ ನಂತರ ಹೊಸ ಟೈಪಿಸ್ಟ್ ಬಂದಳು. ಆಕೆ ಕೂಡ ಬಿಳಿಯಳು. ಮಾಡಲು ಏನೂ ಕೆಲಸವಿಲ್ಲದಾಗ ನನಗೆ ಕೆಲಸ ಕೇಳುವ ಅಭ್ಯಾಸ ಆಕೆಗಿತ್ತು. ಒಂದು ದಿನ ನಾನು ಆಕೆಗೆ ಹೇಳಿ ಬರೆಯಿಸುವ ವೇಳೆ ಒಬ್ಬ ಬಿಳಿಯ ಗಿರಾಕಿ ಒಳಗೆ ಬಂದ. ಆಕೆ ಗೋಚರಿಸುವಂತೆ ಪೇಚಾಡಿಕೊಂಡಳು. ನಾನು ಆಕೆಗೆ ಕೆಲಸ ಕೊಡುವ ವ್ಯಕ್ತಿ ಅಲ್ಲ ಎಂಬುದನ್ನು ಪ್ರದರ್ಶಿಸುವುದಕ್ಕಾಗಿ ತನ್ನ ಪರ್ಸ್‌ನಿಂದ ಆರು ಪೆನ್ನಿ ತೆಗೆದು 'ನೆಲ್ಸನ್ ದಯವಿಟ್ಟು ಅಂಗಡಿಗೆ ಹೋಗಿ ಶಾಂಪೂ ತೆಗೆದುಕೊಂಡು ಬನ್ನಿ ಎಂದಳು' ಎಂದು ನೆಲ್ಸನ್ ಮಂಡೇಲಾ ಅವರು ತಮ್ಮ ಟಿಪ್ಪಣಿಯಲ್ಲಿ ಬರೆದಿದ್ದಾರೆ. ಅಲ್ಲಿ ಇಂತಹ ಅಪಮಾನಗಳು ಎಂಥ ಕರಿಯರಿಗೂ ತಪ್ಪಿದ್ದಲ್ಲ.

ಮಂಡೇಲಾ ಅವರು ಕಾನೂನಿನ ವಿದ್ಯಾರ್ಥಿ ಅಗಿದ್ದಾಗಲೇ ಎವೆಲಿನ್ ಎಂಬ ಮೃದು ಸ್ವಭಾವದ ನರ್ಸ್ ಅನ್ನು ಮದುವೆ ಆದರು. ಅವರು ಆರ್ಲ್ಯಾಂಡೊದಲ್ಲಿ ಮನೆ ಮಾಡಿದ್ದರು. ನೆಲ್ಸನ್ ಶಿಕ್ಷಣಕ್ಕೆ ಎವೆಲಿನ್ ಧನ ಸಹಾಯ ಮಾಡುತ್ತಿದ್ದಳು. ಜೊಹಾನ್ಸ್ ಬರ್ಗ್‌ನಿಂದ ಹತ್ತು ಮೈಲಿ ದೂರವಿರುವ ಆ ಉಪನಗರಕ್ಕೆ ಈಗ ಸೊವೆಟೊ ಎಂದು ಕರೆಯುತ್ತಾರೆ. ಸಿಸುಲು ಅವರ ಪತ್ನಿ ಅಲ್ಬರ್ಟಿನಾ ಕೂಡ ನರ್ಸ್ ಆಗಿದ್ದರು. ಇದೇ ವೇಳೆಗೆ ಸೇಂಟ್ ಪೀಟರ್ಸ್ ಶಾಲೆಯಲ್ಲಿ ವಿಜ್ಞಾನದ ಶಿಕ್ಷಕರಾಗಲು ಆಲಿವರ್ ಟಾಂಬೊ ಜೊಹಾನ್ಸ್ ಬರ್ಗ್‌ಗೆ ಬಂದರು.

**ಕಪ್ಪು ಪ್ರಜ್ಞೆ**

ಜನ್ಮಭೂಮಿಯ ನಿಸರ್ಗ ಸೌಂದರ್ಯ, ರಾಜ ಮನೆತನದ ಸಂಪ್ರದಾಯಗಳಿಂದ ಕೂಡಿದ ಬಾಲ್ಯ, ಪೂರ್ವಜರ ಸಾಹಸ, ತಾಯಿಯ ಗಾಂಭೀರ್ಯ, ತಂದೆಯ ಶಿಸ್ತು, ನಾಯಕ

ಸಾರ್ವಭೌಮನ ಆತ್ಮಾಭಿಮಾನ ಹಾಗೂ ದೈನಂದಿನ ಅಪಮಾನ ಮತ್ತು ದಬ್ಬಾಳಿಕೆಗೆ ಒಳಗಾದ ಕರಿಯರ ಚಿಂತಾಜನಕವಾದ ಆರ್ಥಿಕ ಮತ್ತು ಸಾಮಾಜಿಕ ಬದುಕಿನಿಂದಾಗಿ ನೆಲ್ಸನ್ ಮಂಡೇಲಾ ಕಪ್ಪು ಪ್ರಜ್ಞೆಯ ಪ್ರತಿಪಾದಕರಾಗಿ ಬೆಳೆದು ನಿಂತಿದ್ದರು. ಎಲ್ಲ ಜನಾಂಗಗಳು ತಮ್ಮ ತಮ್ಮ ಬುಡಕಟ್ಟು ಪ್ರಜ್ಞೆಯಿಂದ ಹೊರ ಬಂದು ಒಟ್ಟಾರೆ ಕಪ್ಪು ಪ್ರಜ್ಞೆಯೊಂದಿಗೆ ಬಿಳಿಯರ ವಿರುದ್ಧ ಹೋರಾಡುವುದು ಅನಿವಾರ್ಯ ಎಂಬ ನಿರ್ಧಾರಕ್ಕೆ ಬಂದರು. ತಾನೊಬ್ಬ ಥೆಂಬು ರಾಜಮನೆತನದ ವ್ಯಕ್ತಿ ಎಂದು ಭಾವಿಸುವುದಕ್ಕಿಂತಲೂ ಆಫ್ರಿಕನ್ ರಾಷ್ಟ್ರೀಯವಾದಿ ಎಂದು ಗುರುತಿಸಿಕೊಳ್ಳುವುದು ಅವರಿಗೆ ಪ್ರಿಯವಾಯಿತು. ಹೀಗಾಗಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಅವರನ್ನು ಸಹಜವಾಗಿ ಆಕರ್ಷಿಸಿತು.

**ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್**

ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ೧೯೧೨ನೇ ಜನವರಿ ಆರಂದು ಸ್ಥಾಪನೆ ಆಯಿತು. ಪ್ರಾರಂಭದಲ್ಲಿ ಸೌತ್ ಆಫ್ರಿಕನ್ ನೇಟಿವ್ ನ್ಯಾಷನಲ್ ಕಾಂಗ್ರೆಸ್ ಎಂದು ಹೆಸರಿಡಲಾಗಿತ್ತು. ೧೯೧೨ನೇ ಜನವರಿ ಆರಿಂದ ೧೨ರವರೆಗೆ ಬ್ಲೊಮೆಮ್ ಫೊಂಟೀನ್ ನಲ್ಲಿ ಸಮ್ಮೇಳನ ನಡೆಯಿತು. ಕೊಲಂಬಿಯಾ, ಆಕ್ಸ್ ಫರ್ಡ್ ಮತ್ತು ಮಿಡ್ಲ್ ಟೆಂಪಲ್ ನಲ್ಲಿ ಶಿಕ್ಷಣ ಪಡೆದ ಜುಲು ವಕೀಲ ಪ್ರಿಕ್ಸ್ ಲೆಕಾ ಇಜಾಕಾ ಸೆಮೆ ಈ ಪಕ್ಷದ ಸ್ಥಾಪನೆಗೆ ತುಂಬ ಪ್ರಯತ್ನ ಪಟ್ಟರು. ದಕ್ಷಿಣ ಆಫ್ರಿಕಾದ ಎಲ್ಲ ಬುಡಕಟ್ಟುಗಳ ಕಪ್ಪು ಜನರನ್ನು ಒಂದುಗೂಡಿಸುವುದೇ ಈ ಪಕ್ಷ ಸ್ಥಾಪನೆಯ ಮುಖ್ಯ ಉದ್ದೇಶವಾಗಿತ್ತು. ಬುಡಕಟ್ಟುಗಳ ನಾಯಕರು, ಅವರ ಅನುಯಾಯಿಗಳು, ರಾಜಕೀಯ ಸಂಘಟನೆಗಳ ನಾಯಕರು, ಬಂಟುಸ್ತಾನ್‌ಗಳ ಮಂತ್ರಿಗಳು, ಶಿಕ್ಷಕರು, ಪತ್ರಕರ್ತರು ಮತ್ತು ವಕೀಲರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಅಮೆರಿಕದಲ್ಲಿ ತರಬೇತಿ ಪಡೆದ ಶಿಕ್ಷಣತಜ್ಞ ರೆವೆರೆಂಡ್ ಜಾನ್ ಡುಬೆ (ಜುಲು ಬುಡಕಟ್ಟು) ಅವರನ್ನು ಕಾಂಗ್ರೆಸ್‌ನ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಸೆಮೆ ಖಜಾಂಚಿಯಾಗಿ ಆಯ್ಕೆ ಆದರು. ಪತ್ರಕರ್ತ ಮತ್ತು ಕಾದಂಬರಿಕಾರ ಸೊಲ್ ಪಾಟಿ, ಪ್ರಧಾನ ಕಾರ್ಯದರ್ಶಿ ಆದರು. ರುಬುಸಾನಾ ಗೌರವಾಧ್ಯಕ್ಷರಾದರು. ಮಫೆಕಿಂಗ್, ಬುಸುತೊಲ್ಯಾಂಡ್, ಪ್ರಿಟೋರಿಯಾ, ಜೊಹಾನ್ಸ್ ಬರ್ಗ್‌ನ ನತಾಲ್, ಬ್ಲೊಯೆಂಫೋಂಟೀನ್ ಮತ್ತು ಕೇಪ್ ಟೌನ್‌ಗಳಿಂದ ಉಪಾಧ್ಯಕ್ಷರನ್ನು ನೇಮಿಸಲಾಯಿತು. ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಸ್ಥಾಪನೆಯಿಂದಾಗಿ ವರ್ಣಭೇದ ನೀತಿಯ ವಿರುದ್ಧದ ಸಂಘಟಿತ ಹೋರಾಟಕ್ಕೆ ಹೊಸ ರೂಪ ಬಂತು. ಕರಿಯರು ಈ ಹಿಂದೆ ಅನುಭವಿಸಿದ್ದ ಸೋಲು ಮತ್ತು ಅನಿವಾರ್ಯತೆಗಳ ಮಧ್ಯದಿಂದ ಈ ರಾಜಕೀಯ ಸಂಘಟನೆ ಉದ್ಭವಿಸಿತು.

೧೯೧೦ರಲ್ಲಿ ಯೂನಿಯನ್ ಆಫ್ ಸೌತ್ ಆಫ್ರಿಕಾ ಅಸ್ತಿತ್ವಕ್ಕೆ ಬಂದು ಸಂಪೂರ್ಣ ಬಿಳಿಯರ ಸಂಪತ್ತು ರಚನೆ ಆದಾಗ ಸಲಿಗೆಯ ಹೊಸ ರೂಪಗಳಿಗೆ ಚಾಲನೆ ಸಿಕ್ಕಿತು. ಕರಿಯರಿಗೆ ಹೊಸ ರಾಜಕೀಯ ಪ್ರಜ್ಞೆ ಮೂಡತೊಡಗಿತು. ಅದರ ಮೂರ್ತ ಸ್ವರೂಪವೇ ಎ.ಎನ್.ಸಿ ಆಗಿದೆ. ಕ್ಸೋಸಾ ಭಾಷೆಯ ಕವಿ ಎನೋಜ್ ಸೊಂಟೊಂಗಾ ಬರೆದ ಪ್ರಾರ್ಥನಾ

ಗೀತವನ್ನು ಸಭೆಯ ಪ್ರಾರಂಭದಲ್ಲಿ ಹಾಡಲಾಯಿತು. ನಕೋಸಿ ಸಿಕೆಲೆಲ್ ಇ ಆಫ್ರಿಕಾ (ದೇವರೇ ಆಫ್ರಿಕಾದ ಮೇಲೆ ಕರುಣೆ ತೋರು) ಎಂಬುದು ಆ ಗೀತದ ಮೊದಲು ಸಾಲು. ಆ ಪ್ರಾರ್ಥನಾ ಗೀತೆ ನಂತರ ಎ.ಎನ್.ಸಿ.ಯ ರಾಷ್ಟ್ರಗೀತೆ ಆಯಿತು. ೧೯೨೫ರಲ್ಲಿ ಕಪ್ಪು, ಹಸಿರು ಮತ್ತು ಚಿನ್ನದ ಬಣ್ಣಗಳ ಧ್ವಜ ಪಡೆಯಿತು. ಈ ಬಣ್ಣಗಳು ಅನುಕ್ರಮವಾಗಿ ಜನ, ಭೂಮಿ ಮತ್ತು ಸಂಪನ್ಮೂಲಗಳ ಪ್ರತೀಕ ಆಗಿವೆ.

೧೯೧೩ರಲ್ಲಿ ದಕ್ಷಿಣ ಆಫ್ರಿಕಾ ಸರ್ಕಾರ ನೇಟಿವ್ ಲ್ಯಾಂಡ್ ಕಾಯ್ದೆ ಮೂಲಕ ಕರಿಯರ ಜಮೀನನ್ನು ಸ್ವಾಧೀನಪಡಿಸಿಕೊಂಡಿತು. ಆಗ ಕರಿಯರಿಗೆ ಉಳಿದದ್ದು ಕೇವಲ ಶೇ.೧೨.೭ರಷ್ಟು ಭೂಮಿ. ಈ ಕಾಯ್ದೆ ಮಸೂದೆ ರೂಪದಲ್ಲಿ ಇದ್ದಾಗ ಕರಿಯರಿಗೆ ಭೂಮಿಯಲ್ಲಿ ಯೋಗ್ಯ ಪಾಲು ದೊರೆಯುವುದೆಂಬ ಭ್ರಮೆ ಇತ್ತು. ಈ ಕುರಿತು ಎ.ಎನ್.ಸಿ.ಯ ನಾಯಕರಲ್ಲಿ ಕೂಡ ಭಿನ್ನಾಭಿಪ್ರಾಯ ಮೂಡಿತು. ಡುಬೆ ಕೂಡ ಈ ಮಸೂದೆಯನ್ನು ಬೆಂಬಲಿಸಿದರು. ಆದರೆ ಪ್ಲಾಟ್ಜೆ ವಿರೋಧಿಸಿದರು. ಡುಬೆ ಅಧ್ಯಕ್ಷ ಸ್ಥಾನ ಕಳೆದುಕೊಂಡರು. ಎಸ್.ಮಕ್ ಗಥೊ ಅಧ್ಯಕ್ಷರಾಗಿ ಆಯ್ಕೆ ಆದರು. ಎ.ಎನ್.ಸಿ.ಯ ಅಹಿಂಸಾ ಮಾರ್ಗದಿಂದಾಗಿ ಬಿಳಿಯರ ಸರ್ಕಾರ ಹೆಚ್ಚು ಕ್ರೂರಿ ಆಗುತ್ತ ಸಾಗಿತು. ಜನತೆಯ ಹೋರಾಟಗಳನ್ನು ಹಿಂಸೆಯಿಂದ ಸದೆಬಡಿಯಿತು. ಹೀಗಾಗಿ ೧೯೩೦ರ ದಶಕದಲ್ಲಿ ಎ.ಎನ್.ಸಿ ನಿಷ್ಕ್ರಿಯವಾಯಿತು. ಜೊಹಾನ್ಸ್ ಬರ್ಗ್‌ನ ಡಾ.ಎ.ಬಿ.ಕ್ಷುಮಾ ಡಿಸೆಂಬರ್ ೧೯೪೦ರಲ್ಲಿ ಎ.ಎನ್.ಸಿ ಅಧ್ಯಕ್ಷರಾದರು. ಸಾಮಾಜಿಕ ಮಾನವಶಾಸ್ತ್ರದ ಉಪನ್ಯಾಸಕ ಮತ್ಥೀವ್ಸ್ ಈ ಸಂದರ್ಭದಲ್ಲಿ ಎ.ಬಿ.ಕ್ಷುಮಾ ಅವರಿಗೆ ಹೆಚ್ಚು ಸಹಕಾರಿ ಆಗಿದ್ದರು.

ಅಧಿಕ ಲಾಭ ಬರುವ ಮತ್ತು ಕಡಿಮೆ ದರದಲ್ಲಿ ಕೂಲಿ ಸಿಗುವ ದಕ್ಷಿಣ ಆಫ್ರಿಕಾ ಬಹುರಾಷ್ಟ್ರೀಯ ಕಂಪೆನಿಗಳ ಸುಲಿಗೆಯ ಕೇಂದ್ರವಾಗಿ ಬೆಳೆಯತೊಡಗಿತು. ಅವುಗಳಿಗೆ ಪ್ರತಿಯಾಗಿ ಕಾರ್ಮಿಕ ಸಂಘಟನೆಗಳೂ ಬೆಳೆಯತೊಡಗಿದವು. ೧೯೪೨ರಲ್ಲಿ ಮುಷ್ಕರಗಳ ಮೇಲೆ ನಿಷೇಧ ಹೇರಲಾಯಿತು. ಆದರೆ ಮುಷ್ಕರಗಳನ್ನು ನಿಲ್ಲಿಸಲಿಕ್ಕಾಗಲಿಲ್ಲ. ೧೯೪೨ರ ವೇಳೆಗೆ ಎ.ಎನ್.ಸಿ ಬಹಳ ನಿಷ್ಕ್ರಿಯವಾಗಿತ್ತು. ಆಫ್ರಿಕನ್ ಡೆಮಾಕ್ರಟಿಕ್ ಪಾರ್ಟಿಯ ಸ್ಥಾಪನೆಗಾಗಿ ಅನೇಕರು ಎ.ಎನ್.ಸಿ ಬಿಟ್ಟರು. ವಾಲ್ಟೇರ್ ಸಿಸುಲು, ಆಲಿವರ್ ಟಾಂಬೊ ಮತ್ತು ನೆಲ್ಸನ್ ಮಂಡೇಲಾ ಅವರಿಗೆ ಇದು ಸರಿಬೀಳಲಿಲ್ಲ. ಎ.ಎನ್.ಸಿ ಬಲಪಡಿಸಲು ನಿರ್ಧರಿಸಿದರು. ಸಿಸುಲು ಈ ವೇಳೆಗಾಗಲೆ ಎ.ಎನ್ .ಸಿ ಸದಸ್ಯರಾಗಿದ್ದರು.

ಮಂಡೇಲಾ ಮತ್ತು ಗೆಳೆಯರು ಕೂಡಿ ಎ.ಎನ್.ಸಿ. ಯೂತ್ ಲೀಗ್ ಪ್ರಾರಂಭಿಸಿದರು. ಆ ಮೂಲಕ ಎ.ಎನ್.ಸಿ.ಯನ್ನು ಚುರುಕುಗೊಳಿಸತೊಡಗಿದರು. ಇವರ ಪ್ರಯತ್ನ ಡಾ.ಕ್ಷುಮಾ ಅವರಿಗೆ ಹೆಚ್ಚಿನ ಸಂತಸ ತಂದಿತು.

೧೯೪೪ನೇ ಏಪ್ರಿಲ್‌ನಲ್ಲಿ ಅಂಟೋನ್ ಮುಜಿವಖೆ ಲೆಂಬೆಡೆ ಯೂತ್ ಲೀಗ್ ಅಧ್ಯಕ್ಷರಾಗಿ ಆಯ್ಕೆ ಆದರು. ಆಲಿವರ್ ಟಾಂಬೊ ಕಾರ್ಯದರ್ಶಿ ಆದರು. ಎ.ಪಿ.ಮದಾ ಅವರು ಸಿದ್ಧಪಡಿಸಿದ ಮೂಲ ನೀತಿಗೆ ಅಂತಿಮ ರೂಪ ಕೊಟ್ಟರು. ಶಕ್ತಿಶಾಲಿಯಾದ ವಿಮೋಚನಾ ಹೋರಾಟಗಳಿಗಾಗಿ ಯೂತ್ ಲೀಗ್ ಬೆಳೆಸಲು ಆಶಿಸಿದರು.

ಲೆಂಬೆಡೆ ಜುಲು ಕೃಷಿ ಕಾರ್ಮಿಕರ ಮಗ. ಅವರ ತಂದೆ-ತಾಯಿ ಕಡುಬಡವರಾಗಿದ್ದರು. ಅವರಿಗೆ ಉಡಲು ಬಟ್ಟೆ ಕೂಡ ಇರಲಿಲ್ಲ. ಗೋಣಿ ಚೀಲದಿಂದ ಉಡುಪು ತಯಾರಿಸಿ ಧರಿಸುತ್ತಿದ್ದರು. ಹೇಗಾದರೂ ಮಾಡಿ ಮಗನಿಗೆ ಶಿಕ್ಷಣ ಕೊಡಬೇಕೆಂಬುದು ಅವರ ಮಹದಾಶೆ ಆಗಿತ್ತು. ಲೆಂಬೆಡೆ ಮೊದಲು ಶಿಕ್ಷಕರಾಗಿ ನಂತರ ವಕೀಲರಾದರು. ಎ.ಪಿ.ಮದಾ ಕೂಡಾ ಮೊದಲು ಶಿಕ್ಷಕರಾಗಿದ್ದರು. ನಂತರ ವಕೀಲರಾದರು. ಈ ಗೆಳೆಯರಿಂದಾಗಿ ಆಫ್ರಿಕಾದ ವಿಮೋಚನಾ ಹೋರಾಟ ಹೊಸ ತಿರುವು ಪಡೆಯಿತು.

ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಅನ್ನು ಆಧುನಿಕಗೊಳಿಸುವಲ್ಲಿ ಮಂಡೇಲಾರ ಪಾತ್ರ ಹಿರಿದಾಗಿದೆ. ಸಂಘಟನೆಯಲ್ಲಿ ಅವರು ಅನೇಕ ಸುಧಾರಣೆಗಳನ್ನು ತಂದರು. ರಾಷ್ಟ್ರೀಯ ಚಳವಳಿಗೆ ಕ್ರಾಂತಿಯ ತಂತ್ರಗಳನ್ನು ಅಳವಡಿಸಿದರು. ವರ್ಣಭೇದ ನೀತಿಯ ಸರ್ಕಾರದ ವಿರುದ್ಧ ಒಂದುಗೂಡಿ ಹೋರಾಡಬೇಕಾದರೆ ಎಲ್ಲ ಕರಿಯರ ಬುಡಕಟ್ಟುಗಳ ಮಧ್ಯ ಸಮಾನತೆ ಸಾಧಿಸಬೇಕು. ವಿವಿಧ ಜನಾಂಗಗಳ ಸಂಸ್ಕೃತಿ ಮತ್ತು ಭಾಷೆಗಳ ಮಧ್ಯೆ ಸಂಪರ್ಕ ಉಂಟಾಗಬೇಕು. ವಿವಿಧ ರಾಷ್ಟ್ರೀಯತೆಗಳ ಬದಲು ಸಮಗ್ರ ರಾಷ್ಟ್ರೀಯ ಪ್ರಜ್ಞೆ ಮೂಡಿ ಬರಬೇಕು ಎಂಬ ತಮ್ಮ ನಿಲುವನ್ನು ಅವರು ಸಾಧಿಸಿದರು. ಅಷ್ಟೇ ಅಲ್ಲ ಕಾರ್ಮಿಕರು, ರೈತರು, ಮಹಿಳೆಯರು ಮತ್ತು ಯುವಕರನ್ನು ಹೋರಾಟದ ಮಂಚೂಣಿಯಲ್ಲಿ ತಂದರು. ಕರಿಯರು, ಭಾರತೀಯ ಮೂಲ ನಿವಾಸಿಗಳು ಮತ್ತು ಮಿಶ್ರವರ್ಣೀಯರ ಮಧ್ಯೆ ಒಗ್ಗಟ್ಟನ್ನು ಉಂಟು ಮಾಡಿದರು. ಕಮ್ಯೂನಿಸ್ಟರು ಮತ್ತು ಕಮ್ಯೂನಿಸ್ಟರಲ್ಲದ ಹೋರಾಟಗಾರರನ್ನು ಒಂದುಗೂಡಿಸಿದರು. ಕರಿಯರು ಜನಾಂಗವಾದಿಗಳಾಗದಂತೆ ನೋಡಿಕೊಂಡು ವರ್ಣಭೇದ ನೀತಿಯನ್ನು ಒಕ್ಕೊರಲಿನಿಂದ ವಿರೋಧಿಸುವಲ್ಲಿ ಸಫಲರಾದರು. ಹೀಗೆ ಏಕತೆ ಮತ್ತು ಹೋರಾಟಕ್ಕೆ ಹೊಸ ಚೈತನ್ಯ ನೀಡುವಂಥ ರಾಜಕೀಯ ಪ್ರಜ್ಞೆ ಮೂಡಿಸಿದರು. ಅವರ ಈ ಎಲ್ಲ ಆಲೋಚನೆಗಳು ೧೯೫೫ನೇ ಜೂನ್ ೨೬ರಂದು ಅಂಗೀಕರಿಸಿದ ಸ್ವಾತಂತ್ರ್ಯ ಘೋಷಣೆಯ ತಿರುಳಾಗಿವೆ. ಮಂಡೇಲಾರ ವಿಚಾರಗಳು ಜನಸಮುದಾಯ ಬಯಕೆಗಳಲ್ಲಿ ಬೇರು ಬಿಟ್ಟಿದ್ದರಿಂದಲೇ ಇದೆಲ್ಲ ಸಾಧ್ಯವಾಯಿತು.

ಕರಿಯರು ನೇಟಿವ್ ಲ್ಯಾಂಡ್ ಕಾಯ್ದೆಯಿಂದಾಗಿ ಕಳಕೊಂಡ ಭೂಮಿಯನ್ನು ಎಲ್ಲ ಜನಾಂಗಗಳ ಜನಸಂಖ್ಯೆಯ ಆಧಾರದ ಮೇಲೆ ಪುನರ್ವಿಂಗಡನೆ ಆಗಬೇಕು. ಕರಿಯರನ್ನು ಹತ್ತಿಕ್ಕುವ ಕಾಯ್ದೆಗಳು ಹೋಗಬೇಕು. ಕರಿಯರಿಗೆ ಮತ ಚಲಾಯಿಸುವ ಹಕ್ಕು ಬರಬೇಕು. ಮಕ್ಕಳಿಗೆ ಯೋಗ್ಯ ಶಿಕ್ಷಣ ದೊರೆಯುವಂತಾಗಬೇಕು. ಒಟ್ಟಾರೆ ವರ್ಣಭೇದ ನೀತಿ ಅಳಿಯಬೇಕು ಎನ್ನುವುದೇ ಅವರ ಗುರಿಯಾಗಿತ್ತು. ಐರೋಪ್ಯ ಮತ್ತು ಇತರ ದೇಶಗಳ ಸಂಸ್ಕೃತಿಗಳ ಶ್ರೇಷ್ಠ ಅಂಶಗಳು ಆಫ್ರಿಕಾ ಸಂಸ್ಕೃತಿಯನ್ನು ಸೇರಬೇಕು. ಮಾನವನ ಏಳ್ಗೆ ಮತ್ತು ಘನತೆ ಹೆಚ್ಚಿಸುವುದಕ್ಕಾಗಿ ಆಫ್ರಿಕಾ ತನ್ನ ಕಾಣಿಕೆ ಸಲ್ಲಿಸುವಂಥ 'ವಾತಾವರಣದ ನಿರ್ಮಾಣವಾಗಬೇಕು ಎಂಬುದೇ ಯೂತ್ ಲೀಗ್‌ನ ಗೆಳೆಯರೆಲ್ಲರ ಆಶಯವಾಗಿತ್ತು.

ಅಧ್ಯಕ್ಷ ಡಾ. ಕ್ಷುಮಾ ಅವರ ಮೇಲ್ವಿಚಾರಣೆಯಲ್ಲಿ ಡಿಸೆಂಬರ್ ೧೯೪೩ರಲ್ಲಿ ಎ.ಎನ್.ಸಿ. ಹೊಸ ಸಂವಿಧಾನ ಹೊಂದಿತು. ಹೊಸ ಸಂವಿಧಾನದ ಪ್ರಕಾರ ಬೇರೆ ಜನಾಂಗದವರು ಕೂಡ ಎ.ಎನ್.ಸಿ. ಸದಸ್ಯರಾಗಬಹುದು ಎಂದು ತಿಳಿಸಲಾಯಿತು.

ಪಾಸ್ ಕಾಯ್ದೆ ವಿರುದ್ಧ ಹೋರಾಡುವುದಕ್ಕಾಗಿ ಎ.ಎನ್.ಸಿ. ಅಧ್ಯಕ್ಷ ಡಾ.ಕ್ಷುಮಾ ಅವರು ಕಮ್ಯೂನಿಸ್ಟ್ ಪಾರ್ಟಿಯ ಅಧ್ಯಕ್ಷ ಡಾ.ಯೂಸೂಫ್ ದಾದೂ ಮತ್ತು ಇಂಡಿಯನ್ ಕಾಂಗ್ರೆಸ್‌ನ ಅಧ್ಯಕ್ಷ ಡಾ.ಮೋಂಟಿ ನಾಯ್ಕರ್ ಜತೆ ಸಂಯುಕ್ತ ರಂಗ ಸ್ಥಾಪಿಸಿದರು. ಅದು 'ಡಾಕ್ಟರ್ಸ್ ಪ್ಯಾಕ್ಟ್' ಎಂದು ಪ್ರಸಿದ್ಧವಾಗಿದೆ.

ವಿವಿಧ ಸಂಘಟನೆಗಳ ಸಹಕಾರದೊಂದಿಗೆ ಎ.ಎನ್.ಸಿ. ಮೇ ೧೯೪೫ ರಂದು ಬಿಳಿಯ ಸರ್ಕಾರದ ದೌರ್ಜನ್ಯಗಳನ್ನು ವಿರೋಧಿಸಿ ಬೃಹತ್ ಮೆರವಣಿಗೆ ಹೊರಡಿಸಿತು. ಆ ಮೆರವಣಿಗೆಯಲ್ಲಿ ೨೦ ಸಾವಿರಕ್ಕೂ ಹೆಚ್ಚು ಕರಿಯರಿದ್ದರು. ಜೊಹಾನ್ಸ್ ಬರ್ಗ್‌ನಲ್ಲಿ ಇಂಥ ಮೆರವಣಿಗೆ ಹಿಂದೆಂದೂ ನಡೆದಿರಲಿಲ್ಲ. ಕಾರ್ಮಿಕ ವರ್ಗದಲ್ಲಿನ ಏಕತೆಯೆ ಇದರ ಮೂಲಶಕ್ತಿಯಾಗಿತ್ತು.

೧೯೪೬ರ ಘೆಟೊ ಮಸೂದೆ ಭಾರತೀಯರನ್ನು ಕೂಡ ಕೆಲಪ್ರದೇಶಗಳಿಗೆ ಮಾತ್ರ ಸೀಮಿತಗೊಳಿಸುವ ಉದ್ದೇಶ ಹೊಂದಿತ್ತು. ಡರ್ಬಾನ್‌ನಲ್ಲಿನ ಭಾರತೀಯರು ಇದಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿದರು. ಜೊಹಾನ್ಸ್ ಬರ್ಗ್‌ನಲ್ಲಿ ಇದರ ವಿರುದ್ಧ ಸಂಘಟನಾತ್ಮಕ ಕೆಲಸಗಳು ನಡೆದವು. ಕಾನೂನು ಶಿಕ್ಷಣದಲ್ಲಿ ನೆಲ್ಸನ್ ಮಂಡೇಲಾ ಅವರ ಸಹಪಾಠಿಗಳಾಗಿದ್ದ ಇಸ್ಮಾಯಿಲ್ ಮೀರ್ ಮತ್ತು ಜೆ.ಎನ್.ಸಿಂಗ್ ಅವರು ಘೆಟೊ ಮಸೂದೆ ವಿರುದ್ಧ ಭಾರತೀಯರು ನಡೆಸಿದ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸಿದರು. ಟ್ರಾನ್ಸ್ ವಾಲ್ ಮತ್ತು ನತಾಲ್‌ನಲ್ಲಿನ ಇಂಡಿಯನ್ ಕಾಂಗ್ರೆಸ್ ಘಟಕಗಳು ಪ್ರಾರಂಭಿಸಿದ ಸತ್ಯಾಗ್ರಹ ಮಂಚೂಣಿಯಲ್ಲಿದ್ದರು.

ನೆಲ್ಸನ್ ಮಂಡೇಲಾ ಅವರು ಕೆಲಕಾಲ ಇಸ್ಮಾಯಿಲ್ ಮೀರ್ ಅವರ ಫ್ಲ್ಯಾಟ್ ನಲ್ಲಿ ವಾಸವಾಗಿದ್ದರು. ಭಾರತೀಯರ ಬಗ್ಗೆ ಮತ್ತು ದಕ್ಷಿಣ ಆಫ್ರಿಕಾದಲ್ಲಿನ ಅವರ ಹೋರಾಟಗಳ ಬಗ್ಗೆ ಮೀರ್ ಅವರಿಂದ ತಿಳಿದುಕೊಳ್ಳಲು ನೆಲ್ಸನ್ ಉತ್ಸುಕರಾಗಿದ್ದರು.

## ಭಾರತೀಯರು

ನತಾಲ್ ಪ್ರದೇಶದ ಬಿಳಿಯ ಶ್ರೀಮಂತ ಕಬ್ಬು ಬೆಳೆಗಾರರು ಕರಿಯ ಜುಲು ಕೂಲಿಗಳಿಂದ ಬೇಸತ್ತು ಅಂದಿನ ಬ್ರಿಟಿಷ್ ಸರ್ಕಾರದೊಂದಿಗೆ ವ್ಯವಹರಿಸಿ ಭಾರತದಿಂದ ೧೮೬೦ರಲ್ಲಿ ಕೂಲಿಗಳನ್ನು ತರಿಸಲು ನಿರ್ಧರಿಸಿದರು. ಭಾರತೀಯ ಕೂಲಿಗಳ ಆಹಾರ ಪೂರೈಕೆ ಬಿಳಿಯ ವ್ಯಾಪಾರಿಗಳಿಂದ ಆಗಲಿಲ್ಲ. ಆದ್ದರಿಂದ ಭಾರತೀಯ ವ್ಯಾಪಾರಿಗಳನ್ನೂ ನತಾಲ್‌ಗೆ ಆಹ್ವಾನಿಸಲಾಯಿತು. ಹೀಗಾಗಿ ಭಾರತದ ಎರಡೂ ವರ್ಗಗಳ ಜನ ದಕ್ಷಿಣ ಆಫ್ರಿಕಾ ಸೇರಿದರು. ಮಹಾತ್ಮಾಗಾಂಧಿ ಅವರು ಮೇ ೧೮೯೩ರಲ್ಲಿ ತರುಣ ವಕೀಲರಾಗಿ

ದಕ್ಷಿಣ ಆಫ್ರಿಕಾಗೆ ಬಂದರು. ಅಲ್ಲಿನ ಜನಾಂಗೀಯ ತಾರತಮ್ಯದ ವಿರುದ್ಧ ಹೋರಾಟ ಪ್ರಾರಂಭಿಸಿದರು. ೧೮೯೪ನೇ ಮೇ ೨೨ರಂದು ನತಾಲ್ ಇಂಡಿಯನ್ ಕಾಂಗ್ರೆಸ್ ಸ್ಥಾಪಿಸಿದರು. ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರಲ್ಲದವರ ಮೊದಲ ರಾಜಕೀಯ ಸಂಘಟನೆ ಇದಾಗಿದೆ. ಮುಂದೆ ೧೮ ವರ್ಷಗಳ ನಂತರ ಅಸ್ತಿತ್ವಕ್ಕೆ ಬಂದ ಕರಿಯರ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಮೇಲೆ ಇದರ ಪ್ರಭಾವ ಸಾಕಷ್ಟಾಗಿದೆ.

ಗಾಂಧೀಜಿ ಅವರು ೧೯೦೩ರಲ್ಲಿ ನತಾಲ್ ಪ್ರಾಂತದ ಇನಾಂಡಾ ಜಿಲ್ಲೆಯ ಡರ್ಬನ್‌ನಿಂದ ೧೫ ಮೈಲಿ ದೂರದಲ್ಲಿರುವ ನ್ಯೂ ಫಾರ್ಮ್‌ರ ಎಂಬ ಕರಿಯರ ಉಪನಗರದಲ್ಲಿ ನೂರು ಎಕರೆ ಪ್ರದೇಶದಲ್ಲಿ ಫೀನಿಕ್ಸ್ ಆಶ್ರಮ ಸ್ಥಾಪಿಸಿದರು. ಅದು ಅವರು ಸ್ಥಾಪಿಸಿದ ಮೊದಲ ಆಶ್ರಮವಾಗಿದೆ. ಆ ವರ್ಷ ಗಾಂಧೀಜಿ ಅವರು ಪ್ರಕಟಿಸಲು ಪ್ರಾರಂಭಿಸಿದ 'ಇಂಡಿಯನ್ ಒಪಿನಿಯನ್' ಪತ್ರಿಕೆಯನ್ನು ೧೯೬೧ರವರೆಗೂ ನಡೆಸಿಕೊಂಡು ಬರಲಾಯಿತು. ನತಾಲ್ ಇಂಡಿಯನ್ ಕಾಂಗ್ರೆಸ್ ಮುಂದೆ ಆಫ್ರಿಕನ್ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಆಗಿ ಬೆಳೆದು ಇಂದಿಗೂ ವರ್ಣಭೇದ ನೀತಿ ವಿರುದ್ಧದ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದೆ. ಗಾಂಧೀಜಿ ಅವರು ಬಿಳಿಯ ಸರ್ಕಾರದ ಅನ್ಯಾಯದ ವಿರುದ್ಧ ೧೯೦೭ರಲ್ಲಿ ಮೊದಲ ಬಾರಿಗೆ ಸತ್ಯಾಗ್ರಹದ ಪ್ರಯೋಗ ಮಾಡಿದ್ದು ಈ ನಾಡಿನಲ್ಲೇ.

ಮಂಡೇಲಾ ಅವರಿಗೆ ಭಾರತೀಯರ ಬಗ್ಗೆ ಗೌರವವಿತ್ತು. ಆದರೆ ಭಾರತೀಯರಾದ ಯಸೂಫ್ ದಾದೂ ಕಮ್ಯೂನಿಸ್ಟ್ ನಾಯಕರಾಗಿದ್ದರು. ಇಸ್ಮಾಯಿಲ್ ಮೀರ್ ಹಾಗೂ ಜೆ.ಎನ್.ಸಿಂಗ್ ಕಮ್ಯೂನಿಜಂನಲ್ಲಿ ನಂಬಿಕೆ ಇಟ್ಟಿದ್ದರು. ಆದರೆ ಕಮ್ಯೂನಿಸ್ಟರು ಕ್ರಿಸ್ತನ ವಿರೋಧಿಗಳು ಎಂಬ ತಪ್ಪು ಕಲ್ಪನೆಯಿಂದಾಗಿ ಮಂಡೇಲಾ ಅವರಿಗೆ ಕಮ್ಯೂನಿಸ್ಟರ ಬಗ್ಗೆ ಅಷ್ಟೊಂದು ಆಸಕ್ತಿ ಇರಲಿಲ್ಲ. ಅದೇ ರೀತಿ ಬಿಳಿಯರ ಬಗ್ಗೆ ಕೂಡ ಯಾವುದೇ ರೀತಿಯ ನಂಬಿಕೆ ಇರಲಿಲ್ಲ. ಆಫ್ರಿಕನರ್ ಬಿಳಿಯ ವಕೀಲ ಬ್ರೌನ್ ಫಿಷರ್ ಕಮ್ಯೂನಿಸ್ಟ್ ಆಗಿದ್ದರು. ಎರಡು ಐತಿಹಾಸಿಕ ವಿಚಾರಣೆಗಳಲ್ಲಿ ಮಂಡೇಲಾ ಮತ್ತು ಅವರ ಗೆಳೆಯರ ಪರ ವಾದಿಸಿದರು. ಕಮ್ಯೂನಿಸ್ಟರು ದೇಶ, ಭಾಷೆ ಮತ್ತು ಲಿಂಗ ಭೇದವನ್ನು ಮರೆತು ಮನುಷ್ಯರ ಬಗ್ಗೆ ಚಿಂತಿಸುತ್ತಾರೆ ಹಾಗೂ ವರ್ಣ-ವರ್ಗಗಳ ತಿಕ್ಕಾಟವಿಲ್ಲದ ಸಮಾಜವನ್ನು ಬಯಸುತ್ತಾರೆ ಎಂಬುದನ್ನು ಮಂಡೇಲಾ ಅವರು ಬೇಗನೆ ಅರ್ಥೈಸಿಕೊಂಡರು.

ಆದರೆ ಸದ್ಯದ ಪರಿಸ್ಥಿತಿಯಲ್ಲಿ ಕಮ್ಯೂನಿಸ್ಟರ ಜತೆ ಸೇರಿ ಹೋರಾಟ ಮಾಡಲು ಯೂತ್ ಲೀಗ್‌ನ ಯಾವ ಯುವ ನಾಯಕನೂ ಸಿದ್ಧನಿರಲಿಲ್ಲ. ಕಮ್ಯೂನಿಜಂನಲ್ಲಿ ನಂಬಿಕೆ ಇರುವ ಎ.ಎನ್.ಸಿ ಸದಸ್ಯರು ಪಕ್ಷಕ್ಕೆ ರಾಜೀನಾಮೆ ಕೊಡಬೇಕೆಂದು ಮಂಡೇಲಾ, ಸಿಸುಲು, ಟಾಂಬೊ ಮತ್ತು ಲೆಂಬೆಡೆ ವಾದಿಸಿದರು. ಎ.ಎನ್.ಸಿ.ಯ ವಾರ್ಷಿಕ ಸಮ್ಮೇಳನದಲ್ಲಿ ಈ ಕುರಿತು ನಿರ್ಣಯವನ್ನೂ ಇಟ್ಟರು. ಆದರೆ ಎ.ಎನ್.ಸಿ.ಯ ಸೌಮ್ಯ ನಾಯಕರು ಯೂತ್ ಲೀಗ್ ನ ಈ ನಿರ್ಣಯವನ್ನು ವಿರೋಧಿಸಿದರು. ಆಗ ಜೆ.ಬಿ. ಮಾರ್ಕ್ಸ್, ಮೊಸೆಸ್ ಕೊಟಾನೆ ಮತ್ತು ಗೌರ ರಡೆಬೆಯಂಥ ಖ್ಯಾತ ಕರಿಯ ಕಮ್ಯೂನಿಸ್ಟ್ ನಾಯಕರು

ಎ.ಎನ್.ಸಿ.ಯಲ್ಲಿ ಇದ್ದರು. ೧೯೪೭ರಲ್ಲಿ ಲೆಂಬೆಡೆ ನಿಧನರಾದರು. ಮದಾ ಅವರು ಯೂತ್ ಲೀಗ್‌ನ ಅಧ್ಯಕ್ಷರಾದರು. ಟಾಂಬೊ ಉಪಾಧ್ಯಾಕ್ಷರಾದರು. ಮಂಡೇಲಾ ಕಾರ್ಯದರ್ಶಿ ಆಗಿ ಆಯ್ಕೆ ಆದರು.

ಜನವರಿ ೧೯೪೯ರಲ್ಲಿ ಡರ್ಬನ್ ಪ್ರದೇಶದಲ್ಲಿ ಜುಲು ಯುವಕ ಮತ್ತು ಭಾರತೀಯನೊಬ್ಬನ ಮಧ್ಯೆ ಹೊಡೆದಾಟವಾಯಿತು. 'ಸುಲಿಗೆ ಕೋರ' ಭಾರತೀಯ ವ್ಯಾಪಾರಿಗಳನ್ನು ಮೊದಲಿನಿಂದಲೂ ವಿರೋಧಿಸುತ್ತಿದ್ದ ಜುಲು ಜನರು ಭಾರತೀಯರ ವಿರುದ್ಧ ತಿರುಗಿ ಬಿದ್ದರು. ಬೆಂಕಿ, ಲೂಟಿ, ಸಾವು-ನೋವು ಸಂಭವಿಸಿದವು. ಆ ಸಂದರ್ಭದಲ್ಲಿ ೧೪೭ ಮಂದಿ ಸತ್ತರು. ಸತ್ತವರಲ್ಲಿ ೫೩ ಮಂದಿ ಭಾರತೀಯ ಮತ್ತು ಒಬ್ಬ ಬಿಳಿಯ ಇದ್ದರು. ಬಹಳಷ್ಟು ಮಂದಿ ಪೊಲೀಸರ ಹೊಡೆತಕ್ಕೆ ಬಲಿಯಾಗಿದ್ದರು. ಈ ಜನಾಂಗೀಯ ಗಲಭೆಯನ್ನು ನಿಯಂತ್ರಿಸುವಲ್ಲಿ ಭಾರತೀಯರಾದ ಡಾ. ಮೋಂಟಿ ನಾಯ್ಕರ್, ಇಸ್ಮಾಯಿಲ್ ಮೀರ್ ಮತ್ತು ಜೆ.ಎನ್.ಸಿಂಗ್ ಅವರು ಯಶಸ್ವಿ ಆದರು. ಈ ಕಾರ್ಯದಲ್ಲಿ ಎ.ಎನ್.ಸಿ. ನಾಯಕರು ಅವರಿಗೆ ನೆರವಾದರು. ಆ ಸಮಯದಲ್ಲಿಯೂ ಎ.ಎನ್.ಸಿ. ಅಧ್ಯಕ್ಷರಾಗಿದ್ದ ಡಾ. ಕ್ಷುಮಾ, ಕಮ್ಯೂನಿಸ್ಟ್ ಪಕ್ಷದ ಡಾ.ಯುಸೂಫ್ ದಾದೂ ಮತ್ತು ಇಂಡಿಯನ್ ಕಾಂಗ್ರೆಸ್‌ನ ಡಾ.ಮೋಂಟಿ ನಾಯ್ಕರ್ ಅವರು ಬಿಳಿಯರ ದೌರ್ಜನ್ಯದ ವಿರುದ್ಧ ಜಂಟಿಯಾಗಿ ಹೋರಾಡಲು ನಿರ್ಧರಿಸಿದರು. ಆ ನಿರ್ಧಾರ 'ಡಾಕ್ಟರ್ಸ್ ಫ್ಯಾಕ್ಟ್' ಎಂದು ಪ್ರಸಿದ್ಧವಾಗಿವೆ.

ಆಫ್ರಿಕನ್ ಮತ್ತು ಭಾರತೀಯ ನಾಯಕರು ಒಂದಾಗುತ್ತಲಿದ್ದ ಆ ಸಂದರ್ಭ ಮರೆಯಲಾಗದ ಅನುಭವ ಎಂದು ಮಂಡೇಲಾ ಸ್ಮರಿಸುತ್ತಾರೆ. ಆದರೆ ಆ ಸಂದರ್ಭದಲ್ಲಿ ಅವರು 'ಕಪ್ಪುಪ್ರಜ್ಞೆ'ಯ ಪ್ರತಿಪಾದಕರಾಗಿದ್ದರಿಂದ 'ಡಾಕ್ಟರ್ಸ್ ಪ್ಯಾಕ್ಟ್' ಅನ್ನು ವಿರೋಧಿಸಿದರು. ಈ ತೆರನಾದ ಸಹಕಾರದಿಂದ ತಮ್ಮ ಹೋರಾಟ ಪ್ರಾಮುಖ್ಯ ಕಳೆದುಕೊಳ್ಳುವುದು ಎಂದು ಯೂತ್ ಲೀಗ್‌ನ ಗೆಳೆಯರು ಭಾವಿಸಿದ್ದರು. ಹೀಗಾಗಿ ಕಮ್ಯೂನಿಸ್ಟರು ಮತ್ತು ಉದಾರವಾದಿ ಬಿಳಿಯರನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದರು. ಎ.ಎನ್.ಸಿ.ಯಲ್ಲಿ ಯೂತ್ ಲೀಗ್‌ನ ಪ್ರಭಾವ ಬೆಳೆಯತೊಡಗಿತು. ಯುವಕರ ಬೆಂಬಲದಿಂದ ಡಾ. ಜೇಮ್ಸ್ ಮೊರೋಕಾ ಎ.ಎನ್.ಸಿ. ಅಧ್ಯಕ್ಷರಾದರು. ವಾಲ್ಟೇರ್ ಸಿಸುಲು ಮಹಾ ಕಾರ್ಯದರ್ಶಿಯಾಗಿ ಆಯ್ಕೆ ಆದರು. ಮಂಡೇಲಾ ಮತ್ತು ಇತರರು ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸದಸ್ಯರಾದರು.

೧೯೫೦ರ ಮೇ ದಿನದಂದು ಯೂತ್ ಲೀಗ್ 'ರಾಷ್ಟ್ರೀಯ ಕಾರ್ಯ ಸ್ಥಗಿತ' ಮುಷ್ಕರಕ್ಕೆ ಕರೆ ನೀಡಲು ನಿರ್ಧರಿಸಿತ್ತು. ಆದರೆ ಕಮ್ಯೂನಿಸ್ಟ್ ನಾಯಕರಾದ ಮೋಸೆಸ್ ಕೊಟಾನೆ, ಜೆ.ಬಿ.ಮಾರ್ಕ್ಸ್ ಮತ್ತು ದಾದೂ ಅವರ ಮೇಲೆ ಸರ್ಕಾರ ನಿಷೇಧಾಜ್ಞೆ ಹೇರಿದ್ದನ್ನು ವಿರೋಧಿಸುವುದಕ್ಕಾಗಿ ಕಮ್ಯೂನಿಸ್ಟ್ ಪಕ್ಷ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಟ್ರಾನ್ಸ್ ವಾಲ್ ಎ.ಎನ್.ಸಿ. ಸೇರಿ ಕೆಲಸ ಸ್ಥಗಿತಗೊಳಿಸಲು ಜೊಹಾನ್ಸ್ ಬರ್ಗ್ ಪ್ರದೇಶದ

ಕಾರ್ಮಿಕರಿಗೆ ಕರೆ ನೀಡಿದವು. ಕುಪಿತಗೊಂಡ ಮಂಡೇಲಾ ಮತ್ತು ಇತರ ಯುವಕರು ಸಂಘಟಕರ ಜೊತೆ ಘರ್ಷಣೆಗೆ ಇಳಿದರು. ಸಭೆ ನಡೆಯದಂತೆ ನೋಡಿಕೊಂಡರು. ಕಮ್ಯೂನಿಸ್ಟ್ ಪಕ್ಷವನ್ನೂ ಟೀಕಿಸಿದರು. ಮುಷ್ಕರದ ಕರೆಯನ್ನು ವಿರೋಧಿಸಿದರು.

ಸರ್ಕಾರ ಪ್ರದರ್ಶನದ ಮೇಲೆ ನಿಷೇಧ ಹೇರಿತು. ಮೇ ದಿನಾಚರಣೆ ವೇಳೆ ಜೊಹಾನ್ಸ್‌ಬರ್ಗ್ ಪ್ರದೇಶದಲ್ಲಿ ಎರಡು ಸಾವಿರ ಪೊಲೀಸರು ಸಭೆ, ಸಮಾರಂಭಗಳ ಮೇಲೆ ಹಲ್ಲೆ ಮಾಡಿದರು. ಪೊಲೀಸ್ ಗೋಲೀಬಾರ್‌ನಿಂದಾಗಿ ಘರ್ಷಣೆಗಳು ಯಶಸ್ವಿಯಾಯಿತು. ಅರ್ಧಕ್ಕಿಂತ ಹೆಚ್ಚು ಪಾಲು ಕಾರ್ಮಿಕರು ಮನೆಯಲ್ಲಿ ಉಳಿದರು. ಘರ್ಷಣೆಗಳನ್ನು ತಪ್ಪಿಸಿ ಜನರನ್ನು ಸಮಾಧಾನಗೊಳಿಸುವುದಕ್ಕಾಗಿ ಮಂಡೇಲಾ ಮತ್ತು ಸಿಸುಲು ಆಲ್ಯಾಂಡ್‌ಗೋಗೆ ಧಾವಿಸಿದರು. ಈ ಘರ್ಷಣೆಗಳಲ್ಲಿ ೧೮ ಮಂದಿ ಕರಿಯರು ಸತ್ತು ಮೂವರು ಮಕ್ಕಳು ಸೇರಿದಂತೆ ೩೦ಕ್ಕೂ ಹೆಚ್ಚು ಮಂದಿ ಗಾಯಗೊಂಡರು.

ಈ ಘಟನೆಯಿಂದಾಗಿ ಯೂತ್ ಲೀಗ್‌ನ ಕಪ್ಪು ಪ್ರಜ್ಞೆಯ ಯುವಕರಿಗೆ ಹೊಸ ದೃಷ್ಟಿಕೋನ ಬಂದಿತು.

> ಎರಡು ಕಾರಣಗಳಿಂದಾಗಿ ಇದು ನನ್ನ ಜೀವನದ ಮುಖ್ಯ ತಿರುವಾಗಿದೆ. ಈ ಘಟನೆಯ ಮೂಲಕ ಪಡೆದುಕೊಂಡ ಚೊಚ್ಚಲ ಅನುಭವವು ಮೊದಲನೆಯದಾದರೆ, ಪೊಲೀಸರ ಅಮಾನುಷ ವರ್ತನೆಯನ್ನು ಕಣ್ಣಾರೆ ಕಂಡಿರುವುದು ಇನ್ನೊಂದು ಅನುಭವವಾಗಿದೆ. ಇವೆಲ್ಲದರ ನಡುವೆಯೂ ಮೇ ದಿನದ ಕಾರ್ಯಕ್ರಮಕ್ಕೆ ಆಫ್ರಿಕಾದ ಕಾರ್ಮಿಕರು ಸ್ಪಂದಿಸಿದ ರೀತಿಯು ನನಗೆ ಬಹಳ ಪ್ರಭಾವವನ್ನು ಬೀರಿದೆ

ಎಂದು ಮಂಡೇಲಾ ಹೇಳಿದ್ದಾರೆ. ಕರಿಯ ಕಾರ್ಮಿಕರ ಪ್ರಜ್ಞೆ 'ಕಪ್ಪು ಪ್ರಜ್ಞೆ'ಗಿಂತ ಮೇಲ್ಮಟ್ಟದ್ದಾಗಿತ್ತು. ಕರಿಯ ಕಾರ್ಮಿಕರು ಕಪ್ಪು ಪ್ರಜ್ಞೆಯ ನಾಯಕರಿಗಿಂತ ಹೆಚ್ಚು ಸೂಕ್ಷ್ಮವಾಗಿ ಸಮಾಜವನ್ನು ಅರಿತುಕೊಂಡಿದ್ದಾರೆ ಎಂಬುದು ಮಂಡೇಲಾ ಮೊದಲಾದವರಿಗೆ ಮನದಟ್ಟಾಯಿತು.

ಯುವ ಭಾರತೀಯರಾದ ವಿದ್ಯಾರ್ಥಿ ಅಹ್ಮದ್ ಕಥ್ರದಾ ಮತ್ತು ಕಾರ್ಮಿಕ ಪೌಲ್ ಜೋಸೆಫ್ ಅವರು ಆ ಮುಷ್ಕರದ ಮುನ್ನಾ ದಿನಗಳಲ್ಲಿ ಬೆಳಿಗ್ಗೆ ಮತ್ತು ಸಂಜೆ ವೇಳೆಗೆ ಕಾರ್ಮಿಕರ ಬಳಿಗೆ ಹೋಗಿ ಹೋರಾಟದ ಮಹತ್ವ ಕುರಿತು ವಿವರಿಸುತ್ತಿದ್ದರು. ಕರಪತ್ರಗಳನ್ನು ಹಂಚುತ್ತಿದ್ದರು. ಅವರ ಈ ರೀತಿ ಮಂಡೇಲಾ ಮತ್ತು ಸಿಸುಲು ಅವರಿಗೆ ತುಂಬ ಹಿಡಿಸಿತು. ಅಂದಿನಿಂದ ಅವರೆಲ್ಲ ಆತ್ಮೀಯ ಗೆಳೆಯರಾದರು.

೧೯೫೦ರ ಮೇ ಮುಷ್ಕರದ ಅನುಭವ ಮಂಡೇಲಾ ಅವರಲ್ಲಿ ಸೈದ್ಧಾಂತಿಕ ಸ್ಪಷ್ಟತೆಯನ್ನು ಸೃಷ್ಟಿಸಿತು. ಅಂದಿನಿಂದ ಹಾಯಾಗಿ ಉಸಿರಾಡಲೂ ಬಿಡುವಿಲ್ಲದಂತೆ ಕಾರ್ಯಮಗ್ನರಾದರು. ತುಳಿತಕ್ಕೊಳಗಾದ ಜನರ ಹೋರಾಟದ ಮಂಚೂಣಿಯಲ್ಲಿರುವಂಥ ವಾತಾವರಣದ

ಸೃಷ್ಟಿಸಿದರು. ದಕ್ಷಿಣ ಆಫ್ರಿಕಾದಲ್ಲಿನ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಕಮ್ಯೂನಿಸ್ಟ್ ಪಾರ್ಟಿಯಲ್ಲಿ ಇದ್ದ ಭಾರತೀಯರಿಂದ ಮಂಡೇಲಾ ಬಹಳಷ್ಟು ಕಲಿತರು. ಬಲಿಷ್ಠ ಸರ್ಕಾರ ಎದುರಿಸಲು ಗಾಂಧೀಜಿ ಅವರ 'ಸತ್ಯಾಗ್ರಹ' ಬಹು ದೊಡ್ಡ ಅಸ್ತ್ರ ಎಂಬುದನ್ನು ಅರಿತರು.

ಎ.ಎನ್.ಸಿ. ಯೂತ್ ಲೀಗ್, ಇಂಡಿಯನ್ ಕಾಂಗ್ರೆಸ್, ಕಮ್ಯೂನಿಸ್ಟ್ ಪಾರ್ಟಿ ಸೇರಿ ಸಮನ್ವಯ ಸಮಿತಿ ರಚಿಸಿ ೧೯೫೦ನೇ ಜೂನ್ ೨೬ರಂದು ರಾಷ್ಟ್ರೀಯ ಪ್ರತಿಭಟನಾ ಪ್ರದರ್ಶನ ಏರ್ಪಡಿಸಲು ಯೋಚಿಸಿದವು. ಕೆಲಸ ಸ್ಥಗಿತಗೊಳಿಸುವುದಕ್ಕೆ ಸಂಬಂಧಿಸಿದಂತೆ ಇದು ಎ.ಎನ್.ಸಿ.ಯ ರಾಷ್ಟ್ರಮಟ್ಟದ ಮೊದಲ ಕರೆ ಆಗಿತ್ತು. ಈ ಕರೆಗೆ ಓಗೊಟ್ಟ ಜನ ಪ್ರತಿಭಟನೆಯನ್ನು ಯಶಸ್ವಿಗೊಳಿಸಿದರು. ೧೯೫೦ರ ಕೊನೆಯಲ್ಲಿ ಮಂಡೇಲಾ ಯೂತ್ ಲೀಗ್‌ನ ರಾಷ್ಟ್ರೀಯ ಅಧ್ಯಕ್ಷ ಆದರು. ಇದೇ ವೇಳೆಗೆ ಕಮ್ಯೂನಿಜಂ ದಮನ ಕಾಯ್ದೆ ಜಾರಿಗೆ ಬಂದಿತು. ಕಮ್ಯುನಿಸ್ಟ್ ಚಟುವಟಿಕೆಯಲ್ಲಿ ಭಾಗವಹಿಸುವವರಿಗೆ ೧೦ ವರ್ಷಗಳವರೆಗೆ ಶಿಕ್ಷೆ ಕಾಯ್ದಿತ್ತು. ಮಂಡೇಲಾ ಮತ್ತು ಗೆಳೆಯರಿಗೆ ವರ್ಗದ ಕಲ್ಪನೆ ಮೂಡಿ ಎಲ್ಲರ ಜತೆ ಸೇರಿ ಕರಿಯರು ಹೋರಾಡುವುದು ಅವಶ್ಯ ಎಂಬ ನಿರ್ಧಾರಕ್ಕೆ ಬಂದ ಸಂದರ್ಭದಲ್ಲಿ ಕಮ್ಯೂನಿಸ್ಟರಲ್ಲಿಯೂ ಬದಲಾವಣೆ ಕಂಡುಬಂದಿತು. ವ್ಯವಸ್ಥೆಯಲ್ಲಿ ಬೇರು ಬಿಟ್ಟಿರುವ ಜನಾಂಗೀಯ ದಬ್ಬಾಳಿಕೆಯಿಂದಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವ ಕರಿಯರ ಹೋರಾಟಗಳಿಗೆ ಮೀನ-ಮೇಷ ಎಣಿಸದೆ ಬೆಂಬಲ ಕೊಡುವುದು ಸೂಕ್ತ ಎಂಬ ಭಾವನೆ ಅವರಲ್ಲಿ ಮೂಡಿತು. ವರ್ಣಭೇದ ವಿರುದ್ಧದ ಹೋರಾಟ ಅಂತ್ಯದಲ್ಲಿ ಬಂಡವಾಳಶಾಹಿ ವಿರುದ್ಧದ ಹೋರಾಟವೇ ಆಗಿರುತ್ತದೆ ಎಂಬ ನಿಲುವಿಗೆ ಅವರು ಬಂದರು.

**ಹೊಸ ತಿರುವು**

ಗಾಂಧೀಜಿಯವರು 'ಸತ್ಯಾಗ್ರಹ' ರೂಪದಲ್ಲಿ ಬಿತ್ತಿದ ಆತ್ಮಸ್ಥೈರ್ಯದ ಬೀಜ ಮಂಡೇಲಾ ಮನದಲ್ಲಿ ಮೊಳಕೆಯೊಡೆಯಿತು. ಶಸ್ತ್ರಸಜ್ಜಿತವಾದ ಹಿಂಸಾತ್ಮಕ ಸರ್ಕಾರವನ್ನು ಎದುರಿಸಲು ಅಹಿಂಸಾತ್ಮಕ ಸತ್ಯಾಗ್ರಹವೊಂದೇ ಯೋಗ್ಯ ಮಾರ್ಗ ಎಂದು ಅನಿಸಿತು. ಈ ಕುರಿತು ಸಿಸುಲು, ಮಂಡೇಲಾ ಮತ್ತು ಯೂತ್ ಲೀಗ್‌ನ ಗೆಳೆಯರು ದೀರ್ಘವಾಗಿ ಚರ್ಚಿಸಿದರು. ಸತ್ಯಾಗ್ರಹದ ಮಾರ್ಗ ಜನತೆಗೆ ಹಿಡಿಸುವುದೇ ಎಂಬ ಗುಮಾನಿ ಬಂದಿತು. ಏಕೆಂದರೆ ಆ ಮಾರ್ಗದಿಂದ ಇಲ್ಲಿಯವರೆಗೆ ಏನನ್ನೂ ಸಾಧಿಸಲಿಲ್ಲ ಎಂಬ ಸತ್ಯ ಅವರ ಮುಂದಿತ್ತು. ಆದರೆ ಸತ್ಯಾಗ್ರಹದ ಮಾರ್ಗದಿಂದ ಜನರ ಹೋರಾಟಗಳಿಗೆ ಶಿಸ್ತು ಮಾಡುವುದು ಪ್ರತಿಹಿಂಸೆಗಿಂತ ಹಿಂಸೆಯನ್ನು ಎದುರಿಸುವುದು ಹೆಚ್ಚಿನ ಧೈರ್ಯದ ಸಂಕೇತವಾಗುವುದು ಎಂಬ ಭಾವನೆ ಮೂಡಿತು. ಡಿಸೆಂಬರ್ ೧೯೫೧ರಲ್ಲಿ ಬ್ಲೋಯೆಮ್ ಫೊಂಟೀನ್‌ನಲ್ಲಿ ಎ.ಎನ್.ಸಿ.ಯ ವಾರ್ಷಿಕ ಸಮ್ಮೇಳನ ನಡೆಯಿತು. ೧೯೫೨ನೇ ಏಪ್ರಿಲ್ ೬ರಂದು ಬೃಹತ್ ಪ್ರತಿಭಟನಾ ಕಾರ್ಯಕ್ರಮ ಹಮ್ಮಿಕೊಳ್ಳಲು ನಿರ್ಧರಿಸಲಾಯಿತು. ಆ

ದಿನ ದಕ್ಷಿಣ ಆಫ್ರಿಕಾದ ಬಿಳಿಯರು ತಮ್ಮ ಆಳ್ವಿಕೆಯ ತ್ರಿಶತಮಾನೋತ್ಸವ ಆಚರಿಸುವ ವರಿದ್ದರು. ಎ.ಎನ್.ಸಿ ಅಧ್ಯಕ್ಷ ಡಾ.ಮೊರೋಕಾ ಕಾಂಗ್ರೆಸ್ ಸೆಲ್ಯೂಟ್ ಮತ್ತು ಘೋಷಣೆ ಕೊಟ್ಟರು. 'ಮಾಯಿಬುಯೆ'(ಮರಳಿ ಬರಲಿ) ಎಂದು 'ಆಫ್ರಿಕಾ' ಎಂದು ಜನ ಕೂಗಿದರು. 'ವಕೋಸಿ ಸಿಕೆಲೆಲ್ ಇ ಆಫ್ರಿಕಾ ಹಾಡಿದರು. ನೆಲ್ಸನ್ ಮಂಡೇಲಾ ಅವರು ೧೯೫೨ರಲ್ಲಿ ಕಾನೂನುಭಂಗ ಚಳವಳಿಯ ನ್ಯಾಷನಲ್ ವಾಲಂಟೀರ್ ಇನ್ ಚೀಫ್ ಆಗಿ ನೇಮಕಗೊಂಡರು. ಕೇಪ್ ಟೌನ್ ನತಾಲ್ ಮತ್ತು ಟ್ರಾನ್ಸ್ ವಾಲ್‌ಗಳಿಗೆ ಭೇಟಿ ನೀಡಿದರು. ಉಪನಗರಗಳಲ್ಲಿ ಮನೆ ಮನೆಗೆ ಹೋಗಿ ಅಹಿಂಸಾ ಮಾರ್ಗದ ಸತ್ಯಾಗ್ರಹದಿಂದ ಅಮಾನುಷ ಸರ್ಕಾರವನ್ನು ಎದುರಿಸುವ ಬಗ್ಗೆ ತಿಳಿಹೇಳಿದರು.

೧೯೫೨ನೆಯ ಏಪ್ರಿಲ್ ೬ರಂದು ಬಿಳಿಯರು ತ್ರಿಶತಮಾನೋತ್ಸವ ಆಚರಿಸುವ ವೇಳೆ ಈಸ್ಟರ್ನ್ ಕೇಪ್‌ನಲ್ಲಿ ಹತ್ತಾರು ಸಹಸ್ರ ಜನ ಸೇರಿ ಸ್ವಾತಂತ್ರ್ಯದ ಪ್ರಾರ್ಥನೆ ಮಾಡಿದರು. ಜೊಹಾನ್ಸ್ ಬರ್ಗ್‌ನಲ್ಲಿ ಡಾ. ಮೊರೋಕಾ ಬೃಹತ್ ಬಹಿರಂಗ ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಕಾನೂನು ಭಂಗಚಳವಳಿಗೆ ಕರೆ ನೀಡಿದರು. ಮಂಡೇಲಾ ಅವರು ಉಡುಪುಗಳನ್ನು ತಯಾರಿಸುವ ಕಾರ್ಮಿಕರ ಸಂಘದಲ್ಲಿ ಕರಿಯರು, ಭಾರತೀಯರು ಮತ್ತು ಮಿಶ್ರವರ್ಣೀಯರನ್ನು ಉದ್ದೇಶಿಸಿ ಮಾತನಾಡಿದರು. ಸರ್ಕಾರ ಎಷ್ಟೇ ಪ್ರಚೋದನೆ ಮಾಡಿದರೂ ವಿಚಲಿತರಾಗದೆ ಶಿಸ್ತು ಕಾಪಾಡಿಕೊಳ್ಳಬೇಕು, ಘನತೆಯಿಂದ ವರ್ತಿಸಬೇಕು ಎಂದರು. ಸ್ವಯಂಸೇವಕರದಲ್ಲಿ ಅವರ ಬಗ್ಗೆ ವಿಶೇಷ ಗೌರವ ಮೂಡಿತ್ತು. ಆ ವೇಳೆಗಾಗಲೇ ಅವರು ಕೋಪ ನುಂಗಿಕೊಳ್ಳುವುದನ್ನು ಕಲಿತಿದ್ದರು.

ಬಿಳಿಯರ ಕಣ್ಣಲ್ಲಿ ಕರಿಯರು ಕಾಣುವುದೇ ಇಲ್ಲ. ಆದರೆ ಸದಾ ಕಾರ್ಯನಿರತರಾಗಿರುತ್ತಿದ್ದ ಮಂಡೇಲಾ ಕೇಪ್ ಟೌನ್‌ಗೆ ಹೋದಾಗ ಅವರನ್ನು ಗಮನಿಸಿದ ಒಬ್ಬ ಬಿಳಿಯ ಹೀಗೆ ಹೇಳಿದ್ದಾನೆ.

> ನಾನು ಜನರನ್ನು ಗಮನಿಸುತ್ತಿದ್ದಾಗ ಅವರೆಲ್ಲರೂ ತಮ್ಮೆದುರುಗಡೆಯ ವೇದಿಕೆಯಲ್ಲಿ ರಾರಾಜಿಸುತ್ತಿದ್ದ ವ್ಯಕ್ತಿಯೊಬ್ಬರನ್ನು ದಿಟ್ಟಿಸುತ್ತಿದ್ದರು. ಅವರು ಬರಿ ಕರಿಯರೇ ಆಗಿರಲಿಲ್ಲ. ಅವರಲ್ಲಿ ಮಹಿಳೆಯರೂ ಸೇರಿದಂತೆ ಬಿಳಿಯರು ಇದ್ದರು. ಅವರೆಲ್ಲರೂ ಮಂಡೇಲಾರನ್ನು ಪ್ರಶಂಸೆಯಿಂದ ಗಮನಿಸುತ್ತಿದ್ದರು.

೧೯೫೨ರ ಜೂನ್ ೨೬ರಂದು ರಾಷ್ಟ್ರೀಯ ಮುಷ್ಕರದ ಎರಡನೇ ವಾರ್ಷಿಕೋತ್ಸವ ಆಚರಿಸಲಾಯಿತು. ಆ ವೇಳೆಯಲ್ಲಿ ಅನೇಕ ಕಡೆ ಕಾನೂನು ಭಂಗ ಚಳವಳಿಯನ್ನೂ ಹಮ್ಮಿಕೊಳ್ಳಲಾಗಿತ್ತು. ಆ ದಿನ ರಾತ್ರಿ ಮಂಡೇಲಾ ಜೊಹಾನ್ಸ್ ಬರ್ಗ್‌ನಲ್ಲಿ ನಡೆದ ಸಭೆಯನ್ನುದ್ದೇಶಿಸಿ ಮಾತನಾಡಿದರು. ಪೊಲೀಸರು ಅವರನ್ನು ಬಂಧಿಸಿದರು. ಅದು ಅವರ ಮೊದಲ ಬಂಧನವಾಗಿತ್ತು. ಈ ವೇಳೆಗಾಗಲೇ ಸಹಸ್ರಾರು ಸ್ವಯಂಸೇವಕರ ಬಂಧನವಾಗಿತ್ತು.

ಬಿಡುಗಡೆಯ ನಂತರ ಅವರು ಕಾನೂ ಭಂಗ ಚಳವಳಿಯ ತೀವ್ರ ಪ್ರಚಾರ ನಡೆಸಿದರು. ಅವರಿಗೆ ಅಧಿಕಾರದ ಆಸೆ ಎಂದೂ ಇದ್ದಿದ್ದಿಲ್ಲ. ಅವರಿಗೆ ಅಧಿಕಾರದ ಆಸೆ ಎಂದೂ ಇರಲಿಲ್ಲ. ಅವರು ಹುಟ್ಟು ಜನನಾಯಕರಾಗಿದ್ದರು ಎಂದು ಆಲಿವರ್ ಟಾಂಬೊ ಹೇಳಿದ್ದಾರೆ.

೧೯೫೨ನೆಯ ಜುಲೈ ೩೦ರಂದು ಪೊಲೀಸರು ದೇಶಾದ್ಯಂತ ಹೋರಾಟಗಾರರ ಮನೆ ಮತ್ತು ಕಚೇರಿಗಳ ಮೇಲೆ ದಾಳಿ ಮಾಡಿ ಮೊರೊಕಾ, ಮಂಡೇಲಾ ಸಿಸುಲು, ದಾದೂ ಮತ್ತು ಕಚಾಲಿಯಾ ಅವರನ್ನು 'ಕಮ್ಯೂನಿಸ್ಟ್ ವಿಚಾರಗಳನ್ನು ಹಬ್ಬಿಸುತ್ತಿದ್ದಾರೆ' ಎಂಬ ಆರೋಪದ ಮೇಲೆ ಬಂಧಿಸಲಾಯಿತು.

೧೯೫೨ನೆಯ ಅಕ್ಟೋಬರ್ ೧೮ರಂದು ನ್ಯೂಬ್ರೈಟನ್ ರೈಲ್ವೆ ನಿಲ್ದಾಣದಲ್ಲಿ ಬಿಳಿಯ ಪೊಲೀಸ್ ಇಬ್ಬರು ಕರಿಯರನ್ನು ಗುಂಡಿಕ್ಕಿ ಕೊಂದ. ಅವರು ಬಣ್ಣದ ಡಬ್ಬಿಯೊಂದನ್ನು ಕಳವು ಮಾಡಿದ್ದರು ಎಂದು ಅಪಾದಿಸಲಾಗಿತ್ತು. ಆಗ ಸೇರಿದ ಜನಜಂಗುಳಿಯ ಮೇಲೆ ಆತ ೨೦ಕ್ಕೂ ಹೆಚ್ಚು ಗುಂಡು ಹಾರಿಸಿದ. ಜನ ಪೊಲೀಸ್ ಠಾಣೆಗೆ ಮುತ್ತಿಗೆ ಹಾಕಿದರು. ಆ ಸಂದರ್ಭದಲ್ಲಿ ೭ ಮಂದಿ ಕರಿಯರು ಮತ್ತು ೪ ಮಂದಿ ಬಿಳಿಯರು ಸತ್ತರು. ೨೭ ಮಂದಿ ಗಾಯಗೊಂಡರು. ಕರಿಯರಿಗೆ ಸಂಬಂಧಿಸಿದಂತೆ ಬಿಳಿಯರ ಆಡಳಿತದ ಒಂದು ಮಾದರಿ ಇದು. ನವೆಂಬರ್ ಅಂತ್ಯದಲ್ಲಿ ಮೊರೋಕಾ, ಮಂಡೇಲಾ, ಸಿಸುಲು ಮುಂತಾದ ನಾಯಕರ ವಿಚಾರಣೆ ನಡೆಯಿತು. ಕಾನೂನುಭಂಗ ಮಾಡಬಾರದು ಎಂಬ ಷರತ್ತಿನ ಮೇಲೆ ಬಿಡುಗಡೆ ಮಾಡಲಾಯಿತು.

ಕಾನೂನುಭಂಗ ಚಳವಳಿಯಲ್ಲಿ ಭಾಗವಹಿಸಿದ್ದವರ ಶಿಸ್ತಿನ ನಡವಳಿಕೆ ಎಲ್ಲರಿಗೂ ಮೆಚ್ಚುಗೆ. ಅಪಾರ್ಥೈಡ್ ವ್ಯವಸ್ಥೆಯ ತನಿಖೆಗಾಗಿ ವಿಶ್ವಸಂಸ್ಥೆ ಆಯೋಗ ನೇಮಿಸಿತು. ಜೊಹಾನ್ಸ್ ಬರ್ಗ್ ಬಿಷಪ್ ಅಂಬ್ರೋಸ್ ರೀವ್ಸ್ ಮತ್ತು ಅನೇಕ ಬಿಳಿಯ ಉದಾರವಾದಿಗಳು ಸೇರಿ 'ಸರ್ವ ನಾಗರಿಕರಿಗೆ ಸಮಾನ ಹಕ್ಕುಗಳು' ಎಂದು ಕರೆ ನೀಡಿದರು. ಕೆಲ ಬಿಳಿಯರು ಚಳವಳಿಯಲ್ಲಿ ಭಾಗವಹಿಸಿದರು. ಜೊಹಾನ್ಸ್ ಬರ್ಗ್ ಮತ್ತು ಕೇಪ್ ಟೌನ್‌ನಲ್ಲಿ ಬಂಧನಕ್ಕೊಳಗಾದರು. ಸರ್ಕಾರ ೫೨ ಮಂದಿ ನಾಯಕರ ಚಲನವಲನದ ಮೇಲೆ ನಿಷೇಧ ಹೇರಿತು. ಅಪಾರ್ಥೈಡ್ ವ್ಯವಸ್ಥೆಯನ್ನು ಇನ್ನೂ ಬಿಗಿಗೊಳಿಸಿತು. ಹೋರಾಟವನ್ನು ಸಂಘಟಿಸುವಲ್ಲಿ ಅನೇಕ ನ್ಯೂನತೆಗಳಿದ್ದವು. ಆದರೆ ಸಹಸ್ರಾರು ಕರಿಯರಲ್ಲಿ ರಾಜಕೀಯ ಪ್ರಜ್ಞೆ ಮಾಡಿತು. ೭ ಸಾವಿರ ಸದಸ್ಯತ್ವ ಹೊಂದಿದ್ದ ಎ.ಎನ್.ಸಿ.ಗೆ ಒಂದು ಲಕ್ಷ ಮಂದಿ ಸದಸ್ಯರಾದರು. ಮಂಡೇಲಾ ಅವರು ಟ್ರಾನ್ಸ್ ವಾಲ್ ಎ.ಎನ್.ಸಿ. ಅಧ್ಯಕ್ಷರಾದರು. ಕಾನೂನುಭಂಗ ಚಳವಳಿಯಿಂದ ಪ್ರಭಾವಿತರಾದ ತೀವ್ರ ಸುಧಾರಣಾವಾದಿ ಬಿಳಿಯರು ಬಹುಜನಾಂಗೀಯ ಲಿಬರಲ್ ಪಾರ್ಟಿ ಸ್ಥಾಪಿಸಲು ಈ ಚಳವಳಿ ಪ್ರೋತ್ಸಾಹ ನೀಡಿತು. ೧೯೫೨ನೆಯ ಡಿಸೆಂಬರ್‌ನಲ್ಲಿ ಚೀಫ್ ಅಲ್ಬರ್ಟ್ ಲುತುಲಿ ಎ.ಎನ್.ಸಿ. ಅಧ್ಯಕ್ಷರಾಗಿ ಆಯ್ಕೆ ಆದರು. ಮಂಡೇಲಾ ಉಪಾಧ್ಯಕ್ಷರಾದರು.

ಮಂಡೇಲಾ ಮೊದಲಾದ ನೂರಾರು ಎ.ಎನ್.ಸಿ., ಇಂಡಿಯನ್ ಕಾಂಗ್ರೆಸ್, ಕಾರ್ಮಿಕ ಸಂಘ ಮತ್ತು ಇತರ ಸಂಘಟನೆಗಳ ನಾಯಕರ ಮೇಲೆ ನಿಷೇಧ ಹೇರಲಾಯಿತು. ದಕ್ಷಿಣ ಆಫ್ರಿಕಾ ಸರ್ಕಾರದ ನಿಷೇಧ ವ್ಯವಸ್ಥೆ ವಿಶಿಷ್ಟ ರೀತಿಯ ದಬ್ಬಾಳಿಕೆ ಆಗಿದೆ. ಕಮ್ಯೂನಿಜಂ ದಮನ ಕಾಯ್ದೆ ಪ್ರಕಾರ ಯಾವುದೇ ಪುರಾವೆ ಮತ್ತು ಆರೋಪಗಳಿಲ್ಲದೆ ಒಬ್ಬ ವ್ಯಕ್ತಿಯ ಚಲನವಲನವನ್ನು ನಿಯಂತ್ರಿಸುವ ಅಧಿಕಾರವಿದೆ. ಮಂಡೇಲಾ ಅವರು ಆರು ತಿಂಗಳ ಕಾಲ ಜೋಹಾನ್ಸ್ ಬರ್ಗ್ ಬಿಟ್ಟು ಹೋಗದಂತೆ ಮತ್ತು ಯಾವುದೇ ಸಭೆ ಸಮಾರಂಭಗಳಲ್ಲಿ ಭಾಗವಹಿಸದಂತೆ ನಿಷೇಧಿಸಲಾಯಿತು. ಹೀಗಾಗಿ ಅವರು ಭೂಗತ ಚಟುವಟಿಕೆಗಳಲ್ಲಿ ತೊಡಗಿದರು.

ಈ ಎಲ್ಲ ಹೋರಾಟಗಳ ಮಧ್ಯೆ ಮಂಡೇಲಾ ಮತ್ತು ಆಲಿವರ್ ಟಾಂಬೊ ಕಾನೂನು ಪದವಿ ಪಡೆದಿದ್ದರು. ಇಬ್ಬರೂ ಸೇರಿ ಜೊಹಾನ್ಸ್ ಬರ್ಗ್‌ನಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದರು. ಕರಿಯರು ವಕೀಲರಾಗುವುದು ಕರಿಯರಿಗೆ ಎಲ್ಲಿಲ್ಲದ ಸಂತೋಷ ತರಿಸುವ ವಿಚಾರವಾಗಿತ್ತು. ಬದುಕಿನ ಬಗ್ಗೆ ತೀವ್ರ ಆಸಕ್ತಿಯುಳ್ಳ ಮಂಡೇಲಾ ಮುಂದಿನ ವರ್ಷಗಳಲ್ಲಿ ತೀವ್ರ ಭಾವೋದ್ರೇಕದ ವ್ಯಕ್ತಿ ಆಗಿದ್ದರು. ಆದರೆ ಅನ್ಯಾಯದ ವಿರುದ್ಧ ಸಿಡಿದೇಳುವ ಪ್ರಸಂಗದಲ್ಲಿ ಕೂಡ ಅವಕಾಶ ಸಿಕ್ಕರೆ ಅವರ ಹಾಸ್ಯ ಪ್ರವೃತ್ತಿ ಹೊರಹೊಮ್ಮುತ್ತಿತ್ತು.

ಕರಿಯ ಮನೆಗೆಲಸದಾಕೆ□ ತನ್ನ ಬಟ್ಟೆ ಕಳವು ಮಾಡಿದ್ದಾಳೆ ಎಂದು ಬಿಳಿಯ ಒಡತಿಯೊಬ್ಬಳು ನ್ಯಾಯಾಲಕ್ಕೆ ದೂರು ಸಲ್ಲಿಸಿದಳು. ಮಂಡೇಲಾ ಆ ಕಪ್ಪು ಮಹಿಳೆಯ ಪರವಾಗಿ ವಾದಿಸುತ್ತಿದ್ದರು. ಸಾಕ್ಷಿಗಾಗಿ ನ್ಯಾಯಾಲಯದಲ್ಲಿ ಆಕೆಯ ಬಟ್ಟೆಗಳನ್ನು ತರಲಾಗಿತ್ತು. ಮಂಡೇಲಾ ಅವುಗಳಲ್ಲಿನ ಒಂದು ಜತೆ ಕಾಚಾಗಳನ್ನು ಎತ್ತಿ ಹಿಡಿದು "ಇದು ನಿಮ್ಮದಾ" ಎಂದು ಆ ಬಿಳಿ ಮಹಿಳೆಗೆ ಕೇಳಿದರು. ಆ ಮಹಿಳೆ ಗಲಿಬಿಲಿಗೊಂಡಳು. ಪೇಚಾಟದ ಪ್ರಸಂಗ ಉಂಟಾಯಿತು. ತನ್ನವು ಎಂದು ಹೇಳುವ ಬದಲು "ಇಲ್ಲ" ಎಂದು ಉತ್ತರಿಸಿದಳು. ಪ್ರಕರಣವನ್ನು ವಜಾ ಮಾಡಲಾಯಿತು.

ಜೂನ್ ೧೯೫೨ರಲ್ಲಿ ನಿಷೇಧಾಜ್ಞೆ ಅವಧಿ ಮುಗಿಯಿತು. ಗುಂಪು ಪ್ರದೇಶಗಳ ಕಾಯ್ದೆ ಪ್ರಕಾರ ಸೋಫಿಯಾ ಟೌನಿನ ೫೮ ಸಾವಿರ ಕರಿಯ ನಿವಾಸಿಗಳನ್ನು ಒತ್ತಾಯದಿಂದ ಬೇರೆಡೆ ಕಳಿಸುವ ಸರ್ಕಾರದ ಕ್ರಮವನ್ನು ವಿರೋಧಿಸಿ ಮಂಡೇಲಾ, ಸಿಸುಲು ಮುಂತಾದವರು ಭಾಷಣ ಮಾಡಿದರು. ಈ ಶಾಂತಿಯುತವಾದ ಸಭೆಯ ಮೇಲೆ ಪೊಲೀಸರು ಹಲ್ಲೆ ಮಾಡಿದರು. ಸರ್ಕಾರ ಸೋಫಿಯಾ ಟೌನ್ ನಿರ್ನಾಮ ಮಾಡಿ ಅದೇ ಸ್ಥಳದಲ್ಲಿ ಬಿಳಿಯರಿಗಾಗಿ ಟ್ರಿಯೊಂಫ್ ನಗರ ಕಟ್ಟಿತು.

ಸೆಪ್ಟೆಂಬರ್ ೧೯೫೨ರಂದು ಸರ್ಕಾರ ಮತ್ತೆ ಮಂಡೇಲಾ ಮೇಲೆ ನಿಷೇಧಾಜ್ಞೆ ಹೇರಿತು. ಈ ಹೊಸ ನಿಷೇಧಾಜ್ಞೆ ಪ್ರಕಾರ ಎರಡು ವರ್ಷಗಳವರೆಗೆ ಅವರ ಚಲನವಲನ ಜೊಹಾನ್ಸ್ ಬರ್ಗ್‌ಗೆ ಸೀಮಿತವಾಗಿತ್ತು. ಅವರು ಯಾವುದೇ ಸಭೆ ಸಮಾರಂಭಗಳಲ್ಲಿ ಭಾಗವಹಿಸು ವಂತಿರಲಿಲ್ಲ. ಅಷ್ಟೇ ಅಲ್ಲದೆ ಎ.ಎನ್.ಸಿ. ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲ ಸಂಸ್ಥೆಗಳಿಂದ

ಹೊರ ಬರಬೇಕಾಯಿತು. ಆ ವೇಳೆಯಲ್ಲಿ ಅವರು ರೂಪಿಸಿದ ಹೋರಾಟ ತಂತ್ರ 'ಎಂ ಪ್ಲ್ಯಾನ್' ಎಂದು ಪ್ರಸಿದ್ಧವಾಗಿದೆ. 'ಎಂ' ಅಂದರೆ ಮಂಡೇಲಾ, ತಳಮಟ್ಟದ ಸಂಘಟನೆಗೆ ಇದು ಸಹಕಾರಿ ಆಯಿತು. ಗಲ್ಲಿಗಳಲ್ಲಿ, ಮನೆ-ಮನೆಗಳಲ್ಲಿ, ಕಾರ್ಖಾನೆಗಳಲ್ಲಿ, ರೈಲು ಮತ್ತು ಬಸ್‌ಗಳಲ್ಲಿ ಕಾರ್ಯಕರ್ತರು ಜನರನ್ನು ಭೇಟಿ ಮಾಡುತ್ತ ಹೊಸ ವಿಚಾರಗಳನ್ನು ಹರಡಲು ಯತ್ನಿಸಿದರು.

**ಸ್ವಾತಂತ್ರ್ಯ ಘೋಷಣೆ**

ಸಂದರ್ಶಕ ಪ್ರಾಧ್ಯಾಪಕರಾಗಿ ಒಂದು ವರ್ಷ ನ್ಯೂಯಾರ್ಕ್‌ನಲ್ಲಿ ಇದ್ದು ಮರಳಿ ಬಂದ ಪ್ರಾ.ಜೆಡ್.ಕೆ., ಮ್ಯಾಥ್ಯೂವ್ಸ್ ಅವರು ೧೯೫೩ರಲ್ಲಿ ಕೇಪ್ ಎ.ಎನ್.ಸಿ. ಸಮ್ಮೇಳನ ಉದ್ದೇಶಿಸಿ ಮಾತನಾಡುವ ವೇಳೆ ರಾಷ್ಟ್ರೀಯ ಸಮಾವೇಶ ಕರೆಯಲು ಎ.ಎನ್.ಸಿ.ಗೆ ಸಲಹೆ ಮಾಡಿದರು. ಆ ಸಮಾವೇಶದಲ್ಲಿ ಎಲ್ಲ ಬಣ್ಣ ಮತ್ತು ಜನಾಂಗಗಳ ಜನರನ್ನು ಕರೆದು ಭವಿಷ್ಯದ ಪ್ರಜಾಸತ್ತಾತ್ಮಕ ದಕ್ಷಿಣ ಆಫ್ರಿಕಾಗೆ ಬೇಕಾದ 'ಸ್ವಾತಂತ್ರ್ಯ ಘೋಷಣೆ' ರಚಿಸಲು ಸಲಹೆ ಮಾಡಿದರು. ಎ.ಎನ್.ಸಿ. ಅಧ್ಯಕ್ಷ ಲುತುಲಿ ಅವರಿಗೆ ಇದು ಸಮಂಜಸ ಅನಿಸಿತು. ಈ ವೇಳೆಗಾಗಲೇ ಕಮ್ಯೂನಿಸ್ಟ್ ಪಕ್ಷವನ್ನು ಸ್ವಯಂ ನಿರ್ಧಾರದಿಂದ ವಿಸರ್ಜಿಸಲಾಗಿತ್ತು. ಅದರ ನಾಯಕರು ಮತ್ತು ಸದಸ್ಯರು ಎ.ಎನ್.ಸಿ.ಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಹೋರಾಟ ನಡೆಸಿದ್ದರು. ಕರಿಯರ ಎ.ಎನ್.ಸಿ., ಬಿಳಿಯರ ಕಾಂಗ್ರೆಸ್ ಆಫ್ ಡೆಮಾಕ್ರಟ್ಸ್, ಭಾರತೀಯರ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್, ಮಿಶ್ರವರ್ಣೀಯರ ಸೌತ್ ಆಫ್ರಿಕನ್ ಕಲರ್ಡ್ ಪೀಪಲ್ಸ್ ಆರ್ಗನೈಸೇಷನ್ ಹಾಗೂ ಸೌತ್ ಆಫ್ರಿಕನ್ ಕಾಂಗ್ರೆಸ್ ಆಫ್ ಟ್ರೇಡ್ ಯೂನಿಯನ್ಸ್ ಜಂಟಿಯಾಗಿ ರಚಿಸಿದ 'ಕಾಂಗ್ರೆಸ್ ಆಫ್ ದ ಪೀಪಲ್' ವೇದಿಕೆ ಆಶ್ರಯದಲ್ಲಿ ವಿವಿಧ ಸಂಘ-ಸಂಸ್ಥೆ ಮತ್ತು ಬುಡಕಟ್ಟುಗಳಿಗೆ ಸೇರದ ಮೂರು ಸಾವಿರ ಮಂದಿ ಸ್ವಾತಂತ್ರ್ಯಪ್ರಿಯ ಪ್ರತಿನಿಧಿಗಳು ಜೊಹಾನ್ಸ್ ಬರ್ಗ್ ಬಳಿಯ ಕ್ಲಿಪ್ ಟೌನ್ ನಲ್ಲಿ ೧೯೫೫ನೇ ಜೂನ್ ೨೬ರಂದು 'ಸ್ವಾತಂತ್ರ್ಯ ಘೋಷಣೆ' ಅಂಗೀಕರಿಸಿದರು.

> ದಕ್ಷಿಣ ಆಫ್ರಿಕಾದ ಜನತೆ ಕರಿಯರು ಮತ್ತು ಬಿಳಿಯರು-ಸಮಾನರು, ದೇಶವಾಸಿಗಳು ಹಾಗೂ ಸಹೋದರರು ಎಂಬ ಸ್ವಾತಂತ್ರ್ಯ ಘೋಷಣೆಯನ್ನು ಅಂಗೀಕರಿಸುವೆವು. ಇಲ್ಲಿ ಬಯಸಿದ ಪ್ರಜಾಸತ್ತಾತ್ಮಕ ಬದಲಾವಣೆಗಳು ಈಡೇರುವವರೆಗೆ ಎದೆಗುಂದದೆ ಬಲಗುಂದದೆ ಒಂದಾಗಿ ಹೋರಾಡುವ ಪ್ರತಿಜ್ಞೆ ಮಾಡುವೆವು

ಎಂದು ಸ್ವಾತಂತ್ರ್ಯ ಘೋಷಣೆ ಸಾರುತ್ತದೆ. ಅಮಾನುಷ ವರ್ಣಭೇದ ನೀತಿಯ ವಿರುದ್ಧ ಹೋರಾಡುತ್ತಿರುವ ದಕ್ಷಿಣ ಆಫ್ರಿಕಾದ ಜನರಿಗೆ ಸ್ವಾತಂತ್ರ್ಯ ಘೋಷಣೆ ಸ್ಫೂರ್ತಿಯ ಸೆಲೆ ಆಗಿದೆ.

'ಸ್ವಾತಂತ್ರ್ಯ ಘೋಷಣೆ' ಅಂಗೀಕರಿಸಿದ ೩ ತಿಂಗಳ ನಂತರ ಕಮ್ಯೂನಿಜಂ ದಮನಕಾಯ್ದೆ ಮೇರೆಗೆ ಸಹಸ್ರಾರು ಪೊಲೀಸರು ಜನರ ಮನೆ ಮತ್ತು ಕಚೇರಿಗಳನ್ನು ನುಗ್ಗಿ ಕಮ್ಯೂನಿಸ್ಟ್

ಚಟುವಟಿಕೆಗೆ ಸಂಬಂಧಿಸಿದ ಪುರಾವೆಗಳನ್ನು ಹುಡುಕಲು ಪ್ರಯತ್ನಿಸಿದರು. ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರುವ ಬಿಳಿಯರು ಕೂಡ 'ಸ್ವಾತಂತ್ರ್ಯ ಘೋಷಣೆ' ಬಗ್ಗೆ ಗೌರವ ತಾಳಿದ್ದಾರೆ. ನಿರ್ವಿಕಾರ ವಿಚಾರಗಳಿಂದ ಕೂಡಿದ 'ಸ್ವಾತಂತ್ರ್ಯ ಘೋಷಣೆ' ವರ್ಣ ದ್ವೇಷ ನೀತಿಯ ವಿರುದ್ಧ ಮುನ್ನಡೆಯುತ್ತಿರುವ ಎಲ್ಲ ಬುಡಕಟ್ಟುಗಳ ಮತ್ತು ರಾಜಕೀಯ ಪಕ್ಷಗಳ ಹೋರಾಟಕ್ಕೆ ದಾರಿದೀಪವಾಗಿದೆ. ಅಂತೆಯೇ ಅಧಿಕಾರದ ಸೂತ್ರ ಹಿಡಿದಿರುವ ಬಿಳಿಯ ಅಲ್ಪಸಂಖ್ಯಾತರು ಆ ಘೋಷಣಾಪತ್ರವನ್ನು 'ಉದ್ರೇಕಕಾರಿ ದಾಖಲೆ' ಎಂದು ಆಪಾದಿಸಿದ್ದಾರೆ. ಬಣ್ಣ, ಬುಡಕಟ್ಟು ಮುಂತಾದ ವ್ಯತ್ಯಾಸಗಳನ್ನು ಪರಿಗಣಿಸದೆ ಸಮತೆ, ಗೌರವ ಮತ್ತು ಮಾನವ ಘನತೆ ಎಂಬುದು ದಕ್ಷಿಣ ಆಫ್ರಿಕಾದ ಎಲ್ಲ ನಿವಾಸಿಗಳಿಗೆ ದೊರೆಯಬೇಕೆಂಬ ಆಶಯ ಹೊಂದಿರುವ 'ಸ್ವಾತಂತ್ರ್ಯ ಘೋಷಣೆ'ಯನ್ನು ದಮನಕಾರಿ ಶಕ್ತಿಗಳು 'ಉದ್ರೇಕಕಾರಿ' ಎಂದು ಕರೆಯುವಲ್ಲಿ ಆಶ್ಚರ್ಯವೇನಿಲ್ಲ. ದಕ್ಷಿಣ ಆಫ್ರಿಕಾದ ಪ್ರಜ್ಞಾವಂತ ಜನ ತಮ್ಮೆಲ್ಲ ಭೇದಭಾವಗಳನ್ನು ಮರೆತು ಸಂವಿಧಾನಾತ್ಮಕವಾದ ಅಪಾರ್ಥೈಡ್ ಕ್ರೌರ್ಯದ ವಿರುದ್ಧ ತಲೆಯಿತ್ತಿ 'ಸ್ವಾತಂತ್ರ್ಯ ಘೋಷಣೆ' ಕೂಗುತ್ತಿದ್ದಾರೆ.

ದಕ್ಷಿಣ ಆಫ್ರಿಕಾದ ಬಹುಸಂಖ್ಯಾತ ಕಪ್ಪು ಜನರ 'ಸ್ವಾತಂತ್ರ್ಯ ಘೋಷಣೆ'ಗೆ ಜಾಗತಿಕ ಮಹತ್ವವಿದೆ. ತೃತೀಯ ಜಗತ್ತಿನ ಜನರು ತಮ್ಮ ಸ್ವಾತಂತ್ರ್ಯವನ್ನು ಅರ್ಥೈಸಿಕೊಳ್ಳಲು ಒರೆಗಲ್ಲಾಗಿದೆ. ದಕ್ಷಿಣ ಆಫ್ರಿಕಾದ ಜನ ತುರ್ತಾಗಿ ಸಾಧಿಸಬೇಕಾಗಿರುವುದು ಸಮಾಜವಾದವನ್ನಲ್ಲ, ರಾಷ್ಟ್ರೀಯ ಪ್ರಜಾಪ್ರಭುತ್ವವನ್ನು, ಈ ಹಂತಕ್ಕೆ ತನ್ನದೇ ಆದ ಕ್ರಾಂತಿಕಾರಿ ಮಹತ್ವವಿದೆ.

ಸಮಾಜವಾದಿ ವ್ಯವಸ್ಥೆಯಲ್ಲಿ ರಾಜ್ಯಶಕ್ತಿ ದುಡಿಯುವ ವರ್ಗದ ಕೈಯಲ್ಲಿ ಇದ್ದು ಉತ್ಪಾದನಾ ಸಾಧನಗಳ ಸಮಾಜೀಕರಣವಾಗಿರುತ್ತದೆ. ಉತ್ಪಾದನೆ ಜನತೆಗಾಗಿ ಇರುತ್ತದೆ ಹೊರತಾಗಿ ಲಾಭಕ್ಕಾಗಿ ಅಲ್ಲ. ಈ ರೀತಿಯಾದ ಮೂಲಭೂತವಾದ ರಾಜಕೀಯ ಮತ್ತು ಆರ್ಥಿಕ ಬದಲಾವಣೆಗಳನ್ನು 'ಸ್ವಾತಂತ್ರ್ಯ ಘೋಷಣೆ' ಒಳಗೊಂಡಿಲ್ಲ. ಒಂದು ವೇಳೆ ಹಾಗೆ ಒಳಗೊಂಡಿದ್ದರೆ ವಾಸ್ತವವನ್ನು ಕಡೆಗಣಿಸುವ ರಂಜಕ ಘೋಷಣೆಯಾಗುತ್ತಿತ್ತು. 'ಸ್ವಾತಂತ್ರ್ಯ ಘೋಷಣೆ'ಯಲ್ಲಿ 'ಜನರು ಆಳುತ್ತಾರೆ' ಎಂದರೆ 'ಕಾರ್ಮಿಕರು, ರೈತರು, ವಿವಿಧ ಉದ್ಯೋಗಿಗಳು ಮತ್ತು ಪುಟ್ಟ ಬಂಡವಾಳಷಾಹಿಗಳು - ಹೀಗೆ ಎಲ್ಲ ವರ್ಗಗಳ ಬಿಳಿಯರು ಮತ್ತು ಕರಿಯರು ಆಳುತ್ತಾರೆ' ಎಂಬ ಅರ್ಥ. ಆದರೆ 'ಸ್ವಾತಂತ್ರ್ಯ ಘೋಷಣೆ' ಏಕಸ್ವಾಮ್ಯ ಬಂಡವಾಳವಾದಿಗಳಿಗೆ ಮಾರಕವಾಗಿದೆ. ಅದು ಭೂಮಿ, ಚಿನ್ನದ ಗಣಿ ಮತ್ತು ಬ್ಯಾಂಕುಗಳ ರಾಷ್ಟ್ರೀಕರಣವನ್ನು ಬಯಸುತ್ತದೆ. ಇದು ಸಾಮ್ರಾಜ್ಯಶಾಹಿಗಳ ಅಸೆಬುರುಕುತನಕ್ಕೆ ದೊಡ್ಡ ಕೊಡಲಿ ಪೆಟ್ಟು. ಇಂಥ ಆರ್ಥಿಕ ಮೂಲಗಳನ್ನವರು ಶತಮಾನಗಳಿಂದ ತಮ್ಮ ಕಪಿ ಮುಷ್ಟಿಯಲ್ಲಿಟ್ಟುಕೊಂಡು ಜನಸಾಮಾನ್ಯರ ಸುಲಿಗೆ ಮಾಡುತ್ತಿದ್ದಾರೆ. ಜನರನ್ನು ಸುಲಿಗೆ, ಹಿಂಸೆ, ಬಡತನ ಮತ್ತು ಒಟ್ಟಾರೆ ವರ್ಣದ್ವೇಷ ವ್ಯವಸ್ಥೆಯಿಂದ ವಿಮೋಚನೆಗೊಳಿಸಿ ಅವರ ಬದುಕಿಗೆ ಉಪಯುಕ್ತವಾಗುವಂತೆ ಆರ್ಥಿಕ ವ್ಯವಸ್ಥೆಯನ್ನು ರೂಪಿಸುವುದೇ 'ಸ್ವಾತಂತ್ರ್ಯ

ಘೋಷಣೆ'ಯ ಮುಖ್ಯ ಗುರಿಯಾಗಿದೆ. ಈ ಗುರಿಯನ್ನು ಸಾಧಿಸುವುದೆಂದರೆ ಸಮಾಜವಾದಿ ವ್ಯವಸ್ಥೆಗೆ ದಾರಿ ಸುಗಮ ಮಾಡಿಕೊಟ್ಟಂತೆ. ಈ ದಾರಿ ನಿರ್ಮಾಣಕ್ಕಾಗಿ, ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರುವ ಎಲ್ಲ ಜನರ ಸಹಕಾರದ ಅವಶ್ಯಕತೆ ಇದೆ.

ವಿವಿಧ ಬುಡಕಟ್ಟುಗಳಿಗೆ ಸೇರಿದ ದಕ್ಷಿಣ ಆಫ್ರಿಕಾದ ಕಪ್ಪು ಜನರನ್ನು ಕೂಡಿಸಿ ವರ್ಣದ್ವೇಷನೀತಿ, ವಸಾಹತುಶಾಹಿ ಮತ್ತು ಸಾಮ್ರಾಜ್ಯವಾದದ ವಿರುದ್ಧ ಹೋರಾಡುವಲ್ಲಿ ಸ್ವಾತಂತ್ರ್ಯ ಘೋಷಣೆಯ ಪಾತ್ರ ಪ್ರಮುಖವಾಗಿದೆ. ಅದು ರಾಷ್ಟ್ರೀಯ ಪ್ರಜಾಪ್ರಭುತ್ವವಾದಿ ಚಳವಳಿಯ ಮಹಾ ಅಸ್ತ್ರವಾಗಿದೆ. ಅಂತೆಯೇ ಅಲ್ಲಿನ ಸರ್ಕಾರ ಹೋರಾಟಗಾರರಲ್ಲಿನ ಏಕತೆಯನ್ನು ಮುರಿಯಲು ಸದಾ ಸನ್ನದ್ಧವಾಗಿರುತ್ತದೆ. ಒಂದು ಬುಡಕಟ್ಟಿನ ನಾಯಕನ ಮೇಲೆ ಇನ್ನೊಂದು ಬುಡಕಟ್ಟಿನ ನಾಯಕನನ್ನು ಎತ್ತಿಕಟ್ಟುತ್ತದೆ. ಸುಧಾರಣಾವಾದಿಗಳನ್ನು ಹೋರಾಟಗಾರರ ವಿರುದ್ಧ ಬಳಸಿಕೊಳ್ಳುತ್ತದೆ. ತೀವ್ರಗಾಮಿಗಳು ತಮಗರಿಯದಂತೆಯೇ ಸಾಮ್ರಾಜ್ಯಶಾಹಿಗಳ ಕೈಗೊಂಬೆಗಳಾಗುವಂತೆ ಮಾಡುತ್ತದೆ. ಎಲ್ಲರೂ ತಮ್ಮ ತಮ್ಮ ವಾದಕ್ಕೇ ಜೋತು ಬೀಳುವಂತಹ ವಾತಾವರಣ ಸೃಷ್ಟಿಸುತ್ತದೆ. ಆದರೆ 'ಸ್ವಾತಂತ್ರ್ಯ ಘೋಷಣೆ' ಹೋರಾಟಕ್ಕಾಗಿ ಸಾಮಾನ್ಯ ಅಭಿಪ್ರಾಯ ಸೃಷ್ಟಿಸುವ ಶಕ್ತಿ ಹೊಂದಿದೆ. ದಿಕ್ಕು ತಪ್ಪಿಸುವ ವ್ಯವಸ್ಥೆಯಲ್ಲಿ ದಿಕ್ಸೂಚಿಯಾಗಿದೆ. ಕ್ರಾಂತಿಕಾರಿ ಸಿದ್ಧಾಂತವಿಲ್ಲದೆ ಕ್ರಾಂತಿಕಾರಿಗಳ ಚಳುವಳಿ ಸಾಧ್ಯವಿಲ್ಲ. ಸ್ವಾತಂತ್ರ್ಯ ಘೋಷಣೆ ದಕ್ಷಿಣ ಆಫ್ರಿಕಾದಲ್ಲಿನ ಕ್ರಾಂತಿಕಾರಿ ಚಟುವಟಿಕೆಗಳಿಗೆ ಸೈದ್ಧಾಂತಿಕ ನೆಲೆಗಟ್ಟಾಗಿದೆ.

ಇದೊಂದು ಕ್ರಾಂತಿಕಾರಿ ದಾಖಲೆ, ಏಕೆಂದರೆ ಸರ್ಕಾರದ ರಾಜಕೀಯ ಮತ್ತು ಆರ್ಥಿಕ ರಚನೆಯನ್ನು ಹಾಳುಗೆಡವದೇ 'ಸ್ವಾತಂತ್ರ್ಯ ಘೋಷಣೆ' ಹೇಳುವಂಥ ಬದಲಾವಣೆಗಳನ್ನು ಸಾಧಿಸಲಿಕ್ಕಾಗದು ಎಂದು ನೆಲ್ಸನ್ ಮಂಡೇಲಾ ಹೇಳುತ್ತಾರೆ. ಆದರೆ ಸ್ವಾತಂತ್ರ್ಯ ಘೋಷಣೆಯಲ್ಲಿ ತಿಳಿಸಿದ ಪ್ರಜಾಸತ್ತಾತ್ಮಕ ಬದಲಾವಣೆಗಳು ಸಮಾಜವಾದಿ ವ್ಯವಸ್ಥೆಯ ನಕಲು ಅಲ್ಲ. ಅದನ್ನು ಸಾಧಿಸಲು ಇನ್ನೂ ಹೆಚ್ಚಿನ ಸಾಮಾಜಿಕ ಬದಲಾವಣೆಯಾಗಬೇಕಾಗುತ್ತದೆ ಎಂದು ವಿವರಿಸಿದ್ದಾರೆ.

ಸ್ವಾತಂತ್ರ್ಯ ಘೋಷಣೆಯನ್ನು ತಮ್ಮ ಕಾರ್ಯಕ್ರಮಗಳಿಗೆ ಮೂಲವಾಗಿಟ್ಟುಕೊಂಡು ಅನೇಕ ಸಂಘಟನೆಗಳನ್ನು ಸರ್ಕಾರ ನಿರ್ದಯದಿಂದ ಹತ್ತಿಕ್ಕಿದೆ. ದಕ್ಷಿಣ ಆಫ್ರಿಕಾದ ಜನರಲ್ಲಿ ಕಮ್ಯೂನಿಸ್ಟ್ ವಿರೋಧಿ ಭಾವನೆಗಳನ್ನು ತುಂಬಲು ಸರ್ಕಾರ ಅವಿಶ್ರಾಂತವಾಗಿ ಪ್ರಯತ್ನಿಸುತ್ತಿದೆ.

೧೯೫೫ರ ಕೊನೆಯಲ್ಲಿ ಮಂಡೇಲಾ ಮೇಲೆ ಹೇರಿದ್ದ ನಿಷೇಧಾಜ್ಞೆ ಅವಧಿ ಮುಗಿಯಿತು. ಕೂಡಲೆ ನಿಷೇಧಾಜ್ಞೆಯನ್ನು ಮತ್ತೆ ೫ ವರ್ಷಗಳವರೆಗೆ ವಿಸ್ತರಿಸಲಾಯಿತು. ಈ ಸಂದರ್ಭದಲ್ಲಿ ಪತ್ನಿ ಎವೆಲಿನ್ ನತಾಲ್‌ನಲ್ಲಿ ಸೂಲಗಿತ್ತಿಯಾಗುವ ತರಬೇತಿ ಪಡೆಯುತ್ತಿದ್ದರು. ಥೆಂಬೆರೆಲೆ ಮಕ್ ಗಥೊ ಎಂಬ ಗಂಡುಮಕ್ಕಳು ಮತ್ತು ಮಕಾಜಿವೆ ಎಂಬ ಹೆಣ್ಣು ಮಗು ಇದ್ದವು. ಮಂಡೇಲಾ ಅವರ ರಾಜಕೀಯ ಜೀವನದ ಒತ್ತಡಗಳು ಮತ್ತು 'ಗಂಡಾಂತರಕಾರಿ'

ನಿಲುವುಗಳು ದಾಂಪತ್ಯ ಸಂಬಂಧವನ್ನು ಶಿಥಿಲಗೊಳಿಸಿದವು. ಕೊನೆಗೆ ವಿವಾಹ ವಿಚ್ಛೇದನವಾಯಿತು.

೧೯೫೬ನೆಯ ಡಿಸೆಂಬರ್ ೫ರಂದು ನಸುಕಿನ ವೇಳೆ ಮಂಡೇಲಾ ಅವರನ್ನು ಅರ್ಲ್ಯಾಂಡೊನಲ್ಲಿನ ಅವರ ಮನೆಯಲ್ಲಿ ಬಂಧಿಸಲಾಯಿತು. 'ಸ್ವಾತಂತ್ರ್ಯ ಘೋಷಣೆ' ಅಂಗೀಕರಿಸಿದ ಹಿನ್ನೆಲೆಯಲ್ಲಿ ಉನ್ನತ ರಾಜದ್ರೋಹದ ಆಪಾದನೆಯೇ ಈ ಬಂಧನಕ್ಕೆ ಕಾರಣವಾಯಿತು. ರಾಜದ್ರೋಹದ ಆಪಾದನೆ ಮೇಲೆ ಒಟ್ಟು ೧೫೬ ಮಂದಿಯನ್ನು ಬಂಧಿಸಲಾಯಿತು.

ಲುತುಲಿ, ಡಾ.ನಾಯ್ಕರ್, ಇಸ್ಮಾಯಿಲ್ ಮೀರ್, ಸ್ವಾತಂತ್ರ್ಯ ಗೀತೆಗಳನ್ನು ರಚಿಸಿದ ಕ್ಯಾನನ್ ಜೇಮ್ಸ್ ಕಲಾಲಾ, 'ನ್ಯೂ ಏಜ್' ಸಂಪಾದಕಿ ರುತ್ ಫಸ್ಟ್, ಅವರ ಪತಿ ನ್ಯಾಯವಾದಿ ಜೋ ಸ್ಲೋವೊ, ಮಹಿಳಾ ಲೀಗ್ ಅಧ್ಯಕ್ಷೆ ಲಿಲಿಯನ್ ನಗೋಯಿ, ಸಮಾಜ ಕಾರ್ಯಕರ್ತೆ ಹೆಲೆನ್ ಜೋಸೆಫ್ ಮುಂತಾದ ನಾಯಕರಲ್ಲದೆ ಚಾಲಕರು, ಕಾರ್ಖಾನೆ ಕಾರ್ಮಿಕರು, ಶಿಕ್ಷಕರು, ಗುಮಾಸ್ತರು ಮತ್ತು ಗೃಹಿಣಿಯರನ್ನು ಕೂಡ ಬಂಧಿಸಲಾಗಿತ್ತು. ಬಂಧಿತರಲ್ಲಿ ೧೦೫ ಮಂದಿ ಕರಿಯರು, ೨೩ ಮಂದಿ ಬಿಳಿಯರು, ೨೧ ಮಂದಿ ಭಾರತೀಯರು ಮತ್ತು ೭ ಮಂದಿ ಮಿಶ್ರವರ್ಣೀಯರು ಇದ್ದರು. ವರ್ಣಭೇದ ನೀತಿಯ ವಿರುದ್ಧ ಧ್ವನಿ ಎತ್ತಿದ ಅವರನ್ನು ಬಿಳಿಯರು ಮತ್ತು ಬಿಳಿಯರಲ್ಲದವರು ಎಂದು ವಿಂಗಡಿಸಿದ ಸರ್ಕಾರ ಬೇರೆ ಬೇರೆ ಜೈಲುಗಳಿಗೆ ಕಳಿಸಿತು.

೧೯೫೬ನೆಯ ಡಿಸೆಂಬರ್ ೧೯ರಂದು ವಿಚಾರಣೆ ಪ್ರಾರಂಭವಾದಾಗ ಜನರಲ್ಲಿ ವಿಜಯೋತ್ಸಾಹದ ವಾತಾವರಣವಿತ್ತು. ಜನ ಸ್ವಾತಂತ್ರ್ಯ ಗೀತ ಹಾಡುತ್ತಿದ್ದರು. ೧೫೬ ಮಂದಿ ಆರೋಪಿಗಳು ಸಮ್ಮೇಳನದ ಪ್ರತಿನಿಧಿಗಳ ಹಾಗೆ ಕುಳಿತಿದ್ದರು. ವಿಚಾರಣೆ ಪ್ರಾರಂಭವಾದಾಗ ಮೈಕ್ರೊಫೋನ್ ಕೆಟ್ಟಿದ್ದರಿಂದ ಮ್ಯಾಜಿಸ್ಟ್ರೇಟರ ಮಾತುಗಳು ಕೇಳಿಸಲಿಲ್ಲ. ನಗೆಗಡಲಿನ ಮಧ್ಯೆ ವಿಚಾರಣೆಯನ್ನು ಮುಂದಕ್ಕೆ ಹಾಕಲಾಯಿತು.

೧೯೫೭ನೆಯ ಜೂನ್ ೨೬ರಂದು ಲುತುಲಿ ಮತ್ತು ಇತರ ಎ.ಎನ್.ಸಿ ನಾಯಕರು ಮನೆಯಲ್ಲೇ ಉಳಿಯುವುದರ ಮೂಲಕ ಕೆಲಸಕ್ಕೆ ಗೈರು ಹಾಜರಿ ಆಗಲು ಕರೆ ನೀಡಿದರು. ಹೀಗೆ ಮಾಡುವುದರಿಂದ ಕಾರ್ಯವೂ ಸಾಧಿಸಿದಂತಾಗುತ್ತದೆ ಮತ್ತು ಪೊಲೀಸರಿಂದ ಉಂಟಾಗುವ ಹಿಂಸೆ ತಪ್ಪುತ್ತದೆ ಎಂದು ಮಂಡೇಲಾ ವಿವರಿಸಿದ್ದಾರೆ. ವಿಚಾರಣೆಯಿಂದಾಗಿ ಚಟುವಟಿಕಗಳು ಅಸ್ತವ್ಯಸ್ತಗೊಂಡಿದ್ದರಿಂದ ಸಂಘಟನೆಯ ಸಾಮರ್ಥ್ಯ ಪರೀಕ್ಷಿಸಲು ಈ ಕರೆ ನೀಡಲಾಗಿತ್ತು.

## ವಿನ್ನಿ ಜತೆ ಮದುವೆ

ರಾಜದ್ರೋಹದ ಆರೋಪದ ಕಾರಣ ಬಂಧನಕ್ಕೊಳಗಾಗುವ ಸ್ವಲ್ಪ ದಿನ ಮುಂಚೆ ವಿನ್ನಿ ನೊಮ್ ಜಾಮೊ ಮಡಿಕಿಜೆಲಾ ಮತ್ತು ನೆಲ್ಸನ್ ಮಂಡೇಲಾ ಅವರ ಭೇಟಿ ಆಯಿತು. ಇನ್ನು ೨೦ ವರ್ಷ ತುಂಬಿರದ ಕಪ್ಪು ಸುಂದರಿ ವಿನ್ನಿ ವೈದ್ಯಕೀಯ ಸಮಾಜ ಸೇವಕಿಯಾಗಿ ಆಸ್ಪತ್ರೆಯೊಂದರಲ್ಲಿ ನೇಮಕಗೊಂಡಿದ್ದರು. ಅಲ್ಲಿಯವರೆಗೆ ಯಾವುದೇ ಕರಿಯ ಮಹಿಳೆ ಈ

ಹುದ್ದೆ ಪಡೆದಿರಲಿಲ್ಲ. ಆಕೆಯ ತಂದೆ ಕೊಲಂಬಸ್ ಮಡಿಕಿಜೆಲಾ ಟ್ರಾನ್ಸ್ ಕೆಯಿ ಬಂಟುಸ್ತಾನದಲ್ಲಿ ಕೃಷಿ ಸಚಿವರಾಗಿದ್ದರು ಬಂಟುಸ್ತಾನಗಳ ಕರಿಯರ ಒಳಾಡಳಿತದಲ್ಲಿ ಬರುವ ಇಂಥ ಹುದ್ದೆಗಳು ಬಿಳಿಯರ ಕಣ್ಣಲ್ಲಿ ಅಂಥ ಮಹತ್ವದ ಸ್ಥಾನ ಪಡೆಯದಿದ್ದರೂ ಕರಿಯರ ಮಧ್ಯೆ ಅವುಗಳಿಗೆ ಒಂದಿಷ್ಟು ಬೆಲೆ ಇರುತ್ತದೆ. ವಿನ್ನಿ ಕೂಡ ನೆಲ್ಸನ್ ಮಂಡೇಲಾ ಹಾಗೆ ಬಾಲ್ಯದಲ್ಲಿ ತಮ್ಮ ದನಗಳನ್ನು ಕಾಯುವ ಕೆಲಸ ಮಾಡಿದ್ದಳು. ಆಕೆಯ ತಂದೆ ಸ್ಥಳೀಯ ಕರಿಯರ ಶಾಲೆಯೊಂದರ ಮುಖ್ಯೋಪಾಧ್ಯಾಯ ಕೂಡ ಆಗಿದ್ದರಿಂದ ಕಲಿಯುವುದರಲ್ಲಿ ಆಸಕ್ತಿ ಬೆಳೆಯಿತು. ವಿನ್ನಿ ಒಂಬತ್ತು ವರ್ಷದವಳಿದ್ದಾಗ ತಾಯಿ ಮೃತಪಟ್ಟಳು. ನಂತರ ಬೋರ್ಡಿಂಗ್ ಶಾಲೆಗೆ ಹೋಗುವವರೆಗೆ ತಮ್ಮ-ತಂಗಿಯರ ಯೋಗಕ್ಷೇಮ ನೋಡಿಕೊಂಡಳು.

ಕಷ್ಟಪಟ್ಟು ಓದಿ ಮೊದಲ ಕರಿಯ ವೈದ್ಯಕೀಯ ಸಮಾಜ ಸೇವಕಿಯಾದ ಕಾರಣ ಅನೇಕ ಪತ್ರಿಕೆಗಳು ಆಕೆಯ ಭಾವಚಿತ್ರವನ್ನು ಪ್ರಕಟಿಸಿದ್ದವು. ಸೇವೆಗೆ ಸೇರಿದ ಹೊಸದರಲ್ಲೇ ಜೊಹಾನ್ಸ್ ಬರ್ಗ್‌ನಲ್ಲಿ ಮಂಡೇಲಾ ಜತೆ ಆದ ಆಕಸ್ಮಿಕ ಭೇಟಿ ಪ್ರೀತಿಗೆ ತಿರುಗಿತು. ಪೊಂಡೋಲ್ಯಾಂಡ್‌ನಲ್ಲಿ ಇರುವ ವಿನ್ನಿ ಮನೆಯಲ್ಲಿ ಜೂನ್ ೧೯೫೮ರಲ್ಲಿ ಮಂಡೇಲಾ ಅವರು ದಿನ್ನಿ ಅವರನ್ನು ಮದುವೆ ಆದರು. ಆಗ ರಾಜದ್ರೋಹದ ವಿಚಾರಣೆ ನಡೆದಿತ್ತು. ಮದುವೆಗೆ ಮುಂಚೆ ಅವರು ವಿನ್ನಿಗೆ ಫೋನ್ ಮಾಡಿ ಮಧ್ಯಾಹ್ನದ ಊಟಕ್ಕೆ ಕರೆದರು. ಅದು ಅವರ ಮೊದಲ ಖಾಸಗಿ ಭೇಟಿಯಾಗಿತ್ತು. ಅವರು ವಿನ್ನಿಯನ್ನು ಜನಪ್ರಿಯ ಭಾರತೀಯ ರೆಸ್ಟೋರೆಂಟ್‌ಗೆ ಕರೆದೊಯ್ದರು. ಅಲ್ಲಿ ಕೂಡ ಜನ ಅವರನ್ನು ಭೇಟಿಯಾಗಿ ಸಲಹೆ ಕೇಳುತ್ತಿದ್ದುದನ್ನು ವಿನ್ನಿ ಗಮನಿಸಿದರು. ನಂತರ ಊರ ಹೊರಗಿನ ಬಯಲು ಪ್ರದೇಶಕ್ಕೆ ಹೋದರು. ಮಂಡೇಲಾ ಅವರಿಗೆ ಹಳ್ಳಿಗಾಡಿನ ನಿಸರ್ಗರಮ್ಯ ಬದುಕು ಮತ್ತು ಜನಸಮೂಹ ಸದಾ ಆಕರ್ಷಕವಾಗಿತ್ತು. ರಾಜದ್ರೋಹದ ವಿಚಾರಣೆಯ ರಕ್ಷಣಾ ನಿಧಿಗಾಗಿ ಹಣ ಸಂಗ್ರಹಿಸಲು ಮಂಡೇಲಾ ಅವರು ವಿನ್ನಿಯನ್ನು ಕೇಳಿಕೊಂಡರು. ಅವರ ಮೊದಲ ಖಾಸಗಿ ಭೇಟಿಯ ಖಾಸಗಿ ಮಾತು ಇದಾಗಿತ್ತು.

ನೆನಪಿಡು ನೀನು ಮದುವೆ ಆಗುತ್ತಿರುವುದು ವ್ಯಕ್ತಿಯನ್ನಲ್ಲ ಹೋರಾಟವನ್ನು ಎಂದು ವಿನ್ನಿ ತಂದೆ ಹೇಳಿದ್ದರು. ಪದ್ಧತಿ ಪ್ರಕಾರ ವರ ಮತ್ತು ಕನ್ಯೆಯ ಮನೆಗಳಲ್ಲಿ ಮದುವೆಯ ಸಮಾರಂಭಗಳು ನಡೆಯಬೇಕಿತ್ತು. ಆದರೆ ಕುನು ಗ್ರಾಮದಲ್ಲಿನ ನೆಲ್ಸನ್ ಮನೆಯಲ್ಲಿ ಮದುವೆ ಏರ್ಪಾಟು ಮಾಡುವಷ್ಟು ಸಮಯ ಇರಲಿಲ್ಲ. ಸಾಂಪ್ರದಾಯಿಕವಾಗಿ ಅವರ ಮದುವೆ ಪೂರ್ತಿ ಆಗಲಿಲ್ಲ. ಆ ಸಂದರ್ಭಕ್ಕಾಗಿ ವಿನ್ನಿ ಮದುವೆ ಕೇಕ್‌ನ ಒಂದು ಭಾಗವನ್ನು ಇನ್ನೂ ಇಟ್ಟಿದ್ದಾರೆ.

೧೯೫೮ನೆಯ ಆಗಸ್ಟ್ ೧ರಿಂದ ರಾಜದ್ರೋಹದ ವಿಚಾರಣೆ ಪ್ರಿಟೋರಿಯಾದಲ್ಲಿ ಸರಿಯಾಗಿ ಪ್ರಾರಂಭವಾಯಿತು. ಲುತುಲಿ, ಟಾಂಬೊ ಮೊದಲಾದ ೬೧ ಮಂದಿಯ ಮೇಲಿನ ಆಪಾದನೆಗಳನ್ನು ಹಿಂತೆಗೆದುಕೊಳ್ಳಲಾಯಿತು. ೧೯೫೯ನೆಯ ಜನವರಿ ೧೯ರಂದು ೬೧

ಆರೋಪಿಗಳ ಬಿಡುಗಡೆ ಮಾಡಲಾಯಿತು. ಉಳಿದ ಆರೋಪಿಗಳಲ್ಲಿ ಲಿಲಿಯನ ನಗೋಯಿ, ಹೆಲೆನ್ ಜೋಸೆಫ್ ವಾಲ್ಟೇರ, ಸಿಸುಲು ಮತ್ತು ನೆಲ್ಸನ್ ಮಂಡೇಲಾ ಇದ್ದರು. ನಾಯಕರ ಚಲನವಲನೆಯ ಮೇಲೆ ನಿಗಾ ಇಡುವುದು. ಅವರ ಚಲನವಲನೆಯನ್ನು ಪ್ರದೇಶವೊಂದಕ್ಕೆ ಸೀಮಿತಗೊಳಿಸುವುದು, ವಿಚಾರಣೆಗೆ ಒಳಪಡಿಸುವುದು, ಮುಂತಾದ ಕ್ರಮಗಳಿಂದಾಗಿ ಸರ್ಕಾರ ಹೋರಾಟಗಾರರ ಮೇಲೆ ತೀವ್ರ ಒತ್ತಡ ತಂದಿತು. ೧೯೫೮ರಲ್ಲಿ ಎ.ಎನ್.ಸಿ.ಯಲ್ಲಿ ಗಂಭೀರವಾದ ಭಿನ್ನಾಭಿಪ್ರಾಯಗಳು ಬೆಳೆಯತೊಡಗಿದವು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಕಮ್ಯೂನಿಸ್ಟರ ಜತೆ ಸೇರಿ ಹೋರಾಟ ಮಾಡುವುದನ್ನು ವಿರೋಧಿಸುವ ಗುಂಪು ರಾಬರ್ಟ್ ಸೊಬುಕ್ವೆ ನೇತೃತ್ವದಲ್ಲಿ ಹೊರಬಂದು ಪ್ಯಾನ್ ಆಫ್ರಿಕನಿಸ್ಟ್ ಕಾಂಗ್ರೆಸ್ (ಪಿ.ಎ.ಸಿ) ಸ್ಥಾಪಿಸಿತು.

೧೯೬೦ರ ಎಲ್ಲ ರಂಗದಲ್ಲಿ ಬಿಳಿಯ ಸರ್ಕಾರದ ದಬ್ಬಾಳಿಕೆ ವಿಪರೀತವಾಯಿತು. ಎ.ಎನ್.ಸಿ ಜತೆ ಎಲ್ಲ ಜನಾಂಗಗಳ ೧೩ ಸಂಘಟನೆಗಳೂ ಒಟ್ಟುಗೂಡಿದ್ದರಿಂದ ಹೋರಾಟಕ್ಕೆ ಹೊಸ ಸ್ವರೂಪ ಬಂದಿತು. ಪಾಸ್ ಕಾಯ್ದೆ ವಿರುದ್ಧ ಮಾರ್ಚ್ ೩೧ ರಂದು ಚಳವಳಿ ಹೂಡಲು ನಿರ್ಧರಿಸಲಾಯಿತು. ಪಿ.ಎ.ಸಿ. ಹತ್ತು ದಿನ ಮೊದಲೇ ಅಂದರೆ ೧೯೬೦ನೇ ಮಾ. ೨೧ರಂದು ಪಾಸ್ ಕಾಯ್ದೆ ವಿರುದ್ಧ ಚಳವಳಿ ಪ್ರಾರಂಭಿಸಿತು. ಮಾದರಿ ನಗರ ಶಾರ್ಪವಿಲ್ಲೆಯಲ್ಲಿ ಶಾಂತಿಯುತವಾಗಿ ಚಳವಳಿ ನಡೆಸುತ್ತಿದ್ದ ಜನರ ಮೇಲೆ ೭೫ ಮಂದಿ ಪೊಲೀಸರು ಹಿಂದಿನಿಂದ ಗುಂಡು ಹಾರಿಸಿದರು. ಆಗ ಹೆಂಗಸರು ಮತ್ತು ಮಕ್ಕಳ ಸಮೇತ ೬೯ ಮಂದಿ ಸತ್ತು ೧೮೦ ಮಂದಿ ಗಾಯಗೊಂಡರು. ಶಾರ್ಪವಿಲ್ಲೆಯಲ್ಲಿ ಈ ದುರಂತ ಸಂಭವಿಸಿದ ಕೆಲವೇ ಗಂಟೆಗಳ ನಂತರ ಕೇಪ್ ಟೌನ ಹೊರವಲಯದ ಲಾಂಗಾ ಎಂಬ ಪ್ರದೇಶದಲ್ಲಿ ೧೦ ಸಾವಿರ ಮಂದಿ ಪ್ರದರ್ಶನಕಾರರ ಮೇಲೆ ಗುಂಡು ಹಾರಿಸಲಾಯಿತು. ಆಗ ಇಬ್ಬರು ಸತ್ತು ೪೯ ಮಂದಿ ಗಾಯಗೊಂಡರು. ಮಾರ್ಚ್ ೩೦ರಂದು ಸರ್ಕಾರ ತುರ್ತು ಪರಿಸ್ಥಿತಿ ಘೋಷಿಸಿತು. ಏಪ್ರಿಲ್ ೮ರಂದು ಸರ್ಕಾರ ಎ.ಎನ್.ಸಿ ಮತ್ತು ಪಿ.ಎ.ಸಿ.ಯನ್ನು ಕಾನೂನು ಬಾಹಿರಗೊಳಿಸಿತು. ರಾಜದ್ರೋಹದ ವಿಚಾರಣೆ ಸಮಯದಲ್ಲಿ

> ವರ್ಣೇತರ ಸಮಾಜದಿಂದ ನೀವು ಪ್ರಭಾವಕ್ಕೊಳಪಟ್ಟಿದ್ದೀರ? ಎಂದು ಮಂಡೇಲಾ ಅವರನ್ನು ಕೇಳಿದಾಗ, ಉತ್ತರ: ಖಂಡಿತವಾಗಿಯೂ ಹೌದು. ನನ್ನ ಪ್ರಕಾರ ವರ್ಗಗಳೊಳಗೆ ಜೀವಂತವಾಗಿರುವ ನೂರಾರು ಸಮಸ್ಯೆಗಳು ಬಾಧಿಸುತ್ತಿವೆ; ಒಂದು ವರ್ಗವು ಇನ್ನೊಂದು ವರ್ಗವನ್ನು ಶೋಷಣೆ ಮಾಡುವುದರ ಮೂಲಕ

ಎಂದು ಮಂಡೇಲಾ ಉತ್ತರಿಸಿದರು. ಆಗಸ್ಟ್ ೯ರಂದು ಅವರು ತಮ್ಮ ಸಾಕ್ಷ್ಯವನ್ನು ಪೂರ್ತಿಗೊಳಿಸಿದರು. ಆಗಸ್ಟ್ ಅಂತ್ಯದ ವೇಳೆ ತುರ್ತು ಪರಿಸ್ಥಿತಿ ತೆಗೆದಾಗ ಮಂಡೇಲಾ ಮತ್ತು ಗೆಳೆಯರನ್ನು ಬಿಡುಗಡೆ ಮಾಡಲಾಯಿತು.

ನಾಲ್ಕು ವರ್ಷಗಳಿಗೂ ಹೆಚ್ಚು ಕಾಲ ನಡೆದ ರಾಜದ್ರೋಹದ ವಿಚಾರಣೆಗೆ ಸಂಬಂಧಿಸಿದಂತೆ ಸರ್ಕಾರದ ವಾದ ಮಾರ್ಚ್ ೧೯೬೧ರಲ್ಲಿ ಪೂರ್ತಿಗೊಂಡಿತು. ರಾಜದ್ರೋಹದ

ಆಪಾದನೆಯಲ್ಲಿ ಕೊನೆಗೆ ಉಳಿದ ಎಲ್ಲ ೩೦ ಮಂದಿಯನ್ನು ಮಾರ್ಚ್ ೨೯ ರಂದು ಬಿಡುಗಡೆ ಮಾಡಲಾಯಿತು. ಸರ್ಕಾರ ಎಷ್ಟೇ ಪ್ರಯತ್ನಪಟ್ಟರೂ 'ಸ್ವಾತಂತ್ರ್ಯ ಘೋಷಣೆ'ಯಲ್ಲಿ ಕಮ್ಯೂನಿಜಂ ಹುಡುಕಲಿಕ್ಕಾಗಲಿಲ್ಲ. ರಾಜದ್ರೋಹದ ಆಪಾದನೆಗೆ ಒಳಗಾದವರೆಲ್ಲ ನಿರಪರಾಧಿಗಳೆಂದು ಸಾಬೀತಾಯಿತು.

೧೯೬೧ರನೇ ಮಾರ್ಚ್ ೨೫ ರಂದು ಪೀಟರ್ ಮಾರಿಟ್ಸಬರ್ಗ್‌ನಲ್ಲಿ ನಡೆದ ಆಲ್ ಇನ್ ಆಫ್ರಿಕನ್ ಸಮ್ಮೇಳನದಲ್ಲಿ ಮಂಡೇಲಾ ಭಾಗವಹಿಸಿದ್ದರು. ೧೦ ವರ್ಷಗಳ ನಿಷಿದ್ಧ ಜೀವನದ ನಂತರ ಅವರು ಮೊದಲ ಬಾರಿಗೆ ಏಕಾಏಕಿ ಬಂದಾಗ ಸಭೆಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು ಎಂದು ಒಬ್ಬ ಪ್ರತಿನಿಧಿ ಹೇಳಿದರು.

೧೯೬೧ರನೇ ಮೇ ೨೯ ರಂದು ಮೂರು ದಿನ ಮನೆಯಲ್ಲೇ ಉಳಿಯುವ ಕರೆ ನೀಡಿದರು. ಜನರು ಮಂಡೇಲಾ ಕರೆಗೆ ಓಗೊಟ್ಟರು ಕೆಲಸ ಸ್ಥಗಿತಗೊಳಿಸುವ ಮುಷ್ಕರ ಯಶಸ್ವಿಯಾಯಿತು. ನಂತರ ಭೂಗತರಾದ ಮಂಡೇಲಾ ೧೯೬೧ರನೇ ಜೂನ್ ೨೬ರ ವಾರ್ಷಿಕ 'ಸ್ವಾತಂತ್ರ್ಯ ದಿನ'ದಂದು ಹೊಸ ರೀತಿಯ ಹೋರಾಟಕ್ಕೆಕರೆ ನೀಡಿದರು. ಇನ್ನು ಮೇಲೆ ಅಹಿಂಸಾ ನೀತಿಯ ಅಧ್ಯಾಯ ಮುಗಿಯಿತು ಎಂದರು.

ಎ.ಎನ್.ಸಿ ಜನ್ಮ ತಾಳದಂದಿನಿಂದಲೂ ೫೦ ವರ್ಷಗಳಷ್ಟು ಕಾಲ ಅಹಿಂಸೆಯ ದಾರಿ ಸವೆಸಿತ್ತು. ಅವರ 'ಸತ್ಯಾಗ್ರಹ'ದಲ್ಲಿ ನಂಬಿಕೆ ಇಟ್ಟಿತ್ತು. ಮಂಡೇಲಾ, ಸಿಸುಲು ಮೊದಲಾದ ಗೆಳೆಯರು ಕೂಡ ಆ ಪರಂಪರೆಯನ್ನು ಹೆಚ್ಚು ಶಕ್ತಶಾಲಿಗೊಳಿಸಿದರು. ಆದರೆ ಯಾವುದೇ ಪ್ರಯೋಜನವಾಗಲಿಲ್ಲ. ಎ.ಎನ್.ಸಿ. ಅಧ್ಯಕ್ಷ, ನೊಬೆಲ್ ಶಾಂತಿ ಪ್ರಶಸ್ತಿ ವಿಜೇತ ಚೀಫ್ ಅಲ್ಬರ್ಟ್ ಲುತುಲಿ ತುಂಬ ವಿಷಾದದಿಂದ ಹೀಗೆ ಹೇಳಿದರು:

> ಅತ್ಯಂತ ಸಂಯಮದಿಂದ, ತಾಳ್ಮೆ ಮತ್ತು ಗೌರವದಿಂದ ಎಂದೂ ತೆರೆಯಲಾಗದ ಬಾಗಿಲುಗಳ ತಟ್ಟುತ್ತಾ ಮೂವತ್ತು ವರ್ಷಗಳನ್ನು ಕಳೆದ ವಿಚಾರಗಳನ್ನು ಯಾರೂ ನಿರಾಕರಿಸುವುದಕ್ಕಾಗುವುದಿಲ್ಲ. ಇದರಿಂದ ದೊರೆತ ಫಲವೇನು? ನಮ್ಮ ಎಲ್ಲ ಹಕ್ಕುಗಳನ್ನು ಮತ್ತು ಪ್ರಗತಿಯನ್ನು ತಡೆ ಹಿಡಿದ ನೂರಾರು ಕಾಯ್ದೆಗಳನ್ನು ಕಳೆದ ಮೂವತ್ತು ವರ್ಷಗಳಿಂದ ನೋಡುತ್ತಿದ್ದೇವೆ. ಇಂದಿಗೂ ಯಾವುದೇ ಹಕ್ಕುಗಳನ್ನು ಪಡೆಯುವುದಕ್ಕಾಗದ ಸ್ಥಿತಿಯನ್ನು ನಾವಿದ್ದೇವೆ.

ಅಹಿಂಸಾತ್ಮಕ ಹೋರಾಟಗಳಲ್ಲಿ ನಂಬಿಕೆ ಇಟ್ಟುಕೊಂಡಿದ್ದ ಎ.ಎನ್.ಸಿ. ಕಾನೂನು ಬಾಹಿರಗೊಂಡ ನಂತರ ಸಶಸ್ತ್ರ ಹೋರಾಟದ ಬಗ್ಗೆ ಯೋಚಿಸತೊಡಗಿತು. 'ಕರಿಯರ ವಿಮೋಚನೆ ಸಶಸ್ತ್ರ ಹೋರಾಟದ ಮೂಲಕ' ಎಂಬುದು ಮಂಡೇಲಾ ಅವರಿಗೆ ಮನವರಿಕೆ ಆಯಿತು.

### ಉಮ್ ಖೊಂಟೊ ವೆ ಸಿಜ್ವೆ

ಅಕ್ಟೋಬರ್ ೧೯೬೧ರಲ್ಲಿ ಜೊಹಾನ್ಸ್ ಬರ್ಗ್‌ನ ಹೊರವಲಯದಲ್ಲಿರುವ ರಿವೋನಿಯಾ ಎಂಬಲ್ಲಿ 'ಲಿಲ್ಲೀಸ್ ಲೀಫ್' ಹೆಸರಿನ ಚಿಕ್ಕ ಫಾರ್ಮ್ ಅನ್ನು ಬಾಡಿಗೆಗೆ ತೆಗೆದುಕೊಂಡು

ಮಂಡೇಲಾ ಅವರು ಪತ್ನಿ ವಿನ್ನಿ ಮತ್ತು ಹೆಣ್ಣು ಮಕ್ಕಳು ಜೆನಿ ಹಾಗೂ ಜಿಂಜಿ ಜತೆ ಅಲ್ಲಿ ಉಳಿದರು.

ಕರಿಯರ ಹೋರಾಟಕ್ಕೆ ಮಂಡೇಲಾರ ಬಹುದೊಡ್ಡ ಕೊಡುಗೆ ಎಂದರೆ ೧೯೬೧ನೇ ಡಿಸೆಂಬರ್ ೧೬ರಂದು 'ಲಿಲ್ಲೀಸ್ ಲೀಫ್'ನಲ್ಲಿ ಪ್ರಾರಂಭವಾದ 'ಉಮ್ ಖೊಂಟೊ ವೆ ಸಿಜ್ವೆ' ಜುಲು ಭಾಷೆಯಲ್ಲಿ ಹಾಗೆಂದರೆ 'ದೇಶದ ಈಟಿ'. ಅದು ಎ.ಎನ್.ಸಿ.ಯ ಅರೆಮಿಲಿಟರಿ ವಿಭಾಗ. ಮಂಡೇಲಾ ಅದರ ಕಮಾಂಡರ್ ಇನ್ ಚೀಫ್ ಆದರು. ಆ ದಿನ ಸರ್ಕಾರಿ ಕಟ್ಟಡಗಳಲ್ಲಿ ಬಾಂಬುಗಳು ಸಿಡಿದವು. ಇದಕ್ಕೆ ತಾನೇ ಹೊಣೆ ಎಂದು ಆ ಅಪರಿಚಿತ ಸಂಘಟನೆ ಹೇಳಿತು. ಅಂದೇ ಜನ್ಮತಾಳಿದ 'ಉಮ್ ಖೊಂಟೊ ವೆ ಸಿಜ್ವೆ' ಈ ರೀತಿ ತನ್ನ ಶಕ್ತಿ ಪ್ರದರ್ಶನ ಮಾಡಿತು.

'ಉಮ್ ಖೊಂಟೊ ವೆ ಸಿಜ್ವೆ' ಶಕ್ತಿಶಾಲಿಯಾಗಿ ಬೆಳೆಯಲು ಬೇಕಾದ ಅನುಭವ ಮತ್ತು ಇತರ ಅವಶ್ಯಕತೆಗಾಗಿ ಮಂಡೇಲಾ ೧೯೬೨ರ ಜನವರಿಯಲ್ಲಿ ಸರ್ಕಾರದ ಕಣ್ಣು ತಪ್ಪಿಸಿ ವಿದೇಶ ಪ್ರವಾಸ ಕೈಗೊಂಡರು. ಅಡಿಸ್ ಅಬಾಬಾದಲ್ಲಿ ನಡೆದ ಪ್ಯಾನ್ ಆಫ್ರಿಕನ್ ಸ್ವಾತಂತ್ರ್ಯ ಸಮ್ಮೇಳನದಲ್ಲಿ ಎ.ಎನ್.ಸಿ ಪರವಾಗಿ ಭಾಗವಹಿಸಿದರು. ಟಂಗಾನಿಕಾ, ಇಥಿಯೋಪಿಯಾ, ಸೂಡಾನ್, ಈಜಿಪ್ಟ್, ಲಿಬಿಯಾ, ಟುನಿಷಿಯಾ, ಅಲ್ಜೀರಿಯಾ, ಮೊರೊಕೊ, ಮಾಲಿ, ಸೆನೆಗಲ್, ಗಿನಿಯಾ, ಸಿಯೆರ್ರಾ, ತೆಯೊನೆ, ಲಿಬೆರಿಯಾ, ಘಾನಾ ಮತ್ತ ನೈಬೀರಿಯಾಗಳಿಗೆ ಭೇಟಿ ನೀಡಿದರು. ಅಲ್ಲಿನ ನಾಯಕರು ಮತ್ತು ಹಿರಿಯ ಅಧಿಕಾರಿಗಳ ಜತೆ ಚರ್ಚಿಸಿದರು. ಇಂಗ್ಲೆಂಡ್‌ನಲ್ಲಿ ಆಗ ಲೇಬರ್ ಪಕ್ಷದ ನಾಯಕರಾಗಿದ್ದ ಹಗ್ ಗೈಟ್ಸ್ ಕೆಲ್ ಮತ್ತು ಲಿಬರಲ್ ಪಕ್ಷದ ನಾಯಕರಾಗಿದ್ದ ಜೊ ಗ್ರಿಮೊಂಡ್ ಅವರು ಮಂಡೇಲಾ ಅವರನ್ನು ಬರಮಾಡಿಕೊಂಡರು.

ಪ್ರವಾಸದ ನಂತರ ಅವರು ಮತ್ತೆ ಸರ್ಕಾರದ ಕಣ್ಣು ತಪ್ಪಿಸಿ ಸ್ವದೇಶಕ್ಕೆ ಮತ್ತಿ ಬಂದು ಭೂಗತರಾದರು. ೧೯೬೨ನೇ ಆಗಸ್ಟ್ ೧೫ರಂದು ಪೊಲೀಸರು ಅವರನ್ನು ಡರ್ಬಾನ್ ಬಳಿ ಬಂಧಿಸಿದರು. ಡರ್ಬಾನ್‌ನಲ್ಲಿನ ಅಮೆರಿಕದ ಕಾನ್ಸುಲೇಟ್‌ನಲ್ಲಿ ಕೆಲಸ ಮಾಡುತ್ತಿದ್ದ ಸಿ.ಐ.ಎ. ಏಜೆಂಟ್ ಒಬ್ಬ ಮಂಡೇಲಾ ಅವರ ಬಗ್ಗೆ ಪೊಲೀಸರಿಗೆ ಸುಳಿವು ನೀಡಿದ್ದ ಎಂಬುದು ೧೯೮೬ರಲ್ಲಿ ಬೆಳಕಿಗೆ ಬಂದಿತು. ೧೯೬೨ನೆಯ ನವೆಂಬರ್ ೭ರಂದು ಅವರಿಗೆ ೫ ವರ್ಷ ಕಠಿಣ ಶಿಕ್ಷೆ ಆಯಿತು. ೧೯೬೨ನೇ ಮೇ ೨೯ರಂದು ರಾಷ್ಟ್ರೀಯ ಮುಷ್ಕರಕ್ಕೆ ಕರೆ ನೀಡಿದ್ದಕ್ಕಾಗಿ ३ ವರ್ಷ ಶಿಕ್ಷೆಯಾದರೆ ದಾಖಲೆಗಳಿಲ್ಲದೆ ವಿದೇಶಿ ಪ್ರವಾಸ ಕೈಗೊಂಡಿದ್ದಕ್ಕೆ ೨ ವರ್ಷ ಶಿಕ್ಷೆ ಆಯಿತು.

೧೯೬೩ನೆಯ ಜುಲೈ ೧೨ರಂದು ರಿವೋನಿಯಾದಲ್ಲಿ ಪೊಲೀಸರು ಸಿಸುಲು ಮತ್ತು ಇತರ ನಾಯಕರನ್ನು ಬಂಧಿಸಿದರು. ದಾಖಲೆ ಪತ್ರಗಳನ್ನೂ ವಶಪಡಿಸಿಕೊಂಡರು. ಈ ಹಿನ್ನೆಲೆಯಲ್ಲಿ ಮಂಡೇಲಾ ಅವರನ್ನು ರಿವೋನಿಯಾ ವಿಚಾರಣೆಯ ನಂಬರ್ ೧ ಆರೋಪಿಯಾಗಿ ಪರಿಗಣಿಸಲಾಯಿತು. ಒಟ್ಟು ಆರು ಮಂದಿ ಬಿಳಿಯರನ್ನು ಬಂಧಿಸಲಾಗಿತ್ತು. ಅವರಲ್ಲಿ ಇಬ್ಬರು ಪೊಲೀಸ್ ಕಸ್ಟಡಿಯಿಂದ ಪಾರಾಗಿ ಹೋದರು. ಒಬ್ಬ ಸರ್ಕಾರ ಪರ ಸಾಕ್ಷ್ಯ

ನುಡಿಯುವುದಾಗಿ ಹೇಳಿ ದೇಶದಿಂದ ಪಾರಾಗಿ ಹೋದ. ಸಾಕ್ಷ್ಯಾಧಾರ ಇಲ್ಲದ್ದಕ್ಕಾಗಿ ನಾಲ್ಕನೆಯವನನ್ನು ಬಿಡಲಾಯಿತು. ವಾಸ್ತುಶಿಲ್ಪಿ ಲಯನೆಲ್ ರಸ್ಟಿ ಬರ್ನ್‌ಸ್ಟೆಯಿನ್ ಮತ್ತು ಸಿವಿಲ್ ಎಂಜಿನಿಯರ್ ಡೆನ್ನಿಸ್ ಗೋಲ್ಡ್ ಬರ್ಗ್ ರಿವೋನಿಯಾ ವಿಚಾರಣೆಯ ಬಿಳಿಯ ಆರೋಪಿಗಳಾಗಿ ಉಳಿದರು. ಭಾರತೀಯ ಅಹ್ಮದ್‌ಕಥ್ರದಾ ಮತ್ತು ಕರಿಯರಾದ ಗೋವನ್ ಮಬೇಕಿ, ರೊಯ್ಮೊಂಡ್ ಮಹ್ಲಬಾ, ಇಲಿಯಾಸ್ ಮೊತ್ಸೊತಿದಿ. ಅಂಡ್ರ್ಯೂ ಮಲಂಗೆನಿ ಮತ್ತು ವಾಲ್ಟೇರ್ ಸಿಸುಲು ಅವರು ನೆಲ್ಸನ್ ಮಂಡೇಲಾ ಜತೆ ರಿವೋನಿಯಾ ವಿಚಾರಣೆ ಎದುರಿಸಿದರು. ಈಗಾಗಲೇ ಪ್ರಿಟೋರಿಯಾ ಕೇಂದ್ರ ಕಾರಾಗೃಹದಲ್ಲಿ ಐದು ವರ್ಷಗಳ ಕಠಿಣ ಶಿಕ್ಷೆ ಎದುರಿಸುತ್ತಿದ್ದ ನೆಲ್ಸನ್ ಮಂಡೇಲಾ ಅವರನ್ನು ರಾಬ್ಬೆನ್ ನಡುಗಡ್ಡೆಗೆ ಕಳಿಸಲಾಯಿತು. ವಿಚಾರಣೆ ವೇಳೆ ಮತ್ತೆ ಪ್ರಿಟೋರಿಯಾ ಕಾರಾ ಗೃಹಕ್ಕೆ ಸ್ಥಳಾಂತರಿಸಿ ಹೊರ ಜಗತ್ತಿನ ಯಾವುದೇ ಸಂಬಂಧವಿರದ ರೀತಿಯಲ್ಲಿ ಇಡಲಾಯಿತು. ೧೯೬೩ನೇ ಅಕ್ಟೋಬರ್ ೯ರಂದು ಪ್ರಿಟೋರಿಯಾದಲ್ಲಿ ರಿವೋನಿಯಾ ವಿಚಾರಣೆ ಪ್ರಾರಂಭವಾಯಿತು. ೧೯೬೨ನೇ ಜನವರಿ ೨೪ರಿಂದ ಎರಡು ವರ್ಷಗಳವರೆಗೆ ಚಲನವಲನೆಯ ಮೇಲೆ ನಿಷೇಧ ಹೇರಿದ್ದರಿಂದ ವಿನ್ನಿಗೆ ಜೂಹಾನ್ಸ್ ಬರ್ಗ್ ಬಿಟ್ಟು ಬರಲಾಗಲಿಲ್ಲ.

೧೯೬೪ನೇ ಏಪ್ರಿಲ್ ೨೦ರಂದು ನಡೆದ ವಿಚಾರಣೆ ಸಮಯದಲ್ಲಿ ಮಂಡೇಲಾ ೪ ಗಂಟೆಗೂ ಹೆಚ್ಚು ಕಾಲ ಮಾತಾನಾಡಿದ್ದು ಇತಿಹಾಸ ಪ್ರಸಿದ್ಧವಾಗಿದೆ.

> ಆಫ್ರಿಕಾದ ಜನತೆಯ ಹೋರಾಟಕ್ಕೆ ನನ್ನ ಬದುಕನ್ನೇ ಸಮರ್ಪಿಸಿಕೊಂಡಿದ್ದೇನೆ. ಬಿಳಿಯರ ಪ್ರಾಬಲ್ಯದ ವಿರುದ್ಧ ಹೋರಾಡಿದ್ದೇನೆ. ಮತ್ತು ಕರಿಯರ ಪ್ರಾಬಲ್ಯದ ವಿರುದ್ಧ ಹೋರಾಡಿದ್ದೇನೆ. ಸರ್ವರೂ ಸಮಾನ ಅವಕಾಶಗಳೊಂದಿಗೆ ಸಾಮರಸ್ಯದಿಂದ ಒಂದುಗೂಡಿ ಬದುಕುವಂಥ ಪ್ರಜಾಪ್ರಭುತ್ವ ಮತ್ತು ಮುಕ್ತ ಸಮಾಜದ ಆದರ್ಶಗಳನ್ನು ಪೋಷಿಸಿದ್ದೇನೆ. ಈ ಆದರ್ಶಗಳ ಸಾಧನೆಗಾಗಿ ನಾನು ಬದುಕಲು ಬಯಸುತ್ತೇನೆ ಮತ್ತು ಈ ಆದರ್ಶಗಳಿಗಾಗಿ ನಾನು ಸಾಯಲು ಸಿದ್ಧನಿದ್ದೇನೆ

ಎಂದು ಅವರು ಮಾತು ಮುಗಿಸಿದರು. ಸರ್ಕಾರ ಉರುಳಿಸುವ ಉದ್ದೇಶದಿಂದ 'ಉಮ್ ಖೊಂಟೊ ವೆ ಸಿಜ್ವೆ' ಸ್ಥಾಪಿಸಲಾಗಿದೆ ಎಂದು ೧೯೬೪ರ ಜೂನ್ ೧೧ರಂದು ತೀರ್ಪು ನೀಡಿದ ನ್ಯಾಯಾಧೀಶ ಲಯನೆಲ್ ಬರ್ನ್ ಸ್ಟೆಯಿನ್ ನಿರಪರಾಧಿ ಎಂದು ಘೋಷಿಸಿ ಉಳಿದ ಎಂಟು ಮಂದಿಗೆ ಜೀವಾವಧಿ ಶಿಕ್ಷೆ ವಿಧಿಸಿದ. ಮಂಡೇಲಾ ಮೊದಲು ಮಾಡಿ, ಎಲ್ಲರೂ ಮರಣ ದಂಡನೆಯಾಗುವುದು ಎಂದು ಭಾವಿಸಿದರು. ಆದರೆ ಬಿಳಿಯ ಕಮ್ಯೂನಿಸ್ಟ್ ವಕೀಲ ಬ್ರಾಮ್ ಫಿಷರ್ ಅವರ ಅದ್ವಿತೀಯವಾದ ಸಾಮರ್ಥ್ಯದಿಂದಾಗಿ ಎಂಟೂ ಮಂದಿಯ ಜೀವ ಉಳಿಯಿತು. ಬಿಳಿಯ ಡೆನ್ನಿಸ್ ಗೋಲ್ಡ್ ಬರ್ಗ್ ಅವರನ್ನು ಪ್ರಿಟೋರಿಯಾ ಜೈಲಿನಲ್ಲಿ ಇಡಲಾಯಿತು. ಮಂಡೇಲಾ, ಸಿಸುಲು, ಮಬೇಕಿ, ಮಹಲಬಾ, ಮೊತ್ಸೊ ಲೆದಿ ಮತ್ತು ಕಥದಾರ ಅವರನ್ನು ಕುಪ್ರಸಿದ್ಧ ರಾಬ್ಬೆನ್ ನಡುಗಡ್ಡೆಗೆ

ಕಳಿಸಲಾಯಿತು. ಕೇಪ್ ಟೌನ್‌ನಿಂದ ವಾಯುವ್ಯದ ಕಡೆಗೆ ೭ ಮೈಲಿ ದೂರದಲ್ಲಿ ರಾಬೆನ್ ನಡುಗಡ್ಡೆ ಇದೆ. ಇಲ್ಲಿನ ಜೈಲು ಜಗತ್ತಿನಲ್ಲೇ ಕುಪ್ರಸಿದ್ಧವಾದದು. ತಣ್ಣನೆಯ ಅಟ್ಲಾಂಟಿಕ್ ಸಾಗರದ ಮಧ್ಯೆ ಇರುವ ಈ ನಡುಗಡ್ಡೆಯಲ್ಲಿ ರಕ್ತ ಹೆಪ್ಪುಗಟ್ಟುವಂಥ ಚಳಿ ಇರುತ್ತದೆ. ೧೭ನೆಯ ಶತಮಾನದಲ್ಲಿ ಈ ನಡುಗಡ್ಡೆಯನ್ನು ಜೈಲಾಗಿ ಪರಿವರ್ತಿಸಲಾಯಿತು. ೧೮ನೆಯ ಶತಮಾನದಲ್ಲಿ ಹುಚ್ಚರ ಮತ್ತು ಕುಷ್ಠರೋಗಿಗಳ ಕಾಲೋನಿ ಆಯಿತು. ಎರಡನೇ ಮಹಾಯುದ್ಧದ ಸಮಯದಲ್ಲಿ ಸೈನ್ಯ ಠಾಣೆ ಆಯಿತು. ೧೯೬೧ರಿಂದ ಮತ್ತೆ ಜೈಲಾಗಿ ಮಾರ್ಪಟ್ಟಿತು. ಈ ಜೈಲಿನಿಂದ ಪಾರಾಗಲು ಸಾಧ್ಯವೇ ಇಲ್ಲ. ಅಷ್ಟೊಂದು ಬಂದೋಬಸ್ತಿನಿಂದ ಕೂಡಿದೆ. ಅಲ್ಲಿ ದೈಹಿಕ ಮತ್ತು ಮಾನಸಿಕ ಹಿಂಸೆ ನೀಡುವುದು ದೈನಂದಿನ ಕ್ರಮವಾಗಿದೆ. ಕೈದಿಗಳಿಗೆ ದೈಹಿಕ ಹಿಂಸೆ ಕೊಟ್ಟಾಗ ನೆಲದ ಮೇಲೆ ಬಿದ್ದ ರಕ್ತವನ್ನು ಅವರೇ ಒರೆಸಿ ಸ್ವಚ್ಛಗೊಳಿಸುವಂಥ ಪರಿಸ್ಥಿತಿ ಇದೆ. ಪ್ರಸಿದ್ಧಿಯಿಂದಾಗಿ ನೆಲ್ಸನ್ ಮಂಡೇಲಾ ಅವರಿಗೆ ದೈಹಿಕ ಹಿಂಸೆ ಕೊಡುವ ಪರಸ್ಥಿತಿ ಇರಲಿಲ್ಲ. ಆದರೆ ಬೆಳಿಗ್ಗೆ ೭ ಗಂಟೆಯಿಂದ ಸಾಯಂಕಾಲ ೪ ಗಂಟೆಯವರೆಗೆ ಅವರು ನಡುಗಡ್ಡೆಯ ಸುಣ್ಣದ ಕಲ್ಲಿನ ಗಣಿಯಲ್ಲಿ ಕೆಲಸ ಮಾಡಬೇಕಿತ್ತು. ಅದು ಕಠಿಣ, ಬೇಸರ ಹುಟ್ಟಿಸುವ ಮತ್ತು ಅನುತ್ಪಾದಕ ಕೆಲಸವಾಗಿತ್ತು. ಗಾರ್ಡ್‌ಗಳು ಸದಾಕಾಲ ಕಠಿಣ ಕೆಲಸ ಮಾಡಲು ಒತ್ತಾಯಿಸುತ್ತಿದ್ದರು ಎಂದು ಮಂಡೇಲಾ ಸ್ಮರಿಸಿಕೊಂಡಿದ್ದಾರೆ. ಮಂಡೇಲಾ ರಾಬ್ಬೆನ್ ನಡುಗಡ್ಡೆಯಲ್ಲಿ ೧೮ ವರ್ಷ ಕಳೆದರು.

**ಅಲ್ಲೋಲ ಕಲ್ಲೋಲ**

ನಿಮ್ಮನ್ನೆಲ್ಲ ತಿರಸ್ಕರಿಸುವವರಿಗೆ
ಸಿಗುವಂತೆ ಸಾಕಷ್ಟು ಸ್ಥಳ
ಅಗಲವಾಗಲಿ ಎತ್ತರವಾಗಲಿ
ನಿಮ್ಮ ಜೈಲು ಗೋಡೆಗಳಿನ್ನೂ

೧೯೬೩ರಲ್ಲಿ ಅಕಾಲ ಮೃತ್ಯುವಿಗೀಡಾದ ಕವಿ ಮಾರ್ಕ್ ವೆಯಿನ್ ಬರ್ಗ್(೧೮) ಬರೆದ ಕವನದ ಸಾಲುಗಳಿವು. ೨೫ ವರ್ಷಗಳ ನಂತರ ಆ ಕವನದಲ್ಲಿನ ಧ್ವನಿ ಪೂರ್ಣವಾದ ಕನಸನ್ನು ನನಸಾಗಿಸುವ ರೀತಿಯಲ್ಲಿ ಇಂದಿನ ಕಪ್ಪು ಯುವಕರು ದಕ್ಷಿಣ ಆಫ್ರಿಕಾದಲ್ಲಿ ಎಡೆಬಿಡದ ಹೋರಾಟ ನಡೆಸಿದ್ದಾರೆ. ಅಲ್ಲಿನ ವರ್ಣಭೇದ ನೀತಿಯು ಬಿಳಿಯರ ಸರ್ಕಾರ ಪಿ.ಡಬ್ಲೂ ಬೋಥಾ ಅಧಿಕಾರದಲ್ಲಿದ್ದಾಗ ಇಡೀ ದೇಶವನ್ನೇ ಜೈಲು ಭೂಮಿ ಮಾಡುವ ಮಟ್ಟಕ್ಕೆ ಹೋಯಿತು.

ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಸುಲಿಗೆಗೀಡಾದ ಅಲ್ಲಿನ ಕರಿಯರು ಬಿಳಿಯರನ್ನು ಕಾಲದ ಅನಿವಾರ್ಯ ತಿರುವಿನಲ್ಲಿ ತಂದು ನಿಲ್ಲಿಸಿದ್ದಾರೆ. 'ವರ್ಣಭೇದ' ನೀತಿ ಇಲ್ಲದ ನಮಗೆ ಉಳಿಗಾಲವಿಲ್ಲ ಎಂದು ಕರಿಯರು ಕೃತಿಯ ಮೂಲಕ ಹೇಳಿದ್ದಾರೆ. ಇಷ್ಟು ದಿನಗಳ ಗುಲಾಮರು ಬಿಳಿಯರು ಭಾವಿಸಿದರೆ 'ಇಲ್ಲಿ ವರ್ಣಭೇದ ನೀತಿಗೆ ಇನ್ನು ಅವಕಾಶವಿಲ್ಲ' ಎಂದು ಇಂದು ಬಿಳಿಯರಿಗೆ 'ಸಿಂಹಸ್ವಪ್ನ'ವಾಗಿದ್ದಾರೆ.

೧೯೮೪ರ ಸೆಪ್ಟೆಂಬರ್ ತಿಂಗಳಿಂದ ಕರಿಯರ ಹೋರಾಟ ಅವ್ಯಾಹತವಾಗಿ ನಡೆದಿದೆ. ೧೯೮೪ರ ಸೆಪ್ಟೆಂಬರ್ ೬ರಂದು ೨೬ ಮಂದಿ ಕರಿಯ ಹೋರಾಟಗಾರರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಸೆಪ್ಟೆಂಬರ್ ೫ರಂದು ಹಿಂಸೆ ಗಲಭೆಗಳ ಮಧ್ಯೆ ಪ್ರಧಾನ ಮಂತ್ರಿ ಬೋಥಾ ಹೊಸ ಸಂವಿಧಾನದ ಪ್ರಕಾರ ಅಧ್ಯಕ್ಷರಾಗಿ ಆಯ್ಕೆ ಆದರು. ಅಂದಿನಿಂದ ಒಂದು ವರ್ಷದ ಅವಧಿಯಲ್ಲಿ ೭೦೦ ಮಂದಿ ಕರಿಯರು ಪೊಲೀಸರ ಗುಂಡಿಗೆ ಆಹುತಿಯಾದರು. ಇಂದು ಕರಿಯರಿಗೆ ಸಾವು ಬದುಕಿನ ಮಧ್ಯೆ ಅಂತರ ಕಾಣುತ್ತಿಲ್ಲ. ಗುಲಾಮಗಿರಿಯಲ್ಲಿ ಬದುಕು ಇಲ್ಲ ಎಂಬುದು ಅವರಿಗೆ ಮನದಟ್ಟಾಗಿದೆ 'ಶತಮಾನದುದ್ದಕ್ಕೂ ಅವರ ಹಿರಿಯರು ನರಳುತ್ತ ಬದುಕಿದ್ದು ಅಸಹ್ಯವಾದುದು' ಎಂಬ ದೃಢನಿರ್ಧಾರ ಅವರದು. 'ನಮ್ಮ ವರ್ಣಭೇದ ನೀತಿಯನ್ನು ಯಾವ ಶಕ್ತಿಯಿಂದಲೂ ತಡೆಯಲಿಕ್ಕಾಗದು' ಎಂದು ಬೋಥಾ ಅಧ್ಯಕ್ಷರಾಗಿದ್ದಾಗ ಹೇಳುತ್ತಿದ್ದುದು ಇಂದು ಹಾಸ್ಯಾಸ್ಪದವಾಗಿದೆ.

ದೇಶದ ಕಪ್ಪು ಯುವಕರ ನಡವಳಿಕೆ ಅವರ ಹಿರಿಯರಿಗೂ ಅರ್ಥವಾಗುತ್ತಿಲ್ಲ. ಇಡೀ ದಕ್ಷಿಣ ಆಫ್ರಿಕಾವನ್ನೇ ಸುಟ್ಟು ಅದರ ಬೂದಿಯಲ್ಲೇ ಹೊಸದೊಂದನ್ನು ಸೃಷ್ಟಿಸುತ್ತೇವೆ ಎಂದು ಯುವಕರು ಎಚ್ಚರಿಸುತ್ತಿದ್ದಾರೆ. ಇವರೆಲ್ಲ ೧೯೬೦ರಲ್ಲಿ ನಡೆದ ಶಾರ್ಪವಿಲೆ ದುರಂತದ ನಂತರ ಜನಿಸಿದವರು. ಶಾರ್ಪವಿಲೆ ದುರಂತ ಕರಿಯರ ಹೋರಾಟಕ್ಕೆ ಐತಿಹಾಸಿಕ ತಿರುವುಕೊಟ್ಟಿತು ಎಂಬುದಕ್ಕೆ ಇಂದಿನ ಪರಿಸ್ಥಿತಿ ಸಾಕ್ಷಿಯಾಗಿದೆ. ಅಲ್ಲಿಯವರೆಗೆ ಅಹಿಂಸಾತ್ಮಕ ಹೋರಾಟದಲ್ಲಿ ನಂಬಿಕೆ ಇಟ್ಟುಕೊಂಡಿದ್ದ ಎ.ಎನ್.ಸಿ. ಸಶಸ್ತ್ರ ಹೋರಾಟಕ್ಕೆ ಕರೆ ನೀಡಿದಾಗ ಕರಿಯ ಹುಡುಗರಲ್ಲಿ ಹೊಸ ಚೈತನ್ಯ ಮೂಡಿತು.

ಕಪ್ಪು ಹುಡುಗರಲ್ಲಿ ಬಂದೂಕುಗಳಿಲ್ಲ ಆದರೆ ಅವರು ಬೀಸುವ ಕಲ್ಲಿನ ರಭಸಕ್ಕೆ ಬಿಳಿಯರ ಬಂದೂಕುಗಳು ನಡುಗುತ್ತಿದ್ದವು. ಪೊಲೀಸರು ಮತ್ತು ಅವರ ಮಧ್ಯೆ ದೇಶಾದ್ಯಂತ ಅಸಂಖ್ಯ ಬೀದಿ ಕದನಗಳು ನಡೆದಿವೆ. ಆಡಳಿತ ಯಂತ್ರಕ್ಕೆ ನುಂಗಲಾರದ ತುತ್ತಾಗಿದ್ದಾರೆ. 'ಕರಿಯರ ವಿಮೋಚನೆ ಸಶಸ್ತ್ರ ಹೋರಾಟದ ಮೂಲಕ' ಎಂದು ನೆಚ್ಚಿನ ನಾಯಕ ನೆಲ್ಸನ್ ಮಂಡೇಲಾ ಹೇಳಿದ್ದು ಅವರ ಹೋರಾಟದ ಜೀವಾಳವಾಯಿತ್ತು.

ದಕ್ಷಿಣ ಆಫ್ರಿಕಾದ ೧೨ ವರ್ಷದ ಕಪ್ಪು ಹುಡುಗರು ಮತ್ತು ಹುಡುಗಿಯರು ರಹಸ್ಯ ಸಭೆಗಳಿಗೆ ಹೋಗುತ್ತಾರೆ. ಅವರೇನು ಮಾಡುತ್ತಾರೆಂಬುದು ಅವರ ಮನೆಯವರಿಗೂ ಗೊತ್ತಾಗುತ್ತಿಲ್ಲ. 'ಮೊದಲು ನಾವು ಗುಪ್ತ ಪೊಲೀಸರಿಗೆ ಹೆದರುತ್ತಿದ್ದೆವು. ಈಗ ನಮ್ಮ ಮಕ್ಕಳಿಗೇ ಹೆದರುವ ಕಾಲ ಬಂದಿದೆ" ಎಂದು ಕರಿಯ ಹಿರಿಯರನೇಕರು ಗೊಣಗುತ್ತಿದ್ದಾರೆ.

ಕಪ್ಪು ವಿದ್ಯಾರ್ಥಿಗಳು ರಚನಾತ್ಮಕವಾದ ಹೋರಾಟಕ್ಕೆ ಸಿದ್ಧರಾಗಿದ್ದಾರೆ. ಅವರ ರಹಸ್ಯ ಸಭೆಗಳಲ್ಲಿ ತಾತ್ವಿಕ ಚರ್ಚೆಗಳು ನಡೆಯುತ್ತಿವೆ. ವಿಮೋಚನೆ ಅವರ ಮೊದಲ ತತ್ವವಾಗಿದೆ. ಸಮಾನ ಪೌರತ್ವ, ಸಮಾನ ಶಿಕ್ಷಣ ಮತ್ತು ಎಲ್ಲಾ ಜನಾಂಗೀಯ ಕಾಯ್ದೆಗಳನ್ನು ಕಿತ್ತೊಗೆಯುವುದು ಅವರ ಗುರಿಯಾಗಿದೆ. 'ಈ ದೇಶದಲ್ಲಿ ವರ್ಣಭೇದ ನೀತಿಗೆ ಮತ್ತು

ಬಂಡವಾಳಶಾಹಿ ವ್ಯವಸ್ಥೆಗೆ ಭವಿಷ್ಯವಿಲ್ಲ' ಎಂದು ಅವರು ಹೇಳುತ್ತಾರೆ. ಬಿಳಿಯರ ದಬ್ಬಾಳಿಕೆ ಹೆಚ್ಚಿದಂತೆಲ್ಲ ಇವರು ಶಕ್ತಿಶಾಲಿಗಳಾದರು. 'ದೇಶದಲ್ಲಿ ಆಡಳಿತ ನಡೆಯದಂತೆ ನೋಡಿಕೊಳ್ಳಿ' ಎಂದು ಎ.ಎನ್.ಸಿ. ಕರೆಕೊಟ್ಟ ರೀತಿಯಲ್ಲೇ ಈ ಯುವಕರು ಕಾರ್ಯೋನ್ಮುಖ ರಾಗಿದ್ದಾರೆ.

ಅವರ ದುಡುಕುತನದಿಂದಾಗಿ ಕೆಲವೊಂದು ಸಲ ಅನಾಹುತಗಳೂ ಆಗುತ್ತವೆ. ಡುಡುಜಾ ಉಪನಗರದಲ್ಲಿ ೧೯೮೫ನೇ ಜುಲೈ ೨೦ರಂದು ಕೆಲ ಕಪ್ಪು ಯುವಕರ ಶವಗಳ ಮೆರವಣಿಗೆ ನಡೆದ ಸಂದರ್ಭದಲ್ಲಿ ಮಕಿ ಸ್ಕೋಸನಾ(೨೪) ಎಂಬ ಕಪ್ಪು ಯುವತಿಯನ್ನು ಕೊಂದುಹಾಕಿದರು. ಆ ಗುಂಪು 'ಪೊಲೀಸರ ಗುಪ್ತಚಾರಿಣಿಯನ್ನು ಕೊಂದೆವು' ಎಂದು ಚೀರಾಡುತ್ತ ಕುಣಿಯುತ್ತಿದ್ದುದನ್ನು ಬೋಥಾ ಸರ್ಕಾರ ದೂರದರ್ಶನದಲ್ಲಿ ತೋರಿಸುವ ವ್ಯವಸ್ಥೆ ಮಾಡಿತು. ಅಂದೇ ತುರ್ತುಪರಿಸ್ಥಿತಿಯನ್ನು ಹೇರಿತು.

### ಪರ್ಯಾಯವಿಲ್ಲ

೧೯೭೮ರಲ್ಲಿ ದಕ್ಷಿಣ ಆಫ್ರಿಕಾದ ಪ್ರಧಾನಮಂತ್ರಿಯಾಗಿ ಆಯ್ಕೆ ಆದ ಬೋಥಾ ೧೯೮೪ರ ಹೊಸ ಸಂವಿಧಾನದ ಪ್ರಕಾರ ಅಧ್ಯಕ್ಷರಾದರು. ಡರ್ಬಾನ್‌ನಲ್ಲಿ ೧೯೮೫ನೇ ಆಗಸ್ಟ್ ೧೫ ರಂದು ತಮ್ಮ ನ್ಯಾಷನಲ್ ಪಕ್ಷದ ಸದಸ್ಯರನ್ನು ಉದ್ದೇಶಿಸಿ ಮಾತನಾಡುತ್ತ ವರ್ಣಭೇದ ನೀತಿಗೆ ಯಾವುದೇ ಪರ್ಯಾಯವಿಲ್ಲವೆಂದು ಘೋಷಿಸಿದರು.

> ಎಲ್ಲ ಜನಾಂಗದವರಿಗೆ ಮತದಾನದ ಹಕ್ಕು ಸಿಕ್ಕರೆ ಒಬ್ಬರ ಮೇಲೆ ಒಬ್ಬರು ಪ್ರಭುತ್ವ ಸ್ಥಾಪಿಸಲು ಹೋಗಿ ಕೋಲಾಹಲ ಉಂಟಾಗುವುದು

ಎಂದು ವಾದಿಸಿದರು. ಭಾರತೀಯರು ಮತ್ತು ಮಿಶ್ರ ವರ್ಣೀಯರಿಗಾಗಿ ರಚಿಸಿದಂಥ ಪ್ರತ್ಯೇಕ ಸಂಸತ್ ಅನ್ನು ಕೂಡ ಕರಿಯರಿಗಾಗಿ ರಚಿಸುವುದಿಲ್ಲ ಎಂದರು. ಅಂತೆಯೇ 'ಕ್ರಾಂತಿಗೆ ಪರ್ಯಾಯವಾಗುವಂಥದ್ದು ಯಾವುದೂ ಇಲ್ಲ' ಎಂಬ ಮಂಡೇಲಾ ಅವರ ನಿಲುವು ಕರಿಯರಿಗೆ ಸದಾ ಸ್ಫೂರ್ತಿ ನೀಡುತ್ತದೆ. ಕರಿಯರನ್ನು ಬೇರೆಯಾಗಿಡಲು ಸರ್ಕಾರ ಇನ್ನೂರಕ್ಕೂ ಹೆಚ್ಚು ಕಾಯ್ದೆಗಳನ್ನು ಜಾರಿಗೆ ತಂದಿದೆ. ಈ ಅಮಾನವೀಯ ವರ್ಣಭೇದ ನೀತಿಯನ್ನು ಇಡೀ ವಿಶ್ವವೇ ನಿಂದಿಸಿ ಅದನ್ನು ಕೊನೆಗಾಣಿಸಲು ಕರೆ ನೀಡಿದೆ. ವಿಶ್ವದಾದ್ಯಂತ ವರ್ಣಭೇದ ನೀತಿಯನ್ನು ವಿರೋಧಿಸಿ ಪ್ರದರ್ಶನಗಳು ನಡೆದಿದೆ. ವಿಶ್ವಸಂಸ್ಥೆಯ ಜನರಲ್ ಅಸೆಂಬ್ಲಿ ೧೯೪೬ರಿಂದಲೂ ವರ್ಣಭೇದ ನೀತಿಯನ್ನು ವಿರೋಧಿಸುತ್ತಲೇ ಬಂದಿದೆ. ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳು ದಕ್ಷಿಣ ಆಫ್ರಿಕಾದೊಂದಿಗೆ ವ್ಯವಹರಿಸುವಂತಿಲ್ಲ ಆದರೂ ಪಶ್ಚಿಮ ಜರ್ಮನಿ, ಫ್ರಾನ್ಸ್, ಜಪಾನ್, ಇಟಲಿ, ಇಂಗ್ಲೆಂಡ್ ಮತ್ತು ಅಮೆರಿಕದಂಥ ದೇಶಗಳು ಈ ನಿಯಮವನ್ನು ಮುರಿಯುತ್ತಲೇ ಇವೆ.

ದಕ್ಷಿಣ ಆಫ್ರಿಕಾದೊಂದಿಗೆ ಯಾವುದೇ ರೀತಿಯ ಸಂಬಂಧ ಇಟ್ಟುಕೊಳ್ಳಬಾರದು ಎಂದು ಹೇಳಿರುವ ಭಾರತ ಮೊದಲಿನಿಂದಲೂ ಸಂಬಂಧ ಕಡಿದುಕೊಂಡಿದೆ. ದಕ್ಷಿಣ ಆಫ್ರಿಕಾದ

ಅಮಾನವಿಯ ನೀತಿಯನ್ನು ಅಲ್ಲಿನ ಅನೇಕ ಬಿಳಿಯರು ವಿರೋಧಿಸಿದ್ದಾರೆ. ಸಂಸದೀಯ ವಿರೋಧ ಪಕ್ಷದ ಪ್ರೊಗ್ರೆಸಿವ್ ಫೆಡರಲ್ ಪಾರ್ಟಿ ವರ್ಣಭೇದ ನೀತಿಯನ್ನು ವಿರೋಧಿಸಿದೆ. ಅನೇಕ ಆಫ್ರಿಕಾನರ್‌ಗಳು ಡಚ್ ರಿಫಾರ್ಮ್ಡ್ ಚರ್ಚಿನ ಸದಸ್ಯರಾಗಿದ್ದಾರೆ. ೧೯೮೨ರಲ್ಲಿ ವರ್ಲ್ಡ್ ಅಲಯೆನ್ಸ್ ಆಫ್ ರಿಫಾರ್ಮ್ಡ್ ಚರ್ಚ್‌ಸ್ ಬಿಳಿಯರ ಸೌತ್ ಆಫ್ರಿಕನ್ ಚರ್ಚ್ ಅನ್ನು ಸಸ್ಪೆಂಡ್ ಮಾಡಿತು. ವರ್ಣಭೇದ ನೀತಿ ದಮನ ವಿರೋಧಿ ಎಂದು ಸಾರಿತು. ಸಹಸ್ರಾರು ಬಿಳಿಯ ಯುವಕರು ಅಪಾರ್ಥೈಡ್ ನೀತಿಯ ವಿರುದ್ಧ ಪ್ರತಿಭಟಿಸಿದ್ದಾರೆ. ಕರಿಯರಿಗಾಗಿ ಹೋರಾಡುವ ಬಿಳಿಯ ಯುವಕರನ್ನು ಹತೋಟಿಗೆ ತರಲು ಪೊಲೀಸರು ಅಶ್ರುವಾಯು, ಚಾವಟಿ ಮತ್ತು ನಾಯಿಗಳನ್ನು ಬಳಸುತ್ತಾರೆ. ದಕ್ಷಿಣ ಆಫ್ರಿಕಾದಲ್ಲಿ ಬಂಡವಾಳ ಹೂಡಿರುವ ದೇಶಗಳು ಕೂಡ ಅಲ್ಲಿ ಸುಧಾರಣೆ ಬಯಸುತ್ತವೆ. ಏಕೆಂದರೆ ಅವುಗಳಿಗೆ ತಾವು ಹೂಡಿರುವ ಬಂಡವಾಳದ ಚಿಂತೆಯಾಗಿದೆ. ರೇಗನ್ ಅಮೆರಿಕದ ಅಧ್ಯಕ್ಷರಾಗಿದ್ದಾಗ ಅಮೆರಿಕನ್ ಕಾಂಗ್ರೆಸ್ ಒತ್ತಾಯಕ್ಕೆ ಮಣಿದು ದಕ್ಷಿಣ ಆಫ್ರಿಕಾಕ್ಕೆ ಆರ್ಥಿಕ ನಿರ್ಬಂಧ ಹಾಕುವ ನಿರ್ಣಯ ಕೈಗೊಂಡರು. ಆದರೆ ಆಗ ಅವರು ದಕ್ಷಿಣ ಆಫ್ರಿಕಾಕ್ಕೆ ಕೊಟ್ಟಿರುವ 'ಕನ್‌ಸ್ಟ್ರಕ್ಟಿವ್ ಎಂಗೇಜ್ ಮೆಂಟ್' ಕಾರ್ಯಕ್ರಮ ಬಾಲಿಶವಾಗಿತ್ತು. ಇದು ದಕ್ಷಿಣ ಆಫ್ರಿಕಾ ಸರ್ಕಾರದ ಮನವೊಲಿಸುವ ವಿಧಾನವಂತೆ! ಹಂತ ಹಂತವಾಗಿ ವರ್ಣಭೇದ ನೀತಿಯನ್ನು ಕೈಬಿಡಬೇಕೆಂದು ಸರ್ಕಾರವನ್ನು ಆತ್ಮೀಯವಾಗಿ ಒತ್ತಾಯಿಸಬೇಕಂತೆ! ರೇಗನ್ ವಿಚಾರಧಾರೆಯ ಮೂಲಕ ವರ್ಣಭೇದ ನೀತಿ ಅಳಿದುಹೋಗಬೇಕಾದರೆ ಶತಮಾನಗಳೇ ಕಳೆಯಬೇಕು. ಕರಿಯರ ಭಾವನೆಗಳ ಜೊತೆ ಆಡುವ ಆಟ ಇದು. ಇದನ್ನು ಟೀಕಿಸಿರುವ ಬಿಷಪ್ ಡೆಸ್ಮಂಡ್ ಟುಟು ಹೇಳಿದರು 'ನಮಗೆ ಅಷ್ಟೊಂದು ಆಯಸ್ಸು ಇಲ್ಲ'.

### ಬುಥಲೆಜಿ

ಎಲ್ಲ ಕರಿಯರು ಒಂದಾಗಿದ್ದರೆ ಬಹುಶಃ ಈ ವೇಳೆಗೆ ಬಿಳಿಯರ ಅಪಾರ್ಥೈಡ್ ನಾಶವಾಗಿ ದಕ್ಷಿಣ ಆಫ್ರಿಕಾದಲ್ಲಿ ಪ್ರಜಾಪ್ರಭುತ್ವ ನೆಲೆಗೊಳ್ಳುತ್ತಿತ್ತು. ಆದರೆ ಎಲ್ಲ ಕರಿಯರು ಒಂದಾಗದಂತೆ ಬಿಳಿಯರು ನೋಡಿಕೊಂಡು ಬಂದಿದ್ದಾರೆ. ಕ್ವಾಜುಲು ಬಂಟುಸ್ತಾನದ ನಾಯಕ ಮಂಗೊಸುಥು ಗಟ್ ಷಾ ಬುಥಲೆಜಿಗೆ ಬಿಳಿಯರ ಜೊತೆ ಅಧಿಕಾರ ಹಂಚಿಕೊಳ್ಳುವ ಆಸೆ. ಕರಿಯರು ತಿರಸ್ಕರಿಸುವ, ವರ್ಣಭೇದ ನೀತಿಯ ಅಡಿಗಲ್ಲಾಗಿರುವ ಬಂಟುಸ್ತಾನ್ ವ್ಯವಸ್ಥೆಯನ್ನು ಇವರು ಬೆಂಬಲಿಸುತ್ತಾರೆ. ಈ ವ್ಯವಸ್ಥೆಯಿಂದಾಗಿ ಕರಿಯರು ತಮ್ಮ ಬುಡಕಟ್ಟುಗಳಿಗೆ ಮೀಸಲಾಗದ ಪ್ರದೇಶಗಳಲ್ಲಿ ಮಾತ್ರ ವಾಸ ಮಾಡಬೇಕು. ಇತರ ಬುಡಕಟ್ಟುಗಳೊಂದಿಗೆ ಸಂಪರ್ಕವಿಟ್ಟುಕೊಳ್ಳಬಾರದು. ಬುಥಲೆಜಿ ಜುಲು ರಾಜಮನೆತನಕ್ಕೆ ಸೇರಿರುವುದರಿಂದ ಜುಲುಗಳು ಈತನಿಗೆ ಗೌರವ ಕೊಡುತ್ತಾರೆ. ಬಿಳಿಯರೊಂದಿಗೆ ಅಧಿಕಾರ ಹಂಚಿಕೊಂಡರೆ ತನಗೆ ಇನ್ನಷ್ಟು ಲಾಭವಿದೆ ಎಂಬುದೇ ಬುಥಲೆಜಿ ಹಂಚಿಕೆ 'ಆತ ವ್ಯವಸ್ಥೆಯ ಬಾಲಂಗೋಚಿ' ಎಂದು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಇತರ ಪಕ್ಷಗಳ ನಾಯಕರು ಟೀಕಿಸುತ್ತಾರೆ. ದಕ್ಷಿಣ ಆಫ್ರಿಕಾದಲ್ಲಿ ಒಟ್ಟು ೬೦ ಲಕ್ಷ ಜುಲುಗಳಿದ್ದಾರೆ.

ಅವರಲ್ಲಿ ೪೭ ಲಕ್ಷ ಮಂದಿ ನತಾಲ್ ಪ್ರಾಂತದಲ್ಲಿ ಇದ್ದಾರೆ. ಸರ್ಕಾರದಿಂದ ಬೆಂಬಲ ಪಡೆಯುವ ಬುಥಲೆಜಿ ಇತರ ದೇಶಗಳು ದಕ್ಷಿಣ ಆಫ್ರಿಕಾದ ಮೇಲೆ ಆರ್ಥಿಕ ದಿಗ್ಬಂಧನ ಹಾಕುವುದನ್ನು ವಿರೋಧಿಸುತ್ತಾರೆ. 'ಇದರಿಂದ ಕರಿಯರಿಗೇ ಹಾನಿ' ಎಂಬುದು ಅವರ ವಾದ. ದಕ್ಷಿಣ ಆಫ್ರಿಕಾದ ಬಿಳಿಯರಿಗೆ ಭಾರತೀಯರ ಬಗ್ಗೆ ಒಲವೇನೂ ಇಲ್ಲ. ಕರಿಯರಿಗಿಂತ ಇವರನ್ನು ಒಂದು ಮೆಟ್ಟಲು ಮೇಲೆ ಕೂಡಿಸಿರಬಹುದು. ಆದರೆ ಆ ಮೂಲಕ ಭಾರತೀಯರು ಮತ್ತು ಕರಿಯರು ಒಂದಾಗುವುದಕ್ಕೆ ಅಡ್ಡಗಾಲು ಹಾಕುತ್ತಲೇ ಇರುತ್ತಾರೆ.

ಭಾರತೀಯರ ಆಗಮನದಿಂದ ಜುಲು ಕರಿಯರು ತಮ್ಮ ಕೆಲಸಗಳನ್ನು ಕಳೆದುಕೊಂಡ ಕಾರಣ ಕರಿಯರು ಮತ್ತು ಭಾರತೀಯರ ಮಧ್ಯೆ ಪ್ರಾರಂಭವಾದ ಹಗೆತನ ವಿವಿಧ ರೂಪಗಳಿಂದ ಮುಂದುವರಿದಿದೆ. ಭಾರತೀಯ ವ್ಯಾಪಾರಿಗಳು ಕರಿಯರನ್ನು ಸುಲಿಗೆ ಮಾಡಿದ್ದಾರೆ. ಅಲ್ಲದೆ ಅವರು ತಮ್ಮದೇ ಆದ ಸನಾತನ ಶೈಲಿಯ ವರ್ಣಭೇದ ನೀತಿಯನ್ನು ಪಾಲಿಸುತ್ತಾರೆ. ವರ್ಷಗಳು ಕಳೆದಂತೆ ಮಹತ್ವಾಕಾಂಕ್ಷಿಗಳಾದ ಶ್ರೀಮಂತ ಭಾರತೀಯರು ಕರಿಯರ ಹೆಗಲಿಗೆ ಹೆಗಲು ಹಚ್ಚಿ ನಡೆಯುವುದಕ್ಕಿಂತ ಬಿಳಿಯರ ನೆರಳಿನಲ್ಲಿ ಮುಂದುವರಿಯಲು ಬಯಸುತ್ತಾರೆ. ಇಂದು ಅನೇಕ ಶ್ರೀಮಂತ ಭಾರತೀಯರ ಬಳಿ ಕರಿಯರು ಕೂಲಿಯಾಳುಗಳಾಗಿದ್ದಾರೆ. ಈ ಕೂಲಿಗಳನ್ನು ಅವರು ಛಾವಟಿಯಿಂದ ಹೊಡೆಯುತ್ತಾರೆ. ಕಡಿಮೆ ಕೂಲಿ ಕೊಟ್ಟು ತುಚ್ಛವಾಗಿ ಕಾಣುತ್ತಾರೆ. ಅನೇಕ ಶ್ರೀಮಂತ ಭಾರತೀಯರು ಬಿಳಿಯರಷ್ಟೇ ಕೆಟ್ಟವರು ಎಂಬ ಭಾವನೆ ಅನೇಕ ಕಪ್ಪು ಜನರಲ್ಲಿ ಉಂಟಾಗಿದೆ.

ಈ ಸನ್ನಿವೇಶವನ್ನು ಬಳಸಿಕೊಂಡ ಸರ್ಕಾರ ಬಾಡಿಗೆ ಬಂಟರಿಂದ ಗಾಂಧೀಜಿಯವರ ಫೀನಿಕ್ಸ್ ಆಶ್ರಮದ ಮೇಲೆ ಮುತ್ತಿಗೆ ಹಾಕಿಸಿ ಭಾರತೀಯರ ಮೇಲೆ ಹಲ್ಲೆ ಮಾಡಿಸಿತು. ಇದು ಕರಿಯರ ಕೃತ್ಯ ಎಂದು ಪ್ರಚಾರ ಮಾಡಿ ಭಾರತೀಯರ ಅನುಕಂಪ ಗಳಿಸಲು ಯತ್ನಿಸಿತು. ಶಾಂತಿ ಮತ್ತು ಅಹಿಂಸಾತ್ಮಕ ಹೋರಾಟದ ಹಿನ್ನೆಲೆಯಿರುವ, ಮಾನವ ಪ್ರೇಮದ ದ್ಯೋತಕವಾಗಿರುವ ಫೀನಿಕ್ಸ್ ಆಶ್ರಮ ೧೯೮೫ರ ಆಗಸ್ಟ್‌ನಲ್ಲಿ ಅಗ್ನಿಗಾಹುತಿಯಾಯಿತು. ಅದು ಜನಾಂಗ ದ್ವೇಷದ ಭಯಂಕರ ದೃಶ್ಯವಾಗಿತ್ತೆಂದು ಪ್ರತ್ಯಕ್ಷದರ್ಶಿಯೊಬ್ಬರು ತಿಳಿಸಿದ್ದಾರೆ. ಸುಮಾರು ೫೦೦ ಮಂದಿ ಕರಿಯರು ಮುತ್ತಿಗೆ ಹಾಕಿದರು. ರಸ್ತೆಯ ಆಚೆ-ಈಚೆ ನಿಂತು ಕೂಗಾಡುತ್ತಿದ್ದ ಕರಿಯರು ಮತ್ತು ಭಾರತೀಯರ ಕೈಯಲ್ಲಿ ಮಚ್ಚು ಮತ್ತು ಚೂರಿಗಳಿದ್ದವು. ಎಂದು ಅವರು ವಿವರಿಸಿದ್ದಾರೆ.

ಅಲ್ಲಿಯವರಿಗೆ ಟ್ರಾನ್ಸ್ ವಾಲ್ ಮತ್ತು ಕೇಪ್‌ಗಳಿಗೆ ಸೀಮಿತವಾಗಿದ್ದ ಹಿಂಸೆ ಯುನೈಟೆಡ್ ಡೆಮೊಕ್ರಟಿಕ್ ಫ್ರಂಟ್(ಯು.ಡಿ.ಎಫ್)ನ ಕಪ್ಪು ಲಾಯರ್ ವಿಕ್ಟೋರಿಯಾ ಮಾರ್ಕ್ಸ್ ನೊಯೆಯ ಕೊಲೆಯ ನಂತರ ಕರಾವಳಿ ನಗರವಾದ ಡರ್ಬಾನ್‌ಗೂ ಹಬ್ಬಿತು. ಸರ್ಕಾರಿ ಕೊಲೆಗಡುಕರು ಆಕೆಯನ್ನು ಕೊಂದಿದ್ದರು. ಎರಡು ವರ್ಷಗಳ ಹಿಂದೆ ಸರ್ಕಾರ ಇದೇ ರೀತಿ ಆಕೆಯ ಗಂಡನ ಕೊಲೆ ಮಾಡಿಸಿತ್ತು. ಕಪ್ಪು ಜನರನ್ನು ಇನ್ನೂ ಹೆಚ್ಚಿನ ತುಳಿತಕ್ಕೀಡಾಗುವಂತೆ ಮಾಡುವ ಹೊಸ ಸಂವಿಧಾನದ ರಚನೆಯಾದ ಮೇಲೆ ಯು.ಡಿ.ಎಫ್.

ಪ್ರಬಲವಾದ ಪ್ರತಿಭಟನಾ ಚಳವಳಿಗಳನ್ನು ಪ್ರಾರಂಭಿಸಿತು. ಫೀನಿಕ್ಸ್ ಆಶ್ರಮ ಯು.ಡಿ. ಎಫ್., ಚಟುವಟಿಕೆಗಳಿಗೆ ಆಶ್ರಯ ನೀಡಿತ್ತು. ೧೯೧೮ರಲ್ಲಿ ಗಾಂಧೀಜಿ ಅವರು ತಮ್ಮ ಮಗ ಮಣಿಲಾಲ್ ಗಾಂಧಿ ಅವರನ್ನು ಆಶ್ರಮ ನೋಡಿಕೊಳ್ಳಲು ಕಳಿಸಿದಾಗ 'ಅದು ಬಿಳಿಯರಲ್ಲದವರ ಕಾರ್ಯಚಟುವಟಿಕೆಗಳ ಕೇಂದ್ರವಾಗಬೇಕು ಎಂದು ಆಶಿಸಿದರು. ಮಣಿಲಾಲ್ ಜೀವನಪರ್ಯಂತ (೧೯೫೬) ಅಲ್ಲೇ ಇದ್ದರು. ಅವರ ಪತ್ನಿ ಸುಶೀಲಾ ಗಾಂಧಿ ೧೯೮೮ರವರೆಗೆ ನೋಡಿಕೊಂಡರು. ೧೯೬೧ರಲ್ಲಿ ಮಣಿಲಾಲ್ ಅವರ ಮಗಳು ಇಳಾ ಅವರ ಜೊತೆ ಮೇವಾ ರಾಮ್ ಗೋಬಿನ್‌ರ ಮದುವೆ ಆಯಿತು. ಇಳಾ ಮತ್ತು ಮೇವಾ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಲು ಪ್ರಾರಂಭಿಸಿದ್ದರಿಂದ ಫೀನಿಕ್ಸ್ ಆಶ್ರಮ ರಾಜಕೀಯ ಚಟುವಟಿಕೆಗಳ ಕೇಂದ್ರವಾಯಿತು. ರಾಮ್ ಗೋಬಿನ್ ಫೀನಿಕ್ಸ್ ಆಶ್ರಮದ ಕಾರ್ಯದರ್ಶಿಗಳಾಗಿದ್ದಾರೆ. ಅಲ್ಲದೆ ಯು.ಡಿ.ಎಫ್. ನಾಯಕರುಗಳಲ್ಲೊಬ್ಬರಾಗಿದ್ದಾರೆ. ಇಂದು ಯು.ಡಿ.ಎಫ್. ಕರಿಯರನ್ನೂ, ಭಾರತೀಯರನ್ನು ಮತ್ತು ಮಿಶ್ರವರ್ಣೀಯರನ್ನು ಹಿಂದೆಂದಿಗಿಂತಲೂ ಹೆಚ್ಚು ಹತ್ತಿರಕ್ಕೆ ತಂದಿತು. ಬೋಥಾ ಸರ್ಕಾರವಿದ್ದಾಗ ಅವರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಲಾಯಿತು. ಫೀನಿಕ್ಸ್ ಆಶ್ರಮ ಸುಡುವ ವೇಳೆ ಅಲ್ಲಿ ೨೦ ಭಾರತೀಯ ಕುಟುಂಬಗಳು ಮತ್ತು ೪೦ ಕರಿಯರ ಕುಟುಂಬಗಳು ವಾಸವಾಗಿದ್ದವು.

### ಸೊವೆಟೊ ಪ್ರತಿಭಟನೆ

ಈ ಎಲ್ಲ ಅಲ್ಲೋಲ ಕಲ್ಲೋಲದ ಹಿಂದೆ ಶಾರ್ಪವಿಲ್ಲೆ ದುರಂತದ ನೋವಿನಷ್ಟೇ ಸೊವೆಟೊದಲ್ಲಿ ೧೯೭೬ನೇ ಜೂನ್ ೧೬ ರಂದು ಜನ ಮತ್ತು ವಿದ್ಯಾರ್ಥಿಗಳು ಪ್ರತಿಭಟಿಸಿದ ಘಟನೆ ಕೂಡ ಮಹತ್ವದ್ದಾಗಿದೆ. ಡಚ್ ಬಿಳಿಯರ ಆಫ್ರಿಕಾನ್ ಭಾಷೆಯನ್ನು ಶಿಕ್ಷಣದ ಮಾಧ್ಯಮವಾಗಿ ಮಾಡಲಾಯಿತು. ಕರಿಯ ಮಕ್ಕಳು ತಮ್ಮ ಮಾತೃಭಾಷೆಯನ್ನು ಕಲಿಯುವ ಬದಲು ಬಿಳಿಯರ ಮಾತೃಭಾಷೆ ಕಲಿಯುವಂಥ ಪರಿಸ್ಥಿತಿ ಉಂಟಾಯಿತು. ಕರಿಯರ ಸಾಂಸ್ಕೃತಿಕ ಬದುಕಿನ ಮೇಲೆ ಕೂಡ ಇದು ಗದಾಪ್ರಹಾರವಾಗಿತ್ತು. ಇದನ್ನು ವಿರೋಧಿಸಿದ ಕರಿಯ ವಿದ್ಯಾರ್ಥಿಗಳು ಆ ದಿನ ಬೆಳಿಗ್ಗೆ ಪ್ರತಿಭಟನಾ ಮೆರವಣಿಗೆ ಹೊರಡಿಸಲು ಸೊವೆಟೊದಲ್ಲಿ ಸೇರಿದ್ದರು. ಆಗ ಪೊಲೀಸರು ಅವರ ಮೇಲೆ ಗುಂಡು ಹಾರಿಸಿದರು. ಹುಡುಗರು ಕಲ್ಲು ಬೀಸಿದರು. ಹೆಕ್ಟರ್ ಪೀಟರ್ ಸನ್(೧೩) ಎಂಬ ಕರಿಯ ಬಾಲಕ ಈ ಸಂದರ್ಭದಲ್ಲಿ ಗುಂಡಿಗೆ ಆಹುತಿಯಾದ. ಅನೇಕರು ಗಾಯಗೊಂಡರು. ಈ ಗದ್ದಲದಲ್ಲಿ ಇಬ್ಬರು ಬಿಳಿಯರು ಕಪ್ಪು ಹುಡುಗರ ಕಲ್ಲಿಗೆ ಆಹುತಿಯಾದರು. ಶಾಲಾ ಮಕ್ಕಳ ವಿರುದ್ಧ ಸರ್ಕಾರ 'ಯುದ್ಧ' ಸಾರಿತು. ಸಾವು-ನೋವುಗಳು ಹೆಚ್ಚಿದಂತೆಲ್ಲ ದೇಶಾದ್ಯಂತ ಕರಿಯರು ಘರ್ಷಣೆಗೆ ಇಳಿದರು. ಹತ್ತಾರು ಸಹಸ್ರ ಕರಿಯ ಮಕ್ಕಳು ಶಾಲೆಗಳನ್ನು ಬಹಿಷ್ಕರಿಸಿ ಬೀದಿಗಿಳಿದರು. ಯಾರಿಗೂ ಜಗ್ಗದ ಬಿಳಿಯ ಸರ್ಕಾರ ನಡುಗಿತು. ೧೬ ತಿಂಗಳ ಅವಧಿಯಲ್ಲಿ ನಡೆದ ಘರ್ಷಣೆಗಳಲ್ಲಿ ೬೦೦ ಕರಿಯರು ಸತ್ತರೆಂದು ಸರ್ಕಾರ ತಿಳಿಸಿತು. ಒಂದು ಸಾವಿರಷ್ಟು ಜನ ಸತ್ತರೆಂದು ಅಂದಾಜು ಮಾಡಲಾಗಿದೆ. ಈ ಘರ್ಷಣೆಗಳಲ್ಲಿ

೪೦೦೦ ಮಂದಿ ಕರಿಯರು ಗಾಯಗೊಂಡರು. ಸಹಸ್ರಾರು ಕರಿಯರನ್ನು ಜೈಲಿಗೆ ಅಟ್ಟಲಾಯಿತು.

ಈ ಘಟನೆ ಕರಿಯ ಯುವಕರಿಗೆ ಹೋರಾಟದ ಹೊಸ ದಾರಿಯನ್ನು ತೋರಿಸಿಕೊಟ್ಟಿತು. ಸಾವು-ಬದುಕಿನ ಮಧ್ಯದ ಗೆರೆಯನ್ನು ತೆಗೆದು ಹಾಕಿತು. ತಮ್ಮ ಶಿಕ್ಷಣ 'ಉಮ್ ಖೊಂಟೆ ವೆ ಸಿಜ್ವೆ'ಯಲ್ಲಿ ಎಂದು ಯುವಕರು ಭಾವಿಸಿದರು. ಶಿಕ್ಷಣ ಮತ್ತು ಹೋರಾಟ ಜತೆ ಜತೆಯಾಗಿ ಸಾಗಬೇಕೆಂಬ ಭಾವನೆ ಅವರಲ್ಲಿ ಮೂಡಿತು. ಸೊವೆಟೊ ಬಂಡಾಯದಿಂದ ಅಪಾರ್ಥೈಡ್ ವ್ಯವಸ್ಥೆಯಲ್ಲಿ ಬಿರುಕುಗಳು ಕಾಣತೊಡಗಿದವು. ಪಾಶವೀ ಸರ್ಕಾರ ಅನಿವಾರ್ಯವಾಗಿ ಬದುಕಿನ ಎಲ್ಲ ರಂಗದಲ್ಲಿ ಎಚ್ಚರಿಕೆಯಿಂದ ವರ್ತಿಸಲು ಪ್ರಾರಭಿಸಿತು. ಗಂಡಾಂತರ ಪರಿಸ್ಥಿತಿಯನ್ನು ಸದಾ ಎದುರಿಸುವುದರಿಂದ ದೇಶದ ಆರ್ಥಿಕ ಪರಿಸ್ಥಿತಿ ಮತ್ತು ಬಿಳಿಯರ ಬದುಕಿನ ಮೇಲೆ ದುಷ್ಪರಿಣಾಮ ಉಂಟಾಗುವುದರ ಬಗ್ಗೆ ಅದಕ್ಕೆ ಪ್ರಜ್ಞೆ ಇತ್ತು.

## ಬದಲಾದ ಪರಿಸ್ಥಿತಿ

ಮಂಡೇಲಾ ಅವರು ರಾಜಕೀಯ ಕೈದಿ ಆದರೂ ಕಠಿಣ ಶ್ರಮದ ಶಿಕ್ಷೆ ವಿಧಿಸಲಾಗಿತ್ತು. ರಾಜಕೀಯ ಕೇದಿಗಳ ಸ್ಥಾನಮಾನಕ್ಕಾಗಿ ಅವರು ಜೈಲಿನಲ್ಲೇ ಪ್ರತಿಭಟನೆ ಮಾಡುತ್ತಿದ್ದರು. ಸೊವೆಟೊ ಘಟನೆಯಿಂದಾಗಿ ಜೈಲು ವ್ಯವಸ್ಥೆಯಲ್ಲಿ ಕೂಡ ಅಲ್ಪಸ್ವಲ್ಪ ಬದಲಾವಣೆಗಳಾದವು.

೧೯೮೨ರ ಜುಲೈನಲ್ಲಿ ಮಂಡೇಲಾ ಮತ್ತು ಅವರ ಸಂಗಾತಿಗಳನ್ನು ಅನಿರೀಕ್ಷಿತವಾಗಿ ಕೇಪ್ ಟೌನ ಹೊರಗಡೆ ಇರುವ ಪೋಲ್ಸ್ ಮೂರ್ ಜೈಲಿಗೆ ಕಳಿಸಲಾಯಿತು. ರಾಬ್ಬೆನ್ ನಡುಗಡ್ಡೆ ಜೈಲಿಗೆ ಜನ ಅಭಿಮಾನದಿಂದ ಮಂಡೇಲಾ ವಿಶ್ವವಿದ್ಯಾನಿಲಯ ಎಂದು ಕರೆಯುತ್ತಾರೆ. ಇಲ್ಲಿ ಬರುವ ಅನೇಕ ಯುವಕೈದಿಗಳು ಶಿಕ್ಷಣವನ್ನು ಮುಂದುವರಿಸಿ ಪದವಿ ಪಡೆಯುವಂತೆ ಮಂಡೇಲಾ ಮಾರ್ಗದರ್ಶನ ನೀಡುತ್ತಿದ್ದರು. ಮಂಡೇಲಾ ಅವರು ದಕ್ಷಿಣ ಆಫ್ರಿಕಾ ರೇಡಿಯೋ ಕೇಳುವುದರ ಮೂಲಕ ಮತ್ತು ದಿನಪತ್ರಿಕೆಗಳನ್ನು ಓದುವುದರ ಮೂಲಕ ವಿಶ್ವದ ದೈನಂದಿನ ವ್ಯವಹಾರಗಳ ಬಗ್ಗೆ ತಿಳಿದುಕೊಳ್ಳುವುದರ ಬಗ್ಗೆ ವಿಶೇಷ ಆಸಕ್ತಿ ವಹಿಸಿದರು. ಸರ್ಕಾರಕ್ಕೆ ಅವರ ಚೈತನ್ಯವನ್ನು ಬಂಧಿಸಲಿಕ್ಕಾಗಲಿಲ್ಲ. ತಮ್ಮ ಸಂದೇಶಗಳನ್ನು ಸಂಗಾತಿಗಳಿಗೆ ತಲುಪಿಸುವಲ್ಲಿ ಅವರು ಯಶಸ್ವಿ ಆದರು.

ಸಶಸ್ತ್ರ ಹೋರಾಟದ ವಿಚಾರವನ್ನು ಕೈ ಬಿಟ್ಟು ಟ್ರಾನ್ಸ್‌ಕೆಯಿ ಬಂಟುಸ್ತಾನದಲ್ಲಿ ವಾಸಿಸಲು ಸಿದ್ಧವಾದರೆ ಬಿಡುಗಡೆ ಮಾಡುವೆವು ಎಂದು ಅಂದಿನ ಅಧ್ಯಕ್ಷ ಪಿ.ಡಬ್ಲ್ಯೂ.ಬೋಥಾ ೧೯೮೫ನೇ ಜನವರಿ ೩೧ರಂದು ಘೋಷಿಸಿದನು. ಮಂಡೇಲಾ ಅದಕ್ಕೆ ಉತ್ತರವಾಗಿ ಜನರನ್ನು ಉದ್ದೇಶಿಸಿ ಹೇಳಿಕೆ ನೀಡಿದರು. ಮಗಳು ಜಿಂಜಿ ಸೊವೆಟೊದಲ್ಲಿ ಆ ಹೇಳಿಕೆಯನ್ನು ಓದಿದಳು.

> ನಾನು ಮತ್ತು ನನ್ನ ಜನರು ಎಲ್ಲಿಯವರೆಗೆ ಸ್ವತಂತ್ರರಾಗಿರುವುದಿಲ್ಲವೂ ಅಲ್ಲಿಯವರೆಗೆ ನಾನು ಯಾವುದೇ ಹೇಳಿಕೆಯನ್ನು ನೀಡಬಯಸುವುದಿಲ್ಲ.

> ನನ್ನ ಮತ್ತು ನಿಮ್ಮ ಸ್ವತಂತ್ರವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ನಾನು ಬಂದೇ ಬರುತ್ತೇನೆ

ಎಂದು ಆ ಹೇಳಿಕೆ ಕೊನೆಗೊಳ್ಳುತ್ತದೆ.

ಬೋಥಾ ಷರತ್ತಿನ ಬಿಡುಗಡೆಯ ಘೋಷಣೆ ಮಾಡುವ ಸ್ವಲ್ಪ ದಿನ ಮೊದಲು ಬ್ರಿಟಿಷ್ ಪಾರ್ಲಿಮೆಂಟ್ ಸದಸ್ಯ ಲಾರ್ಡ್ ನಿಕೊಲಸ್ ಬೆಥೆಲ್ ಪೋಲ್ಸ್ ಮೂರ್ ಜೈಲಿನಲ್ಲಿ ಮಂಡೇಲಾ ಅವರನ್ನು ಭೇಟಿ ಮಾಡಲು ಅವಕಾಶ ಸಿಕ್ಕಿತು. ಅದಕ್ಕೆ ಮೊದಲು ಅಮೆರಿಕದ ಸೆನೆಟರ್ ಎಡ್ವರ್ಡ್ ಕೆನೆಡಿಗೆ ಕೂಡ ಅವಕಾಶ ನೀಡಿರಲಿಲ್ಲ. ಕೆನಡಿ ೧೯೮೫ರ ಜನವರಿಯಲ್ಲಿ ದಕ್ಷಿಣ ಆಫ್ರಿಕಾಗೆ ಹೋದಾಗ ವಿನ್ನಿ ಮಂಡೇಲಾ ಅವರ ಮನೆಗೆ ಹೋಗಿ ಭೇಟಿ ಮಾಡಿದ್ದರು.

> ಸರ್ಕಾರ ನಮ್ಮ ಮೇಲೆ ಸಶಸ್ತ್ರ ಹೋರಾಟ ಹೇರಿದೆ. ಅದನ್ನು ನಾವು ತ್ಯಜಿಸಬೇಕೆಂದು ಸರ್ಕಾರ ಬಯಸಿದರೆ ಮೊದಲಿಗೆ ಅವರು ಪ್ರಯತ್ನಿಸಬೇಕು. ನಮ್ಮ ಪಕ್ಷಕ್ಕೆ ಕಾಯ್ದೆ ಬದ್ಧ ಅಂತಸ್ತನ್ನು ಮಾನ್ಯ ಮಾಡಬೇಕು. ನಮ್ಮದು ರಾಜಕೀಯ ಪಕ್ಷ ಎಂದು ಪರಿಗಣಿಸಬೇಕು. ನಮ್ಮೊಡನೆ ಒಪ್ಪಂದಕ್ಕೆ ಬರಬೇಕು ಅವರು ಹೀಗೆ ಮಾಡುವವರೆಗೆ ನಾವು ಸಶಸ್ತ್ರ ಹೋರಾಟವನ್ನು ಮುಂದುವರಿಸಬೇಕಾಗಿದೆ

ಎಂದು ಮಂಡೇಲಾ ವರು ಜೈಲಿನಲ್ಲಿ ಭೇಟಿಯಾದ ಲಾರ್ಡ್ ಬೆಥೆಲ್‌ಗೆ ತಿಳಿಸಿದರು. ಬಿಳಿಯರೇ ಆಫ್ರಿಕಾದಿಂದ ತೊಲಗಿರಿ ಎಂದು ಮಂಡೇಲಾ ಎಂದೂ ಘೋಷಿಸಿಲ್ಲ. ಅಲ್ಲಿ ವಾಸಿಸುವ ಕರಿಯರು, ಬಿಳಿಯರು ಮತ್ತು ಎಲ್ಲರಿಗೂ ದಕ್ಷಿಣ ಆಫ್ರಿಕಾ ಸೇರಿದೆ. ಆದುದರಿಂದ ಅಲ್ಲಿ ಬದುಕುವ ಎಲ್ಲರಿಗೂ ಸಮಾನ ಅವಕಾಶ ಸಿಗಬೇಕು ಎಂಬ ವಿಚಾರದ ಮೂಲಕ ಅವರು ಹೋರಾಟಕ್ಕೆ ಇಳಿದಿದ್ದಾರೆ. ಅವರ ಈ ನಿಲುವಿನಿಂದಾಗಿ ವಿಶ್ವದ ಎಲ್ಲಾ ಸ್ವಾತಂತ್ರ್ಯ ಪ್ರಿಯರು ಅವರ ಬಗ್ಗೆ ಗೌರವ ತಾಳಿದ್ದಾರೆ.

**ಜೀವಂತ ಸ್ಪಾರ್ಟಕಸ್**

ರಾಜಕೀಯ ಹೋರಾಟಗಳನ್ನು ಬಿಟ್ಟು ಮಂಡೇಲಾ ಟ್ರಾನ್ಸ್ ಕೆಯಿ ಬಂಟುಸ್ತಾನದಲ್ಲಿ ಉಳಿಯುವುದಾದರೆ ಬಿಡುಗಡೆ ಮಾಡುವುದೆಂದು ಸರ್ಕಾರ ಮೊದಲ ಬಾರಿಗೆ ೧೯೭೩ರಲ್ಲಿ ತಿಳಿಸಿತು. ಟ್ರಾನ್ಸ್ ಕೆಯಿ ಬಂಟುಸ್ತಾನದ 'ಸರ್ಕಾರ'ದಲ್ಲಿ ಒಂದು ಹುದ್ದೆಯನ್ನು ಕೂಡ ನೀಡುವುದಾಗಿ ಹೇಳಿತ್ತು. ಸರ್ಕಾರದ ಈ ಷರತ್ತು ಮಂಡೇಲ ಅವರಿಗೆ ಅಸಹ್ಯ ಎನಿಸಿತು. ೧೯೭೬ರಲ್ಲಿ ಕಾನೂನು ಸಚಿವ ಜಿಮ್ಮಿ ಕುರ್ಗರ್ ಇದೇ ಷರತ್ತಿನ ಮೇಲೆ ಬಿಡುಗಡೆ ಮಾಡುವುದಾಗಿ ತಿಳಿಸಿದರು. ಮಂಡೇಲಾ ಬದುಕಿನಲ್ಲಿ ಎಂದೂ ನಿರಾಶರಾಗಲಿಲ್ಲ. ಎಂದೂ ಹೊಂದಾಣಿಕೆ ಮಾಡಿಕೊಳ್ಳಲಿಲ್ಲ. ಎಂದೂ ಸಹಾಯ ಕೇಳಲಿಲ್ಲ. ಅವರು ಚೈತನ್ಯ, ಧೈರ್ಯ ಮತ್ತು ಸಮರ್ಪಣೆಯ ಆಗರವಾಗೇ ಉಳಿದರು. ಒಂದು ಮಹಾನ್ ಕಾರ್ಯಸಾಧನೆಗಾಗಿ ಎಲ್ಲ 'ಚಂಡಮಾರುತ'ಗಳನ್ನು ಎದುರಿಸಿದರು. ದಕ್ಷಿಣ ಆಫ್ರಿಕಾದಲ್ಲಿ ಮಂಡೇಲಾ ಅವರ

ಭಾವಚಿತ್ರ ಮತ್ತು ಹೆಸರನ್ನು ಪ್ರಕಟಿಸುವುದು ಕೂಡ ಅಪರಾಧವಾಗಿತ್ತು. ಆದರೆ ಮೊದಲಿನಿಂದಲೂ ಜನರಿಗೆ ಅದೆಲ್ಲ ಲೆಕ್ಕಕ್ಕಿಲ್ಲ. ಮಂಡೇಲಾ ಭಿತ್ತಿಚಿತ್ರಗಳು ಅಲ್ಲಿ ರಾರಾಜಿಸುತ್ತಲೇ ಇವೆ. ಮಾನವ ಹಕ್ಕುಗಳನ್ನು ಪ್ರತಿಪಾದಿಸುವ ದಕ್ಷಿಣ ಆಫ್ರಿಕಾದ ಅನೇಕ ಬಿಳಿಯರು 'ರಾಷ್ಟ್ರೀಯ ನಾಯಕ' ಎಂದು ಮಂಡೇಲಾ ಅವರನ್ನು ಗೌರವಿಸುತ್ತಾರೆ.

ಮಾರ್ಚ್ ೧೯೮೦ರಲ್ಲಿ ಜೊಹಾನ್ಸ್ ಬರ್ಗ್‌ನಲ್ಲಿ ಮಂಡೇಲಾರ ಬಿಡುಗಡೆ ಕುರಿತು ಅಭಿಪ್ರಾಯ ಸಂಗ್ರಹಿಸಿದಾಗ ಶೇ.೫೪ರಷ್ಟು ಬಿಳಿಯರು ಅವರನ್ನು ಬಿಡುಗಡೆ ಮಾಡಬೇಕು ಎಂದು ಬಯಸಿದರು. ಮಂಡೇಲಾ 'ಜೀವಂತ ಸ್ಪಾರ್ಟಕಸ್' ಆಗಿದ್ದಾರೆ. ದಕ್ಷಿಣ ಆಫ್ರಿಕಾ ಸರ್ಕಾರ ಪಣಕ್ಕಿಟ್ಟಾಗ ಮಂಡೇಲಾ ತಮ್ಮ ಬದುಕನ್ನೇ ಪಣಕ್ಕಿಟ್ಟರು. ಆಗ ಸರ್ಕಾರಕ್ಕೆ ಎಲ್ಲ ಕಡೆಗಳಲ್ಲಿ ಅಂದರೆ ಗಲ್ಲಿಗಳಲ್ಲಿ, ಬೀದಿಗಳಲ್ಲಿ, ಬಂಟುಸ್ತಾನ್‌ಗಳಲ್ಲಿ ಮತ್ತು ಒಮ್ಮೆಲೆ ರಣರಂಗವಾಗಿ ಮಾರ್ಪಡುವ ಸ್ಥಳಗಳಲ್ಲಿ ಬರೀ ಮಂಡೇಲಾಗಳು ಕಾಣತೊಡಗಿದರು. ರಿವೋನಿಯಾ ವಿಚಾರಣೆ ವೇಳೆ ಅವರಿಗೆ ಗಲ್ಲು ಶಿಕ್ಷೆ ವಿಧಿಸಲಾಗುವುದು ಎಂದೇ ಭಾವಿಸಲಾಗಿತ್ತು. ಮಂಡೇಲಾ ಕೂಡ ಹಾಗೇ ಯೋಚಿಸಿದ್ದರು. ಆಗ ಅವರು

> ನನಗೆ ಗಲ್ಲು ಶಿಕ್ಷೆಯನ್ನು ವಿಧಿಸುವ ಮೂಲಕ ವಿಮೋಚನಾ ಹೋರಾಟವನ್ನು ನಾಶ ಮಾಡುತ್ತೇವೆಂದು ಭಾವಿಸಿದರೆ ಅದು ತಪ್ಪು. ನಾನು ಸಾಯಲಿಕ್ಕೆ ತಯಾರಾಗಿದ್ದೇನೆ. ನನ್ನ ಸಾವು ಜನರ ಹೋರಾಟಕ್ಕೆ ಸ್ಫೂರ್ತಿಯಾಗುತ್ತದೆಂದು ನನಗೆ ಗೊತ್ತು.

ಎಂದು ಹೇಳಿದ್ದರು. ಜನಾಂಗವಾದ ಮತ್ತು ವರ್ಣದ್ವೇಷ ನೀತಿಗಳ ವಿರುದ್ಧ ಜನಾಂಗಗಳ ಮಧ್ಯ ಸಾಮರಸ್ಯ ಸಾಧಿಸಿ ಹೋರಾಡುತ್ತಿದ್ದರೂ ದಕ್ಷಿಣ ಆಫ್ರಿಕಾದ ರಾಷ್ಟ್ರೀಯ ವಿಮೋಚನೆಯನ್ನು ಸಾಧಿಸುವ ಗುರಿಯನ್ನು ಹೊಂದಿದರೂ ವರ್ಗ ಸಮಸ್ಯೆ ಬಗ್ಗೆ ಎಚ್ಚರಿಕೆಯುಳ್ಳವರಾಗಿದ್ದಾರೆ. ಸಮಾಜವಾದದ ಹೊರತಾಗಿ ಬೇರೆ ಯಾವುದೇ ವ್ಯವಸ್ಥೆ ಜೊತೆ ಭಾಗಿಯಾಗುವುದಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ. ದಕ್ಷಿಣ ಆಫ್ರಿಕಾದ ರಾಷ್ಟ್ರೀಯ ವಿಮೋಚನಾ ಹೋರಾಟದಲ್ಲಿ ಕಮ್ಯೂನಿಸ್ಟರು ಮತ್ತು ಕಮ್ಯೂನಿಸ್ಟೇತರರ ನಡುವಿನ ಸಹಕಾರವನ್ನು ಅವರು ತುಂಬ ಮೌಲಿಕ ಎಂದು ಭಾವಿಸಿದ್ದಾರೆ. ವರ್ಣದ್ವೇಷವನ್ನು ಕೊನೆಗಾಣಿಸಿ 'ಸ್ವಾತಂತ್ರ್ಯ ಘೋಷಣೆ'ಯ ಆಶಯದಂತೆ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಸ್ಥಾಪಿಸುವುದಕ್ಕಾಗಿ ದಕ್ಷಿಣ ಆಫ್ರಿಕಾದ ಕಮ್ಯೂನಿಸ್ಟರು ಇತರ ಹೋರಾಟಗಾರರ ಜೊತೆ ಅವಿಶ್ರಾಂತವಾಗಿ ದುಡಿಯುತ್ತಿದ್ದಾರೆ. ಮಂಡೇಲಾ ಈ ಸಾಧನೆಯ ಕೇಂದ್ರಬಿಂದುವಾಗಿದ್ದಾರೆ. ರಿವೋನಿಯಾ ವಿಚಾರಣೆಯಲ್ಲಿ ಮಂಡೇಲಾ ಅವರು ಕಮ್ಯೂನಿಸ್ಟರ ಬಗ್ಗೆ ಈ ರೀತಿ ಹೇಳಿದ್ದಾರೆ.

> ದಕ್ಷಿಣ ಅಫ್ರಿಕಾದಲ್ಲಿ ಆಫ್ರಿಕಾ ಜನಾಂಗದವರನ್ನು ಮನುಷ್ಯರು ಮತ್ತು ತಮ್ಮ ಸರಿಸಮಾನರು ಎಂದು ಭಾವಿಸುವ ಒಂದೇ ರಾಜಕೀಯ ಪಕ್ಷದವರೆಂದರೆ ಕಮ್ಯೂನಿಸ್ಟರು. ರಾಜಕೀಯ ಹಕ್ಕು ಸಾಧನೆ ಮತ್ತು ಸಾಮಾಜಿಕ ಹೊಣೆಗಾಗಿ ಅವರು ನಮ್ಮ ಜೊತೆ ಊಟ ಮಾಡಲು,

ಮಾತನಾಡಲು, ಬದುಕಲು ಮತ್ತು ದುಡಿಯಲು ಸಿದ್ಧರಿದ್ದಾರೆ. ಈ ಕಾರಣಕ್ಕಾಗಿ ಇಂದು ಸ್ವಾತಂತ್ರ್ಯವನ್ನು ಕಮ್ಯೂನಿಜಂಗೆ ಸರಿಗಟ್ಟುವ ಅನೇಕ ಆಫ್ರಿಕನ್ನರುಗಳಿದ್ದಾರೆ.

ಬೋಥಾ ಸೆಪ್ಟೆಂಬರ್ ೧೯೮೪ರಲ್ಲಿ ಟ್ರೈಕ್ಯಾಮರಿನ್ ಸಂಸತ್ ರಚಿಸಿದಂದಿನಿಂದ ಕರಿಯರು ಉಗ್ರಾವತಾರ ತಾಳಿದ್ದಾರೆ. ಯಾವ ಶಕ್ತಿಯೂ ಅವರನ್ನು ತಡೆಯುವ ಸ್ಥಿತಿಯಲ್ಲಿಲ್ಲ ಎಂಬ ವಾತಾವರಣ ಉಂಟಾಗಿದೆ. ಈ ಸಂಸತ್ತಿನ ಪ್ರಕಾರ ಭಾರತೀಯರು ಮತ್ತು ಮಿಶ್ರವರ್ಣೀಯರು ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡಿದಾಗ್ಯೂ ಯಾವುದೇ ನಿರ್ಣಾಯಕ ಅಧಿಕಾರವಿಲ್ಲ. ಅದೆಲ್ಲ ಬಿಳಿಯರ ಸೊತ್ತಾಗಿದೆ. ಕರಿಯರು ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡಿ ಈ ಸಂಪತ್ತಿನ ನಿರುಪಯುಕ್ತ ಭಾಗವಾಗಲು ಇಚ್ಛಿಸುತ್ತಿಲ್ಲ. ಆದರೆ ಸೊವೆಟೊ ಗಲಭೆ ನಂತರ ತೀವ್ರಗೊಳ್ಳುತ್ತಿರುವ ಜಂಟೀ ಹೋರಾಟಗಳನ್ನು ನಿಷ್ಕ್ರಿಯಗೊಳಿಸುವ ಉದ್ದೇಶದಿಂದ ಭಾರತೀಯರನ್ನು ಮತ್ತು ಮಿಶ್ರ ವರ್ಣೀಯರನ್ನು ಕರಿಯರಿಂದ ಬೇರ್ಪಡಿಸುವ ಈ ಕುತಂತ್ರದಿಂದ ಕುಪಿತಗೊಂಡಿದ್ದಾರೆ. ಅಲ್ಲದೆ ಸರ್ಕಾರದ ಶಕ್ತಿಗುಂದುತ್ತಿದೆ ಎಂಬ ಮನವರಿಕೆ ಅವರಿಗಾಗಿದೆ. ಸರ್ಕಾರಕ್ಕೆ ಜಂಟೀ ಹೋರಾಟಗಳನ್ನೂ ತಡೆಯಲಿಕ್ಕಾಗುತ್ತಿಲ್ಲ. ಈ ನಿರ್ಣಾಯಕ ಘಟ್ಟದಲ್ಲಿ ಕರಿಯರು ಜೀವದ ಹಂಗುತೊರೆದು ಹೋರಾಡುವುದು ಅನಿವಾರ್ಯವಾಗಿದೆ.

ನೊಬೆಲ್ ಶಾಂತಿ ಪ್ರಶಸ್ತಿ ವಿಜೇತ ಮತ್ತು ಆಂಗ್ಲಿಕನ್ ಚರ್ಚಿನ ಮೊದಲ ಕರಿಯ ನಾಯಕ ಬಿಷಪ್ ಡೆಸ್ಮಂಡ್ ಟುಟು, ವರ್ಲ್ಡ್ ಅಲಯನ್ಸ್ ಆಫ್ ರಿಫಾರ್ಮ್‌ಡ್ ಚರ್ಚಿನ ಮಿಶ್ರವರ್ಣೀಯ ನೇತರ ರೆವೆರೆಂಡ್ ಅಲೆನ್ ಬೊಸೆಕ್, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಮೇವಾ ರಾಮ್ ಗೊಬಿನ್ ಮುಂತಾದ ನೂರಾರು ಮಂದಿ ಸೌಮ್ಯನಾಯಕರು ಇಂದು ಯುನೈಟೆಡ್ ಡೆಮೊಕ್ರಾಟಿಕ್ ಫ್ರಂಟ್ ಮತ್ತು ಜನಾಂದೋಲನಗಳ ಮೂಲಕ ಕರಿಯರ ಹೋರಾಟಗಳನ್ನು ತೀವ್ರಗೊಳಿಸುತ್ತಿದ್ದಾರೆ.

ಈ ಹೋರಾಟಗಳಿಗೆ ಅಂಜಿ ಬೋಥಾ ಸರ್ಕಾರ ತನ್ನ ಹಿಡಿತವನ್ನು ಆಂತರಿಕವಾಗಿ ಬಿಗಿಗೊಳಿಸುವುದರ ಜತೆಗೆ ಬಾಹ್ಯವಾಗಿ ಒಂದಿಷ್ಟು ಸುಧಾರಣೆಗಳನ್ನು ತರಬಯಸಿತು.

ರಿವೋನಿಯಾ ವಿಚಾರಣೆಯಲ್ಲಿ ಮಂಡೇಲಾ ಮತ್ತು ಇತರ ಗೆಳೆಯರ ಜೊತೆ ಜೀವಾವಧಿ ಶಿಕ್ಷೆ ಅನುಭವಿಸುತ್ತಿದ್ದ ಗೋವನ್ ಮಬೇಕಿ ಅವರನ್ನು ಬೋಥಾ ೧೯೮೭ರಲ್ಲಿ ಬಿಡುಗಡೆ ಮಾಡಿದರು. ೧೯೮೪ರಿಂದ ನಡೆದ ತೀವ್ರ ಚಳವಳಿಯ ಪರಿಣಾಮಗಳಲ್ಲಿ ಇದೂ ಒಂದು. ಏಪ್ರಿಲ್ ೧೯೮೨ರಲ್ಲಿ ರಾಬ್ಬೆನ್ ನಡುಗಡ್ಡೆಯ ಜೈಲಿನಿಂದ ಪೋಲ್ಸ್ ಮೂರ್ ಜೈಲಿಗೆ ಸ್ಥಳಾಂತರಿಸಿದ ನಂತರ ಮಂಡೇಲಾ ಅವರು ೧೯೮೮ರವರೆಗೆ ಅಲ್ಲೇ ಇದ್ದರು. ಅವರಿಗೆ ಕ್ಷಯರೋಗವಾದದ್ದು ಗೊತ್ತಾದ ಮೇಲೆ ೧೯೮೮ನೇ ಡಿಸೆಂಬರ್ ೭ರಂದು ಕೇಪ್ ಟೌನ್ ಬಳಿಯ ಪಾರ್ಲ್‌ನಲ್ಲಿನ ವಿಕ್ಟರ್ ವೆರ್ಸ್ಟರ್ ಕಾರಾಗೃಹ ಫಾರ್ಮ್‌ಗೆ ಕಳಿಸಲಾಯಿತು.

೧೯೮೯ನೆಯ ಜುಲೈ ೧೨ರಂದು ಸರ್ಕಾರ ಮೊದಲ ಬಾರಿಗೆ ಮಂಡೇಲಾ ಅವರ ಹೇಳಿಕೆಯನ್ನು 'ತನ್ನ ಕಾಯ್ದೆಗೆ ವಿರುದ್ಧವಾಗಿ' ಬಿಡುಗಡೆ ಮಾಡಿತು. ದಕ್ಷಿಣ ಆಫ್ರಿಕಾದಲ್ಲಿ ಶಾಂತಿ ತರುವುದಕ್ಕಾಗಿ ನಿಷಿದ್ಧಗೊಳಿಸಿದ ಎ.ಎನ್.ಸಿ. ಜೊತೆ ಮಾತುಕತೆ ನಡೆಸುವುದೊಂದೇ ಮಾರ್ಗ ಎಂದು ಅವರು ಹೇಳಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

೧೯೮೯ನೆಯ ಜುಲೈನಲ್ಲಿ ಬೋಥಾ ಮತ್ತು ಮಂಡೇಲಾ ಮಧ್ಯೆ ೪೫ ನಿಮಿಷಗಳ ಮಾತುಕತೆ ಆಯಿತು. ಈ ಮಾತುಕತೆ ಬೋಥಾಗೆ ಅನಿವಾರ್ಯವಾಗಿತ್ತು. ಆದರೆ ಇದರಿಂದಾಗಿ ಆತನಿಗೆ ಕರಿಯರ ಗೌರವ ಸಂಪಾದಿಸಿಕೊಳ್ಳಲಿಕ್ಕಾಗಲಿಲ್ಲ. ಆಳುವ ನ್ಯಾಷನಲ್ ಪಾರ್ಟಿಯಲ್ಲಿ ಕೂಡ ಬೋಥಾ ಬಗ್ಗೆ ತಿರಸ್ಕಾರ ಹೆಚ್ಚುತ್ತಿತ್ತು. ಕರಿಯರ ಹೋರಾಟಗಳಿಂದ ಮತ್ತು ಆರ್ಥಿಕ ದಿಗ್ಬಂಧನದಿಂದ ಆರ್ಥಿಕ ಸಮಸ್ಯೆಗಳು ತಲೆದೋರುವಂಥ ಪರಿಸ್ಥಿತಿ ಉಂಟಾಯಿತು. ಬಿಳಿಯರಿಗೆ ಕರಿಯರ ಬಗ್ಗೆ ಹೆಚ್ಚು ಭಯ ಶುರುವಾಯಿತು. ಅಪಾರ್ಥೈಡ್ ನೀತಿಯಿಂದ ಬಿಳಿಯರ ಬದುಕು ಗಂಡಾಂತರದಲ್ಲಿದೆ ಎಂದು ಅನೇಕ ಸಾಮಾನ್ಯ ಬಿಳಿಯರು ಕೂಡ ಭಾವಿಸತೊಡಗಿದರು. ಈ ಮನೋಭಾವ ಹೋಗಲಾಡಿಸಲು ಬೋಥಾ ಸಾಕಷ್ಟು ಚಡಪಡಿಸಿದರು. ಎಲ್ಲ ವ್ಯರ್ಥವಾಯಿತು. ಅನೇಕ ದಿನಗಳವರೆಗೆ ಮುಂದೂಡುತ್ತ ಬಂದು ೧೯೮೯ನೆಯ ಆಗಸ್ಟ್ ೧೪ರಂದು ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಆಗಸ್ಟ್ ೧೫ ರಂದು ಎಫ್.ಡಬ್ಲ್ಯೂ.ಡಿ.ಕ್ಲರ್ಕ್ ಅಧ್ಯಕ್ಷರಾಗಿ ಆಯ್ಕೆ ಆದರು.

೧೯೮೯ನೆಯ ಸೆಪ್ಟೆಂಬರ್ ೭ರಂದು ಆಳುವ ನ್ಯಾಷನಲ್ ಪಾರ್ಟಿ ಬಿಳಿಯರ ೧೬೬ ಸ್ಥಾನಗಳಲ್ಲಿ ೮೪ ಸ್ಥಾನಗಳನ್ನು ಪಡೆಯಿತು. ಕನ್ಸರ್‌ವೇಟಿವ್ ಪಾರ್ಟಿ ೩೯ ಸ್ಥಾನಗಳನ್ನು ಗೆದ್ದುಕೊಂಡಿತು. ಡೆಮೊಕ್ರಟಿಕ್ ಪಾರ್ಟಿಗೆ ೩೩ ಸ್ಥಾನ ಲಭಿಸಿದವು. ಇಂಡಿಪೆಂಡೆಂಟ್ ಪಾರ್ಟಿಗೆ ೧ ಸ್ಥಾನ ಸಿಕ್ಕಿತು. ಡೆಮಾಕ್ರಟಿಕ್ ಮತ್ತು ಇಂಡಿಪೆಂಡೆಂಟ್ ಪಾರ್ಟಿಗಳು ವರ್ಣಭೇದ ನೀತಿಯನ್ನು ಪ್ರಬಲವಾಗಿ ವಿರೋಧಿಸುತ್ತವೆ. ತಮ್ಮ ಅಧಿಕಾರಾವಧಿಯಲ್ಲಿ ಬಿಳಿಯರ ಹಿಡಿತವನ್ನು ಕೊನೆಗೊಳಿಸುವುದಾಗಿ ಅಧ್ಯಕ್ಷ ಎಫ್.ಡಬ್ಲ್ಯೂ.ಡಿ.ಕ್ಲರ್ಕ್ ಘೋಷಿಸಿದ್ದಾರೆ. ಕ್ಲರ್ಕ್ ಹೇಳುವುದಕ್ಕೂ ಅವರ ಸರ್ಕಾರ ಕಾರ್ಯ ನಿರ್ವಹಿಸುವುದಕ್ಕೂ ಅಂತರವಿದೆ ಎಂದು ಕಾಮನ್‌ವೆಲ್ತ್ ಮಹಾ ಕಾರ್ಯದರ್ಶಿ ಶ್ರೀದತ್ ರಾಂಫಲ್ ಟೀಕಿಸಿದ್ದಾರೆ. ಮಂಡೇಲಾ ಅವರು ಕ್ಲರ್ಕ್ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ.

೧೯೮೯ನೆಯ ಅಕ್ಟೋಬರ್ ೧೫ರಂದು ಮಂಡೇಲಾ ಜತೆ ರಿವೋನಿಯಾ ವಿಚಾರಣೆಯಲ್ಲಿ ಜೀವಾವಧಿ ಶಿಕ್ಷೆಗೊಳಗಾಗಿ ಇನ್ನೂ ಜೈಲಿನಲ್ಲಿದ್ದ ಸಿಸುಲು, ಅಹ್ಮದ ಕಥ್ರದಾ, ಮಲಂಗೆನಿ, ರೇಮಾಂಡ್ ಮಹ್ಲಬಾ ಮತ್ತು ಇಲಿಯಾಸ್ ಮೊತ್ಸೊಲೆದಿ ಅವರನ್ನು ಅಧ್ಯಕ್ಷ ಕ್ಲರ್ಕ್ ಬಿಡುಗಡೆ ಮಾಡಿದರು.

**ಅಹ್ಮದ್ ಕಥ್ರದಾ**

ಭಾರತೀಯರ ಹೆಮ್ಮೆಯ ಅಹ್ಮದ್ ಮೊಹಮ್ಮದ್ ಕಥ್ರದಾ ಮಹೋನ್ನತ ಮಾನವ ಪ್ರಜ್ಞೆಯ ಪ್ರತೀಕವಾಗಿದ್ದಾರೆ. ಆ ಪ್ರಜ್ಞೆಗೆ ಕಪ್ಪು ಎಂಬುದನ್ನು ತೋರಿಸಲು ತಮ್ಮ

ಬದುಕನ್ನೇ ಮುಡಿಪಾಗಿಟ್ಟಿದ್ದಾರೆ. ದಕ್ಷಿಣ ಆಫ್ರಿಕಾದ ಕರಿಯರ ವಿಮೋಚನೆಗಾಗಿ ಹೋರಾಡುವ ಕರಿಯರು, ಬಿಳಿಯರು, ಮಿಶ್ರವರ್ಣೀಯರು ಮತ್ತು ಭಾರತೀಯರು ಹೀಗೆ ಎಲ್ಲರೂ ಒಂದೇ ಎಂಬುದನ್ನು ಕ್ರಿಯೆ ಮೂಲಕ ತೋರಿಸಿಕೊಟ್ಟ ಮೊದಲಿಗರಲ್ಲಿ ಅವರೂ ಒಬ್ಬರಾಗಿದ್ದಾರೆ. ಅಹ್ಮದ್ ಕಥ್ರದಾ ಅವರು ೧೯೨೯ನೆಯ ಆಗಸ್ಟ್ ೨೧ರಂದು ಟ್ರಾನ್ಸ್ ವಾಲ್ ಬಳಿಯ ಸ್ವಪೆಷ್ಟೂರ್ ರೆನೆಕೆ ಎಂಬಲ್ಲಿ ವಾಸವಾಗಿದ್ದ ಭಾರತೀಯ ಕುಟುಂಬವೊಂದರಲ್ಲಿ ಜನಿಸಿದರು. ತಂದೆಯ ಹೆಸರು ಮೊಹಮ್ಮದ್ ಕಥ್ರದಾ. ವಿದ್ಯಾಭ್ಯಾಸಕ್ಕಾಗಿ ೧೯೩೪ರಲ್ಲಿ ಜೊಹಾನ್ಸ್ ಬರ್ಗ್‌ಗೆ ಬಂದರು. ಹತ್ತು ವರ್ಷ ಬಾಲಕನಾಗಿದ್ದಾಗಲೇ ಡಾ. ಯೂಸೂ ದಾದೂ, ಮೌಲ್ವಿ ಕಚಾಲಿಯಾ, ಯೂಸೂ ಕಚಾಲಿಯಾ ಮುಂತಾದವರ ರಾಜಕೀ ಪ್ರಭಾವಕ್ಕೊಳ್ಳಗಾದರು. ೧೯೪೧ ರಿಂದ ಸಕ್ರಿಯವಾಗಿ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದರು. ಮೆಟ್ರಿಕ್ ಪಾಸಾದ ಮೇಲೆ ೧೯೪೬ರಲ್ಲಿ ಓದು ನಿಲ್ಲಿಸಿ ನತಾಲ್ ಮತ್ತು ಟ್ರಾನ್ಸ್ ವಾಲ್ ಪ್ರಾಂತಗಳಲ್ಲಿ ಭಾರತೀಯರ ವಿರುದ್ಧ ಬಳಸುತ್ತಿದ್ದ ಅನ್ಯಾಯದ ಕಾನೂನಿನ ವಿರುದ್ಧ ಹೋರಾಡುತ್ತಿದ್ದ ಸತ್ಯಾಗ್ರಹ ಮಂಡಳಿ ಕಚೇರಿಯಲ್ಲಿ ಪೂರ್ಣ ಪ್ರಮಾಣದ ಕಾರ್ಯಕರ್ತರಾಗಿ ಸೇರಿದರು. ಆಗ ನಡೆದ ಚಳವಳಿಯಲ್ಲಿ ಎರಡು ಸಾವಿರ ಭಾರತೀಯರಿಗೆ ಜೈಲು ಶಿಕ್ಷೆಯಾಯಿತು. ೧೯೪೬ನೇ ಡಿಸೆಂಬರ್ ವೇಳೆ ಡರ್ಬಾನ್‌ನಲ್ಲಿ ಒಂದು ತಿಂಗಳ ಕಾಲ ಮೊದಲ ಬಾರಿಗೆ ತುರಂಗ ವಾಸ ಅನುಭವಿಸಿದರು. ಡಾರ್ಬಾನ್‌ನಲ್ಲಿ ಬಿಳಿಯರಿಗಾಗಿ ಮಾತ್ರ ಇರುವ ಭೂಮಿಯ ಬಳಿ ಒಂದು ತುಂಡು ನೆಲ ಪಡೆದದ್ದೇ ಈ ಶಿಕ್ಷೆಗೆ ಕಾರಣವಾಯಿತು. ಜೈಲಿನಿಂದ ಬಂದ ನಂತರ ಆಂದೋಲನಗಳಲ್ಲಿ ಭಾಗಿಯಾಗುವುದನ್ನು ಮುಂದುವರಿಸಿದರು. ಈ ಸಂದರ್ಭದಲ್ಲಿ ಮಂಡೇಲಾ, ಸಿಸಿಲು ಮತ್ತು ಆಗ ಎ.ಎನ್.ಸಿ. ಅಧ್ಯಕ್ಷರಾಗಿದ್ದ ಡಾ.ಕ್ಷುಮಾ ಅವರ ಪರಿಚಯವಾಯಿತು.

೧೯೫೧ರಲ್ಲಿ ಬಿ.ಎ. ಪದವಿಗಾಗಿ ವಿಟ್ ವಾಟರ್ಸ್ ರ್ಯಾಂಡ್ ವಿಶ್ವವಿದ್ಯಾನಿಲಯದಲ್ಲಿ ಹೆಸರು ನೋಂದಾಯಿಸಿದರು. ಆದರೆ ಬರ್ಲಿನ್‌ನಲ್ಲಿ ನಡೆದ ವಿಶ್ವ ಯುವಜನೋತ್ಸವಕ್ಕೆ ಹೋಗಬೇಕಾದ ಕಾರಣ ಕೆಲವೇ ತಿಂಗಳುಗಳಲ್ಲಿ ವಿದ್ಯಾಭ್ಯಾಸ ನಿಲ್ಲಿಸಬೇಕಾಯಿತು. ಟ್ರಾನ್ಸ್ ವಾಲ್ ಇಂಡಿಯನ್ ಯೂತ್ ಕಾಂಗ್ರೆಸ್ ಪ್ರತಿನಿಧಿಯಾಗಿ ಅವರನ್ನು ಆಯ್ಕೆ ಮಾಡಲಾಗಿತ್ತು. ದಕ್ಷಿಣ ಆಫ್ರಿಕಾದ ಎಲ್ಲ ಜನಾಂಗಗಳ ೬೫ ಪ್ರತಿನಿಧಿಗಳ ನಾಯಕರಾಗಿ ಅವರು ಬರ್ಲಿನ್‌ನಲ್ಲಿ ಆಯ್ಕೆ ಆದರು. ಯುವಜನೋತ್ಸವದ ನಂತರ ವಾರ್ಸಾದಲ್ಲಿನ ವಿದ್ಯಾರ್ಥಿಗಳ ಅಂತರ ರಾಷ್ಟ್ರೀಯ ಸಂಘದ ಕಾಂಗ್ರೆಸ್‌ನಲ್ಲಿ ವಿದ್ಯಾರ್ಥಿಗಳ ಉದಾರವಾದಿ ಸಂಘ(ವಿಟ್ಸ್ ವಿಶ್ವವಿದ್ಯಾನಿಲಯ)ವನ್ನು ಪ್ರತಿನಿಧಿಸಿದರು. ಆದುದರಿಂದ ಬುಡಾಪೆಸ್ಟ್‌ನಲ್ಲಿ ಇರುವ ಪ್ರಜಾಸತ್ತಾತ್ಮಕ ಯುವಕರ ವಿಶ್ವ ಒಕ್ಕೂಟ (ಡಬ್ಲ್ಯೂ ಎಫ್.ಡಿ.ವೈ.)ದ ಕೇಂದ್ರ ಕಚೇರಿಯಲ್ಲಿ ಕಾರ್ಯನಿರ್ವಹಿಸಲು ಅವರನ್ನು ಆಹ್ವಾನಿಸಲಾಯಿತು. ಒಂಬತ್ತು ತಿಂಗಳು ಕಾಲ ಬುಡಾ ಪೆಸ್ಟ್ ನಲ್ಲಿ ಉಳಿದರು. ಅದೇ ವೇಳೆ ಪೋಲಂಡ್‌ನಲ್ಲಿ ಇರುವ ನಾಜಿಗಳು ಸೃಷ್ಟಿಸಿದ ಆಶ್‌ವಿಟ್ಜ್ ಯಾತನಾ ಶಿಬಿರಕ್ಕೆ ಭೇಟಿ ನೀಡಿದರು. ಅದು ಅವರ ಮೇಲೆ ಆಳವಾದ ಪರಿಣಾಮ ಬೀರಿತು.

ಅಹ್ಮದ್ ಅವರು ೧೯೫೨ರಲ್ಲಿ ದಕ್ಷಿಣ ಆಫ್ರಿಕಾಕ್ಕೆ ಮರಳಿ ಬಂದ ಮೇಲೆ ವರ್ಣಭೇದ ವ್ಯವಸ್ಥೆಯ ಕಾನೂನುಭಂಗ ಚಳವಳಿಯಲ್ಲಿ ಎಡಬಿಡದೆ ಭಾಗವಹಿಸಿದರು. ಆಗ ದೇಶಾದ್ಯಂತ ಒಂಬತ್ತು ಸಾವಿರ ಸ್ವಯಂ ಸೇವಕರನ್ನು ಬಂಧಿಸಲಾಯಿತು. ಇವರಲ್ಲೊಬ್ಬರಾದ ಅಹ್ಮದ್ ಅವರಿಗೆ ಒಂಬತ್ತು ತಿಂಗಳು ಶಿಕ್ಷೆ ಆಯಿತು. ಮಂಡೇಲಾ, ಸಿಸುಲು, ಡಾ. ದಾದೂ, ಕಚಾಲಿಯಾ ಸಹೋದರರು ಮತ್ತು ಆಗಿನ ಎ.ಎನ್.ಸಿ. ಅಧ್ಯಕ್ಷ ಡಾ. ಮೊರೊಕಾ ಅವರೂ ಆ ಸಮಯದಲ್ಲಿ ಜೈಲು ಶಿಕ್ಷೆ ಅನುಭವಿಸಿದರು. ಅಹ್ಮದ್ ಅವರು ೧೯೫೩ರಲ್ಲಿ ಡಬ್ಲ್ಯೂ.ಎಫ್.ಡಿ.ವೈ.ನ. ಕಾರ್ಯಕಾರಿ ಸಮಿತಿ ಸದಸ್ಯರಾಗಿ ಆಯ್ಕೆ ಆದರು. ಆ ವೇಳೆಯಲ್ಲಿ ಸರ್ಕಾರ ಅವರನ್ನು ಕಮ್ಯೂನಿಸ್ಟ್ ಎಂದು ಪರಿಗಣಿಸಿದ್ದರಿಂದ ಅವರು ಆ ಸಭೆಗೆ ಹಾಜರಾಗಲಿಕ್ಕಾಗಲಿಲ್ಲ. ಅವರು ಇಂಡಿಯನ್ ಕಾಂಗ್ರೆಸ್. ಇಂಡಿಯನ್ ಯೂತ್ ಕಾಂಗ್ರೆಸ್, ಶಾಂತಿ ಸಮಿತಿ, ಯುಜಜನೋತ್ಸವ ಸಮಿತಿ ಹೀಗೆ ೩೯ ಸಂಘಟನೆಗಳ ಜವಾಬ್ದಾರಿಯುತ ಸ್ಥಾನಗಳಲ್ಲಿದ್ದರು. ೧೯೫೪ರಲ್ಲಿ ಸರ್ಕಾರ ಅವರ ವಿರುದ್ಧ ನಿಷೇಧಾಜ್ಞೆ ಹೊರಡಿಸಿದ್ದರಿಂದ ಎಲ್ಲ ಸಂಘಟನೆಗಳಿಗೆ ರಾಜೀನಾಮೆ ಕೊಡಬೇಕಾಯಿತು. ಸಭೆ ಸಮಾರಂಭಗಳಲ್ಲಿ ಭಾಗವಹಿಸುವ ಹಕ್ಕು ಕಳೆದುಕೊಳ್ಳಬೇಕಾಯಿತು.

ಜೊಹಾನ್ಸ್ ಬರ್ಗ್‌ನ ಭಾರತೀಯ ಮಕ್ಕಳು ವಿದ್ಯಾಭ್ಯಾಸಕ್ಕೆ ಪ್ರತಿದಿನ ೨೦ ಕಿ.ಮೀ. ದೂರದ ಸ್ಥಳವಾದ ಲೆನಸಿಯಾಗೆ ಹೋಗಬೇಕಿತ್ತು. ಜನವರಿ ೧೯೫೫ರಲ್ಲಿ ಅಹ್ಮದ್ ಅವರು ಭಾರತೀಯ ಮಕ್ಕಳಿಗಾಗಿ ಖಾಸಗಿಯಾಗಿ ಕೇಂದ್ರ ಭಾರತೀಯ ಪ್ರೌಢಶಾಲೆ ಪ್ರಾರಂಭಿಸಿ ಅವರಿಗೆ ಊಟದ ವ್ಯವಸ್ಥೆ ಮಾಡುವಲ್ಲಿ ಸಕ್ರಿಯ ಪಾತ್ರ ವಹಿಸಿದರು. ಅವಿವಾಹಿತ ಅಹ್ಮದ್ ಕೇಂದ್ರ ಭಾರತೀಯ ಪ್ರೌಢಶಾಲೆಯ ಪಾಲಕರ ಸಂಘದ ಕಾರ್ಯದರ್ಶಿ ಆದರು. ಕಾನೂನುಭಂಗ ಚಳವಳಿ ಪ್ರಾರಂಭಿಸಿದಾಗಿನಿಂದ ಅವರು ಅನೇಕ ಬಾರಿ ಬಂಧನಕ್ಕೊಳಗಾಗಿ ಶಿಕ್ಷೆ ಅನುಭವಿಸಿದ್ದರು. ೧೯೫೬ರಲ್ಲಿ ರಾಜದ್ರೋಹದ ಆಪಾದನೆ ಮೇಲೆ ೧೫೬ ಜನರ ಜತೆ ಅವರನ್ನು ಬಂಧಿಸಲಾಯಿತು. ನಾಲ್ಕು ವರ್ಷಗಳ ನಂತರ ವಿಚಾರಣೆ ಮುಗಿದು ನಿರ್ದೋಷಿ ಎಂದು ಸಾರಲಾಯಿತು. ೧೯೬೨ರಲ್ಲಿ ಅಹ್ಮದ್ ಅವರನ್ನು ಗೃಹಬಂಧನದಲ್ಲಿ ಇಡಲಾಯಿತು. ೧೯೬೩ರ ಪ್ರಾರಂಭದಲ್ಲಿ ಭೂಗತರಾಗಿ ರಾಜಕೀಯ ಚಟುವಟಿಕೆಗಳನ್ನು ಮುಂದುವರಿಸಿದರು. ೧೯೬೩ನೇ ಜುಲೈ ೧೧ರಂದು 'ಲಿಲ್ಲೀಸ್ ಲೀಫ್'ನಲ್ಲಿ ಅಹ್ಮದ್ ಸಮೇತ ಅನೇಕ ಮಂದಿ ವರಿಷ್ಠರನ್ನು ಬಂಧಿಸಲಾಯಿತು. ಮಂಡೇಲಾ ಅವರು ೧೯೬೨ನೇ ಆಗಸ್ಟ್ ೫ರಂದೇ ಬಂಧಿತರಾಗಿದ್ದರು.

ಬಂಧಿತರಲ್ಲಿ ಹೆರಾಲ್ಡ್ ವೂಲ್ಪೆ, ಆರ್ಥರ್ ಗೋಲ್ಡ್ ರೀಚ್, ಅಬ್ದುಲ್ಲಾ ಜಸ್ಸತ್ ಮತ್ತು ಮೂಸಾ ಮೂಲಾ ಅವರು ತಪ್ಪಿಸಿಕೊಂಡರು. ಭಾರತೀಯರಾದ ಮೂಸಾ ಮೂಲಾ ಸದ್ಯ ಭಾರತದಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಪ್ರತಿನಿಧಿಯಾಗಿದ್ದಾರೆ. ಮಂಡೇಲಾ ಮತ್ತು ಇತರರ ಜತೆ ಅಹ್ಮದ್ ಅವರಿಗೂ ಜೀವಾವಧಿ ಶಿಕ್ಷೆ ಆಯಿತು.

ದಕ್ಷಿಣ ಆಫ್ರಿಕಾದ ಅಧ್ಯಕ್ಷ ಬೋಥಾ ೧೯೮೫ನೇ ಜನವರಿ ೩೧ರಂದು ಷರತ್ತುಗಳೊಂದಿಗೆ ಬಿಡುಗಡೆ ಮಾಡುವುದಾಗಿ ಘೋಷಿಸಿದ್ದನ್ನು ಮಂಡೇಲಾ, ಸಿಸುಲು ಮತ್ತ ಅಹ್ಮದ್ ಕಥ್ರದಾ ತಿರಸ್ಕರಿಸಿದರು. ಆಗ ಅಹ್ಮದ್ ಕಥ್ರದಾ ಅವರು ಕೇಪ್ ಟೌನಿನ ಪೋಲ್ಸ್ ಮೂರ್ ಜೈಲಿನಿಂದ ಲಂಡನ್‌ನಲ್ಲಿ ಇರುವ ಗೆಳೆಯನೊಬ್ಬನಿಗೆ ಬರೆದ ಪತ್ರದ ಸಾಲುಗಳಿವು.

> ಸರ್ಕಾರದ ಯಾವುದೇ ಬಗೆಯ ಹುಸಿ ಗೌರವಗಳು ನಮಗೆ ಬೇಕಾಗಿಲ್ಲ.
> ನಮ್ಮನ್ನು ಅವಮಾನಿಸುವುದಕ್ಕೋಸ್ಕರ ಸೃಷ್ಟಿಸಿದ ಸರ್ಕಾರದ ಷಡ್ಯಂತ್ರವಿದು.
> ಇಂತಹ ಪ್ರಸ್ತಾವಗಳನ್ನು ತಿರಸ್ಕರಿಸುವುದನ್ನು ಬಿಟ್ಟು ಬೇರೆ ಯಾವುದೇ
> ಮಾರ್ಗವು ನಮ್ಮ ಮುಂದೆ ಇಲ್ಲ.

ಜನತೆಯ ಸ್ವಾತಂತ್ರ್ಯಕ್ಕಾಗಿ ತಮ್ಮ ಸ್ವಾತಂತ್ರ್ಯ ನಿರಾಕರಿಸಿ ಇದೀಗ ಬಿಡುಗಡೆಗೊಂಡ ಅಹ್ಮದ್ ಕಥ್ರದಾ ವಿನಮ್ರತೆ, ಸ್ವಾಭಿಮಾನ ಮತ್ತು ಮಾನವಪ್ರೇಮಕ್ಕೆ ಸಾಕ್ಷಿಯಾಗಿದ್ದಾರೆ.

## ಮಂಡೇಲಾ ಬಿಡುಗಡೆ

೧೯೯೦ನೇ ಫೆಬ್ರುವರಿ ೨ರಂದು ಎ.ಎನ್.ಸಿ. ಮೇಲೆ ಹೇರಿದ ನಿಷೇಧವನ್ನು ತೆಗೆಯಲಾಯಿತು. ಫೆಬ್ರುವರಿ ೧೧ರಂದು ಮಂಡೇಲಾ ಅವರನ್ನು ಬಿಡುಗಡೆ ಮಾಡಲಾಯಿತು. ಕರಿಯರು ಪ್ರಜಾಪ್ರಭುತ್ವಕ್ಕಾಗಿ ಹೋರಾಟವನ್ನು ಮುಂದುವರಿಸಬೇಕೆಂದು ಅವರು ಬಿಡುಗಡೆಯ ದಿನದಂದೇ ಕರೆ ನೀಡಿದರು. ಸ್ಟಾರ್ ಪತ್ರಿಕೆ ಅವರ ಸಂದರ್ಶನವನ್ನು ಪ್ರಕಟಿಸಿತು.

ಬಿಡುಗಡೆಯ ನಂತರ ಕೇಪ್ ಟೌನಿನ ನಗರ ಭವನದ ಹೊರಗಡೆ ೫ ಲಕ್ಷಕ್ಕೂ ಹೆಚ್ಚು ಸೇರಿದ್ದ ಜನತೆಗೆ ಶಾಂತಿ, ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯದ ಶುಭ ಕೋರಿದರು. ನಾವು ನಿಮ್ಮ ಮುಂದೆ ಪ್ರವಾದಿ ಆಗಿ ನಿಂತಿಲ್ಲ, ಆದರೆ ಜನತೆಯ ವಿನಮ್ರ ಸೇವಕವಾಗಿ ನಿಂತಿದ್ದೇನೆ ಎಂದರು. ಕರಿಯರು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಾನತೆ ಪಡೆಯುವವರೆಗೆ ತಮ್ಮ ಹೋರಾಟ ಮುಂದುವರಿಯುವುದು ಎಂದು ಮಂಡೇಲಾ ಘೋಷಿಸಿದರು. ಬಿಳಿಯ ಅಲ್ಪಸಂಖ್ಯಾತರು ತಮ್ಮ ಪ್ರಾಬಲ್ಯವನ್ನು ಹೇರುವವರೆಗೆ ದಕ್ಷಿಣ ಆಫ್ರಿಕಾದಲ್ಲಿ ಶಾಂತಿ ನೆಲೆಸಲಾರದು ಎಂದು ಎಚ್ಚರಿಸಿದರು. ದುರ್ದೈವದಿಂದ ಬಿಳಿಯರು ಪ್ರಜಾಸತ್ತೆಯ ವಾಸ್ತವತೆಗೆ ಹೆದರುತ್ತಾರೆ ಎಂದು ಅವರು ವಿಷಾದ ವ್ಯಕ್ತಪಡಿಸಿದರು. ಅಪಾರ್ಥೈಡ್ ನೀತಿ ಇರುವವರೆಗೆ ಸಶಸ್ತ್ರ ಹೋರಾಟ ಮುಂದುವರಿಯುವುದು ಎಂದು ಅವರು ೧೯೯೦ನೇ ಫೆಬ್ರುವರಿ ೧೨ರಂದು ಸ್ಪಷ್ಟಪಡಿಸಿದರು.

ಶಾಂತಿಪ್ರಿಯ ನೆಲ್ಸನ್ ಮಂಡೇಲಾ ಅವರು ಸಶಸ್ತ್ರ ಹೋರಾಟದ ನಿರ್ಧಾರ ಕೈಗೊಳ್ಳುವಂಥ ಪರಿಸ್ಥಿತಿ ಸೃಷ್ಟಿಸಿರುವಂಥ ವರ್ಣಭೇದ ನೀತಿಯ ವಿರುದ್ಧ ಜಗತ್ತಿನಾದ್ಯಂತ ಜನ ಆಂದೋಲನ ತೀವ್ರಗೊಳಿಸುವ ಅವಶ್ಯಕತೆ ಇಂದು ಹಿಂದೆಂದಿಗಿಂತಲೂ ಹೆಚ್ಚಿದೆ. ಅಪಾರ್ಥೈಡ್ ವಿರುದ್ಧದ ಜಂಟೀ ಹೋರಾಟಕ್ಕೆ ಸಂಬಂಧಿಸಿದಂತೆ ನೆಲ್ಸನ್ ಮಂಡೇಲಾ

ಅವರು ಅನೇಕ ಸಮಸ್ಯೆಗಳನ್ನು ಬಗೆಹರಿಸಬೇಕಾಗಿದೆ. ದಕ್ಷಿಣ ಆಫ್ರಿಕಾದಲ್ಲಿ ೬೦ ಲಕ್ಷ ಜುಲುಗಳಿದ್ದಾರೆ. ಅತಿ ಹೆಚ್ಚು ಜನಸಂಖ್ಯೆ ಇರುವ ಕರಿಯ ಜನಾಂಗವಿದು. ಜುಲು ಲ್ಯಾಂಡಿನ ನಾಯಕ ಬುಥಲೆಜಿಯ ರಾಜಕೀಯ ಸಂಘಟನೆಯಾದ ಇಂಕಥಾ ಚಳವಳಿಯಲ್ಲಿ ೧೦ ಲಕ್ಷ ಜುಲುಗಳಿದ್ದಾರೆ. ಬಂಟುಸ್ತಾನಕ್ಕೆ ಸಂಬಂಧಿಸಿದಂತೆ ಇದು ಅತಿ ಪ್ರಬಲ ಸಂಘಟನೆ. ಈ ಸಂಘಟನೆ ಎ.ಎನ್.ಸಿ. ಮತ್ತು ಸರ್ವಪಕ್ಷಗಳ ಯುನೈಟೆಡ್ ಡೆಮೊಕ್ರಟಿಕ್ ಫ್ರಂಟ್ ಜೊತೆ ಸಹಕರಿಸಿದರೆ ಅಪಾರ್ಥೈಡ್ ವಿರುದ್ಧದ ಹೋರಾಟ ಇನ್ನೂ ಪ್ರಬಲವಾಗುತ್ತದೆ.

ಜುಲುಗಳಲ್ಲಿ ಬಹಳಷ್ಟು ಯುವಕರು ಎ.ಎನ್.ಸಿ. ಪ್ರತಿಪಾದಕರಿದ್ದಾರೆ. ಅವರು ಮತ್ತು ಇಂಕಥಾ ಕಾರ್ಯಕರ್ತರ ಮಧ್ಯೆ ಕೂಡ ಘರ್ಷಣೆಗಳು ಉಂಟಾಗುತ್ತದೆ. ಇಂಕಥಾ ಕಾರ್ಯಕರ್ತರು ಭಾರತೀಯರ ಮತ್ತು ಬೇರೆ ಕರಿಯ ಜನಾಂಗದವರು ಕೂಡ ಘರ್ಷಣೆಗೆ ಇಳಿಯುವುದು ಸಾಮಾನ್ಯವಾಗಿದೆ. ಈ ಸಮಸ್ಯೆಯನ್ನು ಬಗೆಹರಿಸುವಲ್ಲಿ ನೆಲ್ಸನ್ ಮಂಡೇಲಾ ಹೆಚ್ಚಿನ ಅಸಕ್ತಿ ತಾಳಿದ್ದಾರೆ. ಎಲ್ಲ ಜನಾಂಗಗಳ ಕರಿಯರ, ಭಾರತೀಯರ, ಅಪಾರ್ಥೈಡ್ ಅನ್ನು ವಿರೋಧಿಸುವ ಬಿಳಿಯರ ಹಾಗೂ ಇವರೆಲ್ಲರ ರಕ್ತಸಂಬಂಧದಿಂದ ಹುಟ್ಟಿ ಬೆಳೆದ ಮತ್ತು ಹೊಸ ಸಂಸ್ಕೃತಿಯ ಪ್ರತೀಕವಾದ ಮಿಶ್ರವರ್ಣೀಯರ ಒಗ್ಗಟ್ಟಿನಿಂದ ಮಾತ್ರ ಹೊಸ ಸಮಾಜದ ನಿರ್ಮಾಣ ಸಾಧ್ಯ ಎಂಬುದು ಮಂಡೇಲಾರ ಸ್ಪಷ್ಟ ನಿಲುವು.

ದಕ್ಷಿಣ ಆಫ್ರಿಕಾದಲ್ಲಿ ಮೊದಲಿನಿಂದಲೂ ವರ್ಣಭೇದ ನೀತಿ ವಿರುದ್ಧ ಹೋರಾಡುತ್ತಿರುವ ಭಾರತೀಯರ ಬಗ್ಗೆ ಅವರಿಗೆ ವಿಶೇಷವಾದ ಪ್ರೀತಿ ಇದೆ. ೧೯೯೦ನೇ ಫೆಬ್ರುವರಿ ೨೫ರಂದು ಡರ್ಬಾನ್‌ನಲ್ಲಿ ಬೃಹತ್ ಬಹಿರಂಗ ಸಭೆಯನ್ನು ಉದ್ದೇಶಿಸಿ ಮಾತನಾಡುವಾಗ ಅವರು ನತಾಲ್ ಪ್ರಾಂತ್ ನಲ್ಲಿನ ಭಾರತೀಯರ ಬಗ್ಗೆ ಕಾಳಜಿ ವ್ಯಕ್ತಪಡಿಸಿದರು. ಜುಲುಗಳು ಅವರ ಮೇಲೆ ಇತ್ತೀಚೆಗೆ ಮಾಡಿದ ಹಲ್ಲೆಯನ್ನು ಖಂಡಿಸಿದರು. ಭಾರತೀಯರ ಮತ್ತು ಆಫ್ರಿಕಾ ಜನಾಂಗಗಳ ಮಧ್ಯ ಒಡಕನ್ನುಂಟು ಮಾಡುವುದೆಂದರೆ ವರ್ಣಭೇದ ನೀತಿಗೆ ಸಹಾಯ ಮಾಡಿದಂತೆ ಎಂದ ಅವರು ಅಂಥ ಶಕ್ತಿಗಳಿಗೆ ಅವಕಾಶ ಕೊಡಬಾರದು ಎಂದು ಜನತೆಗೆ ಕರೆ ನೀಡಿದರು. ಅಂಥವರು ವಿಮೋಚನಾ ಹೋರಾಟದ ವೈರಿಗಳು ಎಂದು ತಿಳಿಸಿದರು.

ದಕ್ಷಿಣ ಆಫ್ರಿಕಾದಲ್ಲಿ ಕರಿಯರಲ್ಲಿ ಸಂಘಟಿತ ರಾಜಕೀಯ ಪ್ರಜ್ಞೆ ಮೂಡಿಸಿದ ಮೊದಲ ಪಕ್ಷವೆಂದರೆ ೧೮೯೦ಳರಲ್ಲಿ ಮಹಾತ್ಮಾಗಾಂಧಿ ಅವರು ಸ್ಥಾಪಿಸಿದ ನತಾಲ್ ಇಂಡಿಯನ್ ಕಾಂಗ್ರೆಸ್ ಎಂದು ಅವರು ಸ್ಮರಿಸಿದರು. ಡಾ. ಯಸೂಫ್ ದಾದೂ, ಡಾ. ಮೋಂಟಿ, ನಾಯ್ಕರ್ ಮತ್ತು ಡಾ. ಕ್ಷುಮಾ ಅವರ 'ಡಾಕ್ಟರ್ಸ್ ಪ್ಯಾಕ್ಟ್' ಅನ್ನು ಜ್ಞಾಪಿಸಿ ಅದರ ಮಹತ್ವವನ್ನು ತಿಳಿ ಹೇಳಿದರು.

ಮಂಡೇಲಾ ಅವರ ಪ್ರತಿ ಮಾತಿಗೂ ಇಂದು ಅವರ ನಾಡಿನಲ್ಲಿ ಮತ್ತು ಜಗತ್ತಿನಲ್ಲಿ ಬೆಲೆ ಇದೆ. ಅವರ ಮಾರ್ಗದರ್ಶನದಲ್ಲಿ ಅಪಾರ್ಥೈಡ್ ವಿರೋಧಿ ಸಂಯುಕ್ತ ಹೋರಾಟ ಯಶಸ್ವಿ ಅಗುವುದರಲ್ಲಿ ಸಂದೇಹವಿಲ್ಲ.

## ಸ್ವಾತಂತ್ರ್ಯ ಘೋಷಣೆ

(ದಕ್ಷಿಣ ಆಫ್ರಿಕಾದ ಹೋರಾಟಗಾರರ ಪ್ರಣಾಳಿಕೆ)

ನಮ್ಮ ಇಡೀ ದೇಶ ಮತ್ತು ಲೋಕ ತಿಳಿದುಕೊಳ್ಳಲೆಂದು ನಾವು ದಕ್ಷಿಣ ಆಫ್ರಿಕಾದವರು ಸಾರಿ ಹೇಳುತ್ತಿದ್ದೇವೆ.

ಕರಿಯರ-ಬಿಳಿಯರ ಅಲ್ಲಿ ಬದುಕುವವರೆಲ್ಲರ ಸೊತ್ತು ದಕ್ಷಿಣ ಆಫ್ರಿಕಾ. ಎಲ್ಲರಿಚ್ಛೆಯ ಮೇಲೆ ನಿಲ್ಲದ ಸರ್ಕಾರಕ್ಕೆ ಅಧಿಕಾರ ತನಗುಂಟೆಂದು ಹೇಳುವ ಹಕ್ಕಿಲ್ಲ.

ಅನ್ಯಾಯ ಅಸಮಾನತೆಯ ಸರ್ಕಾರದಿಂದಾಗಿ ಸ್ವಾತಂತ್ರ್ಯ, ಶಾಂತಿ ಮತ್ತು ನೆಲದ ಜನ್ಮಸಿದ್ಧ ಹಕ್ಕುಗಳು ಲೂಟಿಗೊಳಗಾಗಿವೆ;

ಸಮಾನ ಹಕ್ಕು ಮತ್ತು ಅವಕಾಶಗಳನ್ನು ಅನುಭವಿಸುತ್ತ ನಮ್ಮ ಜನ ಸೋದರತೆಯಲ್ಲಿ ಬದುಕುವವರೆಗೆ ನಮ್ಮ ದೇಶ ಸಮೃದ್ಧಿಯಾಗದು, ವಿಮೋಚನೆಗೊಳ್ಳದು;

ಎಲ್ಲರಿಚ್ಛೆಯ ಮೇಲೆ ನಿಂತ ಪ್ರಜಾಸತ್ತಾತ್ಮಕ ರಾಷ್ಟ್ರ ಮಾತ್ರ ವರ್ಣ, ಕುಲ, ನಂಬಿಕೆ ಮತ್ತು ಲಿಂಗಭೇದಗಳಿಲ್ಲದೆ ಜನರೆಲ್ಲರ ಜನ್ಮಸಿದ್ಧ ಹಕ್ಕನ್ನು ರಕ್ಷಿಸಬಲ್ಲದು;

ಆದ್ದರಿಂದ ನಾವು ದಕ್ಷಿಣ ಆಫ್ರಿಕಾದ ಜನತೆ, ಕರಿಯರು ಮತ್ತು ಬಿಳಿಯರು ಸಮಾನರು, ದೇಶವಾಸಿಗಳು ಹಾಗೂ ಸಹೋದರರು ಎಂಬ ಸ್ವಾತಂತ್ರ್ಯ ಪ್ರಣಾಳಿಕೆಯನ್ನು ಅಂಗೀಕರಿಸುವೆವು, ಇಲ್ಲಿ ಬಯಸಿದ ಪ್ರಜಾಸತ್ತಾತ್ಮಕ ಬದಲಾವಣೆಗಳು ಈಡೇರುವವರೆಗೆ ಎದೆಗುಂದದೆ ಬಲಗುಂದದೆ ಒಂದಾಗಿ ಹೋರಾಡುವ ಪ್ರತಿಜ್ಞೆ ಮಾಡುವೆವು.

### ಬಂದೇ ಬರುವುದು ಜನರಾಳುವ ದಿನ

ಕಾನೂನು ರಚಿಸುವ ಎಲ್ಲ ಮಂಡಳಿಗಳಿಗೂ ಅಭ್ಯರ್ಥಿಯಾಗಿ ನಿಲ್ಲುವ ಮತ್ತು ಮತ ಚಲಾಯಿಸುವ ಹಕ್ಕು ಪ್ರತಿಯೊಬ್ಬ ಪುರುಷ ಮತ್ತು ಸ್ತ್ರೀಗೆ ಇರುವುದು, ಎಲ್ಲರಿಗೂ ದೇಶದ ಆಡಳಿತದಲ್ಲಿ ಭಾಗಿಯಾಗುವ ಅಧಿಕಾರ ಬರುವುದು. ಜನರ ಹಕ್ಕುಗಳು ಕುಲ-ಬಣ್ಣ-ಲಿಂಗಭೇದಗಳಿಲ್ಲದೆ ಸಮಾನವಾಗಿರುವವು.(ಬಿಳಿಯರ) ಅಲ್ಪಸಂಖ್ಯಾತ ಆಳ್ವಿಕೆಯ ಎಲ್ಲ ಮಂಡಳಿ, ಪರಿಷತ್ ಮತ್ತು ಪ್ರಾಧಿಕಾರಗಳ ಸ್ಥಾನಗಳಲ್ಲಿ ಸ್ವಯಂ ಸರ್ಕಾರದ ಪ್ರಜಾಸತ್ತಾತ್ಮಕ ಅಂಗಗಳು ಬರುವವು.

### ಎಲ್ಲ ರಾಷ್ಟ್ರೀಯ ಪಂಗಡಗಳಿಗೆ ಸಮಾನ ಹಕ್ಕುಗಳು

ಎಲ್ಲ ರಾಷ್ಟ್ರೀಯ ಪಂಗಡಗಳಿಗೆ ಮತ್ತು ಜನಾಂಗಗಳಿಗೆ ರಾಷ್ಟ್ರೀಯ ಮಂಡಳಿಗಳಲ್ಲಿ, ನ್ಯಾಯಾಲಯ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಸಮಾನ ಹಕ್ಕುಗಳು ಲಭಿಸುವವು. ತಮ್ಮ ಭಾಷೆಗಳನ್ನು ಬಳಸಿಕೊಳ್ಳಲು, ಪರಂಪರೆ ಮತ್ತು ಜನಪದ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸಲು ಜನರು ಸಮಾನ ಹಕ್ಕುಗಳನ್ನು ಪಡೆಯುವರು. ಅವರವರ ಜನಾಂಗ ಮತ್ತು ರಾಷ್ಟ್ರೀಯ

ಹಿರಿಮೆಗಳು ಅಪಮಾನಕ್ಕೀಡಾಗದಂತೆ ಕಾನೂನುಬದ್ಧವಾಗಿ ರಾಷ್ಟ್ರೀಯ ಪಂಗಡಗಳನ್ನು ರಕ್ಷಿಸಲಾಗುವುದು. ಜನಾಂಗ, ಬಣ್ಣ ಅಥವಾ ರಾಷ್ಟ್ರೀಯ ಭೇದಭಾವ ಮತ್ತು ತಿರಸ್ಕಾರಗಳನ್ನು ಕಲಿಸುವುದು, ಆಚರಿಸುವುದು ಶಿಕ್ಷಾರ್ಹ ಅಪರಾಧವಾಗುವುದು. ಎಲ್ಲಾ ವರ್ಣದ್ವೇಷ ನೀತಿಯ ಕಾನೂನು ಮತ್ತು ಆಚರಣೆಗಳನ್ನು ಬಹಿಷ್ಕರಿಸುವುದು. ದೇಶದ ಸಂಪತ್ತಿನಲ್ಲಿ ಜನರೆಲ್ಲ ಪಾಲ್ಗೊಳ್ಳುವರು. ರಾಷ್ಟ್ರೀಯ ಸಂಪತ್ತನ್ನು ಮತ್ತು ದಕ್ಷಿಣ ಆಫ್ರಿಕಾದವರ ಪರಂಪರೆಯನ್ನು ಜನತೆಗಾಗಿ ಸಂರಕ್ಷಿಸುವುದು. ಭೂಗರ್ಭದ ಸಂಪತ್ತು, ಬ್ಯಾಂಕ್ ಮತ್ತು ಏಕಸ್ವಾಮ್ಯ ಉದ್ದಿಮೆಗಳನ್ನು ಇಡಿಯಾಗಿ ಜನತೆಯ ಮಾಲೀಕತ್ವಕ್ಕೆ ಒಳಪಡಿಸುವುದು. ಜನರ ಹಿತರಕ್ಷಣೆಗೆ ಸಹಕಾರಿಯಾಗುವಂತೆ ಇತರ ಉದ್ದಿಮೆ ಮತ್ತು ವ್ಯವಹಾರಗಳನ್ನು ಹಿಡಿತದಲ್ಲಿಡುವುದು. ಯಾವುದೇ ಉತ್ಪಾದನೆ, ಎಲ್ಲಾ ವ್ಯವಹಾರ ಮತ್ತು ಕುಶಲ ವೃತ್ತಿಗಳಲ್ಲಿ ಎಲ್ಲರೂ ಸಮಾನ ಹಕ್ಕುಗಳನ್ನು ಪಡೆಯುವರು.

### ಉಳುವವರಿಗೆಲ್ಲ ಭೂಮಿಯಲ್ಲಿ ಪಾಲು

ಜನಾಂಗೀಯ ಆಧಾರದ ಮೇಲೆ ಭೂ ಒಡೆತನಕ್ಕೆ ಹಾಕಲಾದ ನಿರ್ಬಂಧವನ್ನು ತೆಗೆಯುವುದು. ಬರಗಾಲ ಮತ್ತು ಭೂ ಬಯಕೆ ನೀಗಿಸಲು ಭೂಮಿಯನ್ನು ಉಳುವವರಿಗೆ ಪುನರ್ ಹಂಚಲಾಗುವುದು. ಮಣ್ಣಿನ ರಕ್ಷಣೆ ಮತ್ತು ಬೇಸಾಯಕ್ಕೆ ಸಹಾಯಕವಾಗಲು ಉಪಕರಣಗಳು, ಬೀಜ, ಟ್ರಾಕ್ಟರ್ ಮತ್ತು ಅಣೆಕಟ್ಟುಗಳ ಮೂಲಕ ಸರ್ಕಾರ ರೈತರಿಗೆ ಸಹಕಾರಿಯಾಗುವುದು. ಭೂಮಿಯಲ್ಲಿ ದುಡಿಯುವವರಿಗೆಲ್ಲ ಚಲನವಲನ ಸ್ವಾತಂತ್ರ್ಯ ಭರವಸೆ ನೀಡಲಾಗುವುದು. ಜನರಿಚ್ಛೆಯಂತೆ ಭೂಮಿಯನ್ನು ಹಂಚಲಾಗುವುದು. ಜನರ ದನಕರುಗಳ ದರೋಡೆಯಾಗದಂತೆ ನೋಡಿಕೊಳ್ಳಲಾಗುವುದು.

### ನ್ಯಾಯದ ಮುಂದೆ ಎಲ್ಲರೂ ಒಂದೆ

ಯೋಗ್ಯ ವಿಚಾರಣೆ ಇಲ್ಲದೆ ಯಾರನ್ನೂ ಜೈಲಿಗೆ ಹಾಕಲಾಗದು. ಗಡಿಪಾರು ಮಾಡಲಾಗದು ಅಥವಾ ತಡೆಯಲಾಗದು. ಯಾವುದೇ ಸರ್ಕಾರ ಅಧಿಕಾರಿಯ ಆಜ್ಞೆಯಿಂದ ಯಾರನ್ನೂ ದಂಡಿಸಲಾಗದು. ನ್ಯಾಯಾಲಯಗಳು ಎಲ್ಲರ ಪ್ರತಿನಿಧಿಗಳು. ಗಂಭೀರ ಅಪರಾಧಗಳಿಗೆ ಮಾತ್ರ ಜೈಲು ಶಿಕ್ಷೆ. ಶಿಕ್ಷೆಯ ಗುರಿ ಪುನರ್ಶಿಕ್ಷಣ. ಪೊಲೀಸ್ ದಳ ಮತ್ತು ಸೈನ್ಯದಲ್ಲಿ ಎಲ್ಲರಿಗೂ ಸಮಾನ ತಳಹದಿಯ ಮೇಲೆ ಅವಕಾಶ ದೊರೆಯುವುದು. ಅವು ಇರುವುದು ಜನರ ರಕ್ಷಣೆ ಮತ್ತು ಸಹಾಯಕ್ಕಾಗಿ. ಜನಾಂಗ, ಬಣ್ಣ ಅಥವಾ ನಂಬಿಕೆಗಳ ಆಧಾರದ ಮೇಲೆ ಪಕ್ಷಪಾತ ಮಾಡುವ ಎಲ್ಲಾ ಕಾಯ್ದೆಗಳನ್ನು ರದ್ದುಗೊಳಿಸಲಾಗುವುದು.

### ಸರ್ವರಿಗೂ ಸಮಾನ ಹಕ್ಕುಗಳು

ಮಾತನಾಡುವ, ಸಂಘಟಿಸುವ, ಜೊತೆಗೂಡುವ, ಪ್ರಕಟಿಸುವ, ಧರ್ಮೋಪದೇಶ ಮಾಡುವ ಪೂಜಿಸುವ ಮತ್ತು ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುವ ಎಲ್ಲರ ಹಕ್ಕನ್ನು ಕಾನೂನಿನ ಮೂಲಕ ರಕ್ಷಿಸುವ ಭರವಸೆ ನೀಡಲಾಗುವುದು. ಪೊಲೀಸ್

ಮುತ್ತಿಗೆಯಾದ ಮನೆಯ ಗೋಪ್ಯ ಬಹಿರಂಗವಾಗದಂತೆ ಕಾಯ್ದೆ ಮೂಲಕ ರಕ್ಷಿಸಲಾಗುವುದು. ಹಳ್ಳಿಯಿಂದ ಪಟ್ಟಣಕ್ಕೆ, ಪ್ರಾಂತದಿಂದ ಪ್ರಾಂತಕ್ಕೆ ಮತ್ತು ದಕ್ಷಿಣ ಆಫ್ರಿಕಾದಿಂದ ವಿದೇಶಕ್ಕೆ ಪ್ರವಾಸ ಕೈಗೊಳ್ಳಲು ಯಾರಿಗೂ ಅಡೆತಡೆಗಳಾಗದಂತೆ ನೋಡಿಕೊಳ್ಳಲಾಗುವುದು. ಇಂಥ ಸ್ವಾತಂತ್ರ್ಯಗಳಿಗೆ ಅಡ್ಡಿಯಾಗಿರುವ ಪಾಸ್ ಕಾಯ್ದೆಗಳು, ಪರ್ಮಿಟ್‌ಗಳು ಮತ್ತು ಇತರ ಕಾಯ್ದೆಗಳನ್ನು ರದ್ದುಗೊಳಿಸಲಾಗುವುದು.

### ಜನರಿಗೆಲ್ಲ ಕೆಲಸ ಮತ್ತು ಭದ್ರತೆ

ಕೆಲಸಗಾರರಿಗೆಲ್ಲ ಕಾರ್ಮಿಕ ಸಂಘಗಳನ್ನು ರಚಿಸುವ, ತಮ್ಮ ನಾಯಕರ ಆಯ್ಕೆ ಮಾಡುವ ಮತ್ತು ಮಾಲೀಕರೊಂದಿಗೆ ವೇತನ ಒಪ್ಪಂದ ಮಾಡಿ ಕೊಳ್ಳುವ ಸ್ವಾತಂತ್ರ್ಯ ಇರುವುದು. ಎಲ್ಲರೂ ಕೆಲಸ ಮಾಡುವ ಇಲ್ಲವೆ ನಿರುದ್ಯೋಗ ಭತ್ಯ ಪಡೆಯುವ ಹಕ್ಕು ಮತ್ತು ಕರ್ತವ್ಯವನ್ನು ಸರ್ಕಾರ ಮಾನ್ಯ ಮಾಡುತ್ತದೆ. ಎಲ್ಲಾ ಜನಾಂಗಗಳ ಗಂಡಸರು-ಹೆಂಗಸರು ಸಮಾನ ಕೆಲಸಕ್ಕೆ ಸಮಾನ ವೇತನ ಪಡೆಯುವರು. ಎಲ್ಲಾ ಕೆಲಸಗಾರರಿಗೆ ವಾರಕ್ಕೆ ನಲವತ್ತು ಗಂಟೆಗಳ ಕೆಲಸವಿರುವುದು. ರಾಷ್ಟ್ರೀಯ ಕನಿಷ್ಠ ವೇತನ, ಕಾಯಿಲೆ ರಜೆ ಮತ್ತು ವೃತ್ತಿನಿರತ ತಾಯಂದಿರಿಗೆ ಪೂರ್ಣ ವೇತನದೊಂದಿಗೆ ಹೆರಿಗೆ ರಜೆ ನೀಡಲಾಗುವುದು. ಗಣಿಗೆಲಸಗಾರರು, ಮನೆಗೆಲಸಗಾರರು, ಕೃಷಿ ಕಾರ್ಮಿಕರು ಸರ್ಕಾರಿ ಅಧಿಕಾರಿಗಳು ಮತ್ತು ಇತರ ಕೆಲಸಗಾರರು ಒಂದೇ ತೆರನಾದ ಹಕ್ಕನ್ನು ಹೊಂದುವರು. ಬಾಲ ಕಾರ್ಮಿಕರ ದುಡಿಮೆ, ಸರ್ವಕೆಲಸಗಳ ದುಡಿಮೆ, ಜೀತ ಪದ್ಧತಿ ಮತ್ತು ಗುತ್ತಿಗೆ ಕೂಲಿಯನ್ನು ರದ್ದುಗೊಳಿಸಲಾಗುವುದು.

### ವಿದ್ಯೆ ಸಂಸ್ಕೃತಿಗಳ ಬಾಗಿಲು ತೆರೆಯುವುದು

ನಮ್ಮ ಸಾಂಸ್ಕೃತಿಕ ಬದುಕಿನ ವಿಕಾಸಕ್ಕಾಗಿ ಸರ್ಕಾರ ರಾಷ್ಟ್ರೀಯ ಪ್ರತಿಭೆಯನ್ನು ಅಭಿವೃದ್ಧಿಪಡಿಸುವುದು ಮತ್ತು ಪ್ರೋತ್ಸಾಹಿಸುವುದು. ಹೊರದೇಶಗಳ ಸಂಪರ್ಕ, ಗ್ರಂಥ ಮತ್ತು ವಿಚಾರಗಳ ಮುಕ್ತ ವಿನಿಮಯದ ಮೂಲಕ ಎಲ್ಲರಿಗಾಗಿ ಮನುಕುಲದ ಸಾಂಸ್ಕೃತಿಕ ಭಂಡಾರಗಳೆಲ್ಲ ತೆರೆಯುವುವು. ತಮ್ಮ ಜನರನ್ನು ಮತ್ತು ಸಂಸ್ಕೃತಿಯನ್ನು ಪ್ರೀತಿಸುವುದು, ಮಾನವ ಸೋದರತ್ವ, ಸ್ವಾತಂತ್ರ್ಯ ಮತ್ತು ಶಾಂತಿಯನ್ನು ಗೌರವಿಸುವಂತೆ ಯುವಕರಿಗೆ ಕಲಿಸುವುದು ಶಿಕ್ಷಣದ ಉದ್ದೇಶವಾಗಿರುವುದು. ಎಲ್ಲ ಮಕ್ಕಳಿಗೂ ಸಮನಾದ ಸಾರ್ವತ್ರಿಕವಾದ ಕಡ್ಡಾಯ ಮತ್ತು ಉಚಿತ ಶಿಕ್ಷಣವಿರುವುದು. ಅರ್ಹತೆಯ ಆಧಾರದ ಮೇಲೆ ಸರ್ಕಾರಿ ಭತ್ಯ ಮತ್ತು ವಿದ್ಯಾರ್ಥಿ ವೇತನ ನೀಡಿ ಉನ್ನತ ಶಿಕ್ಷಣ ಹಾಗೂ ತಾಂತ್ರಿಕ ತರಬೇತಿ ಕೊಡಲಾಗುವುದು. ಸಾಮೂಹಿಕ ರಾಜ್ಯ ಶಿಕ್ಷಣ ಯೋಜನೆ ಮೂಲಕ ವಯಸ್ಕರ ನಿರಕ್ಷರತೆಯನ್ನು ಹೋಗಲಾಡಿಸುವುದು. ಎಲ್ಲರಿಗೂ ಇರುವ ಹಕ್ಕುಗಳು ಶಿಕ್ಷಕರಿಗೂ ಇರುವುವು. ಸಾಂಸ್ಕೃತಿಕ ಜೀವನ, ಆಟ ಮತ್ತು ಶಿಕ್ಷಣದಲ್ಲಿನ ವರ್ಣಭೇದ ನೀತಿಯ್ನನು ಅಳಿಸಿಹಾಕಲಾಗುವುದು.

### ಮನೆ, ಭದ್ರತೆ ಮತ್ತು ವಿರಾಮ

ಮನೆ, ಭದ್ರತೆ ಮತ್ತು ವಿಶ್ರಾಂತಿ ಸಿಗುವುದು, ಬಯಸಿದಲ್ಲಿ ಬದುಕುವ, ಅಚ್ಚುಕಟ್ಟಾಗಿ ಮನೆ ಕಟ್ಟುವ ತಮ್ಮ ಕುಟುಂಬಕ್ಕೆ ಆರಾಮ - ಭದ್ರತೆ ಒದಗಿಸುವ ಹಕ್ಕಿರುವುದು. ಖಾಲಿ

ಬಿದ್ದಿರುವ ಗೃಹ ನಿವೇಶನಗಳು ಜನರಿಗೆ ದೊರಕುವುವು. ಬಾಡಿಗೆ ಮತ್ತು ಬೆಲೆಗಳು ಇಳಿಯುವವು, ಆಹಾರದ ಕೊರತೆ ಇರದು. ಯಾರೂ ಹಸಿವಿನಿಂದ ಬಳಲರು. ಸರ್ಕಾರ ಮುಂಜಾಗೃತಾ ಆರೋಗ್ಯ ಯೋಜನೆಯನ್ನು ಪ್ರಾರಂಭಿಸುವುದು. ಎಲ್ಲರಿಗೂ ಉಚಿತ ವೈದ್ಯಕೀಯ ನೆರವು ಮತ್ತು ಚಿಕ್ಕ ಮಕ್ಕಳ ಬಗ್ಗೆ ವಿಶೇಷ ಕಾಳಜಿ ವಹಿಸಲಾಗುವುದು.

ಕೊಳಚೆ ಪ್ರದೇಶಗಳನ್ನು ನಿರ್ಮೂಲನ ಮಾಡಿ ಹೊಸ ಉಪನಗರಗಳನ್ನು ನಿರ್ಮಿಸಲಾಗುವುದು. ಅಲ್ಲಿ ಸಾರಿಗೆ, ರಸ್ತೆ, ವಿದ್ಯುತ್, ಆಟದ ಬಯಲು, ಶಿಶುವಿಹಾರ ಮತ್ತು ಸಮುದಾಯ ಕೇಂದ್ರಗಳಿರುವವು. ವೃದ್ಧರು, ಅನಾಥರು, ಅಶಕ್ತರು ಮತ್ತು ರೋಗಿಗಳನ್ನು ಸರ್ಕಾರ ನೋಡಿಕೊಳ್ಳುವುದು. ವಿಶ್ರಾಂತಿ, ಪುರಸೊತ್ತು ಮತ್ತು ಉಲ್ಲಾಸದ ಚಟುವಟಿಕೆಗಳು ಎಲ್ಲರ ಹಕ್ಕಾಗುವವು. ಬೇಲಿಯಿಂದ ಸುತ್ತುವರಿದ ಪ್ರದೇಶ (ಬಂಟುಸ್ಥಾನ್) ಮತ್ತು ಘೆಟ್ಟೊ(ನಿರ್ದಿಷ್ಟ ವಾಸಸ್ಥಳ)ಗಳನ್ನು ನಿರ್ನಾಮಗೊಳಿಸುವುದು. ಮನೆಮುರುಕ ಕಾಯ್ದೆಗಳನ್ನು ಕಿತ್ತೊಗೆಯ ಲಾಗುವುದು.

### ಶಾಂತಿ ಮತ್ತು ಮೈತ್ರಿ ಇರುವುದು

ದಕ್ಷಿಣ ಆಫ್ರಿಕಾ ಸಂಪೂರ್ಣ ಸ್ವತಂತ್ರ ದೇಶವಾಗುವುದು. ಅದು ಎಲ್ಲಾ ದೇಶಗಳ ಹಕ್ಕು ಮತ್ತು ಪ್ರಭುತ್ವವನ್ನು ಗೌರವಿಸುವುದು. ವಿಶ್ವಶಾಂತಿಯನ್ನು ಕಾಪಾಡುವುದಕ್ಕಾಗಿ ಯುದ್ಧ ಬಿಟ್ಟು ಸಂವಿಧಾನದ ಮೂಲಕ ಎಲ್ಲಾ ಅಂತರ ರಾಷ್ಟ್ರೀಯ ವಿವಾದಗಳನ್ನು ಬಗೆಹರಿಸಿಕೊಳ್ಳುವುದು. ಸಮಾನ ಹಕ್ಕು, ಅವಕಾಶ ಮತ್ತು ಎಲ್ಲರ ಘನತೆಯನ್ನು ಎತ್ತಿ ಹಿಡಿಯುವುದರ ಮೂಲಕ ನಮ್ಮ ಎಲ್ಲಾ ಜನಾಂಗಗಳ ಮಧ್ಯ ಶಾಂತಿಯನ್ನು ರಕ್ಷಿಸುವುದು ಬಸುತೊಲ್ಯಾಂಡ್, ಬೆಚುವಾನಾ ಲ್ಯಾಂಡ್ ಮತ್ತು ಸ್ವಾಜಿಲ್ಯಾಂಡ್ ರಾಜ್ಯಗಳ ಜನತೆ ತಮ್ಮ ಭವಿಷ್ಯದ ಬಗ್ಗೆ ತಾವೇ ನಿರ್ಧರಿಸುವ ಸ್ವಾತಂತ್ರ್ಯ ಪಡೆಯುವರು. ಆಫ್ರಿಕಾ ಖಂಡದ ಎಲ್ಲ ಜನಾಂಗಗಳ ಸ್ವಾತಂತ್ರ್ಯ ಮತ್ತು ಸರ್ಕಾರದ ಹಕ್ಕನ್ನು ಪರಿಗಣಿಸಲಾಗುವುದು. ಅದುವೇ ನಿಕಟ ಸಹಕಾರದ ತಳಹದಿಯಾಗುವುದು.

ತಮ್ಮ ಜನ ಮತ್ತು ದೇಶವನ್ನು ಪ್ರೀತಿಸುವ ಎಲ್ಲರೂ ನಾವಿಲ್ಲಿ ಹೇಳುವಂತೆ ಈಗ ಹೇಳಲಿ: 'ಈ ವಿಮೋಚನೆಗಾಗಿ ಹೆಗಲಿಗೆ ಹೆಗಲು ಕೊಟ್ಟು ಬದುಕಿನುದ್ದಕ್ಕೂ ನಾವು ಸ್ವಾತಂತ್ರ್ಯ ಗಳಿಸುವವರೆಗೆ ಹೋರಾಡುತ್ತೇವೆ' ಎಂದು ಆತ್ಮವಿಶ್ವಾಸದಿಂದ ಹೇಳಿದರು. ದಕ್ಷಿಣ ಆಫ್ರಿಕಾವು ಸಂಪೂರ್ಣ ಸ್ವತಂತ್ರ ರಾಷ್ಟ್ರವಾಗಲು ಇಂತಹ ಹೋರಾಟಗಳು ಹೆಚ್ಚಿನ ಪ್ರಮಾಣದಲ್ಲಿ ಬೇಕಾಗಿತ್ತು.

### ಭಾರತಕ್ಕೆ ಒಂದು ಪತ್ರ

ಅಂತಾರಾಷ್ಟ್ರೀಯ ತಿಳಿವಳಿಕೆಗಾಗಿ ಇರುವ ಜವಾಹರಲಾಲ್ ನೆಹರೂ ಪ್ರಶಸ್ತಿಗಾಗಿ ಕಳೆದ ೨೭ ವರ್ಷಗಳಿಂದ ದಕ್ಷಿಣ ಆಫ್ರಿಕಾದ ಜೈಲಿನಲ್ಲಿದ್ದ ನೆಲ್ಸನ್ ಮಂಡೇಲಾ ಅವರನ್ನು ೧೯೭೯ರಲ್ಲಿ ಆಯ್ಕೆ ಮಾಡಲಾಯಿತು. ಆ ಸಂಬಂಧದಲ್ಲಿ ಅವರು ಆಗಸ್ಟ್ ೩, ೧೯೮೦

ರುದು ಈ ಪ್ರಶಸ್ತಿ ನೀಡುವ ಸಾಂಸ್ಕೃತಿಕ ಸಂಬಂಧಗಳ ಭಾರತೀಯ ಮಂಡಳಿಯ ಕಾರ್ಯದರ್ಶಿ ಶ್ರೀಮತಿ ಮನೋರಮಾ ಭಲ್ಲಾ ಅವರಿಗೆ ಪತ್ರ ಬರೆದರು. ಜೈಲು ಅಧಿಕಾರಿಗಳು ಆ ಪತ್ರವನ್ನು ತಡೆ ಹಿಡಿದರು. ಜೈಲಿನಿಂದ ರಹಸ್ಯವಾಗಿ ಕಳಿಸಿದ ಈ ಪತ್ರವನ್ನು ಸಾಂಸ್ಕೃತಿಕ ಸಂಬಂಧಗಳ ಭಾರತೀಯ ಮಂಡಳಿ ೧೯೮೧ನೆಯ ಆಗಸ್ಟ್ ೨೬ ರಂದು ಬಿಡುಗಡೆ ಮಾಡಿತು.

ಮಂಡೇಲಾ ಪರವಾಗಿ ಅವರ ಪತ್ನಿ ವಿನ್ನಿ ಮಂಡೇಲಾ ಅವರು ಪ್ರಶಸ್ತಿ ಪಡೆಯಲು ದಕ್ಷಿಣ ಆಫ್ರಿಕಾ ಸರ್ಕಾರ ಅನುಮತಿ ನೀಡಲಿಲ್ಲ. ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಅಧ್ಯಕ್ಷ ಆಲಿವರ್ ಟಾಂಬೊ ಅವರು ನವೆಂಬರ್ ೧೯೮೦ರಂದು ದೆಹಲಿಯಲ್ಲಿ ಪ್ರಶಸ್ತಿ ಸ್ವೀಕರಿಸಿದರು.

**ಪ್ರೀತಿಯ ಶ್ರೀಮತಿ ಭಲ್ಲಾ,**

'ಅಂತಾರಾಷ್ಟ್ರೀಯ ತಿಳಿವಳಿಕೆಗಾಗಿ ಇರುವ ಜವಾಹರಲಾಲ್ ನೆಹರೂ ಪ್ರಶಸ್ತಿ' ನೀಡಿ ನನ್ನನ್ನು ಗೌರವಿಸಿದ್ದಕ್ಕಾಗಿ, ಸಾಂಸ್ಕೃತಿಕ ಸಂಬಂಧಗಳ ಭಾರತೀಯ ಮಂಡಳಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆ ಮತ್ತು ಮೆಚ್ಚುಗೆ ವ್ಯಕ್ತಪಡಿಸುವುದಕ್ಕಾಗಿ ಬರೆಯುತ್ತಿದ್ದೇನೆ. ಈ ಪ್ರಶಸ್ತಿಗಾಗಿ ನನ್ನನ್ನು ಪ್ರತ್ಯೇಕಿಸಿ ಆಯ್ಕೆ ಮಾಡಿದ್ದರೂ ಇದು ನಿಜವಾಗಿ ಸಲ್ಲಬೇಕಾದುದು ನನ್ನ ದೇಶದ ಜನರಿಗೆ. ಈ ಗೌರವಕ್ಕಾಗಿ ನಾನು ಕೇವಲ ಮಾಧ್ಯಮವಾಗಿದ್ದೇನೆ ಎಂಬುದು ನನ್ನ ಭಾವನೆ ಆಗಿದೆ. ಈ ಹಿಂದೆ ಈ ಪ್ರಶಸ್ತಿ ಪಡೆದ ಪ್ರತಿಷ್ಠಿತ ಸ್ತ್ರೀ-ಪುರುಷರ ಸಾಲಿಗೆ ಸೇರುವುದಕ್ಕಾಗಿ ತಮ್ಮ ದೇಶದವನೊಬ್ಬ ಆಯ್ಕೆ ಆಗಿದ್ದಾನೆ ಎಂಬುದು ನಮ್ಮ ದೇಶದ ಜನರಲ್ಲಿ ವಿನಯ ಮತ್ತು ಹೆಮ್ಮೆ ಉಂಟು ಮಾಡಿದೆ. ಆ ಹೆಸರುಗಳನ್ನು ನಾನು ಏಕೆ ಜ್ಞಾಪಿಸಿಕೊಳ್ಳುತ್ತಿದ್ದೇನೆ ಎಂದರೆ ಆ ಹೆಸರುಗಳು ಈ ಪ್ರಶಸ್ತಿಯ ವ್ಯಾಪ್ತಿ ಮತ್ತು ಲಕ್ಷಣಗಳ ಸಂಕೇತ ಮಾತ್ರವಲ್ಲ; ಯಾರ ಹೆಸರಿನಲ್ಲಿ ಈ ಪ್ರಶಸ್ತಿ ಇದೆಯೋ ಆ ಮಹಾವ್ಯಕ್ತಿ ಪಂಡಿತ್ ಜವಾಹರಲಾಲ್ ನೆಹರೂಗೆ ಸಲ್ಲುವ 'ಗೌರವ'ವಾಗಿದ್ದಾರೆ. ಆ ಜೀವಿಗಳು ಮತ್ತು ಆ ಪ್ರತಿಯೊಬ್ಬರ ವಿವಿಧ ಕಾಣಿಕೆಗಳು ಕೆಲ ಅಳತೆಯಲ್ಲಿ ಪಂಡಿತ್‌ಜಿ ಅವರ ಸಮೃದ್ಧ ಮತ್ತು ಬಹುಮುಖ ಬದುಕನ್ನು ಪ್ರತಿಬಿಂಬಿಸುತ್ತಿವೆ. ನಿಸ್ವಾರ್ಥ ಮಾನವತಾವಾದಿ ಮದರ್ ತೆರೆಸಾ, ಅಂತಾರಾಷ್ಟ್ರೀಯ ರಾಜನೀತಿಜ್ಞ ಜೊಸಿಪ್ ಬ್ರೋಜ್ ಟಿಟೊ, ಪ್ರಸಿದ್ಧ ರಾಜಕೀಯ ನಾಯಕರಾದ ಜೂಲಿಯಸ್ ನೈರೇರೆ ಮತ್ತು ಕೆನೆತ್ ಕೌಂಡಾ, ವೈದ್ಯಕೀಯ ಉಪಕಾರಿ ಜೋನಸ್ಕ್ ಮತ್ತ ನಾಗರಿಕ ಹಕ್ಕುಗಳ ನಾಯಕ ಮಾರ್ಟಿನ್ ಲೂಥರ್ ಕಿಂಗ್.

ನಿಜವಾಗಿಯೂ ಜವಾಹರಲಾಲ ನೆಹರೂ ಅವರು ಗಣನೀಯ ವ್ಯಕ್ತಿ ಆಗಿದ್ದರು. ಅನೇಕ ಜನರ ಒಂದು ಸಂಯೋಗವಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರ, ರಾಜಕಾರಣಿ, ಜಾಗತಿಕ ರಾಜನೀತಿಜ್ಞ, ಇಂಗ್ಲಿಷ್ ಭಾಷೆಯ ಮೇಲೆ ಪ್ರಭುತ್ವ ಪಡೆದವರು. ನ್ಯಾಯವಾದಿ ಮತ್ತು ಇತಿಹಾಸತಜ್ಞ, ಅಲಿಪ್ತ ಚಳುವಳಿಯ ಮೂಲಕರ್ತರಲ್ಲಿ ಒಬ್ಬರಾಗಿ ಅವರು ವಿಶ್ವಶಾಂತಿ ಮತ್ತು ಮಾನವ ಸಹೋದರತ್ವಕ್ಕೆ ಶಾಶ್ವತ ಕಾಣಿಕೆ ಸಲ್ಲಿಸಿದ್ದಾರೆ.

ಯುದ್ಧಾನಂತರದ ಅವಧಿಯಲ್ಲಿ ಏಷ್ಯಾ ಮತ್ತು ಆಫ್ರಿಕಾದ ತುಂಬೆಲ್ಲ ಬೀಸಿದ ವಸಾಹತುಶಾಹಿ ವಿರೋಧಿ ಮತ್ತು ಸ್ವಾತಂತ್ರ್ಯ ಹೋರಾಟಗಳ ಬಿರುಗಾಳಿಯಲ್ಲಿ ಜವಾಹರಲಾಲ್ ನೆಹರೂ ಮತ್ತು ಅಖಿಲ ಭಾರತ ಕಾಂಗ್ರೆಸ್ಸಿನ ವಿಚಾರಗಳು, ಚಟುವಟಿಕೆಗಳು ಮತ್ತು ಉದಾಹರಣೆಗಳಿಂದ ಒಂದಿಲ್ಲೊಂದು ರೀತಿಯಲ್ಲಿ ಪ್ರಭಾವ ಕ್ಕೊಳಗಾಗದ ಸ್ವಾತಂತ್ರ್ಯ ಚಳವಳಿಯಾಗಲೀ ರಾಜಕೀಯ ನಾಯಕರಾಗಲೀ ಇಲ್ಲ. ನನ್ನ ಸ್ವಂತದ ರಾಜಕೀಯ ಶಿಕ್ಷಣ ಮತ್ತು ಬೆಳವಣಿಗೆಯ ಸಿಂಹಾವಲೋಕನ ಮಾಡಿದಾಗ, ನನ್ನ ವಿಚಾರಗಳು ಅವರ ಅನುಭವದಿಂದ ಪ್ರಭಾವಿತವಾದದ್ದು ಕಂಡುಬರುತ್ತದೆ. ವಿಶ್ವವಿದ್ಯಾನಿಲಯ ದಲ್ಲಿ ಇದ್ದಾಗ ಮತ್ತು ವಿದ್ಯಾರ್ಥಿ ರಾಜಕೀಯದಲ್ಲಿ ತಲ್ಲೀನವಾದಾಗ ಮೊದಲ ಬಾರಿಗೆ ಈ ಪ್ರಸಿದ್ಧ ಪುರುಷನ ಹೆಸರು ನನಗೆ ಗೊತ್ತಾಯಿತು. ನಲವತ್ತರ ದಶಕದಲ್ಲಿ ನಾನು ಮೊದಲ ಬಾರಿಗೆ ಅವರ ಪುಸ್ತಕಗಳಲ್ಲೊಂದಾದ 'ಭಾರತದ ಏಕತೆ' ಓದಿದೆ. ಅದು ನನ್ನ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಅಂದಿನಿಂದ ಲಭ್ಯವಾಗುವಂಥ ಅವರ ಗ್ರಂಥಗಳನ್ನೆಲ್ಲ ಪಡೆದೆ, ಓದಿದೆ ಮತ್ತು ಸಂಗ್ರಹಿಸಿದೆ. ಅವರ ಜೀವನ ಚರಿತ್ರೆ ಅಥವಾ 'ಜಾಗತಿಕ ಇತಿಹಾಸದ ನಸುನೋಟ' ಓದುವಾಗ, ಅವರ ವಿಚಾರಗಳ ಅಪರಿಮಿತ ವ್ಯಾಪ್ತಿಯು ತೀವ್ರ ಪರಿಣಾಮ ಮತ್ತು ಅವರ ದರ್ಶನದ ಪ್ರಭಾವ ಉಂಟಾಗುವುದು.

ಜೈಲಿನಲ್ಲಿ ಇದ್ದಾಗ ಕೂಡ; ಐಹಿಕ ವಸ್ತುಗಳು ಅಥವಾ ವಿಷಮ ವಾತಾವರಣದಿಂದ ಉಂಟಾದ ದೈಹಿಕ ಕಷ್ಟಕಾರ್ಪಣ್ಯಗಳಿಗೆ ಅವರು ಸೋಲಲು ಒಪ್ಪಲಿಲ್ಲ. ಅದಕ್ಕೆ ಬದಲು ಅವರು ಸೃಜನಶೀಲ ಚಟುವಟಿಕೆಗಳಲ್ಲಿ ತಲ್ಲೀನರಾದರು. ಅನೇಕ ತಲೆಮಾರುಗಳ ಸ್ವಾತಂತ್ರ್ಯಪ್ರಿಯರಿಗೆ ಪೂರ್ವಾರ್ಜಿತ ಆಸ್ತಿ ಆಗುವಂಥ ಗ್ರಂಥಗಳ ರಚನೆ ಮಾಡಿದರು.

> ಗೋಡೆಗಳು ಅಪಾಯಕಾರಿ ಸಂಗಾತಿಗಳು ಅವರು ಬರೆದರು: 'ಅವು ಕೆಲವು ಸಲ ಹೊರಗಿನ ಅನಿಷ್ಟದಿಂದ ರಕ್ಷಿಸಬಹುದು ಮತ್ತು ಆಕ್ರಮಣಕಾರರನ್ನು ತಡೆಗಟ್ಟಬಹುದು. ಆದರೆ ಅವು ನಿಮ್ಮನ್ನು ಕೈದಿ ಮತ್ತು ಗುಲಾಮ ನನ್ನಾಗಿಯೂ ತಡೆಗಟ್ಟಬಹುದು. ಆದರೆ ಅವು ನಿಮ್ಮನ್ನು ಕೈದಿ ಮತ್ತು ಗುಲಾಮನನ್ನಾಗಿಯೂ ಮಾಡಬಲ್ಲವು. ಸ್ವಾತಂತ್ರ್ಯದ ಬೆಲೆ ತೆತ್ತು ನೀವು ಪಾವಿತ್ರ್ಯ ಮತ್ತು ನಿರೋಧಕ ಶಕ್ತಿ ಎನ್ನುವಂಥದ್ದನ್ನು ಪಡೆಯುವಿರಿ. ಹಳೆಯದೆನ್ನುವ ಒಂದೇ ಕಾರಣದಿಂದ ಅನಿಷ್ಟ ಸಂಪ್ರದಾಯಗಳನ್ನು ಹೊರಹಾಕುವುದನ್ನು ಮತ್ತು ನವೀನವಾಗಿರುವ ಹೊಸ ಯೋಜನೆಗಳನ್ನು ಸ್ವೀಕರಿಸುವುದನ್ನು ತಡೆಗಟ್ಟುವಂತೆ ಮನಸ್ಸಿನಲ್ಲಿ ಬೆಳೆಯುವ ಗೋಡೆಗಳು, ಗೋಡೆಗಳಲ್ಲೆಲ್ಲ ಭಯಂಕರವಾದವು.

ನಮ್ಮದನ್ನು ಹೋಲುವ ಸಂದರ್ಭಗಳಲ್ಲಿನ ಅನೇಕ ಯುವಜನರು ಹಾಗೆ ರಾಜಕೀಯವಾಗಿ ಕಾರ್ಯೋನ್ಮುಖವಾದ ನನ್ನ ತಲೆಮಾರಿನ ಯುವಕರು ಕೂಡ ತೀವ್ರ ಭಾವನೆಗಳಿಂದ ಆದರೆ ರಾಷ್ಟ್ರವಾದದ ಸಂಕುಚಿತ ರೂಪದಿಂದ ಆಕರ್ಷಿತರಾದರು. ಹಾಗಿದ್ದರೂ ಅನುಭವದಿಂದಾಗಿ

ದೇಶ ವಿದೇಶಗಳಲ್ಲಿ ನಡೆದ ಘಟನೆಗಳಿಂದಾಗಿ ನಾವು ಹೊಸ ದೃಷ್ಟಿಕೋನ ಪಡೆದೆವು. ಕ್ಷಿತಿಜ ವಿಸ್ತಾರಗೊಂಡಂತೆಲ್ಲ ಕೆಲ ತಾರುಣ್ಯದ ವಿಚಾರಗಳ ಅಸಮರ್ಪಕತೆಯನ್ನು ಗುರುತಿಸಲು ಪ್ರಾರಂಭಿಸಿದೆವು. ಕಾಲ ನಮಗೆ ಕಲಿಸಬೇಕಾಗಿತ್ತು ಪಂಡಿತ್ ಜಿ ಹೇಳಿದಂತೆ.

ರಾಷ್ಟ್ರವಾದ ತನ್ನ ಸ್ಥಾನದಲ್ಲಿ ಒಳ್ಳೆಯದೇ ಆಗಿದೆ. ಆದರೆ ಅದು ನಂಬಲನಾರ್ಹವಾದ ಮಿತ್ರ ಮತ್ತು ಅಪಾಯಕಾರಿ ಚರಿತ್ರೆಕಾರ ಅನೇಕ ಆಗುಹೋಗುಗಳಿಗೆ ನಮ್ಮನ್ನು ಕುರುಡಾಗಿಸುವಂಥದ್ದು. ಕೆಲ ಸಲ, ಅದರಲ್ಲೂ ನಮ್ಮ ಮತ್ತು ನಮ್ಮ ದೇಶಕ್ಕೆ ಸಂಬಂಧಿಸಿದಂತೆ ಅದು ಸತ್ಯವನ್ನು ವಿರೂಪಗೊಳಿಸುತ್ತದೆ.

ನಿಬ್ಬೆರಗಾಗಿಸುವ ತಂತ್ರಜ್ಞಾನ ಮತ್ತು ಸಂಪರ್ಕ ವಿಧಾನಗಳಲ್ಲಿನ ಪ್ರಗತಿಯಿಂದಾಗಿ ಈ ಮುಂಚೆ ಪ್ರವೇಶಿಸಲು ಅಸಾಧ್ಯವೆನಿಸಿದ್ದ ದೂರದ ಪ್ರದೇಶಗಳ ನಡುವಿನ ಅಂತರವನ್ನು ತೊಡೆದು ಹಾಕಿರುವ, ಹಳೆ ತಲೆಮಾರಿನ ನಂಬಿಕೆಗಳು ಮತ್ತು ಮನುಷ್ಯರ ಮಧ್ಯದ ಕಾಲ್ಪನಿಕ ವ್ಯತ್ಯಾಸಗಳು ತ್ವರಿತವಾಗಿ ನಿವಾರಣೆ ಆಗುತ್ತಿರುವ ಮತ್ತು ಒಂಟಿತನ ಕಳೆದು ಸಹಕಾರ ಹಾಗೂ ಪರಸ್ಪರ ಅವಲಂಬನೆಗಳು ಕಂಡುಬರುವ ಈ ಪ್ರಪಂಚದಲ್ಲಿ ನಾವು ಕೂಡ ನಮ್ಮ ಸಂಕುಚಿತ ದೃಷ್ಟಿಕೋನ ತೊರೆದು ಹೊಸ ವಾಸ್ತವತೆಗಳಿಗೆ ಹೊಂದಿಕೊಳ್ಳುವ ಅಗತ್ಯ ಕಂಡುಬಂದಿತು. ವಸಾಹತುಶಾಹಿ ಜಗತ್ತಿನ ಪ್ರಮುಖ ರಾಷ್ಟ್ರೀಯ ವಿಮೋಚನಾ ಚಳವಳಿಗಳಲ್ಲೊಂದಾದ ಅಖಿಲ ಭಾರತ ಕಾಂಗ್ರೆಸ್ ರೀತಿಯಲ್ಲಿ ನಾವು ಕೂಡ ನಮ್ಮ ಪರಿಸ್ಥಿತಿಯನ್ನು ಜಾಗತಿಕ ಹಿನ್ನೆಲೆಯಲ್ಲಿ ತೂಗಿನೋಡಲು ಪ್ರಾರಂಭಿಸಿದೆವು. ಇತರ ಭಾಗಗಳಲ್ಲಿ ಇರುವ ತಮ್ಮ ಸಹೋದರರು ಇನ್ನೂ ಪರಕೀಯರ ಆಳ್ವಿಕೆಗೆ ಒಳಪಟ್ಟಿದ್ದಾರೆ. ವಿಶ್ವದ ಯಾವುದೇ ಒಂದು ಭಾಗದ ಜನತೆ ನಿಜವಾಗಿಯೂ ಸ್ವತಂತ್ರರಾಗಲು ಸಾಧ್ಯವಿಲ್ಲ ಎಂಬ ಒಬ್ಬ ಮಹಾನ್ ರಾಜಕೀಯ ಚಿಂತಕ ಮತ್ತು ಶಿಕ್ಷಕನ ಎಚ್ಚರಿಕೆಯನ್ನು ನಾವು ಶೀಘ್ರವಾಗಿ ಅರಿತೆವು. ಫ್ಯಾಸಿಸ್ಟ್ ಇಟಲಿಯು ಇಥಿಯೋಪಿಯಾವನ್ನು ನಾಶಗೊಳಿಸುತ್ತಿದ್ದಾಗ ಆ ದೇಶದ ಜನತೆಯು ಜತೆ ಅಖಿಲ ಭಾರತ ಕಾಂಗ್ರೆಸ್ ತೋರಿಸಿದ ಸೌಹಾರ್ದತೆಯನ್ನು ನಮ್ಮ ಜನ ಕೊಂಡಾಡಿದರು. ಹಣೆಪಟ್ಟಿಗೆ ಹೆದರದೆ ಸ್ಪೇನ್ ಗಣರಾಜ್ಯಕ್ಕೆ ಧೈರ್ಯವಾಗಿ ಅಖಿಲ ಭಾರತ ಕಾಂಗ್ರೆಸ್ ತೋರಿದ ಅನುಕಂಪವನ್ನು ನಾವು ಗಮನಿಸಿದೆವು. ೧೯೩೮ರ ಕಾಂಗ್ರೆಸ್ ವೈದ್ಯಕೀಯ ತಂಡ ಚೀನಾ ದೇಶಕ್ಕೆ ಹೋದದ್ದನ್ನು ಕೇಳಿ ನಾವು ಸ್ಫೂರ್ತಿಗೊಂಡೆವು.

ಸೋವಿಯತ್ ದೇಶದ ವಿರುದ್ಧ ಅನಾಗರಿಕ ನಾಜಿ ಪಡೆಗಳನ್ನು ಮುನ್ನುಗ್ಗಿಸಲು ಆಶಿಸುತ್ತಿದ್ದ ಮತ್ತು ಅದಕ್ಕಾಗಿ ಪಿತೂರಿ ಮಾಡುತ್ತಿದ್ದ ಸಮಯದಲ್ಲಿ ಪಂಡಿತ್ ಜಿ ಅವರು ಮುಸೋಲಿನಿಯನ್ನು ಭೇಟಿ ಮಾಡುವ ಒತ್ತಾಯದ ಆಮಂತ್ರಣವನ್ನು ಸಾರ್ವಜನಿಕವಾಗಿ ತಿರಸ್ಕರಿಸಿದರು. ಎರಡು ವರ್ಷಗಳ ನಂತರ ನಾಜಿ ಜರ್ಮನಿಗೆ ಭೇಟಿ ನೀಡಬೇಕೆಂಬ ಆಮಂತ್ರಣವನ್ನು ಅವರು ಮತ್ತೆ ತಿರಸ್ಕರಿಸಿದುದನ್ನು ನಾವು ಗಮನಿಸಿದೆವು. ಅದಕ್ಕೆ ಬದಲಾಗಿ ಕುಪ್ರಸಿದ್ಧ ಮ್ಯೂನಿಕ್ ಒಪ್ಪಂದದಲ್ಲಿ ನಂಬಿಕ ಮೋಸಹೋದ ಮತ್ತು ಹೊರಗೆ ಹಾಕಲಾದ ಜೆಕೊಸ್ಲೊವಾಕಿಯಾಗೆ ಹೋಗಲು ಅವರು ನಿರ್ಧರಿಸಿದರು. ಅಖಿಲ ಭಾರತ ಕಾಂಗ್ರೆಸ್

ಮತ್ತು ಅದರ ನಾಯಕತ್ವದ ಅಂತರ ರಾಷ್ಟ್ರೀಯತೆಯನ್ನು ಗಮನಿಸುತ್ತ ನಾವು ಮಹಾತ್ಮಾಗಾಂಧಿ ಅವರ ಅರ್ಥಪೂರ್ಣ ವಿವರಣೆಯನ್ನು ಸ್ಮರಿಸಿದೆವು.

> ಸರ್ಕಾರ ಸೃಷ್ಟಿಸಿದ ಗಡಿಗಳ ಆಚೆ ಇರುವ ನೆರೆಹೊರೆಯವರಿಗೆ ತಮ್ಮ ಸೇವೆ ಸಲ್ಲಿಸುವುದಕ್ಕೆ ಯಾವುದೇ ಮಿತಿ ಇಲ್ಲ, ದೇವರು ಎಂದೂ ಗಡಿಗಳನ್ನು ಸೃಷ್ಟಿಸಿಲ್ಲ.

ನಮ್ಮ ಜನ ಮತ್ತು ಭಾರತದ ಜನತೆಯ ಮಧ್ಯದ ನಿಕಟ ಸಂಬಂಧಗಳನ್ನು ಹಾಗೂ ಅಖಿಲ ಭಾರತ ಕಾಂಗ್ರೆಸ್ಸಿನ ಅಂತರ ರಾಷ್ಟ್ರೀಯ ದೃಷ್ಟಿಕೋನದ ಪರಿಣಾಮವಾಗಿ ನಾವು ಪಡೆದಿರುವ ಪ್ರೋತ್ಸಾಹ, ಸ್ಫೂರ್ತಿ ಮತ್ತು ವಾಸ್ತವ ನೆರವುಗಳನ್ನು ನಮೂದಿಸದೆ ಹೋದಲ್ಲಿ ಅದೊಂದು ಗಂಭೀರ ಕೊರತೆ ಆದೀತು.

ದಕ್ಷಿಣ ಆಫ್ರಿಕಾದಲ್ಲಿ ಇನ್ನೂ ಇರುವಂಥ ಅತ್ಯಂತ ಹಳೆಯ ರಾಜಕೀಯ ಸಂಘಟನೆ ನತಾಲ್ ಇಂಡಿಯನ್ ಕಾಂಗ್ರೆಸ್ ಅನ್ನು ೧೮೯೪ರಲ್ಲಿ ಮಹಾತ್ಮಾಗಾಂಧಿ ಅವರು ಸ್ಥಾಪಿಸಿದರು. ಅವರು ಅದರ ಮೊದಲ ಕಾರ್ಯದರ್ಶಿಗಳಾದರು. ಇಲ್ಲಿ ಇದ್ದಂಥ ೨೧ ವರ್ಷಗಳ ಅವಧಿಯಲ್ಲಿ ದಕ್ಷಿಣ ಆಫ್ರಿಕಾ ಮತ್ತು ಭಾರತದ ಇತಿಹಾಸದ ಮೇಲೆ ಅಗಣಿತ ಪ್ರಭಾವವನ್ನು ಬೀರುವಂಥ ವಿಚಾರ ಮತ್ತು ಹೋರಾಟಗಳ ಹುಟ್ಟಿಗೆ ನಾವು ಸಾಕ್ಷಿ ಆದೆವು. ಹಾಗೆ ನೋಡಿದರೆ ಮಹಾತ್ಮಾಗಾಂಧಿ ಅವರು ದಕ್ಷಿಣ ಆಫ್ರಿಕಾದ ನೆಲದ ಮೇಲೆಯೇ ಸತ್ಯಾಗ್ರಹದ ತತ್ವಜ್ಞಾನವನ್ನು ಕಂಡುಹಿಡಿದು ಆಚರಿಸಲು ಪ್ರಾರಂಭಿಸಿದರು. ಮಹಾತ್ಮಾಜಿ ಅವರು ಭಾರತಕ್ಕೆ ಮರಳಿ ಬಂದ ಮೇಲೆ ದಕ್ಷಿಣ ಆಫ್ರಿಕಾದ ಕಾಳಜಿಗಳು ಅಖಿಲ ಭಾರತ ಕಾಂಗ್ರೆಸ್‌ನ ಮತ್ತು ಇಡೀ ಭಾರತ ಜನತೆಯ ಕಾಳಜಿಗಳಾದವು. ಭಾರತ ಸ್ವಾತಂತ್ರ್ಯದ ಮುನ್ನಾ ದಿನ ಪಂಡಿತ್ ನೆಹರೂ ಹೇಳಿದರು.

> ತುಂಬ ವರ್ಷಗಳ ಹಿಂದೆ ನಾವು ವಿಧಿಯ ಜತೆ ಒಪ್ಪಂದ ಮಾಡಿಕೊಂಡೆವು. ಈಗ ನಾವು ನಮ್ಮ ಪ್ರತಿಜ್ಞೆಯನ್ನು ಈಡೇರಿಸುವ ಸಮಯ ಬಂದಿದೆ. ಮಧ್ಯರಾತ್ರಿಯ ಗಂಟೆ ಬಾರಿಸುವಾಗ, ಜಗತ್ತು ಮಲಗಿರುವಾಗ ಬದುಕು ಮತ್ತು ಸ್ವಾತಂತ್ರ್ಯಕ್ಕೆ ಭಾರತ ಎಚ್ಚರಗೊಳ್ಳುವುದು. ಈ ಗಂಭೀರ ಕ್ಷಣದಲ್ಲಿ ನಾವು ಭಾರತದ, ಅದರ ಜನತೆಯ ಮತ್ತು ಮನುಕುಲದ ಹಿರಿದಾದ ಧ್ಯೇಯಗಳ ಸೇವೆಗೆ ಸಮರ್ಪಣೆ ಮಾಡಿಕೊಳ್ಳುವ ಪ್ರತಿಜ್ಞೆ ಕೈಗೊಳ್ಳುವುದು ಯೋಗ್ಯವಾಗಿದೆ.

ಈ ಪ್ರತಿಜ್ಞೆಯನ್ನು ಅವರು ಕೈಗೊಂಡಾಗ ಪಂಡಿತ್ ಜಿ ಅವರ ಮನಸ್ಸಿನಲ್ಲಿ ನಮ್ಮ ಹೋರಾಟ ಎಷ್ಟು ಗಮನಾರ್ಹವಾಗಿತ್ತೆಂಬುದನ್ನು ಕಂಡುಕೊಳ್ಳಲು ನಮ್ಮ ಜನ ಬಹಳ ಕಾಲ ಕಾಯಬೇಕಾಗಲಿಲ್ಲ.

ಅವರ ಪ್ರತಿಭಾವಂತ ಸಹೋದರಿ ಶ್ರೀಮತಿ ವಿಜಯಲಕ್ಷ್ಮೀ ಪಂಡಿತ್ ಅವರು ವಿಶ್ವಸಂಸ್ಥೆಗೆ ಸ್ವತಂತ್ರ ಭಾರತದ ರಾಯಭಾರಿ ಆದಾಗ ದೃಢ ನಿರ್ಧಾರದಿಂದ ನಮ್ಮ ಹೋರಾಟದೊಂದಿಗೆ ವಿಶ್ವಸೌಹಾರ್ದತೆಯನ್ನು ಸಾಧಿಸಿದ ಕಾರಣ, ನಮ್ಮ ದೇಶ ಮತ್ತು

ನಮೀಬಿಯಾದ ಧ್ವನಿಕಟ್ಟಿದ ಜಗತೆಗಷ್ಟೇ ಅಲ್ಲದೆ ವಿಶ್ವಾದ್ಯಂತ ನಮ್ಮಂತೇ ಇರುವ ಇತರ ಜನತೆಯ ಆದರದ ವಕ್ತಾರರಾದರು. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿನ ಕಾಂಗ್ರೆಸ್ ಹೇಳಿಕೆಗಳು ಮತ್ತು ಪ್ರಯತ್ನಗಳನ್ನು ಈಗ ಭಾರತ ಸರ್ಕಾರ ತನ್ನ ನೀತಿಯಾಗಿ ಒಪ್ಪಿಕೊಂಡು ಕಾರ್ಯತತ್ಪರತೆಯಿಂದ ಆಚರಿಸುತ್ತಿದೆ ಎನ್ನುವುದು ನಮಗೆ ಧನ್ಯಭಾವವನ್ನುಂಟು ಮಾಡುವ ವಿಚಾರ. ೧೯೪೭ರಲ್ಲಿ ಮುಂಬೈನಲ್ಲಿ ನಡೆದ ಏಷ್ಯಾ ಜನತೆಯ ಸಮ್ಮೇಳನ, ೧೯೫೫ರ ಬಾಂಡುಂಗ್ ಸಮ್ಮೇಳನ, ಕಾಮನ್ ವೆಲ್ತ್ ಚರ್ಚೆಗಳು, ಅಲಿಪ್ತ ಚಳವಳಿ ಹೀಗೆ ಎಲ್ಲೆಡೆ ಮತ್ತು ಎಲ್ಲ ಕಾಲದಲ್ಲಿ ಸ್ವತಂತ್ರ ಭಾರತ ಹಾಗೂ ಪಂಡಿತ್‌ಜಿ ನಮ್ಮ ಹೋರಾಟವನ್ನು ಏಕ ಪ್ರಕಾರವಾಗಿ ಎತ್ತಿ ಹಿಡಿದರು. ಅದೇ ಹಾದಿಯಲ್ಲಿ ಕಡಿಮೆಯಾಗದ ಚೈತನ್ಯ ಮತ್ತು ದೃಢ ನಿರ್ಧಾರಗಳಿಂದ ಮುನ್ನಡೆಯುತ್ತಿರುವ, ಅವರಷ್ಟೇ ಉದಾಹರಿಸಬಲ್ಲ ಅವರ ಪುತ್ರಿ ಶ್ರೀಮತಿ ಇಂದಿರಾಗಾಂಧಿ ಅವರನ್ನು ನೋಡಿ ನಾವು ಇಂದು ಆಳವಾದ ಸ್ಫೂರ್ತಿ ಪಡೆಯುತ್ತಿದ್ದೇವೆ. ಅವರ ಕಾರ್ಯಚಟುವಟಿಕೆಗಳು, ಆಸಕ್ತಿಗಳು ಮತ್ತು ಹೇಳಿಕೆಗಳು ನಮಗೆ ಭರವಸೆ ಮತ್ತು ಪ್ರೇರಣೆಯ ನಿರಂತರ ಮೂಲಗಳಾಗಿವೆ. ವಿಶ್ವದ ಜನಸಂಖ್ಯೆಯ ಒಂದು ಅತಿಸಣ್ಣ ಭಾಗವಾಗಿರುವ ೨೧ ದಶಲಕ್ಷಗಳಗೆ ಮೀರದ ಜನಸಂಖ್ಯೆ ಹೊಂದಿದ ನಮ್ಮ ದೇಶ ೧೫೩ ದೇಶಗಳನ್ನೊಳಗೊಂಡ ರಾಷ್ಟ್ರಗಳ ಕುಟುಂಬದಲ್ಲಿ ಒಂದಾಗಿರುವುದನ್ನು ಗಣನೆಗೆ ತೆಗೆದುಕೊಂಡಾಗ, ಭಾರತ ನಮ್ಮ ಹೋರಾಟವನ್ನು ಎತ್ತಿ ಹಿಡಿಯುವುದು ಹೆಚ್ಚು ಅರ್ಥಗರ್ಭಿತವಾಗುತ್ತದೆ. ಅದೂ ಅಲ್ಲದೆ, ಘರ್ಷಣೆ, ಯುದ್ಧಗಳು, ಕ್ಷಾಮ, ಪೌಷ್ಟಿಕ ಆಹಾರದ ಕೊರತೆ, ರೋಗ ರುಜಿನಗಳು, ಬಡತನ, ನಿರಕ್ಷರತೆ ಮತ್ತು ದ್ವೇಷ ಇವೆಲ್ಲವು ಗಳಿಂದ ಸುತ್ತುವರೆದು ಅಲ್ಲೋಲ ಕಲ್ಲೋಲಗೊಂಡಿರುವ ಜಗತ್ತಿನ ಹಿನ್ನೆಲೆಯಲ್ಲಿ ನಮ್ಮ ಕಷ್ಟ ಕಾರ್ಪಣ್ಯಗಳು ದೊಡ್ಡದಾಗಿದ್ದರೂ ಚಿಕ್ಕದಾಗಿ ಕಾಣುವವು.

ವಿಶ್ವದ ಎಲ್ಲ ಮೂಲೆಗಳಿಂದ ಮಾನವ ನಿರ್ಮಿತ ನೋವಿನ ಕೊನೆಯ ಕುರುಹು ಅಳಿದು ಹೋಗುವ ದಿನದವರೆಗೂ ವಿಶ್ವದ ಯಾವುದೇ ಭಾಗವು ತನ್ನಷ್ಟಕ್ಕೇ ಅವುಗಳಿಂದ ಮುಕ್ತ ಎಂದು ತಿಳಿದುಕೊಳ್ಳುವ ಧೈರ್ಯ ಮಾಡಕೂಡದು ಮತ್ತು ನಮ್ಮ ಸಂಸ್ಥೆಗಳು, ಅವೆಷ್ಟೇ ತೀವ್ರವಾಗಿರಲಿ, ಮನುಕುಲದ ಸಮಸ್ಯೆಗಳ ಭಾಗ ಎಂಬುದನ್ನು ನಮಗೆ ನೆನಪು ಮಾಡಿಕೊಡುವ ಪಾತ್ರವನ್ನು ಜಾಗತಿಕ ವ್ಯವಹಾರಗಳಲ್ಲಿ ಭಾರತ ಉದಾಹರಿಸಲು ಯೋಗ್ಯವಾಗಿ ನಿರ್ವಹಿಸಿದೆ. ಬೃಹತ್ ಗಾತ್ರದ್ದಾಗಿದ್ದರೂ ಆ ನೋವನ್ನು ಹಂಚಿಕೊಂಡ ಜ್ಞಾನ ಮನುಕುಲದೊಂದಿಗೆ ನಮ್ಮ ಏಕತೆಯನ್ನು ಹಾಗೂ ಅದರಿಂದ ಉದ್ಭವಿಸುವಂಥ ಜಾಗತಿಕ ಜವಾಬ್ದಾರಿಗಳನ್ನು ಕೂಡ ಜೀವಂತವಾಗಿ ಇಡುತ್ತದೆ. ನಮ್ಮ ಭವಿಷ್ಯದಲ್ಲಿ ವಿಶ್ವಾಸ ಮತ್ತು ನಂಬಿಕೆಯನ್ನು ಬಲಗೊಳಿಸುವಲ್ಲಿ ಸಹಾಯಕವಾಗಿದೆ.

ಪುನಃ ಪಂಡಿತ್ ಜಿ ಅವರು ಕಂಡ ಲೋಕವನ್ನು ಇನ್ನೊಮ್ಮೆ ಅವಲೋಕಿಸಿದಾಗ ಘರ್ಷಣೆ, ದ್ವೇಷ ಮತ್ತು ಹಿಂಸೆಗಳಿಂದ ತುಂಬಿದ ಪ್ರಪಂಚದಲ್ಲಿ ಮಾನವ ಗುಡಿಯಲ್ಲಿ ನಂಬಿಕೆ ಇಡುವುದು ಬೇರೆ ಎಲ್ಲ ಕಾಲಕ್ಕಿಂತ ಈಗ ಹೆಚ್ಚು ಅಗತ್ಯವಾಗಿದೆ. ನಾವು ಯಾವ ಭವಿಷ್ಯಕ್ಕಾಗಿ ದುಡಿಯುತ್ತಿದ್ದೇವೋ ಅದು ಮನುಕುಲಕ್ಕೆ ಸಂಪೂರ್ಣ ಭರವಸೆ ನೀಡುವಂಥ

ದ್ದಾಗಿದ್ದ ಪಕ್ಷದಲ್ಲಿ ವರ್ತಮಾನದ ಅನಿಷ್ಟಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಆ ಭವಿಷ್ಯಕ್ಕಾಗಿ ದುಡಿಯುವುದೇ ಸಮರ್ಥನೀಯ.

ಈ ತಿಳಿವಳಿಕೆ ಮತ್ತು ನಂಬಿಕೆಗಳ ಬಗೆಗಿನ ಗಾಢ ನಿಷ್ಠೆಯಲ್ಲಿ, ನಮ್ಮ ಸ್ನೇಹಿತರ ನಿಷ್ಠೆ ಮತ್ತು ಸೌಹಾರ್ದತೆಯಲ್ಲಿ ನಮ್ಮದೇ ಶಕ್ತಿ ದೃಢನಿಶ್ಚಯ ಮತ್ತು ಹೋರಾಟದ ಬಗೆಗಿನ ನಂಬಿಕೆಯಲ್ಲಿ ನಾವು ಮುಂದುವರಿಯುತ್ತಿದ್ದೇವೆ. ಭಾರತದ ಜನತೆ ಜತೆ, ಇಡೀ ಜಗತ್ತಿನ ಜತೆ ಹೊಸತೊಂದು ನಾಳೆಯನ್ನು ಸೃಷ್ಟಿ ಮಾಡುವುದಕ್ಕಾಗಿ ನಾವು ಸೇರುತ್ತಿದ್ದೇವೆ. ಈ ನಾಳೆ ರವೀಂದ್ರನಾಥ್ ಟಾಗೋರ್ ಅವರು 'ಗೀತಾಂಜಲಿ'ಯಲ್ಲಿ ಕನಸು ಕಂಡ ನಾಳೆಯನ್ನು ವಿಶ್ವದ ಜನತೆಗಾಗಿ ವಾಸ್ತವ ಮಾಡಲು ಪ್ರಯತ್ನಿಸುವಂಥದ್ದು.

ಎಲ್ಲಿ ಮನಸಿರುವುದೋ ಭಯವಿಲ್ಲದೆ
ತಲೆ ಎತ್ತಿಹುದೊ
ಜ್ಞಾನ ಎಲ್ಲಿ ಮುಕ್ತವಾಗಿರುವುದೊ
ಎಲ್ಲಿ ಸಂಕುಚಿತ ನಾಡಗೋಡೆಗಳಿಂದ
ತಿರೆ ತುಂಡು ತುಂಡಾಗಿಲ್ಲವೊ,
ಎಲ್ಲಿ ಸತ್ಯದಾಳದಿಂದ
ಮಾತುಗಳು ಹೊರಹೊಮ್ಮುವವೊ,
ಎಲ್ಲಿ ಪೂರ್ಣತೆಯೆಡೆಗೆ
ಅವಿಶ್ರಾಂತ ಹೆಣಗು
ಕೈಚಾಚುತ್ತಿದೆಯೋ,

ಎಲ್ಲಿ ವಿವೇಕದ ನಿಚ್ಚಳ ಹೊಳೆ
ಜಡರೂಢಿಯ ಮಂಕು ಕವಿದ
ಮರುಭೂಮಿಯ ಮರಳಲ್ಲಿ
ದಾರಿ ಕಳೆದು ಕೊಂಡಿಲ್ಲವೊ

ಎಲ್ಲಿ ಇವೆಲ್ಲ ಸದಾ
ವಿಶಾಲಗೊಳ್ಳುವ ವಿಚಾರ
ಕ್ರಿಯೆಯೆಡೆಗೆ ಮನವ ಮುನ್ನಡೆಸುವವೊ
ಆ ಸ್ವಾತಂತ್ರ್ಯದ ಸ್ವರ್ಗದಲ್ಲಿ
ತಂದೆ-
ನನ್ನ ನಾಡು ಎಚ್ಚರಗೊಳ್ಳಲಿ.

ನಿಮ್ಮ ವಿಶ್ವಾಸದ
ನೆಲ್ಸನ್ ಮಂಡೇಲಾ

(ನಂತರದ ಮಾತು : ಮೇಲಿನ ದಿನಾಂಕ ತಿಳಿಸುವಂತೆ ಈ ಪತ್ರವನ್ನು ತಮಗೆ ೩ನೇ ಆಗಸ್ಟ್ ೧೯೮೫ರಂದು ಕಳಿಸುವುದಕ್ಕಾಗಿ ರಾಬ್ಬೆನ್ ದ್ವೀಪದ ಕಮಾಂಡಿಂಗ್ ಆಫೀಸರ್‌ಗೆ ಕೊಡಲಾಯಿತು. ಈ ಕೆಲಸವನ್ನು ತ್ವರಿತವಾಗಿ ಮಾಡಲು ಕೂಡ ಹೇಳಿದ್ದೆ. ತಮಗೆ ಈ ಪತ್ರ ಕಳಿಸಿದ್ದಾಯಿತೇ ಎಂದು ಅಂದಿನಿಂದ ಪದೇ ಪದೇ ಜೈಲು ಇಲಾಖೆಯಲ್ಲಿ ವಿಚಾರಿಸಿದೆ. ಡಿಸೆಂಬರ್ ಕೊನೆಯ ವಾರದಲ್ಲಿ

ಸಾಂಸ್ಕೃತಿಕ ಸಂಬಂಧಗಳ ಭಾರತೀಯ ಮಂಡಳಿಗೆ ಕೃತಜ್ಞತೆಗಳನ್ನು ಸಲ್ಲಿಸಬಹುದು. ಆದರೆ ಆ ಪತ್ರದಲ್ಲಿ ಉಪಯೋಗಿಸಿರುವ ಮಾತುಗಳಿಂದಲ್ಲ

ಎಂದು ನನಗೆ ಉತ್ತರ ಬಂದಿತು. ಆ ಕಾರಣಕ್ಕಾಗಿ ಈ ಪತ್ರ ತಮಗೆ ತಲುಪಿಸಲು ನನ್ನದೇ ಆದ ಮಾರ್ಗಗಳನ್ನು ಉಪಯೋಗಿಸಲು ನಿರ್ಧರಿಸಿದೆ.)

## ನಾ ಮರಳಿ ಬರುವೆ

ಪಿ.ಡಬ್ಲ್ಯೂ.ಬೋಥಾ ದಕ್ಷಿಣ ಅಫ್ರಿಕಾದ ಅಧ್ಯಕ್ಷರಾಗಿದ್ದಾಗ ಷರತ್ತಿನ ಮೇಲೆ ಬಿಡುಗಡೆ ಮಾಡುವುದಾಗಿ ನೆಲ್ಸನ್ ಮಂಡೇಲಾ ಅವರಿಗೆ ತಿಳಿಸಿದರು. ಮಂಡೇಲಾ ಅದಕ್ಕೆ ಈ ರೀತಿ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ೧೯೮೫ನೆಯ ಫೆಬ್ರವರಿ ೧೦ರಂದು ಸೊವೆಟೊದ ಜುಬುಲಾನಿಯಲ್ಲಿ ನಡೆದ ರ್‍ಯಾಲಿಯಲ್ಲಿ ಅವರ ಮಗಳು ಜಿಂಜಿ ಈ ಪ್ರತಿ ಕ್ರಿಯೆಯನ್ನು ಓದಿದರು.

ನಾನು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಸದಸ್ಯನಾಗಿದ್ದೇನೆ. ನಾನು ಯಾವಾಗಲೂ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಸದಸ್ಯನಾಗಿದ್ದೇನೆ. ನಾನು ಸಾಯುವವರೆಗೂ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಸದಸ್ಯನಾಗಿರುತ್ತೇನೆ. ಆಲಿವರ್ ಟಾಂಬೊ ನನಗೆ ಸಹೋದರನಿಗಿಂತ ಹೆಚ್ಚು. ಸುಮಾರು ೫೦ ವರ್ಷಗಳಿಂದ ಅವರು ನನ್ನ ಮಹಾನ್ ಗೆಳೆಯ ಮತ್ತು ಸಂಗಾತಿ. ನಿಮ್ಮೊಳಗಿನ ಯಾರಾದರೂ ನನ್ನ ಸ್ವಾತಂತ್ರ್ಯವನ್ನು ಪ್ರೇಮದಿಂದ ಪೋಷಿಸಿದರೆ ಆಲಿವರ್ ಟಾಂಬೊ ಇನ್ನೂ ಹೆಚ್ಚು ಪ್ರೇಮದಿಂದ ಘೋಷಿಸುವರು. ನಾನು ಸ್ವತಂತ್ರವಾಗುವುದನ್ನು ನೋಡಲಿಕ್ಕೆ ಅವರು ತಮ್ಮ ಬದುಕನ್ನೇ ಕೊಡುವರು ಎಂಬುದು ನನಗೆ ಗೊತ್ತಿದೆ. ನನ್ನ ಮತ್ತು ಅವರ ಅಭಿಪ್ರಾಯಗಳಲ್ಲಿ ಯಾವುದೇ ಭೇದವಿಲ್ಲ.

ಸರ್ಕಾರ ನನ್ನ ಮೇಲೆ ಹೇರಬಯಸುವ ಷರತ್ತುಗಳ ಬಗ್ಗೆ ನಾನು ಚಕಿತಗೊಂಡಿದ್ದೇನೆ. ನಾನು ಹಿಂಸೆಯನ್ನು ಪ್ರತಿಪಾದಿಸುವವನಲ್ಲ. ನಮ್ಮ ದೇಶದ ಸಮಸ್ಯೆಗಳಿಗೆ ಪರಿಹಾರ ಹುಡುಕುವುದಕ್ಕಾಗಿ ದುಂಡುಮೇಜಿನ ಪರಿಷತ್ತು ಕರೆಯಲು ನಾನು ಮತ್ತು ನನ್ನ ಸಂಗಾತಿಗಳು ಮಲಾನ್ ಅವರಿಗೆ ೧೯೫೨ರಲ್ಲಿ ಕೇಳಿಕೊಂಡೆವು. ಆದರೆ ಈ ಬಗ್ಗೆ ಅಸಡ್ಡೆ ತೋರಲಾಯಿತು. ಸ್ಟ್ರಿಜ್ ಡೊಮ್ ಅವರು ಅಧಿಕಾರದಲ್ಲಿದ್ದಾಗ ನಾವು ಅದೇ ರೀತಿ ನಿವೇದನೆ ಮಾಡಿದೆವು. ಮತ್ತೆ ಆ ಬಗ್ಗೆ ಅಲಕ್ಷ್ಯ ತೋರಲಾಯಿತು. ವೆರ್ ವೊರ್ಡ್ ಅಧಿಕಾರದಲ್ಲಿದ್ದಾಗ ಭವಿಷ್ಯದ ಕುರಿತು ನಿರ್ಧರಿಸುವುದಕ್ಕಾಗಿ ದಕ್ಷಿಣ ಆಫ್ರಿಕಾದ ಎಲ್ಲ ಜನರ ರಾಷ್ಟ್ರೀಯ ಸಮಾವೇಶ ಕರೆಯಲು ನಾವು ಕೇಳಿದೆವು. ಅದು ಕೂಡ ವ್ಯರ್ಥವಾಯಿತು.

ಇತರ ಎಲ್ಲ ಪ್ರಕಾರದ ಪ್ರತಿರೋಧ ಕ್ರಮಗಳು ನಿರುಪಯುಕ್ತವಾದಾಗ ನಾವು ಸಶಸ್ತ್ರ ಹೋರಾಟದ ಮಾರ್ಗ ಹಿಡಿದೆವು. ಮಲಾನ್, ಸ್ಟ್ರಿಜ್ ಡೊಮ್ ಮತ್ತು ವೆರ್ ವೋರ್ಡ್‌ಗಿಂತಾ ತಾವು ಭಿನ್ನ ಎಂಬುದನ್ನು ಬೋಥಾ ತೋರಿಸಿ ಕೊಡಲಿ. ಅವರು ಹಿಂಸೆಯನ್ನು ತ್ಯಜಿಸಲಿ, ಅಪಾರ್ಥೈಡ್ ಅನ್ನು ನಾಶಗೊಳಿಸುವುದಾಗಿ ಹೇಳಲಿ, ಜನತೆಯ ಸಂಘಟನೆಯಾದ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಮೇಲೆ ನಿಷೇಧವನ್ನು ರದ್ದುಪಡಿಸಲಿ. ಅಪಾರ್ಥೈಡ್ ಅನ್ನು ವಿರೋಧಿಸಿದ್ದಕ್ಕಾಗಿ ಜೈಲು ಶಿಕ್ಷೆಗೊಳಗಾದ, ಹೊರಗಟ್ಟಿದ ಅಥವಾ ಗಡಿಪಾರು ಮಾಡಿದ ಎಲ್ಲರನ್ನು ಬಿಡುಗಡೆಗೊಳಿಸಲಿ, ತಮ್ಮನ್ನು ಯಾರು ಆಳಬೇಕೆಂಬುದನ್ನು ಜನರೇ ನಿರ್ಧರಿಸಲು ಸಾಧ್ಯವಾಗುವಂಥ ಮುಕ್ತ ರಾಜಕೀಯ ಚಟುವಟಿಕೆಗಳ ಭರವಸೆ ನೀಡಲಿ.

ನಾನು ನನ್ನ ಸ್ವಾತಂತ್ರ್ಯವನ್ನು ಪ್ರೀತಿಯಿಂದ ಪೋಷಿಸುವೆ. ಆದರೆ ನಿಮ್ಮ ಸ್ವಾತಂತ್ರ್ಯಕ್ಕಾಗಿ ಇನ್ನೂ ಹೆಚ್ಚಿನ ಕಾಳಜಿ ವಹಿಸುವೆ. ನಾನು ಜೈಲಿಗೆ ಹೋದಂದಿನಿಂದ ಎಷ್ಟೊಂದು ಜನ ಸತ್ತಿದ್ದಾರೆ. ಸ್ವಾತಂತ್ರ್ಯದ ಪ್ರೀತಿಗಾಗಿ ಎಷ್ಟೊಂದು ಜನ ನರಳಿದ್ದಾರೆ. ಅವರಿಗಾಗಿ ದುಃಖಪಟ್ಟ ಮತ್ತು ಅತ್ತ ವಿಧವೆಯರಿಗೆ, ಅನಾಥ ಮಕ್ಕಳಿಗೆ, ಅಪ್ಪ-ಅಮ್ಮಂದಿರರಿಗೆ ನಾನು ಋಣಿಯಾಗಿದ್ದೇನೆ. ಈ ದೀರ್ಘ ಒಂಟಿತನ ಮತ್ತು ನಿಸ್ಸಾರ ವರ್ಷಗಳಲ್ಲಿ ದುಃಖಿ ಆದವನು ನಾನೊಬ್ಬನೇ ಅಲ್ಲ. ನಾನು ನಿಮಗಿಂತ ಕಡಿಮೆ ಬದುಕು ಪ್ರೀತಿಸಿದವನಲ್ಲ. ಆದರೆ ನಾನು ನನ್ನ ಜನ್ಮಸಿದ್ಧ ಹಕ್ಕನ್ನು ಮಾರಲು ನಾ ಸಿದ್ಧವಿಲ್ಲ. ಜನತೆಯ ಮತ್ತು ನಿಷೇಧಿಸಿದ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಪ್ರತಿನಿಧಿಯಾಗಿ ನಾನು ಜೈಲಿನಲ್ಲಿ ಇದ್ದೇನೆ.

ಜನರ ಸಂಘಟನೆ ಮೇಲಿನ ನಿಷೇಧ ಹಾಗೆ ಇರುವಾಗ ನನಗೆ ಎಂಥ ಸ್ವಾತಂತ್ರ್ಯ ಕೊಡಲು ಸಾಧ್ಯ? ಪಾಸ್ ಅಡಚಣೆಯೊಡ್ಡಿ ನನ್ನನ್ನು ಬಂಧಿಸಲು ಸಾಧ್ಯವಿರುವಾಗ ನನಗೆ ಎಂಥ ಸ್ವಾತಂತ್ರ್ಯ ಕೊಡಲು ಸಾಧ್ಯ? ನನ್ನ ಪ್ರಿಯ ಪತ್ನಿ ಬ್ರ್ಯಾಂಡ್ ಪೋರ್ಟ್‌ನಲ್ಲಿ ಗಡೀಪಾರಾಗಿ ಬದುಕುತ್ತಿರುವಾಗ ಕುಟುಂಬ ಜೀವನ ಸಾಗಿಸಲು ನನಗೆ ಎಂಥ ಸ್ವಾತಂತ್ರ್ಯ ಕೊಡಲು ಸಾಧ್ಯ? ನಗರ ಪ್ರದೇಶದಲ್ಲಿ ಬದುಕಲು ನಾನು ಅನುಮತಿ ಕೊಡಲೇಬೇಕಾದಾಗ ನನಗೆ ಎಂಥ ಸ್ವಾತಂತ್ರ್ಯ ಕೊಡಲು ಸಾಧ್ಯ? ಕೆಲಸ ಪಡೆಯುವುದಕ್ಕಾಗಿ ನನ್ನ ಪಾಸ್‌ನಲ್ಲಿ ಸ್ಟಾಂಪಿನ ಅವಶ್ಯಕತೆ ಇರುವಾಗ ನನಗೆ ಎಂಥ ಸ್ವಾತಂತ್ರ್ಯ ಕೊಡಲು ಸಾಧ್ಯ? ನನ್ನ ದಕ್ಷಿಣ ಆಫ್ರಿಕಾದ ಪೌರತ್ವವನ್ನೇ ಕಡೆಗಣಿಸಿದಾಗ ನನಗೆ ಎಂಥ ಸ್ವಾತಂತ್ರ್ಯ ಕೊಡಲು ಸಾಧ್ಯ?

ಕೇವಲ ಸ್ವತಂತ್ರ ಮನುಷ್ಯರು ಮಾತ್ರ ಒಪ್ಪಂದ ಮಾಡಿಕೊಳ್ಳಲು ಸಾಧ್ಯ. ಕೈದಿಗಳು ಸಂಧಾನದಲ್ಲಿ ಭಾಗಿಯಾಗಲಾರರು. ಹರ್ಮನ್ ತೊಯಿವೊ ಜಾ ತೊಯಿವೊ ಬಿಡುಗಡೆಯಾದಾಗ ಯಾವುದೇ ವಾಗ್ದಾನ ಮಾಡಲಿಲ್ಲ. ಹಾಗೆ ಮಾಡಬೇಕೆಂದು ಅವರಿಗೆ ಹೇಳಲೂ ಇಲ್ಲ.

ನಾನು ಮತ್ತು ನೀವು, ಜನತೆ ಸ್ವತಂತ್ರರಾಗಿ ಇಲ್ಲದ ಈ ಕಾಲ ಘಟ್ಟದಲ್ಲಿ ನಾನು ಯಾವುದೇ ವಾಗ್ದಾನ ಮಾಡಲಾರೆ, ಮಾಡುವುದಿಲ್ಲ. ನಿಮ್ಮ ಮತ್ತು ನನ್ನ ಸ್ವಾತಂತ್ರ್ಯವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ನಾ ಮರಳಿ ಬರುವೆ.

## ಪರಾಮರ್ಶನ ಗ್ರಂಥಗಳು

೧. ರಾಬರ್ಟ್ ಡಿ ಗ್ರೀಸ್ ಆ್ಯಂಡ್ ಕಾಥಲೀನ್ ಮಿ ಥೂಗೂ, ಸೌತ್ ಆಫ್ರಿಕ್ ಫರಗನ್ ಇನ್‌ವೆಸ್ಟ್‌ಮೆಂಟ್ ಆ್ಯಂಡ್ ಅಫಾರ್ಥಡ್ ಬೈ ಲಾರೆನ್ಸ್ ಲಿಟ್ವಿಕ್

೨. ರೊಗರ್ ಒಮಾನ್ಡ್, ಅಪಾರ್ಥಡ್ ಹ್ಯಾಂಡ್ ಬುಕ್

೩. ದಾವನೀಪೂರ್ಡ್, ಸೌವುತ್ ಆಫ್ರಿಕಾ ಎ ಮಾಡ್ರನ್ ಹಿಸ್ಟರಿ

೪. ಮೇರಿ ಬೀನ್ಸನ್, ನೆಲ್ಸನ್ ಮಂಡೇಲ

೫. ಬೋರ್ರಿಸ್ ಆಸೋಯನ್, ನೆಲ್ಸನ್ ಮಂಡೇಲ

೧೧

# ನೆಲ್ಸನ್ ಮಂಡೇಲಾ ಬಿಡುಗಡೆ ಮತ್ತು ನಂತರದ ದಿನಗಳು

ರಮೇಶ ನಾಯಕ

ದಕ್ಷಿಣ ಆಫ್ರಿಕಾದ ಜನತೆಯ ಸ್ವಾತಂತ್ರ್ಯಕ್ಕಾಗಿ ಹಗಲಿರುಳು ದುಡಿದ ನೆಲ್ಸನ್ ಮಂಡೇಲಾ ಅವರು ೨೦ನೆಯ ಶತಮಾನದ ಶ್ರೇಷ್ಠ ಹೋರಾಟಗಾರರಾಗಿ ಪ್ರಸಿದ್ಧಿಯಾಗಿದ್ದಾರೆ. ನಾನು ಆಫ್ರಿಕನ್ ಜನತೆಯ ಸ್ವಾತಂತ್ರ್ಯದ ಹೋರಾಟಕ್ಕಾಗಿಯೇ ನನ್ನನ್ನು ಅರ್ಪಿಸಿಕೊಂಡಿದ್ದೇನೆ. ಬಿಳಿಯರ ದಬ್ಬಾಳಿಕೆಯ ವಿರುದ್ಧ ಜೀವಂತವಾಗಿರುವವರೆಗೆ ನಿರಂತರವಾಗಿ ಹೋರಾಡುತ್ತೇನೆ. ಇದೇ ಸಮಯದಲ್ಲಿ ಕಪ್ಪು ಶ್ರೀಮಂತರ ದಬ್ಬಾಳಿಕೆಯನ್ನು ವಿರೋಧಿಸುತ್ತೇನೆ. ಈ ಎಲ್ಲ ಜನತೆಯನ್ನೊಳಗೊಂಡ ಸಮಾನತೆಯ ಹಾಗೂ ಸೌಹಾರ್ದತೆ ಯಿಂದ ಬದುಕುವ ಆದರ್ಶ ಪ್ರಜಾಪ್ರಭುತ್ವದ ಗುಣವುಳ್ಳ ಸಮಾಜವನ್ನು ನಿರ್ಮಿಸ ಬಯಸುತ್ತೇನೆ. ಇಂತಹ ಸಾಧನೆಗಾಗಿ ಬದುಕುತ್ತೇನೆ. ಹಾಗೂ ಅಂತಹ ಸಂಗತಿಗಳಿಗಾಗಿ ಸಾಯಲು ಸಿದ್ಧನಿದ್ದೇನೆ ಎಂದು ಅಭಿಪ್ರಾಯಿಸಿ ಹಾಗೆ ನಡೆದುಕೊಂಡ ಧೀಮಂತ ವ್ಯಕ್ತಿಯಾಗಿ ಮೆರೆದಿದ್ದಾರೆ. ಹಲವು ದಶಕಗಳ ನಿರಂತರ ಹೋರಾಟದಲ್ಲಿಯೇ ತಮ್ಮ ಬದುಕನ್ನು ಸವೆಸಿದ ಮಂಡೇಲಾ ಮಾನವೀಯತೆಗಾಗಿ 'ಐ ಆ್ಯಮ್ ಪ್ರಿಪೇರ್ಡ್ ಟು ಡೈ' ಎಂಬ ಧ್ಯೇಯ ವಾಕ್ಯವನ್ನು ಹೇಳಿ ಜಗತ್ ಪ್ರಸಿದ್ಧರಾಗಿದ್ದಾರೆ. ೨೦ನೇ ಶತಮಾನದ ಧ್ರುವತಾರೆಯಾಗಿ ಮೆರೆದ ನೆಲ್ಸನ್ ಮಂಡೇಲಾ ಅವರ ಜೈಲುವಾಸದ ಬಿಡುಗಡೆಯ ನಂತರದ ದಿನಗಳ ಬಗೆಗೆ ಈ ಲೇಖನದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ನೈಲ್ಸನ್ ಮಂಡೇಲಾ ಜೈಲುವಾಸದ ೨೭ ವರ್ಷಗಳ ಶಿಕ್ಷೆಯಲ್ಲಿ ೧೮ ವರ್ಷಗಳ ಕಾಲ ರಾಬೆನ್ ಐಸ್‌ಲ್ಯಾಂಡ್‌ನ ಕಾರಾಗೃಹದಲ್ಲಿ ಕಳೆದರು. ಅವರು ಅನುಭವಿಸಿದ ಶಿಕ್ಷೆ ಹಾಗೂ ಆ ಸಂದರ್ಭದಲ್ಲಿ ಅವರು ತಳೆದ ಅಭಿಪ್ರಾಯಗಳಿಂದ ಇಡೀ ಸೌತ್ ಆಫ್ರಿಕಾದ ಕಪ್ಪು ಜನಾಂಗದ ಅದ್ವಿತೀಯ ಮೇರು ನಾಯಕನಾಗಿ ಪ್ರಸಿದ್ಧಿಗೆ ಬಂದರು. ಪ್ರಿಟೋರಿಯಾ ಜೈಲಿನಲ್ಲಿ ಜೈಲಿನ ಕ್ರೂರ ಅಧಿಕಾರಿಗಳು ಕೊಡುವ ಅತೀ ಕಷ್ಟದ ಕೆಲಸವನ್ನು ಅವರು

ಮಾಡಬೇಕಿತ್ತು. ಕಠೋರವಾದ ಶಿಕ್ಷೆಗೆ ಒಳಪಡಿಸುತ್ತಿದ್ದಲ್ಲದೇ ಜೈಲಿನಲ್ಲಿ ಜನಾಂಗ ಹಾಗೂ ವರ್ಣದ ನೀತಿಗಳ ಮೇಲೆ ತಾರತಮ್ಯವನ್ನು ಅಧಿಕಾರಿಗಳು ಅವ್ಯಾಹತವಾಗಿ ಮಾಡುತ್ತಿದ್ದರು. ಕಪ್ಪು ಜನಾಂಗದವರಿಗೆ ಮಾತ್ರ ಅತೀ ಕಡಿಮೆ ಆಹಾರವನ್ನು ಕೊಡುತ್ತಿದ್ದರು. ಅತೀ ಕಷ್ಟದ ಹಾಗೂ ಹೆಚ್ಚಿನ ಕೆಲಸವನ್ನು ಕಪ್ಪು ಕೈದಿಗಳಿಂದ ಮಾತ್ರ ತೆಗೆದುಕೊಳ್ಳುತ್ತಿದ್ದರು. ಸಾಮಾನ್ಯವಾಗಿ ರಾಜಕೀಯ ಕೈದಿಗಳಿಗೆ ಮತ್ತು ಇತರ ಕೈದಿಗಳಿಗೆ ಪ್ರತ್ಯೇಕ ಸೆಲ್‌ನಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಆದರೆ ನೆಲ್ಸನ್ ಮಂಡೇಲಾ ಅವರಿಗೆ ಡಿ ದರ್ಜೆಯ ಕೈದಿಗಳಿಗೆ ಕೊಡುವ ಸವಲತ್ತನ್ನು ಮಾತ್ರ ನೀಡಲಾಗಿತ್ತು. ಸರ್ಕಾರ ಬಯಸಿದ್ದಲ್ಲಿ ಒಬ್ಬರು ಮಾತ್ರ ಅವರನ್ನೂ ಭೇಟಿ ಮಾಡಬಹುದಾಗಿತ್ತು. ಹಾಗೂ ಆರು ತಿಂಗಳಿಗೊಮ್ಮೆ ಮಾತ್ರ ಅವರಿಗೆ ಬಂದಿರುವ ಪತ್ರವನ್ನು ಒಟ್ಟಾಗಿ ನೀಡಲಾಗುತ್ತಿತ್ತು. ಅಂಥಹದರಲ್ಲಿಯೂ ಸಹ ಅವರಿಗೆ ಬಂದಿರುವ ಪತ್ರಗಳೆಲ್ಲವುಗಳು ಎಲ್ಲ ಹಂತದಲ್ಲಿಯೂ ವಿಚಾರಣೆಗೊಳಗಾಗುತ್ತಿದ್ದವು. ಇಂಥ ಅನೇಕ ಕಷ್ಟಕಾರ್ಪಣ್ಯಗಳ ಮಧ್ಯೆ ಅರ್ಧಕ್ಕೆ ನಿಂತು ಹೋಗಿದ್ದ ತಮ್ಮ ವಿದ್ಯಾಭ್ಯಾಸವನ್ನು ಜೈಲಿನಲ್ಲಿದ್ದ ಮುಂದುವರೆಸಿ ಲಂಡನ್ ವಿಶ್ವವಿದ್ಯಾಲಯದಿಂದ ಕಾನೂನು ಪದವಿಯನ್ನು ಪೂರೈಸಿದರು. ಜೈಲಿನಲ್ಲಿದ್ದಾಗ ನೆಲ್ಸನ್ ಮಂಡೇಲಾ ಅವರಿಗೆ ತಪ್ಪಿಸಿಕೊಳ್ಳುವ ಅವಕಾಶವನ್ನು ಜೈಲು ಅಧಿಕಾರಿಗಳೇ ಸ್ವತಃ ಸೃಷ್ಟಿಸಿದ್ದರು. ಕಾರಣ ಅವರು ಉತ್ತೇಜನಗೊಂಡು ತಪ್ಪಿಸಿಕೊಳ್ಳುವ ಸಮಯದಲ್ಲಿ ಕುತಂತ್ರದಿಂದ ಶೂಟ್ ಮಾಡಿ ಸಾಯಿಸುವ ತಂತ್ರವನ್ನು ಪ್ರಿಟೋರಿಯ ಆಡಳಿತ ರೂಪಿಸಿತ್ತು ಎಂದು ಗುಪ್ತವರದಿಗಳು ತಿಳಿಯಪಡಿಸಿದವು. ರಾಬಿನ್ ಐಸ್‌ಲ್ಯಾಂಡ್ ಸೆರೆಮನೆಯಿಂದ ಪಾಲ್ಸ್ ಮೂರ್ ಕಾರಾವಾಸಕ್ಕೆ ನೆಲ್ಸನ್ ಮಂಡೇಲಾ ಅವರನ್ನು ಒಳಗೊಂಡಂತೆ ಎಲ್ಲ ಪ್ರಮುಖ ನಾಯಕರನ್ನು ಸ್ಥಳಾಂತರಿಸಲಾಯಿತು. ಕಾರಣ ವರ್ಣಭೇದ ನೀತಿ ವಿರುದ್ಧದ ಹೋರಾಟದ ಸಂಬಂಧವಾಗಿ ಬಂಧಿಸಲ್ಪಟ್ಟು ಲಕ್ಷಾನು ಸಂಖ್ಯೆಯಲ್ಲಿ ಸಾಗರೋಪಾದಿಯಾಗಿ ಬರುತ್ತಿದ್ದ ಯುವ ಆಫ್ರಿಕಾ ಶಕ್ತಿಯ ಸಂಪರ್ಕದಿಂದ ಜೈಲಿನಲ್ಲಿರುವ ಕ್ರಾಂತಿಕಾರಿಗಳನ್ನು ಬೇರ್ಪಡಿಸುವ ಉದ್ದೇಶವನ್ನು ಸರಕಾರ ಹೊಂದಿತ್ತು. ಈ ಜೈಲಿನ ಕೈದಿಗಳ ಪ್ರಭಾವದಿಂದ ಪ್ರೇರಿತವಾಗಿ ಆಫ್ರಿಕಾ ದೇಶದ ಎಲ್ಲ ಜನಸಾಮಾನ್ಯರು ಹೋರಾಟವನ್ನು ಜೀವಂತವಾಗಿ ಸದಾ ಕಾಪಾಡಿಕೊಂಡು ಬಂದಿರುವ ಸಾಕ್ಷಿಗಳಿದ್ದವು. ಈ ಕಾರಣಕ್ಕಾಗಿ ರಾಬಿನ್ ಐಸ್‌ಲ್ಯಾಂಡ್ ಕಾರಾವಾಸವನ್ನು 'ಮಂಡೇಲಾ ಯುನಿವರ್‌ಸಿಟಿ' ಎಂದು ಕರೆಯಲಾಗುತಿತ್ತು. ಅಂದರೆ ರಾಬಿನ್ ಐಸ್‌ಲ್ಯಾಂಡ್ ಕಾರಗೃಹವು ಎಷ್ಟೊಂದು ಪರಿಣಾಮವನ್ನು ಅಲ್ಲಿಯ ಸ್ವಾತಂತ್ರ್ಯ ಹೋರಾಟದ ಮೇಲೆ ಮಾಡಿದ್ದಿರಬಹುದೆಂದು ಊಹಿಸಬಹುದಾಗಿದೆ. ಇಂಥ ಆರೋಪದಿಂದ ಮುಕ್ತಗೊಳ್ಳಲು ಸರಕಾರವು ಬೇರೆ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿತು. ಮಂಡೇಲಾರನ್ನು ಒಳಗೊಂಡು ಇನ್ನಿತರ ಪ್ರಮುಖ ಕೈದಿಗಳ ಸ್ಥಳಾಂತರವು ನ್ಯಾಷನಲ್ ಪಾರ್ಟಿಯ ಸರಕಾರ ಹಾಗೂ ಕಪ್ಪು ಜನಾಂಗದ ಮುಖಂಡರ ನಡುವೆ ರಹಸ್ಯವಾಗಿ ಮಾತುಕತೆ ನಡೆಯುವ ಸಲುವಾಗಿ ಮಾಡಲಾಗಿತ್ತು ವಿನಹ ಮತ್ತಾವ ಉದ್ದೇಶವನ್ನು ಸರ್ಕಾರ ಹೊಂದಿರಲಿಲ್ಲ ಎಂದು

ಮಂತ್ರಿಯೊಬ್ಬರು ಅಭಿಪ್ರಾಯಿಸುವ ಮೂಲಕ ತೇಪೆ ಹಚ್ಚುವ ಕೆಲಸ ಮಾಡಲಾಯಿತು. ಸಶಸ್ತ್ರ ಹೋರಾಟವನ್ನು ಹಿಂತೆಗೆದುಕೊಳ್ಳುವ ಷರತ್ತಿನ ಮೇಲೆ ನೆಲ್ಸನ್ ಮಂಡೇಲಾ ಅವರನ್ನು ಸೆರೆವಾಸದಿಂದ ಮುಕ್ತಗೊಳಿಸಲು ಅಧ್ಯಕ್ಷ ಪಿಕ್ ಡಬ್ಲ್ಯು ಬೋಥೋ ಒಪ್ಪಿದ್ದರು. ಆದರೆ ಈ ಕೊಡುಕೊಳ್ಳುವಿಕೆಯ ಒಪ್ಪಂದದ ಮುಂದಿನ ಪರಿಣಾಮಗಳ ಬಗೆಗೆ ಸರಕಾರ ಹಾಗೂ ಎಎನ್‌ಸಿ ಮಧ್ಯೆ ವಾಗ್ವಾದವಾಗಿ ಮತ್ತೆ ಹೆಚ್ಚಿನ ಬಿರುಕು ಉಂಟು ಮಾಡಿತು. ಸ್ವತಃ ಮಂಡೇಲಾ ಅವರೇ ಇದರ ಬಗೆಗೆ ಹೇಳಿಕೆ ನೀಡುತ್ತಾ, ಯಾವುದೇ ಒಬ್ಬ ವ್ಯಕ್ತಿ 'ವ್ಯಕ್ತಿ ಸ್ವಾತಂತ್ರ್ಯ'ವನ್ನು ಪಡೆಯುವರೆಗೆ ಬಿಡುಗಡೆ ಹಾಗೂ ಸಂಘಟನೆ ಎಂಬ ಒಪ್ಪಂದದ ಮಾತುಗಳೇ ಇಲ್ಲ ಎಂದು ಖಂಡತುಂಡಾಗಿ ಅಭಿಪ್ರಾಯಿಸಿದರು. ಹೀಗಾಗಿ ತಾತ್ಕಾಲಿಕವಾಗಿ ಹುಟ್ಟಿಕೊಂಡಿದ್ದ ಗೊಂದಲಗಳಿಗೆ ಸ್ವತಹ ಮಂಡೇಲಾ ಅವರೇ ಹೇಳಿಕೆ ನೀಡುವುದರ ಮೂಲಕ ಪೂರ್ಣ ವಿರಾಮ ಹಾಕಿದರು.

ಅನಾರೋಗ್ಯದ ಕಾರಣ ೧೯೮೮ರಲ್ಲಿ ತಾತ್ಕಾಲಿಕ ಬಿಡುಗಡೆಗೆ ಸರಕಾರ ಒಪ್ಪಿತು. ಕೇಪ್ ಟೌನ್‌ನ ಆಸ್ಪತ್ರೆಗೆ ಸೇರಿಸಲಾಯಿತು. ಚಿಕಿತ್ಸೆ ಪಡೆಯುತ್ತಿದ್ದ ನೆಲ್ಸನ್ ಮಂಡೇಲಾ ಅವರನ್ನು ರಾಷ್ಟ್ರೀಯ ಪಕ್ಷದ ಸರಕಾರದಲ್ಲಿದ್ದ ಮಂತ್ರಿ ಕೊಬಿ ಕೊಟ್ಸೀ ಮೊಟ್ಟ ಮೊದಲಿಗೆ ಭೇಟಿ ಮಾಡಿದರು. ಇಂಥ ಬೆಳವಣಿಗೆಯು ಮುಂದಿನ ಮಾತುಕತೆಗಳಿಗೆ ದಾರಿ ಮಾಡಿಕೊಟ್ಟಿತು. ಸುಮಾರು ನಾಲ್ಕು ವರ್ಷಗಳ ಕಾಲ ಗಂಭೀರವಾದ ಚರ್ಚೆಗಳು ಎಎನ್‌ಸಿ ಮತ್ತು ಪ್ರಿಟೋರಿಯಾ ಸರಕಾರದ ನಡುವೆ ನಡೆದವು. ಮಂಡೇಲಾ ಅವರನ್ನು ಸೆರೆವಾಸಕ್ಕೆ ದೂಡಿದ ದಿನದಿಂದ ಹಿಡಿದೂ ೧೯೮೫ರ ವರೆಗಿನ ಕಾಲಾವಧಿಯಲ್ಲಿ ಸ್ಥಳೀಯವಾಗಿ, ಆಫ್ರಿಕಾ ಖಂಡದಲ್ಲಿರುವ ರಾಷ್ಟ್ರಗಳಲ್ಲಿ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅವರ ಬಿಡುಗಡೆಗಾಗಿ ಅನೇಕ ತರಹದ ತೀವ್ರತರ ಒತ್ತಡಗಳು ಹಾಗೂ ಹೋರಾಟಗಳು ಜೋರಾಗಿ ನಡೆದವು. ೧೯೮೯ರ ಹೊತ್ತಿಗೆ ಮಾನವಹಕ್ಕುಗಳು ಹಾಗೂ ಸ್ವಾತಂತ್ರ್ಯದ ಬಗೆಗೆ ಸಂಬಂಧಿಸಿದ ವಿಷಯಗಳಲ್ಲಿ ಹೊಣೆಗಾರಿಕೆಯಿಂದ ವರ್ತಿಸುತ್ತಿದ್ದ ಅಂತಾರಾಷ್ಟ್ರೀಯ ಸಂಘಟನೆಗಳು ಹಾಗೂ ಬೇರೆ ಬೇರೆ ದೇಶಗಳ ಪ್ರಜ್ಞಾವಂತರು ಅಧ್ಯಕ್ಷ ಪಿ.ಡಬ್ಲ್ಯು.ಬೋಥಾ ಮೇಲೆ ತೀವ್ರವಾದ ಒತ್ತಡ ಹೇರಿದರು. ಈ ಹಿನ್ನೆಲೆಯಲ್ಲಿ ನ್ಯಾಷನಲ್ ಪಾರ್ಟಿ ಸರಕಾರ ವಿಧಿಯಿಲ್ಲದೆ ಮಂಡೇಲಾ ಬಿಡುಗಡೆ ಬಗೆಗಿನ ಮಾತುಕತೆಗಳಿಗೆ ಒಗ್ಗಲೇ ಬೇಕಾಯಿತು. ಆದರೆ ದುರದೃಷ್ಟವಶಾತ್ ಇದೇ ವೇಳೆಗೆ ಅಧ್ಯಕ್ಷ ಬೋಥೊ ಅವರು ಪಾರ್ಶ್ವವಾಯು ಹೊಡೆತದಿಂದ ಅಧಿಕಾರ ತ್ಯಜಿಸಬೇಕಾಯಿತು. ಹೀಗಾಗಿ ಆಫ್ರಿಕಾದ ಹೋರಾಟಗಾರರ ಬಗೆಗೆ ಮೃದು ಧೋರಣೆ ತಾಳಿದ್ದ ನ್ಯಾಷನಲ್ ಪಾರ್ಟಿ ಸರಕಾರ ತನ್ನ ನಿಲುವುಗಳಲ್ಲಿನ ಬದಲಾವಣೆಗೆ ಹಿಂದೇಟು ಹಾಕಿತು. ಅದ್ದರಿಂದ ಬಿಡುಗಡೆಯು ನಿರ್ಧಾರ ಮತ್ತೆ ಒಂದು ವರ್ಷ ಕಾಲ ಮುಂದೂಡಿತು. ಆದರೆ ಬಿಡುಗಡೆಗೆ ಸಂಬಂಧಿಸಿದ ಹೋರಾಟಗಳು ವ್ಯಾಪಕಗೊಂಡು ಪರಿಸ್ಥಿತಿ ತುಂಬ ಬಿಗಡಾಯಿಸಿತು. ತೆರವಾದ ಸ್ಥಾನಕ್ಕೆ ಬಂದ ಎಫ್.ಡಬ್ಲ್ಯು.ಡಿ.ಕ್ಲರ್ಕ (Frederik willem de Klerk) ಅವರು ೧೯೯೦ರಲ್ಲಿ ನೆಲ್ಸನ್

ಮಂಡೇಲಾ ಅವರನ್ನು ಬಂಧಮುಕ್ತಗೊಳಿಸುವುದಾಗಿ ಘೋಷಿಸಿದರು. ಕಾರಣ ಸರಕಾರಕ್ಕೆ ಇದು ಅನಿವಾರ್ಯವಾಗಿತ್ತು.

### ಬಿಡುಗಡೆಗೊಂಡ ಬೇಡಿ

ಅಧ್ಯಕ್ಷ ಕ್ಲರ್ಕ್ ಅವರು ೨ನೇ ಫೆಬ್ರವರಿ ೧೯೯೦ರಲ್ಲಿ ಎಎನ್‌ಸಿ ಹಾಗೂ ಉಳಿದ ಎಲ್ಲ ಸಂಘಟನೆಗಳ ಮೇಲೆ ಹೇರಿದ್ದ ದಿಗ್ಬಂಧನವನ್ನು ತೆರವುಗೊಳಿಸಿದರು. ಅಲ್ಲದೇ ೧೯೯೦ನೆಯ ಫೆಬ್ರವರಿ ೧೧ರಂದು ಕಾರಾವಾಸದಿಂದ ನೆಲ್ಸನ್ ಮಂಡೇಲಾ ಅವರಿಗೆ ರಾಷ್ಟ್ರವನ್ನು ಉದ್ದೇಶಿಸಿ ಮಾತನಾಡುವ ಅವಕಾಶ ನೀಡಲಾಯಿತು. ಈ ಸಂದರ್ಭದಲ್ಲಿ ಅವರು ಹೋರಾಟಗಾರರನ್ನು ಉದ್ದೇಶಿಸಿ ಮಾತನಾಡುತ್ತಾ ನಮ್ಮ ಸಶಸ್ತ್ರ ಹೋರಾಟ ಬಿಳಿಯ ಸರಕಾರ ಮಾಡುತ್ತಿರುವ ವರ್ಣಭೇದ ತಾರತಮ್ಯಗೋಸ್ಕರ ನೀತಿಗೆ ವಿರುದ್ಧವಾಗಿ ಹೊರತು ದೇಶದಲ್ಲಿ ಅಶಾಂತಿ ಹಾಗೂ ಭಯವನ್ನು ಹುಟ್ಟಿಸುವುದಲ್ಲವೆಂದು ಮತ್ತೆ ಪ್ರತಿಪಾದಿಸಿದರು. ಇಂಥ ಆಯ್ಕೆಯ ಹೊರತು ನಮಗೆ ಬೇರೆ ಯಾವ ದಾರಿಗಳಿಲ್ಲ. ಇದನ್ನು ತಪ್ಪಿಸಲು(ಹಿಂಸಾತ್ಮಕ ಹೋರಾಟ) ಬಹುಮತದಿಂದ ಆಯ್ಕೆಗೊಂಡ ಸರಕಾರ ದೇಶದ ಆಡಳಿತವನ್ನು ನಿರ್ವಹಿಸಬೇಕಾಗಿರುವುದು ಅತ್ಯಾವಶ್ಯಕವೆಂದು ದಿಟವಾಗಿ ನುಡಿದರು. ಇದೇ ವೇಳೆಗೆ ಕಪ್ಪು ಜನಾಂಗ ಮಾಡುತ್ತಿದ್ದ ಹೋರಾಟ ಕುರಿತು ಶಾಂತಿಯಿಂದ ಇರುವಂತೆ ಮನವಿ ಮಾಡಿಕೊಂಡರು. ಅಲ್ಲದೇ ಮುಂದಿನ ದಿನಗಳಲ್ಲಿ ನಡೆಯಬಹುದಾದ ಚುನಾವಣೆಗಳಲ್ಲಿ ಎಲ್ಲ ಜನರಿಗೂ ಯಾವ ಭೇದವಿಲ್ಲದೇ ಮತದಾನದ ಪರಮಾಧಿಕಾರ ನೀಡಬೇಕೆಂದು ಒತ್ತಾಯ ಪೂರ್ವಕ ಆಗ್ರಹ ಮಾಡಿದರು.

### ಸಂಧಾನ ಸಮಾಲೋಚನೆಗಳು

ಬಿಡುಗಡೆಗೊಂಡ ನೆಲ್ಸನ್ ಮಂಡೇಲಾ ಅವರು ೧೯೯೧ರಲ್ಲಿ ಎಎನ್‌ಸಿಯ ನೇತೃತ್ವವನ್ನು ವಹಿಸಿಕೊಂಡರು. ಅಧಿಕಾರವಹಿಸಿಕೊಂಡ ಮಂಡೇಲಾ ಮೊದಲು ಎಎನ್‌ಸಿ ಪಕ್ಷದಲ್ಲಿ ಬಹು ಜನಾಂಗಗಳು ಭಾಗವಹಿಸುವಿಕೆಯಿಂದ ಅದಕ್ಕೊಂದು ಹೊಸ ಸ್ವರೂಪ ನೀಡುವ ಪ್ರಯತ್ನ ಮಾಡಿದರು. ಸ್ವಾತಂತ್ರ್ಯ ಹೋರಾಟಗಾರರು ಹಲವು ದಶಕಗಳ ದಿಗ್ಬಂಧನದಿಂದ ಮುಕ್ತವಾದ ನಂತರ ಅದಕ್ಕೊಂದು ಸಭೆಯನ್ನು ನಡೆಸಲಾಯಿತು. ತಮ್ಮ ಮುಂದಿನ ಹೋರಾಟದ ನಾಯಕನ್ನನ್ನು ಕಂಡುಕೊಂಡ ಜನರು ಈ ಸಭೆಯಲ್ಲಿ ಸರ್ವಾನುಮತದಿಂದ ನೆಲ್ಸನ್ ಮಂಡೇಲಾ ಅವರನ್ನು ಎಎನ್‌ಸಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಂಡರು.

ನೆಲ್ಸನ್ ಮಂಡೇಲಾರ ಜೈಲುವಾಸದ ಸಮಯದಲ್ಲಿ ಎಎನ್‌ಸಿಯನ್ನು ಮುನ್ನಡೆಸಿದ ಒಲಿವರ್ ಟ್ಯಾಂಬೋ ಅವರನ್ನು ಗೌರವಾಧ್ಯಕ್ಷರನ್ನಾಗಿ ನೇಮಿಸಲಾಯಿತು. ಮಂಡೇಲಾ ಅವರು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಅಧ್ಯಕ್ಷತೆಯ ಜವಾಬ್ದಾರಿಯನ್ನು ವಹಿಸಿಕೊಂಡ ನಂತರ ಅಧ್ಯಕ್ಷ ಎಫ್.ಡಬ್ಲ್ಯೂ.ಡಿ.ಕ್ಲರ್ಕ್ ಅವರೊಂದಿಗೆ ಸಂಧಾನ ಸಮಾಲೋಚನೆಗಳ

ಮೂಲಕ ಸೌಹರ್ದ ಸಂಬಂಧ ಸ್ಥಾಪಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದರು. ಇದಕ್ಕೆ ಸರಕಾರವು ಸಹ ಸಾಕಾರಾತ್ಮಕ ಧೋರಣೆ ತಾಳಿತು. ಕೆಲವೊಮ್ಮೆ ಮನಸ್ಸಿಲ್ಲದಿದ್ದರೂ ಅಧ್ಯಕ್ಷ ಕ್ಲರ್ಕ್ ಮತ್ತು ಮಂಡೇಲಾ ಅವರು ಅಂತಾರಾಷ್ಟ್ರೀಯ ಸಂಘಟನೆಗಳ ಬಲವಂತದ ಒತ್ತಡದ ಮೇಲೆ ಕೆಲವು ಸಮಾಲೋಚನೆ ಸಂಧಾನಗಳನ್ನು ಕೈಗೊಂಡದ್ದುಂಟು. ಅಂದಿನ ಆಡಳಿತವು ನ್ಯಾಯಸಮ್ಮತವಲ್ಲದ, ತಾರತಮ್ಯತೆಯಿಂದ ಕೂಡಿದ ಹಾಗೂ ಅತಿಯಾಗಿ ಅಲ್ಪಸಂಖ್ಯಾತರ (ಬಿಳಿಯರು) ತುಷ್ಟೀಕರಣ ಕ್ರಮಗಳನ್ನು ನಿರ್ವಹಿಸುತ್ತಿದ್ದರೂ ಮಂಡೇಲಾ ಅವರು ಕ್ಲರ್ಕ್ ಜೊತೆ ಹೊಂದಿದ್ದ ಒಳ್ಳೆಯ ಸಂಬಂಧದಿಂದಾಗಿ ಕೆಲವು ಒಪ್ಪಂದಗಳನ್ನು ಮನಸ್ಸಿಲ್ಲದಿದ್ದರೂ ದೇಶದ ಮುಂದಿನ ಆಗುಹೋಗುಗಳಿಗಾಗಿ ಒಪ್ಪಿಕೊಂಡರು. ಆದರೆ ೧೯೯೨ರಲ್ಲಿ ನಡೆದ ಬಾಯೋಪಾಟಾಂಗ್ ಹತ್ಯಾಕಾಂಡದಿಂದ ಮತ್ತೆ ಪರಿಸ್ಥಿತಿ ಬಿಗಡಾಯಿಸಿ ದೇಶದಲ್ಲಿ ಹೆಚ್ಚಿನ ಅಶಾಂತಿ ಉಂಟಾಯಿತು. ಅಲ್ಲದೇ ಕೆಲವು ತಿಂಗಳು ಕಾಲ ತಣ್ಣಗಾಗಿದ್ದ ಹಿಂಸಾಪ್ರವೃತ್ತಿ ೧೯೯೩ರಲ್ಲಿ ಎಎನ್‌ಸಿಯ ನಾಯಕ ಕ್ರಿಸ್ ಹ್ಯಾನಿಯ ಹತ್ಯೆಯಿಂದ ಧೀಡಿರನೇ ಹೊರ ಹೊಮ್ಮಿತು. ದೇಶದಲ್ಲಿ ಮತ್ತೆ ಶಾಂತಿ ಕದಡಿದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ರಕ್ತಪಾತದ ಕುರಿತು ನೆಲ್ಸನ್ ಮಂಡೇಲಾರು ದೇಶವನ್ನು ಉದ್ದೇಶಿಸಿ ಮಾತನಾಡುತ್ತ,

> ದೇಶದಲ್ಲಿ ಹುಟ್ಟಿಕೊಂಡಿರುವ ಈ ಅಶಾಂತಿಯನ್ನು ತಹಬಂಧಿಗೆ ತರುವುದು ಎಲ್ಲ ಆಫ್ರಿಕನ್‌ರ ಆದ್ಯ ಕರ್ತವ್ಯ. ಇದರಲ್ಲಿ ಕರಿಯರು ಹಾಗೂ ಬಿಳಿಯರು ಸಮಾನ ಪಾತ್ರವಹಿಸಬೇಕು. ಬಿಳಿಯರು ಅತಿಯಾಗಿ ಹೊಂದಿರುವ ಪೂರ್ವಾಗ್ರಹ ಹಾಗೂ ಬಹುಸಂಖ್ಯಾತ ಕರಿಯರನ್ನು ಅಲ್ಲಗಳೆಯುವ ನೀತಿಯನ್ನು ಕೈಬಿಡಬೇಕು. ಶತಮಾನಗಳಿಂದಲೂ ಅನುಸರಿಸುತ್ತಾ ಬಂದಿರುವ ವರ್ಣಭೇದ ನೀತಿಯನ್ನು ಕೈ ಬಿಟ್ಟು ಆಫ್ರಿಕಾಕ್ಕಾಗಿ ಪಣತೊಡಬೇಕು. ಕ್ರಿಸ್ ಹಾನಿಯ ಹತ್ಯೆಯನ್ನು ಯಾವ ತಾರತಮ್ಯವಿಲ್ಲದೇ ಎಲ್ಲರೂ ಖಂಡಿಸಬೇಕು ಎಂದು ಕರೆ ನೀಡಿದರು.

ಈ ಹತ್ಯೆಯು ಆಫ್ರಿಕಾದಲ್ಲಿ ಭಾರೀ ಪ್ರಮಾಣದಲ್ಲಿ ಶಾಂತಿ ಕದಡಿದರೂ ಸಂಧಾನದ ಮಾತುಕತೆಯ ಬಾಗಿಲುಗಳನ್ನು ಮುಚ್ಚುವ ಪ್ರಯತ್ನವನ್ನು ಯಾರೊಬ್ಬರು ಮಾಡಲು ಇಚ್ಚಿಸಲಿಲ್ಲ. ಹೀಗಾಗಿ ಜಾಗತಿಕ ಮಟ್ಟದಲ್ಲಿ ಅಂತಾರಾಷ್ಟ್ರೀಯ ಸಂಘಟನೆಗಳು ಮಾನವ ಹಕ್ಕುಗಳ ಸಂಬಂಧವಾಗಿ ಆಫ್ರಿಕಾ ಸರಕಾರದ ಮೇಲೆ ಒತ್ತಡ ಹೇರುವುದಕ್ಕೆ ಹೆಚ್ಚಿನ ಉತ್ತೇಜನ ಸಿಕ್ಕಂತಾಯಿತು. ಈ ಪರಿಣಾಮದಿಂದ ಸರಕಾರವು ಎಲ್ಲದಕ್ಕೂ ಹಿಡಿದುಕೊಂಡಿದ್ದ ಹಠದಿಂದ ಸೋತು ಹಿಂದೆ ಸರಿಯಿತು. ೧೯೯೪ರ ಏಪ್ರಿಲ್ ೨೭ರಂದು ಘೋಷಣೆ ಹೊರಡಿಸುತ್ತಾ ಪ್ರಜಾಸತ್ತಾತ್ಮಕವಾಗಿ ಎಲ್ಲರೂ ಭಾಗವಹಿಸುವ ಚುನಾವಣೆಗೆ ಯಾವ ವಿಧಿಯಿಲ್ಲದೆ ಸರಕಾರ ಒಪ್ಪಿಗೆ ನೀಡಿತು. ಇದು ಮಂಡೇಲಾ ನೇತೃತ್ವದ ಎ.ಎನ್.ಸಿ.ಯ ಐತಿಹಾಸಿಕ ವಿಜಯವೆಂದು ಅಭಿಪ್ರಾಯಿಸಲಾಗಿದೆ.

**ಆತ್ಮಕಥನಗಳು**

ನೆಲ್ಸನ್ ಮಂಡೇಲಾ ಸೆರೆವಾಸದ ಸಮಯದಲ್ಲಿ ತಮ್ಮ ಅನುಭವಗಳನ್ನು ಬರೆಯಲು ಪ್ರಾರಂಭಿಸಿದರು. ಲಾಂಗ್ ವಾಕ್ ಟು ಫ್ರೀಡಮ್ ಅವರ ಪ್ರಸಿದ್ಧ ಆತ್ಮಕಥನ. ಆದರೆ ಇದರಲ್ಲಿ ಎಫ್.ಡಬ್ಲ್ಯೂ.ಡಿ. ಕ್ಲರ್ಕ್ ಆಡಳಿತದಲ್ಲಿ ನಡೆದ ಕ್ರೂರ ಹತ್ಯೆಗಳಾಗಲಿ ಹಾಗೂ ಮಂಡೇಲಾ ಮಾಜಿ ಪತ್ನಿ ವಿನಿಮಂಡೇಲಾ ಅವರು ಅನೇಕ ಹಿಂಸಾಕೃತ್ಯಗಳ ಹಿಂದೆ ಹೊಂದಿದ್ದ ಕೈವಾಡಗಳ ಕುರಿತು ಮುಕ್ತವಾಗಿ ಬರೆಯಲಿಲ್ಲ(ಎಂಬತ್ತು, ತೊಂಭತ್ತರ ದಶಕದ ಕಗ್ಗೊಲೆಗಳು).ಇಂಥ ಕೊರತೆಗಳನ್ನು ಬಿಟ್ಟರೆ ಈ ಕೃತಿಯು ನೆಲ್ಸನ್ ಮಂಡೇಲಾರನ್ನು ಪೂರ್ಣವಾಗಿ ಕಟ್ಟಿಕೊಡುವ ಮಹತ್ವದ ಕೃತಿಯಾಗಿದೆ. ಲೇಖಕ ಜೇಮ್ಸ್ ಜಾರ್ಜ(ಮಂಡೇಲಾ ದಿ ಆಥರೈಸ್ಡ್ ಬಯೋಗ್ರಾಫಿ) ಅವರು ನೆಲ್ಸನ್ ಮಂಡೇಲಾ ಅವರ ವೈಯಕ್ತಿಕ ಕುಟುಂಬದ ಬಗೆಗೆ ಆಸಕ್ತಿದಾಯಕ ವಿಷಯಗಳನ್ನು ತಮ್ಮ ಪುಸ್ತಕಗಳಲ್ಲಿ ಮಂಡಿಸಿದ್ದಾರೆ. ಸಾಂಪ್ಸನ್ ಎಂಬ ಲೇಖಕ ಸಹ ಮಂಡೇಲಾರ ಸೆರೆವಾಸದ ದಿನಗಳ ಕುರಿತಂತೆ ಬರೆದು ಪ್ರಕಟಿಸಿದ್ದಾರೆ. ಈ ಮೇಲ್ಕಾಣಿಸಿದ ಕೃತಿಗಳು ಮಂಡೇಲಾರ ಕುರಿತು ವಿವರವಾಗಿ ಬೆಳಕು ಚೆಲ್ಲುವ ಮಹತ್ವದ ಗ್ರಂಥಗಳಾಗಿವೆ.

**ಅಧ್ಯಕ್ಷರಾಗಿ ನೆಲ್ಸನ್ ಮಂಡೇಲಾ**

ಕಪ್ಪು ಜನಾಂಗವು ಹಲವು ದಶಕಗಳ ಕಾಲ ನಿರಂತರ ಹೋರಾಟ ಮಾಡುವುದರ ಮೂಲಕ ಕೊನೆಗೂ ಕ್ರೂರಿಯಾದ ಪ್ರಿಟೋರಿಯಾ ಆಡಳಿತವನ್ನು ಮಣಿಸಿತು. ೧೯೯೪ರಲ್ಲಿ ನಡೆದ ಮಹಾ ಚುನಾವಣೆಯಲ್ಲಿ ಮೊಟ್ಟಮೊದಲಿಗೆ ದಕ್ಷಿಣ ಆಫ್ರಿಕಾದಲ್ಲಿದ್ದ ಎಲ್ಲ ಜನರು ಉತ್ಸಾಹದಿಂದ ಪಾಲ್ಗೊಂಡು ಎ.ಎನ್.ಸಿ.ಯನ್ನು ಹೆಚ್ಚಿನ ಬಹುಮತದಿಂದ ಆಯ್ಕೆ ಮಾಡಿದರು. ಶೇಕಡಾ ಅರವತ್ತೇರಡರಷ್ಟು ಮತಗಳನ್ನು ಎಎನ್‌ಸಿಯು ಪಡೆದುಕೊಂಡಿತು. ಜನನಾಯಕರಾಗಿ ಮೂಡಿಬಂದ ನೆಲ್ಸನ್ ಮಂಡೇಲಾ ೧೯೯೪ರ ಮಹಾಚುನಾವಣೆಯಲ್ಲಿ ಜಯಭೇರಿ ಪಡೆಯುವ ಮೂಲಕ ದಕ್ಷಿಣ ಆಫ್ರಿಕಾ ಇತಿಹಾಸದಲ್ಲಿ ಮೊಟ್ಟಮೊದಲ ಕಪ್ಪು ನಾಯಕನೊಬ್ಬ ಅಧ್ಯಕ್ಷನಾಗಿ ಆಯ್ಕೆ ಆಗುವ ಸುಸಂದರ್ಭ ಒದಗಿಬಂತು. ವರ್ಣಭೇದ ನೀತಿಗೆ ಶಾಶ್ವತವಾದ ತೆರೆ ಎಳೆದು ಎಲ್ಲರ ಹಕ್ಕುಗಳನ್ನು ಗೌರವಿಸುವ ವಾಗ್ದಾನವನ್ನು ಮಾಡಿದರು. ನೂರಾರು ವರ್ಷಗಳಿಂದ ಆಳವಾದ ಕಂದಕದ ಹಾಗೆ ಸೃಷ್ಟಿಗೊಂಡಿದ್ದ ಬಿಳಿಯರ ಮತ್ತು ಕರಿಯರ ಮಧ್ಯದ ಅಸಮಾಧಾನ ಅಥವಾ ದ್ವೇಷವನ್ನು ಶಾಶ್ವತವಾಗಿ ನಂದಿಸುವ ಗಂಭೀರವಾದ ಪ್ರಯತ್ನವನ್ನು ಮಾಡಿದರು. ಆಫ್ರಿಕನ್ನರ ಸೌಹಾರ್ದತೆಯನ್ನು ಜಗತ್ತಿಗೆ ಸಾರಿ ಹೇಳುವ ಮನೋಭಾವನೆಯನ್ನಿಟ್ಟುಕೊಂಡು ಜಾಗತಿಕ ಮಟ್ಟದ ರಗ್ಬಿ ಪಂದ್ಯಾವಳಿಯನ್ನು ಏರ್ಪಡಿಸಿ ಶಾಂತಿಯುತ ಆಡಳಿತದ ನಿರ್ವಹಣೆಯ ಪ್ರಾರಂಭಕ್ಕೆ ಹಸಿರು ನಿಶಾನೆ ತೋರಿಸಿದಂತಾಯಿತು. ಅಂತಿಮ ಪಂದ್ಯದಲ್ಲಿ ಗೆಲುವು ಪಡೆದ ನ್ಯೂಜಿಲೆಂಡ್ ತಂಡಕ್ಕೆ ತಾವೇ ಖುದ್ದಾಗಿ ಟ್ರೋಫಿಯನ್ನು ಸಹ ನೀಡಿದರು. ಸೌಂದರ್ಯ ಪ್ರಿಯರಾಗಿದ್ದ ಅವರು ವರ್ಣಚಿತ್ರಾಲಂಕಾರಗಳಿಂದ ಕೂಡಿದ(ಕಪ್ಪು ಅಂಗಿಗಳು)ತಮ್ಮ ಅಧ್ಯಕ್ಷಾವಧಿಯಲ್ಲಿಯೂ

ಹಾಕುತ್ತಿದ್ದರು. ಇದು "ಮಡಿಬಾ ಶರ್ಟ್ಸ್" ಎಂತಲೇ ಪ್ರಸಿದ್ಧಿಯಾಗಿತ್ತು. ವರ್ಣಭೇದ ಸರಕಾರ ಪತನಾನಂತರ ಅಖಂಡ ದಕ್ಷಿಣ ಆಫ್ರಿಕಾದ ಆಡಳಿತ ಚುಕ್ಕಾಣಿ ಹಿಡಿದು ಎ.ಎನ್.ಸಿ.ಸರಕಾರವು ೧೯೯೮ರಲ್ಲಿ ಮೊಟ್ಟಮೊದಲಿಗೆ ನೆಲ್ಸನ್ ಮಂಡೇಲಾ ಅವರ ಅಣತಿಯಂತೆ ಸೈನಿಕ ಕಾರ್ಯಾಚರಣೆ ಕೈಗೊಂಡತು. ಪ್ರಧಾನಿ ಪಕಲಿತಾ ಮೊಸಿಸಿಲಿಯ ಸರಕಾರವು ವಿರೋಧಿಗಳ ಉಪಟಳದಿಂದ ಕಂಗೆಟ್ಟಾಗ ಸಮಸ್ಯೆಯ ನಿವಾರಣೆಗಾಗಿ ಅನಿವಾರ್ಯತೆಯಿಂದ ಮೊಟ್ಟಮೊದಲಿಗೆ ಸೈನಿಕ ಕಾರ್ಯಾಚರಣೆ ಕೈಗೊಳ್ಳಲು ಅಧ್ಯಕ್ಷರಾದ ಮಂಡೇಲಾ ಅವರು ಆಜ್ಞೆ ನೀಡಿದರು. ಸೈನಿಕ ಕಾರ್ಯಾಚರಣೆಯನ್ನು ಪ್ರಬಲವಾಗಿ ವಿರೋಧಿಸಿಕೊಂಡು ಬಂದಿದ್ದ ಎ.ಎನ್.ಸಿ.ಪಕ್ಷಕ್ಕೆ ತುಂಬ ಮುಜುಗರ ಉಂಟು ಮಾಡುವ ವರದಿಗಳು ಪ್ರಕಟವಾದವು. ಆದರೆ ಇಂಥ ಕಾರ್ಯಾಚರಣೆ ಧೋರಣೆಯು ಪ್ರಜಾ ಪ್ರಭುತ್ವವನ್ನು ಕಾಪಾಡಿಕೊಳ್ಳುವ ಏಕ ಮಾತ್ರ ಉದ್ದೇಶ ಹೊಂದಿತ್ತು ಹೊರತು ಯಾವ ಅಧಿಕಾರವನ್ನು ಚಲಾಯಿಸುವ ದುರದ್ದೇಶ ಹೊಂದಿಲ್ಲ ಎಂಬುದನ್ನು ಅಧ್ಯಕ್ಷರು ಸ್ಪಷ್ಟಪಡಿಸಿದರು. ದಕ್ಷಿಣ ಆಫ್ರಿಕಾದಲ್ಲಿ ಏಡ್ಸ್ ಮಹಾ ಮಾರಿಯು ದೊಡ್ಡ ಪ್ರಮಾಣದಲ್ಲಿ ಜೀವ ಹಾನಿ ಮಾಡುತ್ತಿತ್ತು. ಇದು ರಾಜಕೀಯ ವಿಪ್ಲವಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ದಕ್ಷಿಣ ಆಫ್ರಿಕಾದ ಇಡೀ ವ್ಯವಸ್ಥೆಯನ್ನು ಕೆಂಗೆಡಿಸಿತ್ತು. ಜಗತ್ತಿನಲ್ಲಿಯೇ ಅತೀ ಹೆಚ್ಚು ಏಡ್ಸ್ ರೋಗಿಗಳನ್ನು ಆ ಸಮಯದಲ್ಲಿ ದೇಶವು ಹೊಂದಿತ್ತು. ಹೀಗಾಗಿ ಇದನ್ನು ತಡೆಗಟ್ಟಲು ನೆಲ್ಸನ್ ಮಂಡೇಲಾ ಸರಕಾರ ಸಂಪೂರ್ಣ ವಿಫಲಗೊಂಡಿತು ಎಂಬ ತೀವ್ರ ಟೀಕೆಗಳು ವ್ಯಕ್ತವಾದವು. ಏಡ್ಸ್ ಮಹಾರೋಗವನ್ನು ತಡೆಗಟ್ಟುವ ಜಾಗೃತ ಪಡೆಯ ನಾಯಕನಾಗಿದ್ದ ಎಡ್ವಿನ್ ಕ್ಯಾಮರೂನ್ ಸಹ ನೆಲ್ಸನ್ ಮಂಡೇಲಾರ ಆಡಳಿತವನ್ನು ಗಂಭೀರ ಟೀಕೆ ಮಾಡುವುದರ ಮೂಲಕ ಹೆಚ್ಚಿನ ಮುಜುಗರಕ್ಕೆ ಒಳಪಡಿಸಿದನು. ಹೊಸದಾಗಿ ರಚನೆಗೊಂಡ ಆಡಳಿತ ಇಂಥ ಭಯಂಕಾರವಾದ ಜೀವಹಾನಿಯನ್ನು ತಡೆಗಟ್ಟಲು ಏನೆಲ್ಲಾ ಕ್ರಮ ಕೈಗೊಂಡರೂ ಏಡ್ಸ್ ಹಾಗೂ ಎಚ್ಐವಿ ಮಹಾಮಾರಿಯನ್ನು ಸಂಪೂರ್ಣವಾಗಿ ತಡೆಗಟ್ಟುವ ಪ್ರಯತ್ನದಲ್ಲಿ ಮಂಡೇಲಾ ಸರಕಾರ ವಿಫಲವಾಯಿತು. ಸಾವಿರ ಪರಿಣಾಮಗಳು ಕಪ್ಪು ಜನರ ಅಪ್ರಜ್ಞಾವಂತ ಮನೋಭಾವನೆಗಳಿಗೆ ಹಿಡಿದ ಕೈಗನ್ನಡಿಯಾಯಿ ತೆಂದು ರಾಜಕೀಯ ವಿಶ್ಲೇಷಕರು ಅಭಿಪ್ರಾಯಪಟ್ಟಿದ್ದಾರೆ.

**ವಿಚಾರಣೆ**

ಸ್ವತಂತ್ರವಾದ ಆಫ್ರಿಕಾ ದೇಶದ ಸರಕಾರ ಅಂತಾರಾಷ್ಟ್ರೀಯ ಸಮಸ್ಯೆಗಳಿಗೆ ಪ್ರತಿಕ್ರಿಯಿಸಿದ ಮೊಟ್ಟಮೊದಲ ನಡೆ ಈ ವಿಚಾರದಲ್ಲಿ ವ್ಯಕ್ತವಾಯಿತು. ಪ್ರಯಾಣಿಕರು ತುಂಬಿದ ವಿಮಾನವನ್ನು ಲಿಬಿಯಾದ ಇಬ್ಬರು ನಾಗರಿಕರು ಸಂಚುಮಾಡಿ ಅಪಘಾತ ಮಾಡಿದ್ದರ ಸಂಬಂಧವಾದ ಈ ವಿಚಾರಣೆಯ ಬಗೆಗೆ ನೆಲ್ಸನ್ ಮಂಡೇಲಾ ಅವರು ಹೆಚ್ಚಿನ ಮುತವರ್ಜಿ ವಹಿಸಿದ್ದರು.

೧೯೮೮ರಲ್ಲಿ ಪಾನ್‌ಆಮ್ ೧೦೩ ಎಂಬ ನಾಗರಿಕ ವಿಮಾನವನ್ನು ಸ್ಕಾಟ್‌ಲ್ಯಾಂಡ್ ಪಟ್ಟಣದ ಬಳಿಯ ಲಾಕರ್‌ಬಿ ಎಂಬಲ್ಲಿ ಅಪಘಾತಗೊಳ್ಳಲು ಸಂಚು ರೂಪಿಸಿದ್ದರೂ ಹಾಗೂ ಇದರಲ್ಲಿದ್ದ ೨೭೦ ಜನರ ದುರ್ಮರಣಕ್ಕೆ ಇವರು ಕಾರಣಕರ್ತರು ಎಂದು ಅಪಾದಿಸಿ ಲಿಬಿಯಾದ ಇಬ್ಬರು ನಾಗರಿಕರನ್ನು ಮರಣದಂಡನೆ ಶಿಕ್ಷೆಗೆ ಒಳಪಡಿಸಲು ಅಮೆರಿಕಾ ಹಾಗೂ ಇಂಗ್ಲೆಂಡ್ ಸರಕಾರಗಳು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜಕೀಯ ಒತ್ತಡವನ್ನು ತೀವ್ರವಾಗಿ ತರುತ್ತಿದ್ದವು. ಹಾಗೂ ಇಂಥ ದುಷ್ಕೃತ್ಯಕ್ಕೆ ಲಿಬಿಯಾದ ಕರ್ನಲ್ ಗಡಾಫಿ ಸರಕಾರವೇ ಹೊಣೆಗಾರವೆಂದು ಪ್ರಬಲವಾಗಿ ಈ ದೇಶಗಳು ಆರೋಪಿಸುತ್ತಿದ್ದವು. ಅಲ್ಲದೇ ಈ ದುರಂತಕ್ಕೆ ಕಾರಣರಾದವರನ್ನು ತಾನು ಬಯಸಿದ ಸ್ಥಳದಲ್ಲಿಯೇ ಸೂಕ್ತ ವಿಚಾರಣೆಗೆ ಒಳಪಡಿಸಬೇಕೆಂದು ಇಂಗ್ಲೆಂಡ ದೇಶವು ಪ್ರಬಲವಾಗಿ ವಾದಿಸುತ್ತಿತ್ತು. ಇದಕ್ಕೆ ಕಾರಣ ತಾನು ಇಚ್ಛೆ ಪಡದ ಯಾವುದೇ ಸ್ಥಳದಲ್ಲಿ ಈ ಕೃತ್ಯದ ಆರೋಪಿಗಳ ವಿಚಾರಣೆ ನಡೆದರೆ ಅದು ನ್ಯಾಯ ಸಮ್ಮತವಾಗಿ ನಡೆಯಲಾರದೆಂದು ಇಂಗ್ಲೆಂಡ್‌ನ ದೃಢ ನಿಲುವಾಗಿತ್ತು. ಆದರೆ ನೆಲ್ಸನ್ ಮಂಡೇಲಾ ಅವರು ಅಮೆರಿಕಾ ಹಾಗೂ ಇಂಗ್ಲೆಂಡ್ ದೇಶಗಳು ತಾಳಿರುವ ಹಟಮಾರಿತನದಿಂದ ಕೂಡಿದ ನಿಲುವುಗಳ ಬಗೆಗೆ ತೀವ್ರತರ ಅಸಮಾಧಾನ ವ್ಯಕ್ತಪಡಿಸುತ್ತಿದ್ದರು. ಕಾರಣ ಆರೋಪ ಮಾಡಿರುವ ದೇಶವು ಈ ಸಂಬಂಧದ "ವಿಚಾರಣೆ ಹಾಗೂ ತೀರ್ಪನ್ನು" ತಾನೇ ನೀಡುತ್ತೇನೆ ಎನ್ನುವ ಪ್ರಮೇಯಗಳೇ ಭಾರೀ ಸಂಶಯಗಳಿಗೆ ಎಡೆಮಾಡಿಕೊಡು ವಂತದ್ದು. ಆದ್ದರಿಂದ ಇಂಗ್ಲೆಂಡ್ ಸರಕಾರದ ನ್ಯಾಯ ಪರಿಪಾಲನೆಯು ತಪ್ಪುದಾರಿಗೆ ಇಡಾಗಬಹುದೆಂದು ಅಭಿಪ್ರಾಯಿಸಿದರು. ನಿಷ್ಪಕ್ಷಪಾತ ಧೋರಣೆಯಿಂದ ಮಂಡೇಲಾ ಅವರ ಪ್ರವೇಶದಿಂದ ಸ್ವಲ್ಪಮಟ್ಟಿಗೆ ಇಂಗ್ಲೆಂಡ್ ದೇಶವು ಬಗ್ಗಿತು. ಜಾನ್ ಮೇಜರ್ ನಂತರ ಅಧಿಕಾರಕ್ಕೆ ಬಂದ ಟೋನಿ ಬ್ಲೇರ್ ಆಡಳಿತವು ಈ ಹಿಂದೆ ಇಂಗ್ಲೆಂಡ ಹೊಂದಿದ ನಿಲುವನ್ನು ಸಡಿಲಿಸಿ ಬೇರೊಂದು ದೇಶದಲ್ಲಿ ಆರೋಪಿತ ಖೈದಿಗಳ ವಿಚಾರಣೆಗೆ ಸಹಮತ ವ್ಯಕ್ತಪಡಿಸಿತು. ಪರಿಣಾಮ ನೆದರಲ್ಯಾಂಡ್‌ನ ಕ್ಯಾಂಪ್ ಜೆಯಿಸ್ಟ್‌ನಲ್ಲಿ ಸಂಬಂಧಿಸಿದವರ ವಿಚಾರಣೆಯನ್ನು ಕೈಗೊಳ್ಳಲು ನೆಲ್ಸನ್ ಮಂಡೇಲಾ ಅವರು ಲಿಬಿಯಾದ ಅಧ್ಯಕ್ಷ ಕರ್ನಲ್ ಗಡಾಫಿ ಅವರನ್ನು ಒಪ್ಪಿಸಿ ಇಬ್ಬರು ನಾಗರಿಕರನ್ನು ಹಸ್ತಾಂತರಿಸುವಂತೆ ಮನ ಒಲಿಸಿದರು. ಇದು ಅಧ್ಯಕ್ಷ ಮಂಡೇಲಾ ಅವರು ಜಾಗತಿಕ ಮಟ್ಟದಲ್ಲಿ ಹೊಂದಿದ್ದ ಬಿಗಿ ಹಿಡಿತವನ್ನು ಸ್ಪಷ್ಟಪಡಿಸುತ್ತದೆ. ಮೆಗ್ರೈ ಹಾಗೂ ಫಾಹಿಮ್ ಅವರಿಬ್ಬರನ್ನು ಸ್ಕಾಟ್‌ಲ್ಯಾಂಡ ದೇಶದ ಕಾನೂನಿನ್ವಯ ವಿಚಾರಣೆಗೆ ಒಳಪಡಿಸಲಾಯಿತು. ಸುಮಾರು ೯ ತಿಂಗಳ ಕಾಲ ನಡೆದ ಈ ವಿಚಾರಣೆಯಲ್ಲಿ ಮೆಗ್ರೈನನ್ನು ದೋಷಮುಕ್ತವಾಗಿ ಮಾಡಿತಲ್ಲದೇ ಫಾಹಿಮ್‌ನಿಗೆ ಅಲ್ಲಿನ ಕಾನೂನಿನ್ವಯ ೨೭ ವರ್ಷಗಳ ಅವಧಿಯ ಸೆರೆವಾಸದ ಶಿಕ್ಷೆಯನ್ನು ವಿಧಿಸಲಾಯಿತು. ಆದರೆ ಈತನು ನೆಲ್ಸನ್ ಮಂಡೇಲಾ ಅವರಿಗೆ ಹಾಗೂ ಜಗತ್ತಿನ ಬೇರೆ ಬೇರೆ ನಾಯಕರಿಗೆ ಮನವಿ ಸಲ್ಲಿಸಿ ತನ್ನನ್ನು ಸ್ಕಾಟ್‌ಲ್ಯಾಂಡ್‌ನ ಜೈಲಿನಿಂದ ಬಿಡುಗಡೆ ಮಾಡುವಂತೆ ಕೋರಿಕೊಂಡನು. ಈತನ ಮನವಿಯನ್ನು ಪುರಸ್ಕರಿಸಿ, ಮಂಡೇಲಾ ಅವರು ಫಾಹಿಮ್‌ನನ್ನು ೨೦೦೨ ಜೂನ್

ಬರ್ಲಿನ್ನೈ ಜೈಲಿನಲ್ಲಿ ಭೇಟಿ ಮಾಡಿದರು. ಆತನು ಸೆರೆವಾಸವಧಿಯಲ್ಲಿ ಅನುಭವಿಸುತ್ತಿದ್ದ ನೋವನ್ನು ಜಗತ್ತಿನ ಮಾಧ್ಯಮಗಳಿಗೆ ಬಿಡುಗಡೆ ಮಾಡಿ ಐರೋಪ್ಯ ರಾಷ್ಟ್ರಗಳ ಜೈಲಿನಲ್ಲಿ ರಾಜಕೀಯ ಯುದ್ಧ ಕೈದಿಗಳು ಪಡುವ ನರಕ ಯಾತನೆಯನ್ನು ನಿರ್ದಾಕ್ಷಿಣ್ಯವಾಗಿ ಹೊರಗೆಡವಿದರು. ಈ ಪರಿಣಾಮದಿಂದ ಬಿಳಿಯ ಸರಕಾರಗಳ ಬಗೆಗೆ ಜಾಗತಿಕ ನಾಗರಿಕ ಸಮಾಜವು ತುಂಬ ತೀಕ್ಷ್ಣವಾಗಿ ಪ್ರತಿಭಟಿಸುವಂತಹ ಸಂದರ್ಭಗಳು ಉಂಟಾದವು. ಆರೋಪಿತ ಕೈದಿಯನ್ನು ಈಜಿಪ್ಟ್, ಮೊರೆಕ್ಕೊ ಅಥವಾ ಟ್ಯೂನೇಷಿಯಾ ದೇಶಗಳಲ್ಲಿರುವ ಯಾವುದಾದರೊಂದು ಜೈಲಿಗೆ ಸ್ಥಳಾಂತರಿಸಿ ಆತನು ಪಡುವ ಏಕಾತಾನ ಯಾತನೆಯನ್ನು ಶೀಘ್ರುವೇ ಬಗೆಹರಿಸಬೇಕೆಂದು ಅಂತಾರಾಷ್ಟ್ರೀಯ ಸಮುದಾಯಕ್ಕೆ ಕರೆಕೊಟ್ಟರು.

ಮಂಡೇಲಾರ ಕರೆಗೆ ಓಗೊಟ್ಟು (ಫಾಹಿಮ್‌ನನ್ನು) ಬಿಡುಗಡೆ ಮಾಡಲು ಅಂತಾರಾಷ್ಟ್ರೀಯ ಸಮೂಹ ಸಂಘಟನೆಗಳು ಇಂಗ್ಲೆಂಡ್ ಹಾಗೂ ಸ್ಕಾಟ್‌ಲ್ಯಾಂಡ್‌ನ ಮೇಲೆ ತೀವ್ರ ಒತ್ತಡ ಹೇರಲಾರಂಭಿಸಿದವು. ಆದರೆ ದುರದೃಷ್ಟವಶಾತ ಫಾಹಿಮ್‌ನಿಗೆ ಕ್ಯಾನ್ಸರ್ ಭಾದೆ ತಗಲಿದ್ದರಿಂದ ಆತ ಬಿಡುಗಡೆಗೊಂಡು ಮೂರು ತಿಂಗಳುಗಳಲ್ಲಿ ಮರಣ ಹೊಂದಿದ. ಆದರೆ ಇಡೀ ವಿಚಾರಣೆಯ ಪ್ರಕರಣದ ಪ್ರತಿಹಂತದಲ್ಲಿ ಪರಿಗಣಿಸಬಹುದಾದ ಮುಖ್ಯ ಸಂಗತಿಗಳೆಂದರೆ, ಜಾಗತಿಕ ಯಜಮಾನ್ಯ ಹೊಂದಿರುವ ರಾಷ್ಟ್ರಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ವಹಿಸುವ ನೀತಿನಿಯಮಗಳನ್ನು ನೆಲ್ಸನ್ ಮಂಡೇಲಾ ಅವರು ಯಾವ ಮುಲಾಜಿಗೆ ಒಳಗಾಗದೆ ಬಿಚ್ಚಿಟ್ಟರು. ಹಾಗೂ ಯಾವ ಭಯವಿಲ್ಲದೇ ಅವರು ಇಂಥ ತಂತ್ರಗಳನ್ನು ತೀವ್ರವಾಗಿ ವಿರೋಧಿಸಿದರು. ಅಲ್ಲದೇ ತಾವು ಈ ಹಿಂದೆ ಅನುಭವಿಸಿದ ಎರಡು ದಶಕಗಳ ಒಂಟಿತನದ ಸೆರೆವಾಸದ ಅನುಭವಗಳು ಯಾರಿಗೂ ಒದಗಿ ಬರಬಾರದೆಂಬ ಕಾಳಜಿಗಳಿಂದ ಲಾಕರ್‌ಬಿ ಟ್ರಯಲ್ ಪ್ರಕರಣದ ಬಗೆಗೆ ಹೆಚ್ಚಿನ ಮುತವರ್ಜಿ ವಹಿಸಿ ಜಾಗತಿಕ ಯಜಮಾನ್ಯ ಆಡಳಿತಗಾರರನ್ನು ಬಗ್ಗಿಸಿದರು. ಈ ವಿಚಾರಣೆಯನ್ನು ಪ್ರತಿಭಟಿಸಲು ಮಂಡೇಲಾ ಅವರಿಗೆ ಇದ್ದ ಮುಖ್ಯ ಉದ್ದೇಶಗಳೆಂದರೆ ಪ್ರತಿಯೊಬ್ಬನ ವೈಯಕ್ತಿಕ ಸ್ವಾತಂತ್ರ್ಯವನ್ನು ಕಾಪಾಡುವುದಾಗಿತ್ತು ಎಂದು ರಾಜಕೀಯ ವಿಶ್ಲೇಷಕರು ಅಭಿಪ್ರಾಯಿಸಿದ್ದಾರೆ.

### ಮದುವೆಯ ಸಂಬಂಧಗಳು

ಮಂಡೇಲಾ ಅವರು ಮೂರು ಬಾರಿ ಮದುವೆಯಾಗಿದ್ದಾರೆ. ಅವರಿಗೆ ಒಟ್ಟು ಆರು ಜನ ಮಕ್ಕಳು. ಇಪ್ಪತ್ತು ಮೊಮ್ಮಕ್ಕಳು ಹಾಗೂ ಹಲವಾರು ಮರಿಮಕ್ಕಳನ್ನು ಹೊಂದಿದ ತುಂಬು ಸಂಸಾರ.

ಇವೆಲಾಯಿನ್ ನಟೊಕೊ ಮಸೇ ನೆಲ್ಸನ್‌ರ ಮೊದಲ ಹೆಂಡತಿ. ಸೌತ್ ಆಫ್ರಿಕಾದ ಟ್ರಾನ್ಸ್‌ಕೆಯವಳಾದ ಇವಳು ಮೊಟ್ಟ ಮೊದಲಿಗೆ ಜೊಹಾನ್ಸ್ ಬರ್ಗ್‌ನಲ್ಲಿ ಮಂಡೇಲಾ ಅವರನ್ನು ಭೇಟಿ ಆಗಿದ್ದಳು. ಪರಿಚಯವು ಪ್ರಣಯದೊಂದಿಗೆ ಪ್ರಾರಂಭವಾಗಿ ಕೆಲವೇ ದಿನಗಳಲ್ಲಿ ಅವರಿಬ್ಬರಿಗೂ ಮದುವೆಯಾಯಿತು. ಸುಮಾರು ೧೩ ವರ್ಷಗಳ ದಾಂಪತ್ಯದ ನಂತರ ೧೯೫೭ರಲ್ಲಿ ಸಂಬಂಧ ಮುರಿದು ಬಿತ್ತು. ಕಾರಣ ನೆಲ್ಸನ್ ಮಂಡೇಲಾರು ಸತತವಾಗಿ

ಹಲವಾರು ವರ್ಷಗಳ ಕಾಲ ಸ್ವಾತಂತ್ರ್ಯ ಹೋರಾಟದಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ ಕುಟುಂಬವನ್ನು ಸರಿಯಾಗಿ ನಿರ್ವಹಿಸಲಾಗಲಿಲ್ಲ. ಈ ಕಾರಣದಿಂದ ಅವರಿಬ್ಬರ ಮಧ್ಯೆ ಯಾವ ಸಂಬಂಧಗಳು ಉಳಿದುಕೊಳ್ಳಲಿಲ್ಲ. ದೀರ್ಘ ಕಾಲಾವಧಿಯ ಅವರಿಬ್ಬರ ಅಗಲಿಕೆಯ ಪರಿಣಾಮವೇ ಅವರು ವಿವಾಹ ವಿಚ್ಛೇಧನ ಪಡೆಯುವ ಸಂದರ್ಭ ವ್ಯಕ್ತವಾಗುವಂತಾಯಿತು. ರಾಜಕೀಯ ತಾಟಸ್ಥ್ಯವನ್ನು ತಾಳುವಂತೆ ಅವರ ಹೆಂಡತಿಯು ಮಂಡೇಲಾ ಅವರಿಗೆ ಹಲವಾರು ಬಾರಿ ಕೇಳಿದರೂ ಅವರು ಹೆಂಡತಿಯನ್ನೇ ಬಿಟ್ಟರು ಹೊರತು ತಾವು ನಿಶ್ಚಯಿಸಿಕೊಂಡಿದ್ದ ಹೋರಾಟವನ್ನು ಬಿಡಲಿಲ್ಲ. ಇದು ಒಬ್ಬ ನಿಜವಾದ ಹೋರಾಟಗಾರನ ಖಾಸಗಿಯ ಬದುಕು ದುರಂತದಲ್ಲಿ ಪರಿಸಮಾಪ್ತಿಗೊಳ್ಳುವ ನೋವಿನ ಸಂಗತಿಯಾಗಿ ನಿಲ್ಲುತ್ತದೆ. ಮೊದಲ ಹೆಂಡತಿ ಇವೆಲಾಯಿನ್ ನಟೊಕೊ ಮಸೇ ಅವರು ೨೦೦೪ರಲ್ಲಿ ಅನಾರೋಗ್ಯದಿಂದ ತೀರಿಕೊಂಡರು. ಇವರಿಗೆ ಇಬ್ಬರು ಗಂಡು ಹಾಗೂ ಇಬ್ಬರು ಹೆಣ್ಣು ಮಕ್ಕಳಿದ್ದರು. ಇವರೆಲ್ಲರೂ ಸಹ ತೀರಿ ಹೋಗಿದ್ದಾರೆ.

ಕಪ್ಪು ವರ್ಣೀಯ ಸಾಮಾಜಿಕ ಕರ್ತೆಯಾದ ವಿನ್ನಿ ಮಡಿಕಿಜೇಲಾ ಅವರು ನೆಲ್ಸನ್ ಮಂಡೇಲಾ ಅವರನ್ನು ೧೯೫೮ರಲ್ಲಿ ಮದುವೆಯಾದರು. ಇವರು ಈ ಮೊದಲು ಜೋಹಾನ್ಸ್‌ಬರ್ಗ್ ನಗರದ ಮೊಟ್ಟಮೊದಲ ಮಹಿಳಾ ಹೋರಾಟಗಾರ್ತಿಯಾಗಿ ನಿರೂಪಿತಗೊಂಡವರು. ಇಬ್ಬರು ಒಂದೇ ಮನೋಭಾವನೆ ಹಾಗೂ ಗುರಿಯನ್ನಿಟ್ಟುಕೊಂಡಿದ್ದರಿಂದ ಈ ಮೊದಲಿನಂತೆ ಹೋರಾಟವು ಅವರ ದಾಂಪತ್ಯಕ್ಕೆ ಅಡ್ಡಿಯಾಗಲಿಲ್ಲ. ಇವರಿಗೂ ಸಹ ಎರಡು ಮಕ್ಕಳಿದ್ದೂ ಇವರನ್ನೆಲ್ಲಾ ವಿನ್ನಿ ಮಂಡೇಲಾ ಅವರೇ ಸಾಕಿ ಸಲುಹಿದರು. ಕಾರಣ ಮಕ್ಕಳಿಬ್ಬರ ಬಾಲ್ಯ ಮತ್ತು ಯೌವನದ ಅವಧಿಯಲ್ಲಿ ನೆಲ್ಸನ್ ಮಂಡೇಲಾ ಅವರು ಇಡೀ ತಮ್ಮ ಬದುಕನ್ನು ಜೈಲಿನಲ್ಲಿ ಕಳೆಯುತ್ತಿದ್ದರು. ಇಂಥ ಕಷ್ಟದ ಏಕಾಂಗಿತನವು ಅವರಿಗೆ ಬಹಳ ದೊಡ್ಡ ಅಡೆತಡೆಯಾಗಲಿಲ್ಲ. ಟ್ರಾನ್ಸ್‌ಕೆ ಪ್ರಾಂತದವರಾದ ವಿನ್ನಿ ಮಂಡೇಲಾರ ತಂದೆ ಅಲ್ಲಿನ ಸ್ಥಳೀಯ ಸರಕಾರದಲ್ಲಿ ಕೃಷಿ ಮಂತ್ರಿಯಾಗಿದ್ದರು. ಹೋರಾಟದ ಕಠಿಣ ದಿನಗಳಲ್ಲಿ ಒಂದಾಗಿದ್ದ ವಿನ್ನಿ ಮಂಡೇಲಾ ಹಾಗೂ ನೆಲ್ಸನ್ ಮಂಡೇಲಾ ಅವರು ಕೆಲವು ಕಾರಣಗಳಿಂದ ೧೯೯೨ರಲ್ಲಿ ದಾಂಪತ್ಯಬಂಧನದಿಂದ ಬಿಡುಗಡೆಗೊಳ್ಳಲು ನಿರ್ಧರಿಸಿದ್ದು ಇನ್ನೊಂದು ದುರಂತವೇ ಸರಿ. ಉಂಟಾಗಿದ್ದ ಮನಸ್ತಾಪಗಳನ್ನು ಸರಿಪಡಿಸಿಕೊಳ್ಳಲಾರದ ಈ ದಂಪತಿಗಳು ೧೯೯೬ರಲ್ಲಿ ವಿವಾಹ ವಿಚ್ಛೇದನ ಪಡೆದರು. ಇವರಿಬ್ಬರಿಗೂ ಹುಟ್ಟಿದ ಝುನನಿಯನ್ನು ಸ್ವಾಜಿಲ್ಯಾಂಡ್‌ನ ರಾಜಕುಮಾರ ಥುಮಾಂಭುಜಿ ದ್ಲಮಿನಿಗೆ ೧೯೭೩ರಲ್ಲಿಯೇ ಮದುವೆ ಮಾಡಿಕೊಡಲಾಗಿತ್ತು. ಇವಳಿಗೂ ಸಹ ತಂದೆಯ ಯಾವ ನೆನಪುಗಳು ಇರಲಿಲ್ಲ. ಹಾಗೂ ಪ್ರಿಟೋರಿಯಾ ಸರಕಾರವು ಸಹ ಈ ಹಿಂದೆ ತಮ್ಮ ತಂದೆಯನ್ನು ಭೇಟಿ ಮಾಡಲು ಯಾವ ಅವಕಾಶ ಕೊಟ್ಟಿರಲಿಲ್ಲ. ದ್ಲಮಿನಿ ದಂಪತಿಗಳು ಪಿಕ್ ಬೋಥೋ ಸರಕಾರದ ಕಿರುಕುಳಕ್ಕೆ ಹೆದರಿ ಅಮೆರಿಕಾ ದೇಶದಲ್ಲಿರುವ ಬೋಸ್ಟನ್ ಪಟ್ಟಣಕ್ಕೆ ಪಲಾಯನ ಗೈಯುವಂತೆ

ಮಾಡಿತು. ಇವರಿಬ್ಬರಿಗೆ ಹುಟ್ಟಿದ ಪ್ರಿನ್ಸ್ ಸೆಡ್ಜಾದ್ಲಮಿನಿಯು ಸಹ ಅಂತಾರಾಷ್ಟ್ರೀಯ ಮಾನವ ಹಕ್ಕುಗಳ ಹಿತರಕ್ಷಣಾ ಸಂಘಟನೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಇವರ ಇನ್ನೊಬ್ಬ ಮಗಳಾದ ಜಿಂದಜಿಯು, ಪ್ರಿಟೋರಿಯಾ ಸರಕಾರವು ಮಂಡೇಲಾ ಅವರನ್ನು ಬಿಡುಗಡೆ ಮಾಡುವ ಷರತ್ತು ಬದ್ಧ ವಿಷಯಗಳಿಗೆ ಸಂಬಂಧಿಸಿದಂತೆ ೧೯೮೫ರಲ್ಲಿ ಹೇಳಿಕೆ ನೀಡುವುದರ ಮೂಲಕ ಜಗತ್ಪ್ರಸಿದ್ಧಿ ಆದಳು. ಈವರೆಗೂ ಜೀವಂತವಾಗಿರುವ ಇವರು ತಮ್ಮ ಬದುಕು ನಿರ್ವಹಣೆಗಾಗಿ ವ್ಯಾಪಾರದಲ್ಲಿ ತೊಡಗಿದ್ದಾರೆ.

೧೯೯೬ರಲ್ಲಿ ವಿನ್ನಿಮಂಡೇಲಾ ಅವರಿಂದ ವಿಚ್ಛೇದನ ಪಡೆದಿದ್ದ ನೆಲ್ಸನ್ ಮಂಡೇಲಾ ಅವರು ತಮ್ಮ ಆಂನೇ ವರ್ಷದಲ್ಲಿ ಗ್ರಾಕ್ ಮಾಕೆಲ್ ನೀ ಸಿಂಬಿನಿ(ಅವನನ್ನು ಮಂಡೇಲಾ ಅವರು)ಯನ್ನು ವಿವಾಹವಾದರು. ಇವರು ಮೊಜಾಂಬಿಕ್ ದೇಶದ ಮಾಜಿ ಅಧ್ಯಕ್ಷರಾಗಿದ್ದ ಹಾಗೂ ವಿಮಾನ ಅಪಘಾತದಲ್ಲಿ ಮರಣ ಹೊಂದಿದ ಸಮೊರಾ ಮಾಕೆಲ್ ಅವರ ಪತ್ನಿ ಆಗಿದ್ದಳು. ೧೯೯೮ರಲ್ಲಿ ತಮ್ಮ ಇಳಿವಯಸ್ಸಿನಲ್ಲಿ ಇವರಿಬ್ಬರ ನಡುವೆ ಮದುವೆ ಜರುಗಿತು. ಆ ದಿನ ನೆಲ್ಸನ್ ಮಂಡೇಲಾರ ಹುಟ್ಟುಹಬ್ಬವೂ ಆಗಿತ್ತು. ಇಳಿ ವಯಸ್ಸಿನಲ್ಲಿ ಮದುವೆಯಾದ ಈ ಸಂಗತಿಯು ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಲವಾರು ರಸವತ್ತಾದ ಚರ್ಚೆಗೆ ಗ್ರಾಸವಾಯಿತು. ಜೋಹಾನ್ಸ್‌ಬರ್ಗ್ ಸಮೀಪದ ಕ್ವಿನುನಲ್ಲಿ ಇವರಿಬ್ಬರೂ ದಂಪತಿಗಳಾಗಿ ಈಗಲೂ ವಾಸವಾಗಿದ್ದಾರೆ.

### ರಾಜಕೀಯ ನಿವೃತ್ತಿ

ನೆಲ್ಸನ್ ಮಂಡೇಲಾ ಅವರು ಪ್ರಿಟೋರಿಯಾ ಸರಕಾರದ ಕಪಿಮುಷ್ಟಿಯಿಂದ ಬಹುಸಂಖ್ಯಾತ ದಕ್ಷಿಣ ಆಫ್ರಿಕಾ ಜನತೆಯನ್ನು ತಮ್ಮ ಅಚಲ ಹೋರಾಟದಿಂದ ಬಿಡುಗಡೆ ಗೊಳಿಸಿದರು. ಹೊಸ ವ್ಯವಸ್ಥೆಯನ್ನು ಅಳವಡಿಸಿಕೊಂಡ ದಕ್ಷಿಣ ಆಫ್ರಿಕಾದ ಮೊಟ್ಟಮೊದಲ ಚುನಾಯಿತ ಅಧ್ಯಕ್ಷರಾಗಿ ನೆಲ್ಸನ್ ಮಂಡೇಲಾ ಅವರು ಕಾರ್ಯಭಾರ ಮಾಡಿದರು. ಅಲ್ಲದೇ ಈ ದೇಶದಲ್ಲಿ ಈವರೆಗೆ ಆಡಳಿತ ನಿರ್ವಹಿಸಿದವರಲ್ಲಿ ಅತೀ ಹಿರಿಯ ವಯಸ್ಸಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದರ ಮೂಲಕ ಇತಿಹಾಸ ನಿರ್ಮಿಸಿದರು. ತಮ್ಮ ಇಳಿವಯಸ್ಸಿನ ೭೫ರ ವಸಂತದಲ್ಲಿ ಅಧ್ಯಕ್ಷ ಗಾದಿ ಏರಿದ ಇವರು ಪ್ರಜಾಸತ್ತಾತ್ಮಕ ಧೋರಣೆಗಳಿಂದ ಹೆಸರುವಾಸಿಯಾಗಿದ್ದಾರೆ. ೧೯೯೪ ರಿಂದ ೧೯೯೯ರ ವರೆಗೆ ಅಧಿಕಾರ ನಿರ್ವಹಿಸಿದ ನೆಲ್ಸನ್ ಮಂಡೇಲಾ ಅವರು ತಾವು ಈ ಹಿಂದೆ ಜನತೆಗೆ ಕೊಟ್ಟ ಮಾತಿನಂತೆ ಎರಡನೆಯ ಅವಧಿಗೆ ಅಧಿಕಾರವನ್ನು ವಹಿಸಿಕೊಳ್ಳದೇ ಮುಂದಿನ ಆಡಳಿತಗಾರರಿಗೆ ಮಾದರಿಯಾಗಿ ನಿಂತರು. ತಮ್ಮ ಉತ್ತರಾಧಿಕಾರಿ ಥಾಬೋ ಬೆಕಿ ಅವರಿಗೆ ೧೯೯೯ರಲ್ಲಿ ತಾವು ಹೊಂದಿದ ಅಧ್ಯಕ್ಷಗಾದಿಯ ಅಧಿಕಾರ ಬಿಟ್ಟುಕೊಟ್ಟರು. ಈ ಹುದ್ದೆಯಿಂದ ನಿವೃತ್ತಿ ಆದ ನಂತರ ತಮ್ಮ ಮುಂದಿನ ಬದುಕಿನ ದಿನಗಳನ್ನು ರಷ್ಯಾದ ಬಡತನ, ವರ್ಣಭೇದ ನೀತಿ ಹಾಗೂ ಏಡ್ಸ್ ನಂತಹ ಮಹಾರೋಗಗಳ ನಿವಾರಣೆಗಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ

ಹೋರಾಟವನ್ನು ಕೈಗೊಂಡು ಆದರ್ಶಪ್ರಾಯರಾದರು. ಲಕ್ಷಾನು ಸಂಖ್ಯೆಯ ಚಿಕ್ಕ ಮಕ್ಕಳ ಭವಿಷ್ಯದ ಬಗೆಗೆ ಕಾಳಜಿ ಮೂಲಕ ಕ್ರಮವಹಿಸುವ ಹಲವು ದತ್ತಿ ನಿಗಮಗಳನ್ನು ಸಹ ಮಾಡಿಕೊಂಡಿದ್ದಾರೆ. ಇದಕ್ಕಾಗಿ ಹಲವಾರು ಆಟಗಳ ಅಂತಾರಾಷ್ಟ್ರೀಯ ಪಂದ್ಯಾವಳಿಗಳನ್ನು ಆಯೋಜಿಸಿದ್ದಾರೆ. ಅನಾಥ ಹಾಗೂ ಗತಿ ಇಲ್ಲದೇ ತಿರುಗುವ ಮಕ್ಕಳ ಭವಿಷ್ಯಕ್ಕಾಗಿ ವಿವಿಧ ಯೋಜನೆಗಳನ್ನು ನಿರಂತರವಾಗಿ ಹಾಕಿಕೊಳ್ಳುತ್ತಿದ್ದಾರೆ. ಮಾನವೀಯತೆಯ ಹಿನ್ನೆಲೆ ಇಟ್ಟುಕೊಂಡು ಕಾಳಜಿ ಪೂರಕವಾಗಿ ಕೆಲಸ ಮಾಡುತ್ತಿರುವ ನೆಲ್ಸನ್ ಮಂಡೇಲಾ ಅವರು ೨೦೦೬ರಲ್ಲಿ ಜರುಗಿದ ಚಳಿಗಾಲದ ಒಲಂಪಿಕ್ ಪಂದ್ಯಾವಳಿಯ ಉದ್ಘಾಟನಾ ಭಾಷಣ ಮಾಡುತ್ತಾ ಜಗತ್ತಿನ ಮಹಾಜನತೆಯು ಹೊಂದುವ ಎಲ್ಲ ಬಗೆಯ ದೃಷ್ಟಿಕೋನವು ''ಮಾನವೀಯತೆ'' ನೆಲೆಯಲ್ಲಿ ನೆಲೆಗೊಳ್ಳಬೇಕಾಗಿರುವ ಅವಶ್ಯಕತೆಯನ್ನು ಪ್ರಬಲವಾಗಿ ಪ್ರತಿಪಾದಿಸಿದರು. ಮಾನವರ ಬದುಕು ಒಂದು ನಿಯಮಬದ್ಧ ಆಟದ ತರಹ. ಆದ್ದರಿಂದ ಈ ಸಂದರ್ಭದಲ್ಲಿ ತಮ್ಮ ಜಯದ ಆಟಕ್ಕಾಗಿ ಮಾತ್ರ ಎಲ್ಲರೂ ಕೆಲವು ನಿಮಿಷಗಳ ವರೆಗೆ ಪ್ರತಿಸ್ಪರ್ಧಿಗಳಾಗಿರುತ್ತಾರೆ. ಉಳಿದ ಎಲ್ಲ ದಿನಗಳಲ್ಲಿ ಅವರು ಮಾನವೀಯತೆ ಮರೆಯುತ್ತಾರೆ ಎಂಬ ದೂರದೃಷ್ಟಿಯಿಂದ ಕೂಡಿದ ದೃಷ್ಟಾಂತ ಕೊಡುವುದರ ಮೂಲಕ ಮಾನವೀಯತೆಯ ರಕ್ಷಣೆಗಾಗಿ ಜಗತ್ತಿನ ಎಲ್ಲ ರಾಷ್ಟ್ರಗಳಿಗೆ ಕಳಕಳಿಯಿಂದ ಮನವಿ ಮಾಡಿಕೊಂಡರು.

**ಅನಾರೋಗ್ಯದ ವದಂತಿ**

೨೦೦೧ರಲ್ಲಿ ಮಂಡೇಲಾ ಅವರಿಗೆ ಕ್ಯಾನ್ಸರ ರೋಗ ತಗಲಿರುವ ಬಗೆಗಿನ ವಿಷಯವನ್ನು ತುಂಬಾ ಪೈಪೋಟಿಯಿಂದ ಮಾಧ್ಯಮಗಳು ಅವರಿಗೆ ಇಷ್ಟವಾಗಲಾರದ ವಿಷಯವನ್ನು ಬಿತ್ತರಿಸಿದವು. ಸುಮಾರು ಏಳು ವಾರಗಳ ಕಾಲ ಆರೈಕೆ ಪಡೆದ ಅವರು ತಮ್ಮ ರಾಜಕೀಯ ಪ್ರವೃತ್ತಿಗೆ ವಿದಾಯ ಹೇಳುವ ಮಾತುಗಳನ್ನಾಡಿದರು. ಅಲ್ಲದೇ ತಮ್ಮ ದೇಹಾರೋಗ್ಯವು ದಿನದಿನಕ್ಕೆ ಕ್ಷೀಣಿಸುತ್ತಿರುವುದರಿಂದ ೨೦೦೪ರ ಜೂನ್‌ನಲ್ಲಿ ಅವರು ಸಾರ್ವಜನಿಕ ಜೀವನದಿಂದ ತಮ್ಮ ೮೫ನೇ ವಯಸ್ಸಿನಲ್ಲಿ ನಿವೃತ್ತಿ ಘೋಷಿಸಿದರು. ಈ ಮೊದಲು ದೇಹಾರೋಗ್ಯ ಕೆಟ್ಟಿರುವ ಸಂಗತಿಗಳನ್ನು ನೆಪ ಮಾಡಿಕೊಂಡು ಅವರು ಮರಣ ಹೊಂದಿದರು ಎಂಬ ಸುಳ್ಳು ಸುದ್ದಿಗಳು ಹುಟ್ಟಿಕೊಂಡವು. ಅವರ ಸಾವಿನ ಬಗೆಗೆ ಹಲವಾರು ವದಂತಿಗಳು ಹಬ್ಬಿ ಅನೇಕ ತಲ್ಲಣಗಳನ್ನು ಉಂಟು ಮಾಡಿದವು. ೨೦೦೩ರಲ್ಲಿ ಅಂತಾರಾಷ್ಟ್ರೀಯ ಖ್ಯಾತಿಯ ಟಿ.ವಿ ಪ್ರಸಾರವಾಹಿನಿಯು ಅವರ ಸಾವಿನ ಬಗೆಗೆ ಅನೇಕ ಸುದ್ದಿಗಳನ್ನು ಬಿತ್ತರಿಸಿತ್ತು. ಅಲ್ಲದೇ ಮತ್ತೊಮ್ಮೆ ೨೦೦೭ರಲ್ಲಿ ಆಕ್ಸ್ ಎಂಬ ಇಮೇಲ್ ಪೆಟ್ಟಿಗೆಯು ಸಹ ಅವರ ಸಾವಿನ ಬಗೆಗೆ ಕೆಲವು ವದಂತಿಗಳನ್ನು ಹಬ್ಬಿಸಿ ಇಡೀ ವಾತಾವರಣವನ್ನು ಕಲುಷಿತಗೊಳಿಸಿತು. ಜನರನ್ನು ಧೃತಿಗೆಡಿಸಿ ಹಲವಾರು ಅಪಾಯಗಳಿಗೆ ಎಡೆ ಮಾಡಿದವು. ಇದರಿಂದ ಕೆಲವು ಹತ್ಯೆಗಳು ಸಹ ಆಫ್ರಿಕಾದಲ್ಲಿ ನಡೆದವು. ಆದರೆ ಆ ವೇಳೆಗೆ ಅವರು ಮೊಜಾಂಬಿಕ್ ದೇಶದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದ ಸುದ್ದಿಗಳು ಚಿತ್ರ ಸಹಿತ ಪ್ರಕಟವಾಗಿ ಎದ್ದಿರುವ ಆತಂಕವನ್ನು ಕಡಿಮೆಗೊಳಿಸಿತು. ಏನೆಲ್ಲಾ ಗಾಳಿ ಸುದ್ದಿಗಳು ಅವರ

ಬಗೆಗೆ ಹರಡಿದ್ದರೂ ಅವರು ಅಚಲವಾಗಿದ್ದರು. ೨೦೦೮ರ ಜುಲೈ ೧೮ರಂದು ತಮ್ಮ ೯೦ನೇ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳುತ್ತಾ ಮುಖ್ಯ ಸಂದೇಶವೊಂದನ್ನು ನೀಡಿದರು. ಜಗತ್ತಿನ ಎಲ್ಲ ದೇಶಗಳಲ್ಲಿರುವ ಶ್ರೀಮಂತರು, ಎಲ್ಲ ಬಡವರ ಬವಣೆಗಳ ಬಗೆಗೆ ಕಾಳಜಿ ಹಾಗೂ ಅವರ ಉನ್ನತಿಯ ಕಡೆಗೆ ಸದಾ ಯೋಚಿಸಬೇಕೆಂಬ ಮಹತ್ವದ ಹೇಳಿಕೆಯನ್ನು ತಾವು ಹೊಂದಿದ್ದ ಕಾಳಜಿಯನ್ನು ಪುನರಚ್ಚೀಸಿದರು.

## ವಯೋವೃದ್ಧ ಮುತ್ಸದ್ಧಿ ಸಮೂಹ

೨೦೦೭ರಲ್ಲಿ ನೆಲ್ಸನ್ ಮಂಡೇಲಾ, ಗ್ರಾಕ್ ಮಕೆಲ್ ಹಾಗೂ ಡೆಸಮಂಡ್ ಟುಟು ಅವರು ಸೇರಿ ಅಂತಾರಾಷ್ಟ್ರೀಯ ವಯೋವೃದ್ಧ ಮುತ್ಸದ್ಧಿಗಳ ಸಮೂಹ ಕಟ್ಟಿಕೊಂಡಿದ್ದಾರೆ. ಅವರ ೮೯ನೇ ಹುಟ್ಟುಹಬ್ಬದ ದಿನದಂದು ರಚನೆಗೊಂಡ ಈ ಸಂಘವು ಜಾಗತಿಕ ಮಟ್ಟ ದಲ್ಲಿ ತಲೆದೋರುವ ಮಾನವ ವಿರೋಧಿ ಕೃತ್ಯಗಳ ಬಗೆಗೆ ತನ್ನ ಪ್ರತಿಭಟನೆಯ ಹೇಳಿಕೆಗಳನ್ನು ನೀಡಿ ಶಾಂತಿ ಸಂದೇಶಗಳನ್ನು ಬಿತ್ತರಿಸುತ್ತದೆ. ಆರ್ಚ್‌ಬಿಷಪ್ ಟುಟು ಈ ಸಂಘದ ಮುಖ್ಯಸ್ಥರಾಗಿದ್ದಾರೆ. ಗ್ರಾಕ್ ಮೆಕಲ್, ಕೊಫಿ ಅನಾನ್, ಇಲಾ ಭಟ್, ಹರ್ಲಮ್ ಬ್ರಡೆಂಟ್‌ಲ್ಯಾಂಡ್, ಜಿಮ್ಮಿ ಕಾರ್ಟರ್, ಲಿ ಝಿಯಾಂಗ್, ಮ್ಯಾರಿ ರಾಬಿನ್‌ಸನ್ ಮತ್ತು ಮಹ್ಮದ್ ಯುನಿಸ್ ಅವರಂಥಹ ಅಂತಾರಾಷ್ಟ್ರೀಯ ಖ್ಯಾತಿಯ ಚಿಂತಕರು ಈ ಸಂಘದ ಸಕ್ರಿಯ ಸದಸ್ಯರಾಗಿದ್ದಾರೆ. ಯಾವುದೇ ಅಂಜಿಕೆ, ಅಳುಕಿಲ್ಲದೇ ಈ ಸಂಘಟನೆಯು ಜಗತ್ತಿನ ಯಾವುದೇ ಭಾಗದಲ್ಲಿ ಮಾನವನ ಜೀವ ವಿರೋಧಿಯಾಗಿ ನಡೆಯುವ ಎಲ್ಲ ಕುಕೃತ್ಯಗಳನ್ನು ಖಂಡಿಸುತ್ತದೆ. ಅಲ್ಲದೇ ಪ್ರತಿಭಟನಾ ಹೇಳಿಕೆ ನೀಡಿ ಜಗತ್ತನ್ನು ಜಾಗೃತವಾಗಿಡುವ ಪ್ರಯತ್ನದಲ್ಲಿ ತನ್ನನ್ನು ತೊಡಗಿಸಿಕೊಂಡಿದೆ.

## ಮಹಾಮಾರಿ ಏಡ್ಸ್‌ನ ವಿರುದ್ಧ ಚಳುವಳಿ

ಭೌಗೋಳಿಕ ಎಲ್ಲೆ ಇಲ್ಲದೇ ವಯಸ್ಸಿನ ಮಿತಿಗಳನ್ನು ಪರಿಗಣಿಸದೆ ಅತೀ ಭಯಾನಕ ವಾಗಿ ಏಡ್ಸ್ ಮಹಾಮಾರಿಯು ಇಡೀ ಆಫ್ರಿಕಾ ಖಂಡವನ್ನು ಪೀಡಿಸಲು ಪ್ರಾರಂಭಿಸಿದೆ. ಇದರ ತೀವ್ರತೆ ಎಷ್ಟಿದೆ ಅಂದರೆ ಈ ಮಹಾರೋಗವು ಕೆಲವೇ ವರ್ಷಗಳಲ್ಲಿ ಇಡೀ ಆಫ್ರಿಕಾ ಖಂಡದ ಜನಸಂಖ್ಯೆಯನ್ನು ಅರ್ಧಕ್ಕೆ ತಂದು ಇಳಿಸುವ ಕಾರ್ಯದಲ್ಲಿ ಯಶಸ್ವಿಯಾಗುವುದರಲ್ಲಿ ಯಾವ ಸಂಶಯವಿಲ್ಲ. ಇಂಥ ಮಹಾರೋಗದ ತಡೆಗಟ್ಟುವಿಕೆಗೆ ಬೇಕಾದ ತಿಳುವಳಿಕೆ ಕಲ್ಪಿಸುವಲ್ಲಿ ನೆಲ್ಸನ್ ಮಂಡೇಲಾ ಅವರು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಯತ್ನ ಪ್ರಾರಂಭಿಸಿದ್ದಾರೆ. ಜಗತ್ತಿನ ಎಲ್ಲ ಜನರಲ್ಲಿ ಜಾಗೃತಿ ಮೂಡಿಸಲು ೨೦೦೦ರಲ್ಲಿ ೧೩ನೇ ಅಂತರಾಷ್ಟ್ರೀಯ ಏಡ್ಸ್ ತಡೆಗಟ್ಟುವ ನಿಯಮಾವಳಿಗಳನ್ನು ರೂಪಿಸುವ ಸಭೆಯನ್ನು ದ.ಆಫ್ರಿಕಾದ ಡರ್ಬನ್‌ನಲ್ಲಿ ಮಂಡೇಲಾರ ಮುತುವರ್ಜಿಯಿಂದಲೇ ನಡೆಸಲಾಯಿತು. ಇದನ್ನು ಉದ್ದೇಶಿಸಿ ಮಾತನಾಡುತ್ತಾ ಮೂರನೆಯ ಜಗತ್ತಿನಲ್ಲಿ ತಲೆದೋರಿರುವ ಈ ಮಹಾರೋಗವನ್ನು ಒಗ್ಗಟ್ಟಿನಿಂದ ಎಲ್ಲ ದೇಶಗಳು ಸೇರಿ ನಿಯಂತ್ರಿಸಬೇಕೆಂದು ಕರೆ

ನೀಡಿದರು. ೨೦೦೪ರಲ್ಲಿ ನಡೆದ ಬ್ಯಾಂಕ್‌ನಲ್ಲಿಯೇ ಇಂಥದ್ದೇ (೧೫ನೆಯ) ಸಮ್ಮೇಳನವನ್ನೂ ಉದ್ದೇಶಿಸಿ ಇಡೀ ಜಗತ್ತಿಗೆ ಮತ್ತೆ ಏಡ್ಸ್ ತಡೆಗಟ್ಟುವ ತುರ್ತುಕ್ರಮಗಳ ಬಗೆಗೆ ಗಂಭೀರವಾದ ಸಂದೇಶ ನೀಡಿದರು. ಇದೇ ಮಹಾರೋಗದಿಂದ ಮಂಡೇಲಾರ ಮಗ ಮ್ಯಾಕ್ಗ್‌ಥೊ ಮಂಡೇಲಾ ಸಹ ೨೦೦೫ರಲ್ಲಿ ನಿಧನ ಹೊಂದಿದ. ಇದು ನೆಲ್ಸನ್ ಮಂಡೇಲಾರನ್ನು ತೀವ್ರವಾಗಿ ಗಾಸಿಗೊಳಿಸಿತು.

## ಇರಾಕ ಮೇಲಿನ ದಾಳಿಯ ಬಗೆಗೆ ಮಂಡೇಲಾ ತಳೆದ ನಿಲುವುಗಳು

ಅಂತಾರಾಷ್ಟ್ರೀಯ ಮಟ್ಟದಲ್ಲಿ ಅಮೆರಿಕಾ ಮಾಡುತ್ತಿದ್ದ ಎಡಬಿಡಂಗಿತನವನ್ನು ನೆಲ್ಸನ್ ಮಂಡೇಲಾ ತೀವ್ರವಾಗಿ ಖಂಡಿಸಿದರು. ೨೦೦೨ ಮತ್ತು ೨೦೦೩ರಲ್ಲಿ ಅಮೆರಿಕಾ ಹಾಗೂ ಅದರ ಮಿತ್ರರಾಷ್ಟ್ರಗಳು ಸೇರಿ ಇರಾಕಿನ ಮೇಲೆ ಏಕಾಏಕಿಯಾಗಿ ಮಾಡಿದ ದಾಳಿಗಳನ್ನು ತೀವ್ರವಾಗಿ ವಿರೋಧಿಸಿ ಅಂಥ ದಾಳಿಯನ್ನು ತತ್‌ಕ್ಷಣವೇ ನಿಲ್ಲಿಸುವಂತೆ ಒತ್ತಡ ಹೇರಿದರು. ಜಾರ್ಜ್‌ಬುಶ್ ಆಡಳಿತ ತೆಗೆದುಕೊಳ್ಳುತ್ತಿದ್ದ ನಿಲುವುಗಳನ್ನು ಹಾಗೂ ಅಮೆರಿಕಾದ ಒತ್ತಡಗಳು ವಿಶ್ವಸಂಸ್ಥೆ ಸಂಘಟನೆಯನ್ನು ತಪ್ಪುದಾರಿಗೆ ಎಳೆಯುತ್ತಿರುವ ವಿಚಾರವನ್ನು ಬಹಿರಂಗವಾಗಿ ಟೀಕಿಸಿದರು. ಅಮೇರಿಕಾದ ಅನತಿಯಂತೆ ವಿಶ್ವಸಂಸ್ಥೆ ಸಹ ಜನಾಂಗೀಯ ತಾರತಮ್ಯದ ಯುದ್ಧಕ್ಕೆ ಬೆಂಬಲವಾಗಿ ನಿಂತಿರುವ ವಿಷಯಗಳನ್ನು ಅತೀ ಬೇಸರದಿಂದ ಪ್ರತಿಭಟಿಸಿದರು. ಇದೇ ವೇಳೆಗೆ ವಿಶ್ವಸಂಸ್ಥೆಯ ಪ್ರಧಾನಕಾರ್ಯದರ್ಶಿ ಕೋಫಿ ಅನ್ನಾನ್ ಆಗಿದ್ದರು. ಇವರೊಬ್ಬ ಕಪ್ಪು ವರ್ಣೀಯ. ಆದ್ದರಿಂದ ಅಮೆರಿಕಾ ಇಂಥ ದುಷ್ಕೃತ್ಯಗಳನ್ನು ಒಬ್ಬ ಕಪ್ಪುವರ್ಣೀಯನಿಂದ ಮಾಡಿಸಲು ಯಶಸ್ವಿಯಾಗಿದೆ ಎಂದು ಗುರುತರ ಆಪಾದನೆ ಮಾಡಿದರು. ಆದರೆ ಇದೇ ಜಾಗದಲ್ಲಿ ಒಬ್ಬ ಬಿಳಿಯನಿದ್ದಿದ್ದರೆ ಇದನ್ನು ಅಮೆರಿಕಾ ಮಾಡಿಸುತ್ತಿತ್ತೆ? ಎಂಬ ವ್ಯಂಗ್ಯವಾದ ಅಭಿಪ್ರಾಯ ವ್ಯಕ್ತಪಡಿಸಿ ಅಮೆರಿಕಾ ತಾನು ತಾಳಿರುವ ಪೊಲೀಸ್ ಧೋರಣೆಯನ್ನು ಕೈಬಿಡಬೇಕೆಂದು ಪ್ರಬಲವಾಗಿ ಚುಚ್ಚಿದರು. ಬುಷ್ ಆಡಳಿತವನ್ನು ಹಾಗೂ ಅವನ ನೀತಿ-ನಿಯಮಗಳನ್ನು ಅಮೆರಿಕಾದ ಮಹಾಜನತೆ ಖಂಡಿಸಬೇಕೆಂದು ಒತ್ತಾಯಿಸಿದರು. ಒಂದೇ ಶಕ್ತಿ, ಒಬ್ಬನೇ ಅಧಿಕಾರಿ ಹಾಗೂ ಗೊತ್ತು ಗುರಿ ಇಲ್ಲದ ಆಕ್ರಮಣವನ್ನು ನಾನು ಎಂದೆಂದಿಗೂ ಒಪ್ಪುವುದಿಲ್ಲ ಎಂದು ಹೇಳಿ ತಾವು ಹೊಂದಿದ ಪ್ರಜಾಸತ್ತಾತ್ಮಕ ಅಭಿಪ್ರಾಯಗಳಿಗೆ ಕಟೀಬದ್ಧರಾಗಿ ನಿಂತರು. ಜಗತ್ತಿನಲ್ಲಿ ಯಾರ ಮಾತಿಗೂ ಬೆಲೆ ಕೊಡದೇ ಹಿಂಸೆಯನ್ನು ಪ್ರಚೋದಿಸುವ ಏಕೈಕ ದೇಶವೆಂದರೆ ಅದು ಅಮೆರಿಕಾ ಮಾತ್ರವೆಂದು ಕಟುವಾಗಿ ಟೀಕಿಸಿದರು. ಅಲ್ಲದೇ ವಿಶ್ವ ಸಂಸ್ಥೆಯು ಅಮೆರಿಕಾ ಹಾಗೂ ಯುರೋಪ್ ಖಂಡದ ಯುದ್ಧದಾಹಿ ದೇಶಗಳ ಮರ್ಜಿಗೆ ಒಳಗಾಗಿ ಮಾಡುವ ಕೆಲಸಕಾರ್ಯಗಳನ್ನು ಯಾವ ಮುಲಾಜಿಲ್ಲದೇ ಕಟುವಾಗಿ ಟೀಕಿಸಿದರು.

## ಇಸ್ಮಾಯಿಲ್ ಅಯೂಬ್‌ರ ಜೊತೆಗಿನ ಗೊಂದಲಗಳು

ಇಸ್ಮಾಯಿಲ್ ಅಯೂಬ್ ಅವರು ಮೂವತ್ತು ವರ್ಷಗಳ ಕಾಲ ನೆಲ್ಸನ್ ಮಂಡೇಲಾ ಅವರಿಗೆ ಕಾನೂನು ಸಲಹೆಗಾರರಾಗಿ ಕಾರ್ಯನಿರ್ವಹಿಸಿದವರು. ಮಂಡೇಲಾ ಅವರ

ಹಸ್ತಾಕ್ಷರ ಮಾರಾಟದ ಹಕ್ಕುಸಾಮ್ಯದ ಸಂಬಂಧವಾಗಿ ಕೆಲವು ಭಿನ್ನಾಭಿಪ್ರಾಯಗಳು ಉಂಟಾಗಿ ಇದು ಹೈಕೋರ್ಟ್‌ವರೆಗೂ ಹೋಯಿತು. ಇದನ್ನು ನೆಪ ಮಾಡಿಕೊಂಡು ನೆಲ್ಸನ್ ಮಂಡೇಲಾ ಅವರ ಬೆಂಬಲಿಗರು ಮತ್ತು ಹಿತೈಷಿಗಳು ಸ್ಮೆರ್ ನಲ್ಲಿ ನಡೆದ ಘಟನೆಗೆ ನನ್ನನ್ನು ಬಲಿಪಶು ಮಾಡಿದ್ದಾರೆ ಎಂದು ಅಯುಬ್ ಅವರು ಗಂಭೀರವಾಗಿ ಆರೋಪಿಸಿದರು. ೨೦೦೫ ಮತ್ತು ೨೦೦೬ರಲ್ಲಿ ಈ ವಿವಾದ ಹೆಚ್ಚಿನ ತೀವ್ರತೆ ಪಡೆಯಿತು. ಅಯೂಬ್ ಅವರ ಹೆಂಡತಿ ಹಾಗೂ ಮಕ್ಕಳ ಮೇಲೆ ಮಂಡೇಲಾ ಅವರ ಹಿತೈಷಿಗಳು ದೈಹಿಕ ಹಲ್ಲೆ ಮಾಡುವ ಪ್ರಯತ್ನ ಮಾಡಿದರು ಎಂದು ಮಾಧ್ಯಮಗಳಲ್ಲಿ ಪ್ರಕಟಿಸಿದವು. ಇಂಥ ವರದಿಗಳು ಇನ್ನೂ ಹೆಚ್ಚಿನ ಚರ್ಚೆಗೆ ಗ್ರಾಸವಾಗುವಂತೆ ಮಾಡಿದವು.

ಈ ಘಟನೆಗೆ ಮುಖ್ಯ ಕಾರಣಗಳೆಂದರೆ, ವಜ್ರದ ಗಣಿಗಾರಿಕೆ. ವ್ಯಾಪಾರಿ ಹ್ಯಾರಿ ಓಪನ್ಹೈರ್ ಅವರು ನೆಲ್ಸನ್ ಮಂಡೇಲಾ ಅವರ ಮಕ್ಕಳು ಹಾಗೂ ಮೊಮ್ಮಕ್ಕಳಿಗೆ ಅನುಕೂಲವಾಗಲೆಂಬ ಹಿನ್ನೆಲೆಯಲ್ಲಿ ಸು.೭ ಲಕ್ಷ ರ‍್ಯಾಂಡ್ ಹಣವನ್ನು ನೀಡಿದ್ದರು. ಇದರ ಸದುಪಯೋಗವಾಗಲೆಂದು ಒಂದು ವಿಶ್ವಸ್ಥ ಮಂಡಳಿಯನ್ನು ಸಹ ರಚಿಸಿದ್ದರು. ಈ ಮಂಡಳಿಯಲ್ಲಿ ಇಸ್ಮಾಯಿಲ್ ಅಯೂಬ್, ಜಾರ್ಜ ಬಿಜೋಸ್ ಹಾಗೂ ವಿಮ್ ಟ್ರೆನ್ ಗೊ ಅವರನ್ನು ಸದಸ್ಯರನ್ನಾಗಿ ಮಾಡಲಾಗಿತ್ತು. ಈ ಸಂಸ್ಥೆಯ ಸದಸ್ಯರಲ್ಲಿ ಒಬ್ಬರಾದ ಇಸ್ಮಾಯಿಲ್ ಅಯೂಬ್ ಮಂಡಳಿಯ ನಿಯಮಗಳ ವಿರುದ್ಧವಾಗಿ ಇವರ ಹಣವನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎಂಬ ಆರೋಪವನ್ನು ಉಳಿದ ಇಬ್ಬರು ಸದಸ್ಯರು ಮಾಡಿದರು. ಇದನ್ನರಿತ ನೆಲ್ಸನ್ ಮಂಡೇಲಾ ಅವರು ಈ ಹಿಂದೆ ಅಯೂಬ್‌ರಿಗೆ ತಮ್ಮ ಹಸ್ತಾಕ್ಷಾರವುಳ್ಳ ಸಂಗತಿಗಳನ್ನು ಮಾರಾಟ ಮಾಡಲು ವಹಿಸಿಕೊಟ್ಟಿದ್ದ ಜವಾಬ್ದಾರಿಯಿಂದ ಅಯೂಬ್‌ರನ್ನು ತೆಗೆದು ಹಾಕಲಾಯಿತು. ಅಲ್ಲದೇ ಅವರು ಈ ಹಿಂದೆ ನೆಲ್ಸನ್ ಮಂಡೇಲಾ ಹಾಗೂ ಸಂಸ್ಥೆಯ ಜೊತೆಗೆ ಹೊಂದಿದ್ದ ಎಲ್ಲ ಸಂಬಂಧಗಳಿಂದ ದೂರ ಮಾಡಲಾಯಿತು. ಹಸ್ತಾಕ್ಷರಕ್ಕೆ ಸಂಬಂಧಿಸಿದ ಸಮಸ್ಯೆ ಹೈಕೋರ್ಟ್‌ವರೆಗೆ ಹೋಗಿದ್ದರಿಂದ ಅಲ್ಲದೇ ತನಗಾದ ಅವಮಾನದಿಂದ ಹೆದರಿ ಮಾನಸಿಕ ಸ್ಥಿರತೆ ಕಳೆದುಕೊಂಡ ಅಯೂಬ್ ನೆಲ್ಸನ್ ಮಂಡೇಲಾ ರನ್ನು ಒಳಗೊಂಡಂತೆ ಈ ಸಂಸ್ಥೆಯಲ್ಲಿದ್ದ ಎಲ್ಲರನ್ನು ಗಂಭೀರವಾಗಿ ಟೀಕೆಗೆ ಒಳಪಡಿಸಿ ದರು. ಅನಾವಶ್ಯಕ ಹೇಳಿಕೆಗಳ ಮೂಲಕ ಪತ್ರಿಕೆಗೆ ತಪ್ಪು ವರದಿ ನೀಡಿ ಸಮಸ್ಯೆಯು ಮತ್ತಷ್ಟು ಬಿಗಾಡಿಯಿಸುವಂತೆ ಮಾಡಿದ. ಇಂಥ ಸುಳ್ಳು ಆರೋಪಗಳನ್ನು ಸಹಿಸದ ಆಫ್ರಿಕನ್‌ರು ಇಂಥ ಹೇಳಿಕೆಗಳು ವಿನಾಕಾರಣ ತಮ್ಮ ನಾಯಕನಿಗೆ ಮಾಡಿದ ಅವಮಾನ ವೆಂದು ತಿಳಿದು ಅಯೂಬ್ ಮೇಲೆ ಹಲ್ಲೆ ಮಾಡುವ ಪ್ರಯತ್ನ ಮಾಡಿದರು. ಉದ್ಭವವಾದ ಇಂಥ ಕೆಟ್ಟ ಹೇಳಿಕೆಗಳು ಹಿರಿಯ ಮುತ್ಸುದ್ಧಿಗಳನ್ನು ತೀವ್ರವಾಗಿ ನೋಯುವಂತೆ ಮಾಡಿತು. ಮುಂದಿನ ದಿನಗಳಲ್ಲಿ ಈ ಸಂಬಂಧವಾಗಿ ಕೆಲವು ಕಾನೂನು ರೀತಿಯ ವಿಚಾರಣೆಗಳೂ ನಡೆದು ತಾನು ಮಾಡಿದ ಆಧಾರ ರಹಿತ ಟೀಕೆಗಳು ಹಾಗೂ ವಿಶ್ವಸ್ಥ ಮಂಡಳಿಯಿಂದ ಮೋಸದ ಮೂಲಕ ಪಡೆದ ೭ ಲಕ್ಷ ರ‍್ಯಾಂಡ್ ಹಣವನ್ನು ಮರಳಿ ಕೊಡಲು ಒಪ್ಪಿ

ಮಂಡೇಲಾರಿಗೆ ಹಾಗೂ ಕೋರ್ಟಿಗೆ ಬಹಿರಂಗ ಹಾಗೂ ಬೇಷರತ್ತ ತಪ್ಪೊಪ್ಪಿಗೆಯನ್ನು ಆಯೂಬ್ ಬರೆದುಕೊಟ್ಟರು. ಮುಂದೆ ಉದ್ಭವಿಸಬಹುದಾದ ನಾನಾ ಸಮಸ್ಯೆಗೆ ಆಯೂಬ್ ಕ್ಷಮೆಯಾಚಿಸುವುದರ ಮೂಲಕ ಉದ್ಭವವಾದ ವಿವಾದಕ್ಕೆ ತೆರೆ ಎಳೆದರು.

## ಬ್ಲಡ್ ಡೈಮಂಡ್ ಗೊಂದಲಗಳು

ವಜ್ರದ ಗಣಿಗಾರಿಕೆಗೆ ಸಂಬಂಧಿಸಿದಂತೆ ದ.ಆಫ್ರಿಕಾ ದೇಶವು ಜಾಗತಿಕ ಮಟ್ಟದಲ್ಲಿ ತುಂಬಾ ಪ್ರಸಿದ್ಧಿಯನ್ನು ಪಡೆದಿದೆ. ಈ ದೇಶದ ವಜ್ರದ ಉತ್ಪಾದನೆಯು ಜಗತ್ತಿನಲ್ಲಿರುವ ಎಲ್ಲ ದೇಶಗಳಲ್ಲಿನ ಉತ್ಪಾದನೆಯನ್ನು ಸರಿಗಟ್ಟುವುದು. ಆದರೆ ಇಲ್ಲಿನ ಗಣಿಗಾರಿಕೆಗೆ ಸಂಬಂಧಿಸಿದ ಬಹುತೇಕ ವ್ಯವಹಾರಗಳು ಮೇಲ್ವರ್ಗ ಹಾಗೂ ಕೆಲವೇ ಶ್ರೀಮಂತರ ಕೈಯಲ್ಲಿ ಕೇಂದ್ರೀಕರಣಗೊಂಡಿವೆ. ಈ ವಲಯದಲ್ಲಿನ ಎಲ್ಲ ಶೋಷಣೆಗಳ ಕುರಿತು ಎಡ್ವರ್ಡ್ ಜಾಪಿಕ್, ಬ್ಲಡ್ ಡೈಮಂಡ್ ಎಂಬ ಹೆಸರಲ್ಲಿ ಚಲನಚಿತ್ರ ಮಾಡಿದನು. ಗಣಿ ಗಾರಿಕೆಯಲ್ಲಿ ದುಡಿಯುವ ಕೂಲಿಕಾರ್ಮಿಕರು ಅದರಲ್ಲೂ ಕಪ್ಪು ವರ್ಣೀಯರು ಯಾವ ರೀತಿ ಇಲ್ಲಿನ ಅಮಾನುಷ ಕೃತ್ಯಗಳಿಗೆ ಬಲಿಯಾಗುತ್ತಾರೆ ಎಂಬುದನ್ನು ತಾನು ತೆಗೆದ ಚಲನಚಿತ್ರದಲ್ಲಿ ಎಳೆಎಳೆಯಾಗಿ ಬಿಡಿಸಿಟ್ಟ. ಆದರೆ ನೆಲ್ಸನ್ ಮಂಡೇಲಾ ಅವರು ಇದರಲ್ಲಿಯ ಚಿತ್ರಗಳು ವಾಸ್ತವಕ್ಕೆ ದೂರವಾದವು ಎಂಬ ಹಗುರವಾದ ಹೇಳಿಕೆ ನೀಡಿದರು. ಹಾಗೂ ವಜ್ರದ ತಯಾರಿಕೆಗೆ ಸಂಬಂಧಿಸಿದಂತೆ ಚಲನಚಿತ್ರದಲ್ಲಿ ತೋರಿಸಿದ ಅಗಾಧ ಹಿಂಸೆ ಮತ್ತು ಕ್ರೌರ್ಯ ಸಮಾಜದ ಮೇಲೆ ಕೆಟ್ಟ ಪರಿಣಾಮ ಬೀರುತ್ತವೆ ಎಂದು ಪ್ರತಿಯಾಗಿ ಅಭಿಪ್ರಾಯಿಸಿದರು. ಅಲ್ಲದೇ ಇದರ ಪರಿಣಾಮದಿಂದ ಜಾಗತಿಕವಾಗಿ ವಜ್ರದ ವಹಿವಾಟು ಕುಸಿದು ಅದು ಪರೋಕ್ಷವಾಗಿ ದ.ಆಫ್ರಿಕಾದ ಆರ್ಥಿಕತೆಯ ಮೇಲೆಯೇ ಕೊಡಲಿಪೆಟ್ಟು ಬೀಳುತ್ತದೆ ಎಂದು ಅಧ್ಯಕ್ಷರಾಗಿ ನೆಲ್ಸನ್ ಮಂಡೇಲಾ ಅಭಿಪ್ರಾಯ ವ್ಯಕ್ತಪಡಿಸಿ ದ್ವಂದ್ವಗಳಿಗೆ ಎಡೆ ಮಾಡಿದರು. ಅವರ ಹೇಳಿಕೆಯನ್ನು ಪತ್ರಿಕೆಗಳು ನಾನಾ ರೀತಿಯಲ್ಲಿ ಅರ್ಥೈಸಿ ಇನ್ನೂ ಗೊಂದಲಗೊಳಿಸಿದವು. ಅಮೆರಿಕಾದ ನ್ಯೂ ರಿಪ್ಲಬಿಕ್ ಅನ್ನುವ ಪತ್ರಿಕೆಯು ವಜ್ರದ ವ್ಯಾಪಾರಿ ಹ್ಯಾರಿ ಓಪನ್ಹೆರ್ ಹಾಗು ನೆಲ್ಸನ್ ಮಂಡೇಲಾ ಅವರು ಜೀವದ ಗೆಳೆಯರು ಅದಕ್ಕಾಗಿ ಅವರು ಗಣಿಗಾರಿಕೆಯಲ್ಲಿ ಸಂಭವಿಸುತ್ತಿರುವ ಹಿಂಸೆಯನ್ನು ಕಂಡು ಕಾಣದಂತೆ ಮರೆ ಮಾಚಿ, ಬೀಸು ಹೇಳಿಕೆ ನೀಡುತ್ತಿದ್ದಾರೆ ಎಂದು ಬರೆದು ಉದ್ಭವವಾಗಿದ್ದ ಪರಿಸ್ಥಿತಿಯನ್ನು ಮತ್ತಷ್ಟು ಬಿಗಡಾಯಿಸುವಂತೆ ಮಾಡಿತು. ಹೆಚ್ಚಿನ ಪತ್ರಿಕೆಗಳು ಆಫ್ರಿಕಾ ಸರಕಾರವನ್ನು ಟೀಕಿಸುತ್ತ ಇದು ಸರಕಾರದ "ರಾಷ್ಟ್ರೀಯ ತುಚ್ಛೀಕರಣ" ಎಂದು ಬರೆದು ಅಂತಾರಾಷ್ಟ್ರೀಯ ಮಟ್ಟದಲ್ಲಿ ನೆಲ್ಸನ್ ಮಂಡೇಲಾರನ್ನು ಟೀಕಿಸಿ ಅವರಿಗಿದ್ದ ಗೌರವವನ್ನು ಕಡಿಮೆ ಮಾಡುವ ಪ್ರಯತ್ನ ಮಾಡಿದವು. ಅಲ್ಲದೇ ತಿಂಗಳಾನುಗಟ್ಟಲೇ ಆರೋಪದ ಕಪ್ಪು ಮಸಿಯನ್ನು ಸರಕಾರದ ಮುಖಕ್ಕೆ ಹಚ್ಚಿ ಕೈ ತೊಳೆದುಕೊಂಡವು. ಇಂಥ ಹೇಳಿಕೆಗಳಿಂದ ನೊಂದ ಮಂಡೇಲಾ ಅವರು ಗಣಿಗಾರಿಕೆಗೆ ಸಂಬಂಧಿಸಿದ ವಿಚಾರಗಳ ಬಗೆಗೆ ಮತನಾಡುವುದನ್ನು ಬಿಟ್ಟರು.

## ಜಿಂಬಾಬೆಯ ಅಧ್ಯಕ್ಷ ರಾಬರ್ಟ್ ಮುಗಾಬೆ ಬಗೆಗಿನ ಮಂಡೇಲಾ ಅಭಿಪ್ರಾಯ

ವಸಾಹತುಶಾಹಿ ಇಂಗ್ಲೆಂಡಿನಿಂದ ಬಿಡುಗಡೆಗೊಂಡ ಜಿಂಬಾಬೆಯು ದುರದೃಷ್ಟವಶಾತ್ ೧೯೮೦ರಿಂದ ಅಧ್ಯಕ್ಷ ರಾಬರ್ಟ್ ಮುಗಾಬೆಯವರ ಹಿಡಿತದಲ್ಲಿ ನಲುಗಲಾರಂಭಿಸಿತು. ಅಧ್ಯಕ್ಷರ ಕುಮ್ಮಕ್ಕಿನಿಂದ ಹಲವು ರಾಜಕೀಯ ಕೊಲೆಗಳು, ಸ್ವಜನ ಪಕ್ಷಪಾತ, ವಿಪರೀತ ಭ್ರಷ್ಟಾಚಾರ ಹಾಗೂ ಕ್ರೌರ್ಯಗಳು ಹಿಡಿತವಿಲ್ಲದೇ ವಿಸ್ತರಿಸಿಕೊಂಡಿವೆ. ಇದರಿಂದ ಇಡೀ ದೇಶದ ಆರ್ಥಿಕ ವ್ಯವಸ್ಥೆ ನೆಲಕಚ್ಚಿದೆ. ಮೊದಮೊದಲು ತಾನು ಸಹ ವಸಾಹತುಶಾಹಿಗಳಿಂದ ಬಿಡಿಸಿಕೊಳ್ಳಲು ಮಾಡಿದ ದೀರ್ಘಕಾಲದ ಹೋರಾಟ ವನ್ನು ಮರೆತು ಜಿಂಬಾಬೆಯ ಆಡಳಿತವು ತಾನು ಆಡಳಿತ ವಹಿಸಿಕೊಂಡ ನಂತರ ವಸಾಹತುಶಾಹಿಗಳನ್ನು ಮೀರಿಸುವಷ್ಟು ದಬ್ಬಾಳಿಕೆಯನ್ನು ಮಾಡುತ್ತಿದೆ. ನೆಲ್ಸನ್ ಮಂಡೇಲಾ ಹಾಗೂ ರಾಬರ್ಟ್ ಮುಗಾಬೆ ತಮ್ಮ ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಅವಿರತ ಶ್ರಮವಹಿಸಿ ವಿಮೋಚನೆ ಹೋರಾಟವನ್ನು ಯಶಸ್ವಿಗೊಳಿಸಿದ್ದಾರೆ. ಆ ಸಂದರ್ಭದಲ್ಲಿ ಮುಗಾಬೆ ಹಾಗೂ ನೆಲ್ಸನ್ ಮಂಡೇಲಾರ ಸಂಬಂಧ ಬಹಳ ಸುಮಧುರವಾಗಿತ್ತು. ಆದರೆ ಅಧಿಕಾರದ ಪಿಪಾಸೆ ಮುಗಾಬೆ ಅವರನ್ನು ಬದಲಾಯಿಸಿ ರಾಕ್ಷಸನನ್ನಾಗಿ ಮಾಡಿದೆ ಎಂದು ಮಂಡೇಲಾ ಅವರು ಕಟುವಾಗಿ ಟೀಕಿಸಿದ್ದಾರೆ. ೨೦೦೭ರವರೆಗೂ ಮುಗಾಬೆಯ ಮೇಲೆ ಮಂಡೇಲಾ ಅವರು ಅನೇಕ ರಾಜಕೀಯ ಒತ್ತಡಗಳನ್ನು ಹೇರುತ್ತಿದ್ದರು. ಪ್ರಜಾಸತ್ತಾತ್ಮಕ ಆಡಳಿತದ ಬಗೆಗೆ ಅನೇಕ ಬಾರೀ ಮುಗಾಬೆ ಅವರಿಗೆ ಕಿವಿಮಾತನ್ನು ಹೇಳಿ ಬದಲಾಯಿಸುವ ಪ್ರಯತ್ನ ಮಾಡಿದರು. ಆದರೆ ಅವುಗಳಿಗೆ ಮುಗಾಬೆ ಅವರು ಯಾವುದೇ ರೀತಿಯ ಸ್ಪಂದನ ನೀಡದೆ ತಮ್ಮ ಹಠವನ್ನೆ ಸಾಧಿಸಲಾರಂಭಿಸಿದರು. ೨೦೦೮ರಲ್ಲಿ ಅಧ್ಯಕ್ಷರ ಆಯ್ಕೆಗಾಗಿ ನಡೆದ ಮಹಾಚುನಾವಣೆಯಲ್ಲಿ ರಾಬರ್ಟ್ ಮುಗಾಬೆ ತಮ್ಮ ತಾಳಕ್ಕೆ ತಕ್ಕಂತೆ ಕುಣಿಯುವ ಹಾಗೆ ಸರಕಾರವನ್ನು ದುರ್ಬಳಕೆ ಮಾಡಿಕೊಂಡು ಜಯಶಾಲಿಯಾದರು. ಇದನ್ನು ಉಲ್ಲೇಖಿಸಿ ನೆಲ್ಸನ್ ಮಂಡೇಲಾ ಅವರು "ಜಿಂಬಾಬ್ವೆಯ ದುರಂತ ನಾಯಕತ್ವ" ಎಂದು ಅಭಿಪ್ರಾಯಪಟ್ಟರು. ಆದರೆ ಇತ್ತೀಚಿಗೆ ತಮ್ಮ ಆರೋಗ್ಯದಲ್ಲಾದ ಕ್ಷೀಣತೆಯಿಂದ ಅಂತಾರಾಷ್ಟ್ರೀಯ ಮಟ್ಟದ ಎಲ್ಲ ಸಂಗತಿಗಳಿಂದ ಬಹುದೂರದಲ್ಲಿ ನಿಂತಿದ್ದಾರೆ. ತಮ್ಮ ನೇರವಾದ ನಡೆ-ನುಡಿಗಳಿಂದ ಎಲ್ಲರ ಪ್ರೀತಿಪಾತ್ರ ರಾಗಿರುವ ನೆಲ್ಸನ್ ಮಂಡೇಲಾ ಅವರನ್ನು ಇಡೀ ದಕ್ಷಿಣ ಆಫ್ರಿಕಾ ದೇಶ ಹಾಗೂ ಆಫ್ರಿಕಾ ಖಂಡದ ಇತರ ದೇಶಗಳ ಯಾವೊಬ್ಬ ನಾಯಕ ಮುಟ್ಟಲಾರದ ಜಾಗದಲ್ಲಿ ಇಟ್ಟು ಪೂಜಿಸುತ್ತಾರೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಎಲ್ಲ ದೇಶಗಳೂ ಅವರ ಬಗೆಗೆ ಅಪರಮಿತ ಗೌರವ ನೀಡಿ ಸನ್ಮಾನಿಸಿವೆ. ಜಾರ್ಜ ವಾಷಿಂಗ್‌ಟನ್ ಹಾಗೂ ಅಬ್ರಾಹಿಂ ಲಿಂಕನ್‌ರು ಹೊಂದಿರುವ ಸ್ಥಾನಮಾನಗಳ ಗೌರವದಷ್ಟೆ ಜಾಗತಿಕ ಮಟ್ಟದಲ್ಲಿ ನೆಲ್ಸನ್ ಮಂಡೇಲಾ ಅವರಿಗೆ ನೀಡಿರುವುದು ಅವರ ಜನಪ್ರಿಯತೆಯನ್ನು ಸಾಬೀತುಪಡಿಸುತ್ತದೆ.

**ಸಿಕ್ಕಿರುವ ಪ್ರಶಸ್ತಿಗಳು**

ನೆಲ್ಸನ್ ಮಂಡೇಲಾರ ಜೀವನಗಾಥೆಯನ್ನು ಗಮನಿಸಿ ಜಗತ್ತಿನ ಎಲ್ಲ ದೇಶಗಳು ಪ್ರಶಸ್ತಿ ಗೌರವಗಳಿಂದ ಸನ್ಮಾನಿಸಿವೆ. ೧೯೯೩ರಲ್ಲಿ ಫ್ರೆಡ್ರಿರಿಕ್ ವಿಲಿಯಂ ಡಿ ಕ್ಲರ್ಕ್ ಜೊತೆಗೆ ಶಾಂತಿಗಾಗಿ ಇರುವ ನೊಬೆಲ್ ಪ್ರಶಸ್ತಿಯನ್ನು ನೆಲ್ಸನ್ ಮಂಡೇಲಾ ಅವರಿಗೂ ನೀಡಿ ಗೌರವಿಸಲಾಗಿದೆ. ಇಂಗ್ಲೆಂಡ್ ಹಾಗೂ ಅಮೆರಿಕಾ ದೇಶಗಳು ತಾವು ಹೊಂದಿರುವ ಅತ್ಯುನ್ನತ ಗೌರವ ಪ್ರಶಸ್ತಿ ನೀಡಿ ಅವು ಗೌರವಿಸಿವೆ. ಈವರೆಗೂ ಯಾರಿಗೂ ಯಾವ ಸಮಯದಲ್ಲೂ ಕೊಡಲಾರದ ಗೌರವ ಪ್ರಶಸ್ತಿಯನ್ನು ಕೆನಡಾ ದೇಶ ನೆಲ್ಸನ್ ಮಂಡೇಲಾ ಅವರಿಗೆ ನೀಡಿ ಗೌರವಿಸಿದೆ. ಭಾರತ ದೇಶವು ತನ್ನ ಅತ್ಯುನ್ನತ ಗೌರವ ಸನ್ಮಾನವಾದ ಭಾರತರತ್ನ ಎಂಬ ಪ್ರಶಸ್ತಿ ಸನ್ಮಾನದಿಂದ ಗೌರವವಾಗಿ ಪುರಸ್ಕರಿಸಿದೆ. ಜಗತ್ತಿನ ಅನೇಕ ದೇಶಗಳು ನೆಲ್ಸನ್ ಮಂಡೇಲಾ ಅವರನ್ನು ಬೇರೆ ಬೇರೆ ಗೌರವ ಪುರಸ್ಕಾರಗಳಿಂದ ಗೌರವಿಸಿರುತ್ತಾರೆ. ಜಾಗತಿಕ ಮನ್ನಣೆ ಪಡೆದಿರುವ ಅನೇಕ ಸಂಗೀತಗಾರರು ತಮ್ಮ ಸಂಗೀತದ ಅಲ್ಬಮಗಳನ್ನು ನೆಲ್ಸನ್ ಮಂಡೇಲಾ ಅವರ ಕುರಿತಂತೆ ಸಿದ್ಧಗೊಳಿಸಿದ್ದಾರೆ. ಜಗತ್ಪ್ರಸಿದ್ಧ ಅನೇಕ ಗಾಯನಗಳು ಮಂಡೇಲಾರಿಗೆ ಅರ್ಪಿತವಾಗಿವೆ. ಶಾಂತಿಗಾಗಿ ಇರುವ ನೊಬೆಲ್ ಪ್ರಶಸ್ತಿಯನ್ನು ಪಡೆಯುವ ಸಂದರ್ಭದಲ್ಲಿ ಇಂಥ ಅನೇಕ ಹಾಡುಗಳನ್ನು ನುಡಿಸಲಾಯಿತು. ನಿಕೆಲ್ ಬ್ಲಾಕ್ ರಚಿತ "ಇಫ್ ಎವರಿವನ್ ಕ್ಯಾರ್ಡ್" ಎಂಬ ಅಲ್ಬಮನ್ನು ೨೦೦೬ರಲ್ಲಿ ಬಿಡುಗಡೆಗೊಳಿಸಲಾಗಿದೆ. ಅದು ಅವರ ಜೀವನದ ಗಾಥೆಯನ್ನು ಗಾನರೂಪದಲ್ಲಿ ವಿವರವಾಗಿ ನೀಡುವ ಒಂದು ಗುಚ್ಛ. ನೆಲ್ಸನ್ ಮಂಡೇಲಾ ಮಾಡಿದ ಐತಿಹಾಸಿಕ ಭಾಷಣದ ಭಾವಾರ್ಥವುಳ್ಳ "ಟರ್ನ್‌ಡ್ ಎರೌಂಡ್ ಫಾರ್ ದಿ ಚಿಲ್ಡ್ರನ್" ಎಂಬ ವಿಷಯದ ಕುರಿತಿರುವ ಅಲ್ಬಮನ್ನು ಅವರ ೯೦ನೇ ವರ್ಷದ ಜನ್ಮದಿನಾಚರಣೆಯ ಸಂದರ್ಭದಲ್ಲಿ ಲಂಡನ್‌ನ ಹೈಡ್ ಪಾರ್ಕ್‌ನಲ್ಲಿ ೨೦೦೮ರ ಜೂನ್ ೨೭ರಂದು ಹಾಡಲಾಯಿತು.

ನೆಲ್ಸನ್ ಮಂಡೇಲಾರ ಕುರಿತಂತೆ ಅಂತಾರಾಷ್ಟ್ರೀಯ ಖ್ಯಾತಿಯ ನಿರ್ದೇಶಕರು ಕೆಲವು ಸಿನಿಮಾಗಳನ್ನು ಮಾಡುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾರೆ. "ಗುಡ್ ಬೈ ಬಫಾನಾ" ಎಂಬ ಚಲನಚಿತ್ರ ಮಂಡೇಲಾರ ಜೀವನವನ್ನು ಬೆಳ್ಳಿಯ ತೆರೆಯ ಮೇಲೆ ತೋರಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದೆ. "ಮಂಡೇಲಾ ಅ್ಯಂಡ್ ದಿ ಕ್ಲರ್ಕ್" ಎಂಬ ಚಲನಚಿತ್ರವು ಅವರು ಸೆರೆವಾಸದಿಂದ ಬಿಡುಗಡೆಗೊಳ್ಳುವ ಕೊನೆಯ ದಿನಗಳಲ್ಲಿ ನಡೆದ ಸಂಗತಿಗಳನ್ನು ಕುರಿತು ಸರಕಾರ ಮತ್ತು ಮಂಡೇಲಾರ ಮಧ್ಯೆ ನಡೆದ ರಾಜಕೀಯ ಸಂಭಾಷಣೆಗಳನ್ನು ಇಟ್ಟುಕೊಂಡು ರಚನೆಯಾಗಿದೆ. "ಗುಡ್ ಬೈ ಬಫಾನಾ" ಎಂಬ ಚಲನಚಿತ್ರವನ್ನು ೨೦೦೭ರಲ್ಲಿ ನಡೆದ ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪ್ರದರ್ಶಿಸಲಾಯಿತು. ಅಮೇರಿಕಾದ ನಿರ್ದೇಶಕನೊಬ್ಬ ನಿರ್ದೇಶಿಸಿದ "ಮಾಲ್ಕೊಮ್ ಎಕ್ಸ್"ಎಂಬ ಪ್ರಸಿದ್ಧವಾದ ಸಿನಿಮಾದಲ್ಲಿ ನೆಲ್ಸನ್ ಮಂಡೇಲಾ ಅವರು ಶಾಲಾ ವಿದ್ಯಾರ್ಥಿಗಳಿಗೆ ಬೋಧನೆ ಮಾಡುವ

ಒಬ್ಬ ಶಿಕ್ಷಕರಾಗಿ ಪಾತ್ರನಿರ್ವಹಿಸಿದ್ದಾರೆ. ಇದರಲ್ಲಿ ವಿಶೇಷವೆನೆಂದರೆ ಶಿಕ್ಷಕನಾಗಿರುವ ನೆಲ್ಸನ್ ಮಂಡೇಲಾರ ಬಾಯಿಂದ ಸಾಮಾಜಿಕ ಹೋರಾಟಗಾರ ಮಾಲ್ಕಮ್‌ನ ವಿಚಾರಗಳಾದ

> ಈ ಜಗತ್ತಿನಲ್ಲಿ ಮನುಷ್ಯರಾಗಿರುವುದು ನಮ್ಮ ಹಕ್ಕೆಂದು ನಾವು ಘೋಷಿಸುತ್ತೇವೆ. ನಮ್ಮನ್ನು ಮನುಷ್ಯರೆಂದು ಗೌರವಿಸುವುದು, ಸಮಾಜ ದೊಳಗೆ ಮನುಷ್ಯರು ಗೌರವದಿಂದಿರಲ್ಲೂ ಬೇಕಾಗುವ ಹಕ್ಕುಗಳಿಗಾಗಿ ಹೋರಾಡುವುದು ಬಹುಮುಖ್ಯವಾಗಿದೆ. ಏಕೆಂದರೆ ಅವುಗಳು ನಮ್ಮ ಇರುವಿಕೆಗೆ ಬಹಳ ಮುಖ್ಯ.

ಎಂಬ ಪ್ರಸಿದ್ಧ ಸಂಗತಿಗಳನ್ನು ನಿರ್ದೇಶಕ ಹೇಳಿಸುತ್ತಾನೆ. ಆದರೆ ಇದನ್ನು ಸಾಧಿಸಲು ಯಾವ ಮಾರ್ಗವನ್ನಾದರೂ ಅನುಸರಿಸುತ್ತೇನೆ ಎಂಬ ಅರ್ಥ ಬರುವ ''ಬೈ ಮೀನ್ಸ್ ನೆಸೆಸ್ಸರಿ' ಮಾತುಗಳನ್ನು ಮಾತ್ರ ಸಿನಿಮಾದಲ್ಲಿ ನೆಲ್ಸನ್ ಮಂಡೇಲಾರ ಪಾತ್ರಧಾರಿಯಾಗಿದ್ದ ಮಾಲ್ಕಮ ಎಕ್ಸ್‌ನ ಮೂಲಕ ನಿರ್ದೇಶಕ ಸ್ಪಿಕ್ ಲೀ ಹೇಳಿಸುವುದರಲ್ಲಿ ತೋರಿರುವ ಜಾಣ್ಮೆಯಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿದ್ದಾರೆ. ಕಾರಣ ಕೊನೆಯ ಮಾತನ್ನು ನೆಲ್ಸನ್ ಮಂಡೇಲಾ ಅವರ ಬಾಯಿಂದ ಹೇಳಿಸಿದ್ದೆ ಆಗಿದ್ದರೆ ಪ್ರಿಟೋರಿಯಾ ಆಡಳಿತ ಆಗಷ್ಟೇ ಬಿಡುಗಡೆಗೊಂಡಿದ್ದ ಮಂಡೇಲಾರನ್ನು ಮತ್ತೆ ಸೆರೆವಾಸಕ್ಕೆ ತಳ್ಳುವ ಸಾಧ್ಯತೆಗಳಿದ್ದವು. ಈ ಚಲನ ಚಿತ್ರದಲ್ಲಿ ಪಾತ್ರವಹಿಸುವ ಕೆಲವೇ ದಿನಗಳ ಮೊದಲಷ್ಟೇ ನೆಲ್ಸನ್ ಮಂಡೇಲಾರು ೨೭ ವರ್ಷಗಳ ಸೆರೆವಾಸದಿಂದ ಆಗಷ್ಟೇ ಬಿಡುಗಡೆಗೊಂಡಿದ್ದರು. ನೆಲ್ಸನ್ ಮಂಡೇಲಾರ ಎರಡನೆಯ ಪತ್ನಿ ವಿನ್ನಿ ಮಂಡೇಲಾರ ಕುರಿತಂತೆ ಬಿಬಿಸಿ ದೂರದರ್ಶನವು ನಾಟಕವೊಂದನ್ನು ನಿರ್ಮಿಸಿ ಬಿತ್ತಿರಿಸಿತು. ಈ ನಾಟಕದ ದೃಶ್ಯಗಳಲ್ಲಿ ತೂಗು ಹಾಕಿರುವ ನೆಲ್ಸನ್ ಮಂಡೇಲಾರ ಭಾವಚಿತ್ರವು ಒಂದು ಪಾತ್ರಧಾರಿಯಾಗಿ ನಾಟಕದ ಉದ್ದಕ್ಕೂ ಪ್ರದರ್ಶನವಾಗುತ್ತಾ ಹೋಗುವುದು ಅದ್ಭುತವಾಗಿ ಮೂಡಿಬಂದಿದೆ ಎಂದು ಚಿತ್ರ ವಿಮರ್ಶಕರು ಅಭಿಪ್ರಾಯಿಸಿದ್ದಾರೆ.

ಮಾನವೀಯತೆಯ ಪ್ರತಿಪಾದಕರಾಗಿರುವ ಮಂಡೇಲಾರ ನೆನಪಿಗಾಗಿ ಹಲವು ದೇಶಗಳು ತಮ್ಮ ನೆಲದಲ್ಲಿ ಅವರ ಮೂರ್ತಿಯನ್ನು ಪ್ರತಿಷ್ಠಾಪಿಸಿರುವುದನ್ನು ತಿಳಿಯುತ್ತೇವೆ. ಲೀಡ್ಸ್ (ಇಂಗ್ಲೆಂಡ್)ನಲ್ಲಿ ೨೦೦೧ನೇ ಏಪ್ರಿಲ್ ೩೦ರಂದು ಅಲ್ಲಿನ ಸ್ಥಳೀಯ ಸರಕಾರ ಸ್ವಾತಂತ್ರ್ಯದ ಪ್ರತೀಕವಾಗಿ ನೆಲ್ಸನ್ ಮಂಡೇಲಾ ಮೂರ್ತಿಯನ್ನು ಸ್ಥಾಪಿಸಿತು. ೨೦೦೪ರಲ್ಲಿ ದಕ್ಷಿಣ ಆಫ್ರಿಕಾದ ಜೋಹಾನ್ಸ್‌ಬರ್ಗ್‌ನಲ್ಲಿ ೬ಅಡಿ ಎತ್ತರವುಳ್ಳ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಬ್ರಿಟನ್‌ನಿನ ಪಾರ್ಲಿಮೆಂಟ್ ಸ್ಕ್ವೇರ್‌ನಲ್ಲಿ ಸ್ಥಾಪಿಸಿದ್ದ ನೆಲ್ಸನ್ ಮಂಡೇಲಾರ ಪ್ರತಿಮೆ ಯನ್ನು ೨೦೦೭ರಲ್ಲಿ ಅನಾವರಣಗೊಳಿಸಲಾಯಿತು. ಉದ್ಘಾಟನಾ ಕಾರ್ಯಕ್ರಮದಲ್ಲಿ ರಿಚರ್ಡ್ ಅಟೆನ್‌ಬರ್ಗ್, ಕೆನ್ ಲಿವ್ವಿಂಗ್ ಸ್ಟಾನ್, ವೆನ್‌ಡೆ ವುಡ್ಸ್ ಮತ್ತು ಗಾರ್ಡನ್ ಬ್ರೌನ್ ಅವರು ಭಾಗವಹಿಸಿ ಪ್ರತಿಮೆಯನ್ನು ಅನಾವರಣಗೊಳಿಸಿದರು. ಸೌಥ ಆಫ್ರಿಕಾ

ದೇಶದವರೇ ಆಗಿದ್ದ ಪತ್ರಕರ್ತ ಡೊನಾಲ್ಡ್ ವುಡ್ಸ್ ಅವರ ಪ್ರಯತ್ನದಿಂದ ೨೦೦೦ರಲ್ಲಿ ಈ ಪ್ರತಿಮೆಯ ಸ್ಥಾಪನೆಗೆ ಚಾಲನೆ ನೀಡಲಾಗಿತ್ತು. ಆದರೆ ಇದು ಅನಾವರಣ ಆಗುವುದರೊಳಗಾಗಿ ಅಂದರೆ ೨೦೦೭ರ ಹೊತ್ತಿಗೆ ಡೊನಾಲ್ಡ್ ವುಡ್ಸ್ ತೀರಿಕೊಂಡರು. ಇವರೊಬ್ಬ ವರ್ಣಭೇದ ನೀತಿಯ ವಿರುದ್ಧದ ಪ್ರಬಲ ಪ್ರತಿಭಟನಾಕಾರರಾಗಿದ್ದರು. ಪ್ರತಿಮೆಯ ಅನಾವರಣ ಸಂದರ್ಭದಲ್ಲಿ ನೆಲ್ಸನ್ ಮಂಡೇಲಾರು ಡೊನಾಲ್ಡ್ ವುಡ್ಸ್ ಹಾಗೂ ಇತರ ಹೋರಾಟಗಾರರನ್ನು ನೆನೆದುಕೊಳ್ಳುತ್ತಾ

> ದಕ್ಷಿಣ ಆಫ್ರಿಕಾದ ಹೋರಾಟದ ಚರಿತ್ರೆಯು ಹಿರೋ ಮತ್ತು ಹಿರೋಯಿನ್‌ಗಳ ಕಥನಗಳಿಂದಾಗಿ ಬಹಳ ಶ್ರೀಮಂತವಾಗಿದೆ. ಅವರಲ್ಲಿ ಕೆಲವರು ನಾಯಕರಾದರೆ ಮತ್ತೆ ಕೆಲವರು ಅವರ ಅನುಯಾಯಿಗಳು. ಈ ಸಂದರ್ಭದಲ್ಲಿ ಎಲ್ಲಾರನ್ನು ನೆನಪಿಸಿಕೊಳ್ಳಬೇಕಾಗಿದೆ.

ಎಂದು ಅಭಿಪ್ರಾಯಿಸಿದರು. ಸೈಪ್ರಸ್ ದೇಶವು ತನ್ನ ಮುಖ್ಯವಾದ ಬೀದಿಗೆ ನೆಲ್ಸನ್ ಮಂಡೇಲಾರ ಹೆಸರಿನ್ನಿಟ್ಟು ಗೌರವಿಸಿದೆ. ಇಂಗ್ಲೆಂಡ್ ದೇಶದ ಲ್ಯಾಂಕ್‌ಪೈರ್‌ನಲ್ಲಿರುವ ನೆಲ್ಸನ್ ಮಂಡೇಲಾರ ಸ್ಮರಣಾರ್ಥ ಸ್ಥಾಪಿಸಿರುವ ಪಾರ್ಕ್‌ನಲ್ಲಿ ಅವರೇ ಹೇಳಿದ ಪ್ರಸಿದ್ಧ ವಾಕ್ಯವಾದ 'ಸೌತ್ ಆಫ್ರಿಕಾ ಬಿಲಾಂಗ್ಸ್ ಟು ಆಲ್ ಥೋಸ್ ಹೌ ಲಿವ್ ದೇರ್ ಬ್ಲಾಕ್ ಆ್ಯಂಡ್ ವೈಟ್' ಎಂದು ಬರೆಯಲಾಗಿದೆ. ಲಿಬಿಯಾ ದೇಶವು ಮಾನವ ಹಕ್ಕುಗಳಿಗಾಗಿ ಸ್ಥಾಪಿಸಿರುವ ಪ್ರಶಸ್ತಿಯೊಂದನ್ನು ನೀಡಿದಲ್ಲದೇ ನೆಲ್ಸನ್ ಮಂಡೇಲಾರ ನೆನಪಿನಲ್ಲಿ ಅಂಚೆ ಚೀಟಿಯೊಂದನ್ನು ಹೊರಡಿಸಿದೆ. ಸೌಥ ಆಫ್ರಿಕಾದಲ್ಲಿನ ಪ್ರಾಣಿ ಶಾಸ್ತ್ರಜ್ಞರು ಟ್ರಾಫ್ ಡೊರ್ ಸ್ಪೈಡರ್ ವಂಶವಾಹಿನಿಗೆ ಸೇರಿದ ವರ್ಗಕ್ಕೆ "Strasim opus madelai" ಎಂದು ಮರುನಾಮಕರಣ ಮಾಡಿ ಗೌರವಿಸಿದ್ದಾರೆ.

## ಪರಾಮರ್ಶನ ಗ್ರಂಥಗಳು


೧. ದಿ ನೊಬೆಲ್ ಫೌಂಡೇಶನ್, ೧೯೯೩. ನೆಲ್ಸನ್ ಮಂಡೇಲಾ ಬಯೋಗ್ರಾಫಿ, ದಿ ನೊಬೆಲ್ ಫೌಂಡೇಶನ್

೨. ಐಕಮನ್ ಡೆವಿಡ್, ೨೦೦೩. **ಗ್ರೇಟ್ ಸೋಲ್ಸ್ ಸಿಕ್ಸ್ ಹು ಚೇಂಜ್ಡ ಎ ಸೆಂಚುರಿ,** ಲೆಕ್ಸಿಂಗ್ಟನ್ ಬುಕ್ಸ್

೩. ಮಾಪೆಲಾ ಮುಂಜೆಡ್ಜಿ ಜೇಮ್ಸ್, ೨೦೦೮. ದಿ ರೆವಿಲ್ಯೂಶನ್ **ಆಫ್** ಆಫ್ರಿಕನ್ ಕಲ್ಚರ್ **ಇನ್ ಲಾಂಗ್ ವಾಕ್ ಟು ಫ್ರಿಡಮ್,** ಆಸ್ಟ್ರೇಲಿಯನ್ ನ್ಯಾಷನಲ್ ಯೂನಿವರ್‌ಸಿಟಿ

೪. ಮಂಡೇಲಾ ನೆಲ್ಸನ್, ೧೯೯೪. **ಲಾಂಗ್ ವಾಕ್ ಟು ಫ್ರಿಡಮ್,** ಲಿಟಲ್ ಬ್ರೌನ್ ಆ್ಯಂಡ್ ಕಂಪನಿ

೫. ನೆಲ್ಸನ್ ಮಂಡೇಲಾ ಬಯೋಗ್ರಾಫಿ ಅರ್ಲಿಈಯರ್ಸ್, ೨೦೦೮. ನೆಲ್ಸನ್ ಮಂಡೇಲಾ ಫೌಂಡೇಶನ್, ಜೋಹನ್ಸ್‌ಬರ್ಗ್

೬. ಭಾನಾ ಸುರೇಂದ್ರ ವಾಹೇದ್, ೨೦೦೫. ಗ್ಲೂಮ್, ದಿ ಮೇಕಿಂಗ್ ಆಫ್ ಎ ಪಾಲಿಟಿಕಲ್ ರಿಫಾರ್ಮರ್ ಗಾಂಧೀ ಇನ್ ಸೌತ್ ಆಫ್ರಿಕಾ, ಕೇಪ್‌ಟೌನ್

೭. ಶಿಲಿಂಗಟನ್ ಕೆವಿನ್, ೨೦೦೫. ಎನ್‌ಸೈಕ್ಲೋಪಿಡಿಯಾ ಆಫ್ ಆಫ್ರಿಕನ್ ಹಿಸ್ಟರಿ, ಸಿಆರ್‌ಸಿ ಪ್ರೆಸ್

೮. ಸಾಂಪ್ಸನ್ ಆಂಟೋನಿ, ೧೯೯೯. ಮಂಡೇಲಾ ದಿ ಆಥರೈಸ್ಡ್ ಬಯೋಗ್ರಾಫಿ, ಹಾರ್‌ಪರ್ ಕಾಲಿನ್ಸ್

೯. ನೆಲ್ಸನ್ ಮಂಡೇಲಾ, ೨೦೦೯. ವಿಕಿಪಿಡಿಯಾ

೧೦. ರಂಜಾನ್ ದರ್ಗಾ, ೧೯೯೦, ನೆಲ್ಸನ್ ಮಂಡೇಲಾ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಕೋಲಾರ

## ವಿಷಯ ಸೂಚಿ

## ಆ

## ಈ



## ಉ

ಬ

## ಲ

## ವ

**ಶ**

ಹ

# ಸಂಪಾದಕರು, ಲೇಖಕರು ಮತ್ತು ಅನುವಾದಕರ ವಿಳಾಸಗಳು

**ಪ್ರಧಾನ ಸಂಪಾದಕರು**

ಡಾ.ವಿಜಯ್ ಪೂಣಚ್ಚ ತಂಬಂಡ, ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಸಂಪಾದಕರು**

ಡಾ. ಎನ್.ಚಿನ್ನಸ್ವಾಮಿ ಸೋಸಲೆ, ಸಹ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

**ಲೇಖಕರು**

೧. ಡಾ. ಎಸ್.ಎನ್.ಶಿವರುದ್ರಸ್ವಾಮಿ, ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಪಿ.ಎ.ಕಾಲೇಜ್ ಆಫ್ ಆರ್ಟ್ಸ್ ಆ್ಯಂಡ್ ಕಾಮರ್ಸ್, ತಿಪಟೂರು, ತುಮಕೂರು ಜಿಲ್ಲೆ

೨. ಡಾ.ಡಿ.ಸರಿತಾ, ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಬೆಸೆಂಟ್ ಮಹಿಳಾ ಕಾಲೇಜು, ಮಂಗಳೂರು

೩. ಡಾ.ಸರಳ ಕೃಷ್ಣಮೂರ್ತಿ, ಪ್ರಾಧ್ಯಾಪಕರು, ಆಂಗ್ಲ ಭಾಷಾ ಅಧ್ಯಯನ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು

೪. ಡಾ.ಕೆ.ಮೋಹನ್‌ಕೃಷ್ಣ ರೈ, ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫. ಡಾ.ಎ.ರಾಮೇಗೌಡ, ಸಹ ಪ್ರಾಧ್ಯಾಪಕರು, ಸಮಾಜಶಾಸ್ತ್ರ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಬಿ.ಆರ್.ಪ್ರಾಜೆಕ್ಟ್, ಶಿವಮೊಗ್ಗ ಜಿಲ್ಲೆ

೬. ಹೆಚ್.ಎಸ್.ಜೈಕುಮಾರ್, ಕೇರಾಫ್, ಹೆಚ್.ಎಲ್.ಶಿವರಾಮು, ಭೂತನ ಹೊಸೂರು, ಸುಣಗನಹಳ್ಳಿ ಅಂಚೆ, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ

೭. ಡಾ.ನಟರಾಜ ಹುಳಿಯಾರ್, ಪ್ರಾಧ್ಯಾಪಕರು, ಇಂಗ್ಲೀಷ್ ವಿಭಾಗ, ಕರ್ನಾಟಕ ಕೇಂದ್ರಿಯ ವಿಶ್ವವಿದ್ಯಾಲಯ, ಗುಲಬರ್ಗಾ

೮. ಶ್ರೀ ರಂಜಾನ್ ದರ್ಗಾ, ನಿರ್ದೇಶಕರು, ವಚನ ಅಧ್ಯಯನ ಕೇಂದ್ರ, ಬಸವ ಸೇವಾ ಪ್ರತಿಷ್ಠಾನ, ಶರಣ ಉದ್ಯಾನ, ಶರಣನಗರ, ಬೀದರ್

೯. ಶ್ರೀ ರಮೇಶ ನಾಯಕ, ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಅನುವಾದಕರು**

೧. ಶ್ರೀ ಎಂ.ಜೈಕುಮಾರ್, ನಂ.೧೫ ೧, ಎ ರಸ್ತೆ, ಜಿ.೨ ಜೀವನಭೀಮಾನಗರ, ಬೆಂಗಳೂರು

೨. ಶ್ರೀ ಕೃಷ್ಣಮೂರ್ತಿ, ಕೆ ಆ ಡಾ.ಸರಳಾ ಕೃಷ್ಣಮೂರ್ತಿ, ಆಂಗ್ಲಭಾಷಾ ಅಧ್ಯಯನ ವಿಭಾಗ, ಬೆಂಗಳೂರು, ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು

ಕನ್ನಡ ವಿಶ್ವವಿದ್ಯಾಲಯ
**ಚರಿತ್ರೆ ಸಂಪುಟ ೭**

ದೇಶದ ಪ್ರತಿಷ್ಠಿತ ವಿಶ್ವವಿದ್ಯಾಲಯಗಳ ವಿದ್ವಾಂಸರೊಂದಿಗೆ ನಾಡಿನ ಪ್ರಮುಖ ವಿದ್ವಾಂಸರ ಬರಹಗಳನ್ನು ಮತ್ತು ಅನುವಾದಗಳನ್ನು ಈ ಸಂಪುಟಗಳು ಒಳಗೊಂಡಿವೆ. ಚರಿತ್ರೆ ಅಥವಾ ಸಮಾಜವಿಜ್ಞಾನಗಳ ಜ್ಞಾನಶಿಸ್ತಿನಲ್ಲಿ ಕನ್ನಡದಲ್ಲಿ ಚರ್ಚೆಗಳು ಕಡಿಮೆ ಎನ್ನುವ ಮಿತಿಗಳನ್ನು ಈ ಸಂಪುಟಗಳು ಮೀರಿವೆ. ದೇಸೀ ಭಾಷೆಗಳಲ್ಲಿ ಜಗತ್ತಿನ ಜ್ಞಾನ ಪ್ರಕಾರಗಳನ್ನು ಸಮರ್ಥವಾಗಿ ನಿಭಾಯಿಸುವುದು ನಮ್ಮ ಭಾಷೆ, ಪರಂಪರೆ ಹಾಗೂ ಅನನ್ಯತೆಗಳನ್ನು ಕಾಪಾಡುವ ಬಗೆ ಈ ಪ್ರಯತ್ನದ ಒಂದು ಆಯಾಮವಾಗಿದೆ. ಹಾಗೆಯೇ ಕನ್ನಡದ ಸಂದರ್ಭದಲ್ಲಿ ಪಾಶ್ಚಾತ್ಯ ಜಗತ್ತು ಅಥವಾ ಕರ್ನಾಟಕೇತರ ಜಗತ್ತು ನಿರ್ಣಯಿಸುವ ಮತ್ತು ನಿಯಂತ್ರಿಸುವ ಬೌದ್ಧಿಕ ಆಕ್ರಮಣಗಳನ್ನು ಮತ್ತು ಸವಾಲುಗಳನ್ನು ಕನ್ನಡ ವಿಶ್ವವಿದ್ಯಾಲಯದ ಬೌದ್ಧಿಕ ಪರಂಪರೆ ಸಮರ್ಥವಾಗಿ ನಿಭಾಯಿಸುತ್ತಿದೆ. ಸಮಾಜವಿಜ್ಞಾನಗಳ ಬೌದ್ಧಿಕ ಪರಂಪರೆಗಳು ಕನ್ನಡದಲ್ಲಿ ಈ ಬಗೆಯಲ್ಲಿ ಮೂಡಿಬರುತ್ತಿರುವುದು ಈ ದಿಶೆಯಲ್ಲಿ ಒಂದು ಪ್ರಮುಖ ಹೆಜ್ಜೆ. ಚರಿತ್ರೆ ವಿಭಾಗವು ಈ ಹಿನ್ನೆಲೆಯಲ್ಲಿ ಹೊರತರುತ್ತಿರುವ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟಗಳು ಒಂದು ಮೈಲುಗಲ್ಲು. ಚರಿತ್ರೆ ಲೇಖನ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಭಾರತ ಉಪಖಂಡದ ಆಧುನಿಕಪೂರ್ವ ಚರಿತ್ರೆ, ಭಾರತ ಉಪಖಂಡದ ಆಧುನಿಕ ಚರಿತ್ರೆ, ಏಷ್ಯಾ, ಯುರೋಪ್, ಅಮೆರಿಕಾ, ಆಫ್ರಿಕಾ ಹಾಗೂ ಸಮಕಾಲೀನ ಕರ್ನಾಟಕಕ್ಕೆ ಸಂಬಂಧಿಸಿದ ವಿವಿಧ ಆಯಾಮಗಳನ್ನು ಈ ಎಂಟು ಸಂಪುಟಗಳು ಚರ್ಚಿಸಿವೆ. ಇವೆಲ್ಲವನ್ನು ಕನ್ನಡದಲ್ಲಿ ಪ್ರಕಟಿಸಿ ಕನ್ನಡ ಓದುಗರಿಗೆ ಕನ್ನಡ ವಿಶ್ವವಿದ್ಯಾಲಯವು ಅರ್ಪಿಸುತ್ತಿದೆ.

ಪ್ರಧಾನ ಸಂಪಾದಕರಾದ ಪ್ರೊ. ವಿಜಯ್ ಪೂಣಚ್ಚ ತಂಬಂಡ ಮತ್ತು ಸಂಪುಟ ಸಂಪಾದಕರಾದ ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರು 'ಆಫ್ರಿಕಾ-ಚರಿತ್ರೆಯ ವಿವಿಧ ಆಯಾಮಗಳು' ಸಂಪುಟವನ್ನು ಸಮರ್ಥವಾಗಿ ಹೊರತಂದಿದ್ದಾರೆ. ಅವರಿಗೆ ನನ್ನ ಅಭಿನಂದನೆಗಳು.

**ಡಾ. ಎ. ಮುರಿಗೆಪ್ಪ**
ಕುಲಪತಿ





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



₹ 200/-